# ಅಗಸ್ತ್ಯ

( ವೇದೇತಿಹಾಸ ಪುರಾಣಾಧಾರಿತ ಕಾದಂಬರಿ )

ಗ್ರಂಥಕಾರರು :

**ಪ್ರೊ । ಕೆ. ಎಸ್. ನಾರಾಯಣಾಚಾರ್ಯ,**

'ವಿದ್ವನ್ಮಣಿ', 'ಶ್ರೀ ರಾಮಾಯಣಾಚಾರ್ಯ' 'ಶ್ರೀ ಮಹಾಭಾರತಾಚಾರ್ಯ',
'ಶ್ರೀ ಭಾಗವತರತ್ನಂ', 'ವೇದಭೂಷಣ', 'ಪ್ರವಚನ ಕಲಾನಿಧಿ',
**'ಕರ್ನಾಟಕ ಕಲಾಶ್ರೀ'–'ರಾಜ್ಯ ಸಂಗೀತ ನೃತ್ಯ ಅಕಾಡೆಮಿ
ಪ್ರಶಸ್ತಿ'** ವಿಜೇತರು **1997,** ಇತ್ಯಾದಿ ಬಿರುದಾಂಕಿತರು.

**ಪ್ರಕಾಶಕರು :**

" ಮಾಲೋಲ ಪ್ರಕಾಶನ ", ' ಶ್ರೀ ಅಯೋಧ್ಯಾ ',
ರೇಲ್ವೆ ಸ್ಟೇಷನ್ ಹಿಂದೆ, ಕಲ್ಯಾಣ ನಗರ,
**ಧಾರವಾಡ—580007.**

'AGASTYA' - A Kannada Novel based on Vedic, Puranic, details of myths and hymns, anecdotes and accounts :

By
Prof K. S. NARAYANACHARYA

ಮೊದಲ ಮುದ್ರಣ, 1997 ಸೆಪ್ಟೆಂಬರ್.
1000 ಪ್ರತಿಗಳು ಮಾತ್ರ

© ಗ್ರಂಥಕರ್ತರದ್ದು

ಬೆಲೆ :
125 /-ರೂ, (ನೂರಿಪ್ಪತ್ತೈದು ರೂಪಾಯಿಗಳು ಮಾತ್ರ)
(one hundred twenty five Rupees only)
**125/- Rs. only**

**ಮುದ್ರಕರು** ಶಿವಶಂಕರ ಪ್ರಿಂಟಿಂಗ್ ಪ್ರೆಸ್,
ಹೆಬ್ಬಳ್ಳಿ ಅಗಸಿ,
**ಧಾರವಾಡ**-580001
**Phone.** 44194, 42912

**ಮುಖ ಪುಟ :** "ಅಗಸ್ತ್ಯರು ಲೋಪಾಮುದ್ರೆಯೊಡನೆ ಸುಖಿ ಸಂಸಾರ ನಡೆಸಿದ್ದು." ಚಿತ್ರಣ. ಶ್ರೀ ಎನ್. ಸಿ. ದೇಸಾಯಿ; ಆಫ್‌ಸೆಟ್ ಮುದ್ರಕರು, ಶ್ರೀ ಸುನೀಲ್ ಸ್ವಾದಿ, ಮೆಟಲ್, ಒ-ಪ್ರಿಂಟ್ಸ್, ಹುಬ್ಬಳ್ಳಿ-5800030

# ನ ಮ ನ

ಕನ್ನಡ ಕಾದಂಬರೀ ಪ್ರಪಂಚಕ್ಕೆ ಇಂತಹ ಈ ಪೌರಾಣಿಕ ಪ್ರಕಾರದ ಕೊಡುಗೆಯಿತ್ತವರಲ್ಲಿ ಎದ್ದು ಕಾಣುವ ಹೆಸರುಗಳಲ್ಲಿ ದಿವಂಗತ ದೇವುಡು ನರಸಿಂಹಶಾಸ್ತ್ರಿಗಳು ಮತ್ತು ಪ್ರೊ. ಕೆ. ಎಸ್. ನಾರಾಯಣಾಚಾರ್ಯರು ಇವು ಎರಡೇ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

'ವೇದಸಂಸ್ಕೃತಿಯ ಪರಿಚಯದ' ವಿವೇಚನೆಯ ದಶಸಂಪುಟಗಳ ದೊಂದು ಮಾದರಿಯಾದರೆ, ಅವರ ರಾಮಾಯಣ–ಮಹಾಭಾರತ ಪಾತ್ರ ಪ್ರಪಂಚ. ಹಾಗೂ ಯುದ್ಧ ಪಂಚಕದ ಕಥಾಮಂಜರಿಯ ರಂಜನೀಯ ನಿರೂಪಣೆ ಇವು ವಿವಿಧ ಸ್ವರೂಪದವು. (ಇನ್ನು ಇವರ 'ತಿರುವಾಯ್ ಮೊಟಿ' ದಿವ್ಯ ಪ್ರಬಂಧ ವಿವೇಚನೆ ಇನ್ನೂ ಹೊಸದೊಂದು ವಿಮರ್ಶಾ ವಾಙ್ಮಯ ಕ್ಷಿತಿಜ.) 'ಧಾರಾಶೀರ್ಷವಾಹಿನಿ'ಯಾಗಿ 'ತರಂಗ'ದಲ್ಲಿ ಹರಿದು ಬರುತ್ತಿರುವ ಶ್ರೀ ಭಾಗವತಕಥಾಮೃತ, ಅದರಲ್ಲೂ 'ಶ್ರೀ ಕೃಷ್ಣಾ ವತಾರ;' 'ಶ್ರೀ ಕೃಷ್ಣಾವತಾರದ ಕೊನೆಯ ಗಳಗೆಗಳು' ಎಂಬ ಗಾಥಾ ಶೀರ್ಷಕ್ಕಿಂತ ಭಿನ್ನವಾದುದು.

ಆಚಾರ್ಯರ 'ಚಾಣಕ್ಯ' ನಿಜವಾಗಿಯೂ ಇಂದಿನ ಕಾದಂಬರೀ ಸ್ವರೂಪ ವೈವಿಧ್ಯಕ್ಕೆ ಇತಿಹಾಸ, ಇತಿಹಾಸ-ಪುರಾಣ ವಸ್ತುದರ್ಶನಕ್ಕೆ ಹೊಸದೊಂದು ಆಯಾಮ ನೀಡಿದ ಕೃತಿ. ವಾಚಕ ಲೋಕ ಇದರ ಪುನರಾವೃತ್ತಿಯ ಪ್ರತೀಕ್ಷೆಯಲ್ಲಿರುವುದೇ ಈ ಕಾದಂಬರೀ ನಿರ್ಮಿಸಿದ ಹೊಸ ರುಚಿ, ಅಭಿ-ಅಭಿನವರುಚಿಗಳಿಗೊಂದು ನಿದರ್ಶನ.

ಸುಮಾರಾಗಿ 'ಚಾಣಕ್ಯ' ರಚನೆಯ ಕಾಲಕ್ಕೇ, ಸದ್ಯ ಬೆಳಕು ಕಾಣುತ್ತಿರುವ ಈ 'ಅಗಸ್ತ್ಯ'ವೂ ರಚಿಸಲ್ಪಟ್ಟಿದ್ದರೂ ಕಾರಣಾಂತರಗಳಿಂದಾಗಿ ಇದು ಸ್ವಲ್ಪ ತಡವಾಗಿ ಓದುಗರ ಕೈ ಸೇರುತ್ತಿದೆ, 'ಚಾಣಕ್ಯ'ದಲ್ಲಿ ಐತಿಹಾಸಿಕ, ಪೌರಾಣಿಕ ಎರಡೂ ದೃಷ್ಟಿಗಳ ಸಂಗಮವನ್ನು ಕಾಣುತ್ತೇವೆ, 'ಅಗಸ್ತ್ಯ' ಕಥಾನಾಯಕ ಪುರುಷರು ಕೇವಲ ಪುರಾಣವ್ಯಕ್ತಿ. ಸಪ್ತರ್ಷಿಗಳಲ್ಲಿ ಒಬ್ಬ ಮಹರ್ಷಿಯಾಗಿ ಮೆರೆದವರು. ಹೀಗಿದ್ದೂ ಹಿರಿಯ ಅಗಸ್ತ್ಯರು ಪುರಾಣಗಳಲ್ಲಿ ಪುರಾಣಪುರುಷರಾದರೆ, ಕಿರಿಯ ಆಗಸ್ತ್ಯರು ಹೆಚ್ಚು ಐತಿಹಾಸಿಕ ವೆನಿಸಬಹುದು, ಭೌಗೋಲಿಕ ದೃಷ್ಟಿಯಿಂದ.

ಈ ಅಪೂರ್ವ ಪುರಾಣಕಾದಂಬರಿಯ ಇಪ್ಪತ್ತಾರು ಪ್ರಕರಣಗಳೆಂದರೆ ಇಪ್ಪತ್ತಾರು ತತ್ತ್ವಗಳ (ಪ್ರಕೃತಿಯ ೨೪ + ಜೀವ ೧ + ಪರಮೇಶ್ವರ ೧=೨೬). ಒಂದು ಸುಂದರ ರಸ ಸೃಷ್ಟಿ. ಉದ್ದಕ್ಕೂ ಇಬ್ಬರು ಅಗಸ್ತ್ಯರ ಚರಿತ್ರೆ, ಚಾರಿತ್ರಿಕ ಮಹತಿಗಳು ಆರ್ಯಾವರ್ತದಿಂದ ವಿಂಧ್ಯವನ್ನು ದಾಟಿ ದಕ್ಷಿಣಕ್ಕಿಳಿದು ಭಾರತದ ಆರ್ಷೇಯ ಘನತೆಯ ಚಿತ್ರವನ್ನು ನಮ್ಮ ಕಣ್ದೆರೆದು ತೋರಿಸುತ್ತದೆ. ಇಪ್ಪತ್ತಾರನೆಯ ಕೊನೆಯ ಹಾಗೂ ಶಿಖರ ಪ್ರಾಯವಾದ "ಶ್ರೀರಾಮ ಸೇವೆಯಲ್ಲಿ ಅಗಸ್ತ್ಯರು" ಎಂಬ ಪ್ರಕರಣವಂತೂ ಈ ಕಾದಂಬರಿಗೆ ಕಿರೀಟವನ್ನು ತೊಡಿಸಿದಂತಿದೆ. ಕಿರಿಯ ಅಗಸ್ತ್ಯರೂ ಈಗ ಹಣ್ಣುಹಣ್ಣಾಗಿದ್ದಾರೆ. ಇಂತಹ ಪಲಿತ ಹಿರಿಯ ಜೀವ ಚೇತನವನ್ನೂ ಕಾಣಲೆಂದು ಇಕ್ಷ್ವಾಕು ದೊರೆ ಶ್ರೀರಾಮಚಂದ್ರ ತನ್ನ ವನವಾಸ

ಕಾಲದಲ್ಲಿ ತನ್ನ ಅರ್ಧಾಂಗಿಯನ್ನಗಲುವ ಸಮಯದಲ್ಲಿ ಲೋಪಾಮುದ್ರೆ ಯನ್ನಗಲಿದ ವಿಧುರ ಅಗಸ್ತ್ಯರನ್ನು ಕಾಣಬರುತ್ತಾನೆ. ಅಲ್ಲಿ ಶ್ರೀ ರಾಮ ಚಂದ್ರ ಮತ್ತು ಅಗಸ್ತ್ಯರ ನಡುವೆ ನಡೆಯುವ ಸಂವಾದವೆಂದರೆ ಸಂವೇದನ ಶೀಲರಿಗೆ ವೇದದರ್ಶನವಾದಂತೆ ! ಈ ಭವ್ಯ ಪ್ರಕರಣವೇ ಈ ಕಾದಂಬರಿ ಗೊಂದು ಅಪೂರ್ವ ಭವ್ಯತೆಯನ್ನು ತಂದು ಕೊಡುತ್ತದೆ. ಈ ಇಪ್ಪತ್ತಾ ರನೆಯ ಪ್ರಕರಣವೆಂದರೆ ಪಗಡೆ 'ಆಟದ ಪಂಚವೀಸ ಕಟ್ಟೆ' ಇದ್ದಂತೆ. ಆ ಒಂದು ಅತಿ ಮಹತ್ತ್ವದ ಘಟಕ್ಕೆ ಕಥೆಯ ಮುಕ್ತಾಯ ! ಹಾಗೆ ನೋಡಿ ದರೆ ಇದಕ್ಕೆ ಮುಕ್ತಾಯವೆಂಬುದೇ ಇಲ್ಲ. ಮುಗಿಸಿದ್ದಾರೆಂದು ಮುಕ್ತಾಯ ಅಷ್ಟೆ. ಏಕೆಂದರೆ ಕಾಲಪುರುಷನ ಕಥೆಯನ್ನು ಹೇಳ ಹೊರಟ ಕಥೆಗೆ ಮುಕ್ತಾಯವೆಂಬುದೆಲ್ಲಿ ?

"ಸಹಸ್ರಾರ್ಜುನ, ಇಲ್ವಲ ವಾತಾಪಿಗಳು, ಕಾಲಕೇಯರ ನಂತರ ಅದೇ ಕಾಲಪುರುಷ ಈಗ ಆಸುರೀಶಕ್ತಿಯನ್ನು ಸಪ್ತರ್ಷಿ ಮಂಡಲವೊಂದ ರಲ್ಲೇ ಹುಟ್ಟು ಹಾಕಿ, ರಾವಣನೆಂಬ ಬ್ರಾಹ್ಮಣನನ್ನು ಬ್ರಾಹ್ಮಣ್ಯದ, ವೈದಿಕದ, ದೇವತ್ತ್ವದ, ಸಾತ್ತ್ವಿಕತೆಯ ಶಕ್ತಿಗಳ ವಿರುದ್ಧ ಎತ್ತಿ ಕಟ್ಟಿ ದ್ದಾನೆ" ಎಂದು ಹೇಳ ಹೊರಟ ಈ ಕೊನೆಯ ಪ್ರಕರಣಕ್ಕೆ ಕೊನೆಯೆಲ್ಲಿ ? ಅಸುರರು ಇಂದಿಗೂ ನಾಶವಾಗಿಲ್ಲ, ಆಸುರೀ ಶಕ್ತಿಗೆ ನಾಶವೇ ಇಲ್ಲ ವೇನೋ ಎಂಬಂತೆ ಇಂದಿನಲ್ಲೂ ಮುಂದುವರಿದಿದೆ ಆಸುರೀ ಶಕ್ತಿಯ ಆಟ! ಕಾಲಪುರುಷನೇ ದಿವ್ಯಾವತಾರ ಮಾಡಿ ಆ ಆಸುರೀ ಶಕ್ತಿಗಳನ್ನು ಸಂಹರಿ ಸುತ್ತಾ ಇದ್ದಾನೆ ಎಂದ ಮೇಲೆ 'ಅಗಸ್ತ್ಯ'ರಂತಹ ಕಡಲನ್ನೇ ಕುಡಿದು ವಾತಾಪಿ, ಇಲ್ವಲರನ್ನೇ ಜೀರ್ಣಿಸಿಕೊಳ್ಳುವಂತಹ ಅವತಾರಗಳು ಆಗಲೇ ಬೇಕಾಗುತ್ತವೆ.

ಹೀಗೆ ಈ ಇಪ್ಪತ್ತಾರು ಅಧ್ಯಾಯಗಳ ಕಾದಂಬರಿಯ ಒಂದೊಂದು ಪ್ರಕರಣವೂ ಒಂದೊಂದು ಹರಣ, ಒಂದೊಂದು ಅವತರಣ, ಒಂದೊಂದು ಉದ್ಧರಣ.

'ಅಗಸ್ತ್ಯಾಶ್ರಮದಲ್ಲಿ ಇಲ್ವಲ', 'ಲೋಪಾಮುದ್ರೆ ಅಗಸ್ತ್ಯರ ದಾಂಪತ್ಯ', ಹಾಗೂ ವಿರಹ. ಸಹಸ್ರಾರ್ಜುನನ ಪತನದ ಕಥೆ ಇವೆಲ್ಲ ಒಂದಕ್ಕಿಂತ ಒಂದು ಮಹತ್ತ್ವದ ತತ್ತ್ವದರ್ಶನ ಮಾಡಿಸುವ, ದಿವ್ಯ ದೃಷ್ಟಿ ಮೂಡಿಸುವ ಪ್ರಕರಣಗಳು. ದತ್ತಾತ್ರೇಯ ಉಪಾಸಕನಾಗಿ, ಏಳು ವರಗಳನ್ನು ಪಡೆದ ಕಾರ್ತವೀರ್ಯಾರ್ಜುನ, ಸಹಸ್ರಬಾಹುವಾಗಿ ಸಾಧಿಸಿದ್ದೇನು ? "ಭೂಮಿಯನ್ನೆಲ್ಲ ತನ್ನ ಪಾದದಡಿ ತಂದುಕೊಂಡು, ಹತ್ತು ಸಾವಿರ ಯಜ್ಞಗಳನ್ನು ಮಾಡಿ, ಕೀರ್ತಿವಂತನಾದ ಈ ಅರ್ಜುನನಿಗೂ ಕೊನೆಗೆ ವಿನಾಶ ಕಾಲ ಬಂದಿತು," ಎಂದು ೧೦ ನೆಯ ಪ್ರಕರಣದಲ್ಲಿ ಜೀವನದ ಮೂಲೋದ್ದೇಶ್ಯವನ್ನೇ ಪ್ರಶ್ನಿಸುತ್ತಾ, "ಕರ್ಮ, ಮರಣ, ಯಾರನ್ನೂ ಬಿಡುವುದಿಲ್ಲ." ಎಂಬ ಒಂದೇ ಸಾಲಿನ ಉತ್ತರದಲ್ಲಿ ಆ ಮಹಾ ಪ್ರಶ್ನೆಯೊಂದನ್ನು ಕಾದಂಬರಿಕಾರರು ಬಿಡಿಸಿದ್ದಾರೆ. ಇಂತಹ ಬೀಜ ಮಾತುಗಳಿಂದಲೇ ಈ ಕಾದಂಬರಿ ಅಶ್ವತ್ಥಮರದಂತೆ ಬೆಳೆದು ಫಲ, ನೆರಳು, ಕೊಟ್ಟು, ಬದುಕಿನ ಪ್ರಶ್ನೆಯನ್ನೇ ಉತ್ತರಿಸುತ್ತದೆ.

"ಅಗಸ್ತ್ಯ ಪರಶುರಾಮರ ಭೇಟಿ"ಯು ೧೪ನೇ ಪ್ರಕರಣ, "ವಿಂಧ್ಯನ ಸಮನ, ಕರಾವಳಿಯ ಉತ್ಥಾನ" ಎಂಬ ಪ್ರಾಕೃತಿಕ ಸಾಂಕೇತಿಕ ಪ್ರಕರಣ, "ದಕ್ಷಿಣದತ್ತ (ಕಿರಿಯ) ಅಗಸ್ತ್ಯರ ಯಾತ್ರೆ'' ಎಂಬ ೧೬ನೇ ಪ್ರಕರಣ, "ಮೃತಸಂಜೀವನೀ'' ಎಂಬ ೨೦ನೇ ಪ್ರಕರಣ, "ಸಮುದ್ರಕ್ಷೋಭೆ, ಕಾಲಕೇಯರ ಸಂಹಾರ" ಎಂಬ ೨೩ನೆಯ ಪ್ರಕರಣ, ''ಸಮುದ್ರಯಾನ ಮುಗಿಸಿ ಸಹ್ಯಾದ್ರಿಯ ಮಡಿಲಲ್ಲಿ" ಎಂಬ ೨೪ನೆಯ ಪ್ರಕರಣ, "ಅಗಸ್ತ್ಯರ ಪತ್ನೀವಿಯೋಗ, ಕಾವೇರಿಯ ವಿವಾಹ" ಎಂಬ ಸುಂದರ ಕಾವ್ಯದ ಧ್ವನಿ ಪ್ರಕರಣ. (೨೭ ಅಂತೂ ಉತ್ತುಂಗ ಮುಕ್ತಾಯ ಶಿಖರ !) ಈ ಎಲ್ಲ ಮೈಲುಗಲ್ಲುಗಳು ವರ್ಣನಾತೀತವಾಗಿ ಎದ್ದು ಕಾಣುವ ಈ ಸಾಹಿತ್ಯದ ರಸಯಾತ್ರೆಯ ಮೈಲುಗಲ್ಲುಗಳು; ಮುಖ್ಯಘಟ್ಟಗಳು.

ಅಗಸ್ತ್ಯರು ಭಾರತ ವರ್ಷದ ಊರ್ಜಿತಕ್ಕಾಗಿ ಮಾಡಿದ ಉತ್ತಮ ಕಾರ್ಯ, ಉದಾತ್ತ ಕಾರ್ಯ ಅದ್ಭುತ, ಅಭೂತ ಪೂರ್ವ. ಋಕ್. ಸಂಹಿತೆಯ 1-176-6 ರಲ್ಲಿ ಹೀಗೆ ಹೇಳಲಾಗಿದೆ. (ಕೃಪೆ, ಪ್ರೊ. ಕೆ. ಎಸ್. ನಾರಾಯಣಾಚಾರ್ಯರ 'ಅಗಸ್ತ್ಯ' ಕಾದಂಬರಿಯ ಪತ್ತನೆಯ ಅಧ್ಯಾಯ! )

**ಅಗಸ್ತ್ಯಃ ಖನಮಾನಃ ಖನಿತ್ರೈಃ**
**ಪ್ರಜಾಮಪತ್ಯಂ ಬಲಂ ಇಚ್ಛಮಾನಃ ।**
**ಉಭೌ ವರ್ಣೌ ಋಷಿರುಗ್ರಃ ಪುಪೋಷ**
**ಸತ್ಯಾ ದೇವೇಷು ಆಶಿಷೋ ಜಗಾಮ ॥**

ಲೇಖಕರ ಮೇರೆಗೆ ಇದರರ್ಥ ಹೀಗೆ ;

"ಅಗಸ್ತ್ಯನು ದೇಶದಲ್ಲಿ ಪ್ರಜೆಗಳನ್ನು, ಸತ್ಸಂತತಿಯನ್ನು, ಇಷ್ಟ ಪಟ್ಟವನಾಗಿ, ಆ ಮೂಲಕ ರಾಷ್ಟ್ರದ ಬಲವನ್ನು ವೃದ್ಧಿ ಪಡಿಸಲು ಬಯಸಿ, ಗುದ್ದಲಿಯಿಂದ ನೆಲವನ್ನು ರೈತನು ಅಗೆದು ಭೂಮಿಯನ್ನು ಉತ್ತು ಸಸ್ಯಗಳನ್ನು ನಾಟಿ ಬೆಳೆಸುವಂತೆ, ಶತ್ರು ಭಯಂಕರನೂ, ಸಾಹಸಿಯೂ ಆಗಿರುತ್ತಾ ಈ ಬ್ರಾಹ್ಮಣ ಕ್ಷತ್ರಿಯ ವರ್ಣಗಳೆಂಬುವನ್ನು ಪರಿಪೋಷಿಸಿ ಬೆಳೆಸಿದನು. ಆದುದರಿಂದ ದೇವತೆಗಳ ದೃಢ ಆರ್ಶಿವಾದಕ್ಕೆ ಈ ಮಹರ್ಷಿಯು ಪಾತ್ರನಾದನು!! )

ಇದೇ ಮೇರೆಗೆ ಪ್ರೊ. ನಾರಾಯಣಾಚಾರ್ಯರು ವೇದಗಳ ಗಣಿಯನ್ನಗೆದು ಚಿನ್ನದ ಅದಿರುಗಳನ್ನು ಶೋಧಿಸಿ ತೆಗೆದು ಅಪರಂಜಿಯನ್ನಾಗಿಸಿದ ದ್ರವ್ಯವನ್ನು ಈ 'ಅಗಸ್ತ್ಯ'ದ ಮಹಾಗಾಥೆಯಲ್ಲಿ ಸೇರಿಸಿದ್ದಾರೆ. ಎಂಥ ಅದ್ಭುತ ವಸ್ತು ! ಅದ್ಭುತ ಗಾತ್ರ! ಅದ್ಭುತ ಕಾರ್ಯ! ಇದು

ವರೆಗೂ ಇಂತಹ ಅಲಭ್ಯ ಸಾಮಗ್ರಿಯನ್ನು ಕಾದಂಬರಿ ರೂಪಣಕ್ಕೆಂದು ಮಾಡಿಸಿಕೊಂಡ ಭಾರತೀಯ ಲೇಖಕರಿರಬಹುದೆಂದು ಅನಿಸುವುದಿಲ್ಲ. ವೇದಗಳ ಒಂದೊಂದು ಮಂತ್ರಕ್ಕೂ ಒಂದೊಂದು ಕಥಾ ಸಂದರ್ಭವಿರುವುದನ್ನು ಈ ದಾರ್ಶನಿಕ ಲೇಖಕರು ವೇದೋಕ್ತವಾಗಿ ವಿವರಿಸಿದ್ದಾರೆ. ಓರಿಯಃ ಅಗಸ್ತ್ಯರ ವಿಶಾಲ ಮನಸ್ಸಿನ ದ್ಯೋತಕವಾದ "**ದ್ಯೌರ್ವಃ ಪಿತಾ, ಪೃಥಿವೀ ಮಾತಾ, ಸೋಮೋ ಭ್ರಾತಾ ಅದಿತಿಃ ಸ್ವಸಾ...**" ಎಂಬ ಮಂತ್ರವಾಗಲಿ, "ಯೇ ದೇವಾಃ ಪುರಃ ಸದೋಽಗ್ನಿನೇತ್ರಾಃ ರಕ್ಷೋಹಣಸ್ತೇನಃ ಪಾಂತು...." ಎಂಬ ರಕ್ಷಾ (ರಕ್ಷೋಘ್ನ ಮಂತ್ರವಾಗಲಿ) ಮಂತ್ರವಾಗಲಿ, ಅರ್ಥ ಪೂರ್ಣವಾಗಿ, ಸಾಂದರ್ಭಿಕವಾಗಿ ಉದಾಹರಿಸಲ್ಪಟ್ಟಿರುವುದು ಇಲ್ಲಿ ಒಂದು ನಿದರ್ಶನ ಮಾತ್ರ.

ಆರ್ಯಾವರ್ತದ ವೇದ ನಿಧಿಗಳೆನಿಸಿದ ತಪಸ್ತಪ್ತ ಋಷಿಗಳು, ಕುಲಪತಿಗಳು, ಸಪ್ತರ್ಷಿಗಳು, ವಿಂಧ್ಯದ ದಕ್ಷಿಣದ ಅಸುರ ಸಾಮ್ರಾಟರಿಂದ ಪರಿಪರಿಯ ಹಿಂಸೆಗೊಳಗಾದರು. ಇಂಥವರಲ್ಲಿ ಹಿರಿಯ ಅಗಸ್ತ್ಯರು, ಕಣ್ವರು, ಮುಂತಾದವರು. ಇಲ್ವಲ ವಾತಾಪಿಗಳಂತಹ ರಾಕ್ಷಸೀ ಹಿಂಸಕರಿಂದ ಗೋಬ್ರಾಹ್ಮಣ ಹತ್ಯೆ ನಡೆದ ವರ್ಣನೆ ಓದಿದಾಗ ಓದುಗನ ಹೃದಯ ನಡುಗಿ ಹಿಂಡಿದಂತಾಗುತ್ತದೆ.

ಇಂತಹ ವೇದ ಕಾಲೀನ ಜೀವನ ಚಿತ್ರಣ ಇದು. ಮೊದಲೊಮ್ಮೆ ವೇದೋಪಾಸಕನೇ ಆಗಿದ್ದ ಇಲ್ವಲ, ಇಂತಹ ದುಷ್ಟ ದೈತ್ಯ ಹೇಗಾದ ? ಎಂಬುದನ್ನರಿಯುವುದೇ ಇಲ್ಲಿಯ ಮಾರ್ಮಿಕತೆ. ರಾಮಾಯಣ ಮಹಾಭಾರತಗಳ ರಚನೆಗಳಿಗೆ ಪೂರ್ವ ಭಾವಿಯಾಗಿ ಬಂದ ಈ ಅಗಸ್ತ್ಯ ಕಥೆಯೆಲ್ಲ ವ್ಯಥೆಯೆ ಆಗಿ ಅರಳಿ ನಿಂತಂತಿದೆ. ಯಾವ ವೇದಪ್ರಿಯನೂ ಈ ಕಾದಂಬರೀ ಓದಿ ಕಂಪಿತನಾಗದೇ ಇರನು. ಹಿರಿಯ ಅಗಸ್ತ್ಯರ ಹಿನ್ನೆಲೆಯಲ್ಲಿ ಕಿರಿಯ ಅಗಸ್ತ್ಯರನ್ನು ಕೇಂದ್ರೀಕರಿಸಿ ನಿರೂಪಿಸಲಾದ ಈ ಕಾದಂಬ

ರಿಯ ಭಾಷೆ, ಶೈಲಿ, ಪಾತ್ರಪೋಷಣೆಗಳು ವೇದ ಭಾಷೆಗೇ ಬರೆದ ಭಾಷ್ಯ ದಂತಿವೆ. ಕಿರಿಯ ಅಗಸ್ತ್ಯರು (ಹಿರಿಯ ಅಗಸ್ತ್ಯರ ತರುವಾಯ ಇವರೇ ಕಥಾನಾಯಕರು !) ಪಿತೃವಾಂಛಿತದಂತೆ ಕ್ಷತ್ರಿಯ ಕನ್ಯೆಯಾದ ಲೋಪಾ ಮುದ್ರೆಯನ್ನು ವರಿಸಿ, ಕ್ಷಾತ್ರ–ಬ್ರಾಹ್ಮ ಸಮನ್ವಯ ಸಾಧನೆಗೆ ಪ್ರತಿಜ್ಞಾ ಬದ್ಧರಾಗಿ ನಡೆಯುತ್ತಾರೆ. ದೇಶವನ್ನು ಏಕೀಕರಿಸುವ ಪಿತೃವಾಕ್ಯ ವನ್ನು ನಡೆಸುತ್ತಾರೆ.

'ಇಲ್ವಲರು' ಇಳೆಯಲ್ಲಿ ಇಲ್ಲವಾಗುವ ತನಕ ಇಂದು ನಮ್ಮ ದೇಶಕ್ಕೆ ಭವಿಷ್ಯ ಇಲ್ಲವೆಂದೇ ತೋರುತ್ತದೆ ! ಇಂದಿನ ಇಲ್ವಲರಿಗೆ, ಇಂದಿನ ಭಯೋತ್ಪಾದಕರಿಗೆ, ಹಿರಿಯ ಅಗಸ್ತ್ಯರ ಎತ್ತರದ ಎಚ್ಚರದ ನುಡಿಗಳನ್ನು ("ಪ್ರತಿಬುದ್ಧಾ ಅಭೂತನ") ನಾವು ನೆನೆಯುವುದು ಇಲ್ಲಿ ಪ್ರಸ್ತುತ ವೆನಿ ಸುತ್ತದೆ. ಮೇಲೆ ಹೇಳಿದ 'ದ್ಯೌರ್ವ: ಪಿತಾ ಪೃಥಿವೀ ಮಾತಾ' ಎಂಬ ಮಂತ್ರದ ವಿವರಣೆಯೆ ಅದು. "ಅಯ್ಯೋ ! ವಿಷಜಂತುಗಳಂತೆ ಬಿಲದಲ್ಲೇ ಅಡಗುವ ಪ್ರಯತ್ನದ ಸಂಕುಚಿತ ಮನದ ಮಾನವರೇ, ದಾನವರೇ ! ಈ ಭೂಮಿಯೆಲ್ಲ ನಿಮ್ಮದೇ ಎಂಬ, ಇತರರು ಮಣ್ಣಿನ ಮಕ್ಕಳಲ್ಲವೆಂಬ- ಪ್ರತ್ಯೇಕತಾ ಸಂಕುಚಿತ ಮನೋಭಿಪ್ರಾಯ ಸಲ್ಲದು. ಈ ಭೂಮಿಯ ಮೇಲೆ ವಾಸಿಸುವ ಎಲ್ಲ ಮಾನವರೂ ಒಂದೇ ಕುಲದವರು. ಏಕೆಂದರೆ ಆಕಾಶಾಭಿಮಾನೀ ದೇವತೆಯೇ ನಮ್ಮೆಲ್ಲರ ಸಮಾನ ತಂದೆ; ಈ ಭೂಮಿಯೆ ಎಲ್ಲರಿಗೂ ತಾಯಿ. ಆನಂದ ಸ್ವರೂಪಿಯಾದ ಸೋಮನೇ ಎಲ್ಲರಿಗೂ ಸೋದರ. ವಿಶ್ವದ ಅನಂತತೆಯ ಪ್ರತೀಕಳಾದ ಅದಿತಿಯೆ ನಮ್ಮೆಲ್ಲರ ಸೋದರಿ. ನೀವು ವಿಶ್ವವನ್ನೇ ನೋಡಬಲ್ಲ ಶಕ್ತಿಯುಳ್ಳವರು ಇತರರಿಗೆ ತಿಳಿಯದಂತೆ ನೀವು ಬಿಲದಲ್ಲಿ ಅಡಗಿ ಪ್ರಯೋಜನವೇನು ? ವಿಶಾಲ ವಿಶ್ವವನ್ನು ನೀವು ನೋಡಬೇಡವೆ ? ನೀವು ನಿಮ್ಮ ಸ್ಥಾನಗಳಲ್ಲಿ ಸುಖವಾಗಿರಬೇಡವೆ ? ಹಾಗಿರಬೇಕೆಂಬುದೇ ನಮ್ಮ ಆಸೆ. ನಾವು ಅದಕ್ಕೆ

ಭಂಗ ತರುವವರಲ್ಲ. ನೀವೂ ನಮಗೆ ತೊಂದರೆ ಮಾಡದೆ, ಇಬ್ಬರೂ ಸಹಬಾಳ್ವೆ ನಡೆಸೋಣ."

ಎಂತಹ ಉದಾತ್ತ, ಎಂತಹ ವಿಶಾಲ ಹೃದಯದ ಎಚ್ಚರದ ನುಡಿಗಳಿವು! ಇಂತಹ 'ಅಗಸ್ತ್ಯರ' ವ್ಯಕ್ತಿತ್ವದ ಇಂಥ ಚಿತ್ರಣ ಇಂದು ನಾಡಿಗೆ ಅಗತ್ಯವಾಗಿದೆ.

'ಪರಿಮಳ', ಕಲ್ಯಾಣನಗರ
ಧಾರವಾಡ

" ಎನ್ಕೆ "
(ಶ್ರೀ ಎನ್. ಕೆ. ಕುಲಕರ್ಣಿ)

—o—

# ಲೇಖಕನ ಅರಿಕೆ

ಮಹನೀಯರೇ,

ಕಾದಂಬರಿಯೇ ನಿಮ್ಮ ಮುಂದಿರುವಾಗ ನಾನು ಏನನ್ನೂ ಹೆಚ್ಚಾಗಿ ಹೇಳುವುದು ಉಚಿತವಾದುದಲ್ಲ, ಹಾಗೆ ಹೇಳುವುದು ಬಹಳ ಉಳಿದೂ ಇಲ್ಲ. ಆದರೆ ಲೇಖಕನೇ ಪ್ರಕಾಶಕನೇ ಆಗಿರುವ ಈ ಸಂದರ್ಭದಲ್ಲಿ ಈ ನಾಲ್ಕು ಮಾತುಗಳು ಅನುಚಿತವೆನಿಸಲಾರವು.

ಈ ಕೃತಿ ನನ್ನ ನಾಲ್ವತ್ತು ವರ್ಷ ವೇದೋಪಾಸನೆಯ, ಇತಿಹಾಸ ಪುರಾಣಗಳ ಅಭ್ಯಾಸ, ಸಂಶೋಧನೆಯ ಫಲ. ಇದನ್ನು ಬರೆಯುವಾಗ ನನ್ನ ಹೃದಯವನ್ನು ಕೊರೆಯುತ್ತಿರುವ ಸಂಗತಿ ಇದು ! ಅಗಸ್ತ್ಯರ ಕಾಲ ದಿಂದೀಚೆಗೆ ಈ ದೇಶ ಅವರ ಮಹಾ ಪ್ರಯತ್ನದ ಫಲವನ್ನು ಸರಿಯಾಗಿ ಉಳಿಸಿಕೊಂಡಿಲ್ಲವೆಂಬುದು! ವೇದದಂತಹ ವಿಶಾಲ ಕಣ್ಣನ್ನು ಹೊಂದಿಯೂ ಈ ದೇಶದ ಜನರು ಕುರುಡರಂತೆ ನಡೆಯುತ್ತಿರುವುದು ! ಕುರುಡರು ಇತರರ ಕಂಗಳನ್ನು ದ್ವೇಷಿಸುವಂತೆ, ವೇದದೂಷಕರೂ, ವೇದೋಪಾಸ ಕರನ್ನು ಬಗೆ ಬಗೆಗಳಲ್ಲಿ ಹಿಂಸಿಸುವವರೂ, ಅವಹೇಳನ ಮಾಡುವವರೂ, ಅಲ್ಲಗಳೆಯುವವರೂ ಇದ್ದಾರೆಂಬುದು ! ಅದು ಇಲ್ವಲನಂತಹ ದುಷ್ಟ ಕಾರಣಿಗಳು ಇನ್ನೂ ನಮ್ಮಲ್ಲಿ ಇರುವರೆಂಬುದಕ್ಕೆ ಸಾಕ್ಷಿ! ಅದನ್ನು ನಾನು ವಿವರಿಸಬೇಕಿಲ್ಲ ! ದಿನಾ ಬೆಳಗಾದರೆ ಹಗರಣಗಳೂ, 'ದುಡ್ಡು ನುಂಗು ವರು', 'ರೌಡಿಗಳು,' ಜನರನ್ನು ಮನ ಬಂದಂತೆ ಕೊಲ್ಲಿಸುವ, ಕೊಲ್ಲುವ ದುಷ್ಟರು, ಅಧಿಕಾರ ಹಿಡಿದ ಭ್ರಷ್ಟರು, ಎಲ್ಲವನ್ನೂ ಢೋಂಗೀ ಜಾತ್ಯ ತೀತವಾದದ ಹಿನ್ನೆಲೆಯಲ್ಲಿ, ಜನತೆಯ ಹಿತದ ಸೋಗಿನಲ್ಲಿ, ಪರಂಪರೆಯ

ತಪ್ಪು ಕಲ್ಪನೆಯ ಗೃಹೀತಗ್ರಹಿಕೆಯಲ್ಲಿ, ನಾನಾ ಮುಖವಾಡಗಳಲ್ಲಿ ಸ್ವಾರ್ಥಕ್ಕಾಗಿಯೇ ಮಾಡುವ ಮನುಷ್ಯಾಧಮರು, ಇವರೆಲ್ಲ ನಮ್ಮ ಕಂಗಳಿಗೆ ಬೀಳುತ್ತಿದ್ದಾರೆ ! ಹಿಂದೆ ಆಚಾರ್ಯ ಚಾಣಕ್ಯರು, ಶ್ರೀಕೃಷ್ಣ, ಶ್ರೀರಾಮ, ಮೊದಲಾದ ಅವತಾರ ಪುರುಷರು ಇವರನ್ನೆಲ್ಲ ರಾಕ್ಷಸರೆಂದೇ ಕಾಣುತ್ತಾ, ಅವರ ಶಿಕ್ಷೆಗೆ, ಶಿಷ್ಟರಕ್ಷಗೆ ಪಣತೊಟ್ಟು, ಉದ್ಧರಿಸಿನ ದೇಶ ಇದು !

ಸ್ವಾತಂತ್ರ್ಯಪ್ರಾಪ್ತಿಯ ನಂತರ, ಚತುರ್ವಿಧೋಪಾಯಗಳಲ್ಲಿ ಭೇದ, ದಂಡವನ್ನೂ ಕಡೆಗಣಿಸಿ, ಎಲ್ಲರನ್ನೂ 'ಒಳ್ಳೆಯ'ವರೆಂದೂ, ಸಂದರ್ಭ ಕೆಲವರನ್ನು 'ಕೆಟ್ಟದ್ದಾಗಿ' ಮಾಡುತ್ತದೆಂದೂ ಒಂದು ಅವಾಸ್ತವಿಕ, 'ಸಾಮಾಜಿಕವಾದ' ಹುಟ್ಟಿ ಬೆಳೆದು ರಾಜಪೋಷಣೆ, ಆಶ್ರಯ ಪಡೆದ ಫಲವಾಗಿ ಈ ದೇಶ ಇಂದು 'ಇಲ್ವಾಲ'ಮಯವಾಗಿದೆ ! ವೇದ ದರ್ಶನದಿಂದ ಈ ದೇಶ ಬಹು ದೂರ ಸರಿದ ಪರಿಣಾಮ ಇದು. **ಜೀವನ ಒಂದು ನಿರಂತರ ಸಂಗ್ರಾಮ, ದೇವಾಸುರ ಯುದ್ಧ !** ಇಲ್ಲಿ ಅಸುರರೇ ಇಲ್ಲವೆಂದೂ, ಎಲ್ಲವೂ ಹಾಲುಜೇನು ಹರಿಯುವ ಸ್ವರ್ಣಯುಗದ ಹತ್ತಿರ ಬರುತ್ತಿದೆಯೆಂದೂ, ಕಣ್ಣು ಮುಚ್ಚಿ ಆತ್ಮವಂಚನೆ ಮಾಡಿಕೊಂಡು 'ಅನಿಷ್ಟ'ಕ್ಕೆ (Evil ಗೆ) ಜಾಗ ಗುರುತಿಸದ ಸುಳ್ಳುತತ್ತ್ವಶಾಸ್ತ್ರ, ತದಾಧಾರಿತ ಢೋಂಗೀ ರಾಜನೀತಿ, ಪೊಳ್ಳು ಸಾಮಾಜಿಕ ನೀತಿಗಳ ಪರಿಣಾಮವಾಗಿ ಅಂದಿನ ರಾವಣ, ಜರಾಸಂಧ, ಕಂಸ, ಶಿಶುಪಾಲರ ಜಾಗೆಯಲ್ಲಿ ಬೇರೆ ಹೆಸರಿನ ಇಂದಿನ ಅಂಥ ನೀಚರನ್ನು ಸಹಿಸುತ್ತ, ಶಿಷ್ಟರು ನಿರುಪಾಯರಾಗಿ, ಕೊಡುವ, ಅವರನ್ನು ನಿಸ್ಸಹಾಯಕರನ್ನಾಗಿಸುವ, ಅಸಂಘಟಿತ ಸಾಮಾಜಿಕ ಸ್ಥಿತಿ ಬಂದಿದೆ ! **ಇದಕ್ಕೆ ೫೦ ವರ್ಷದ ನಮ್ಮ ರಾಜ ನೀತಿ ರೂಪಿಸಿದ ಅಜ್ಞರೇ ಹೊಣೆ !**

ಈ ಕೆಟ್ಟ ಅಧ್ಯಾಯ ಮುಗಿಯಬೇಕಾದರೆ ಈಗ ಆಗಸ್ತ್ಯರು, ಚಾಣಕ್ಯರು ಬೇಕಾಗಿದ್ದಾರೆ! ಈ ಕೃತಿಯನ್ನೋದುವವರಿಗೆ ಆ ಜಾಗೃತಿ

ಉಂಟಾದರೆ ಲೇಖಕ ತೃಪ್ತ ! ಬ್ರಾಹ್ಮಕ್ಷಾತ್ರ ಶಕ್ತಿಗಳು ಸಂಘಟಿಸಿ ಕೊಂಡು ಜಾಗೃತರಾಗಬೇಕಾದ ಕಾಲ ಇದು ! ದುರದೃಷ್ಟವಶಾತ್ ನಮ್ಮ ಇಂದಿನ ಸಾಹಿತ್ಯವೂ ವಿಮರ್ಶೆಯೂ ಈ ದುಷ್ಟ ನೀತಿಗಳಿಗೇ ಪ್ರೋತ್ಸಾಹ ಇತ್ತು, ಸುಳ್ಳು ಸಾಮಾಜಿಕ ಕಲ್ಪನೆಗಳನ್ನೇ ಆಧರಿಸಿ, ಬರೆಯುತ್ತ ಗೌರವಿಸುತ್ತ ಭ್ರಷ್ಟರನ್ನೇ ಹೊಗಳುತ್ತ ನಿಂತಿವೆ ! **ಸಾಹಿತಿ ಗಳಿಗೂ ಅಧಿಕಾರ, ಪದವಿ, ಪ್ರಶಸ್ತಿಗಳೂ, ಪ್ರತಿಷ್ಠೆ, ಹಣವೂ ರಾಜಕಾರಣಿಗಳ ಓಲೈಕೆಯೂ ಬೇಕಾಗಿದೆ** ! ಅವನ್ನು 'ಒಗೆಯುವ' ಜರಾಸಂಧರೂ, ಕರ್ಣನೂ, ದುರ್ಯೋಧನನೂ, ನವನಂದರೂ ಇರುವ ವರೆಗೆ, ಈ ಕಾಗೆಗಳಿಗೆ, ಕೀಳು ಪ್ರಾಣಿಗಳಿಗೆ ಏನು ಕೊರತೆ ? ಸಮಾಜ ವನ್ನು ತಿದ್ದುವ ರೀತಿಯು ಹಿಂದಿನ ತಲೆಮಾರಿನ. ಮಾಸ್ತಿ, ಡಿ. ವಿ. ಜಿ. ರಾಜರತ್ನಂ, ದೇವುಡು, ಬೇಂದ್ರೆ ಅಂತಹ ಸಾಹಿತಿಗಳು ಅಸ್ತಂಗತರಾದ ಮೇಲೆ ಈ 'ನಾಯಿಕೊಡೆ'ಗಳು ಎಲ್ಲಿಂದ ಹುಟ್ಟಿ ಬಂದವು ? ಆತ್ಮ ಗೌರವವಿಲ್ಲದ ಇಂತವರು 'ಪಶುಸಾಹಿತ್ಯ' ವನ್ನಲ್ಲವೆ ಬೇರೇನನ್ನು ಸೃಷ್ಟಿಸ ಬಲ್ಲರು ? **ಈಗ ಬೇಕಾಗಿದೆ, ಜನಜಾಗೃತಿಯ ಸಾಹಿತ್ಯ; ರಾಮಾಯಣ ಮಹಾಭಾರತಗಳಂತೆ ನಿಲ್ಲಬಲ್ಲ, ನಿರಂತರ ದೃಷ್ಟಿಯ, ಆರ್ಷದರ್ಶನಾಧಾರಿತ ಕಾವ್ಯ, ನಾಟಕ, ಕಥೆ ಕಾದಂಬರಿಗಳು** ! ಹೊಸ ಪೀಳಿಗೆಯವರಿಗೆ ಈ ಮನವರಿಕೆ ಆದರೆ ಅದಕ್ಕಿಂತ ಹೆಚ್ಚು ನನಗೆ ತೃಪ್ತಿ ತರುವುದು ಬೇರೊಂದಿಲ್ಲ !

ಸುದೈವ ವಶಾತ್ ಇಂತಹ ಸಾಹಿತ್ಯ ಜನರಿಗೆ ರುಚಿಸಿದೆ; ಅದಕ್ಕೆ ಬೇಡಿಕೆ ಇದೆ ಎನಿಸುತ್ತಿದೆ. "**ಆ ಹದಿನೆಂಟುದಿನಗಳು**" ಎಂಬ ನನ್ನ ಮಹಾಭಾರತ ಯುದ್ಧಪಂಚಕಾಧಾರಿತ ಕಾದಂಬರಿಯು (200/–ರೂ. ಬೆಲೆಯಾದರೂ,) ಪ್ರಕಟಿತವಾದ ಮೂರೇ ತಿಂಗಳಲ್ಲಿ 3000 ಪ್ರತಿಗಳೂ ತೀರಿವೆ ! "**ಶ್ರೀ ಕೃಷ್ಣಾವತಾರದ ಕೊನೆಯುಗಳಿಗೆಗಳು**"ಈಗ ಹತ್ತು ಸಾವಿರಕ್ಕೂ ಪ್ರತಿಗಳಿಗೆ ಮಿಕ್ಕು ಮೂರು ವರ್ಷದೊಳಗೆ ಮಾರಾಟವಾಗಿ

ತೀರಿ ಮುದ್ರಣಕ್ಕೆ ಕಾದಿದೆ ! ನನ್ನ ಕೃತಿಗಳನ್ನು ಪ್ರಕಟಿಸಲು ಪ್ರಕಾಶಕರು ಒಬ್ಬರಮೇಲೊಬ್ಬರು ಬಿದ್ದು ಮುಂದೆ ಬರುತ್ತಿದ್ದಾರೆ !

'ತರಂಗ' ಧಾರವಾಹಿ, **"ಶ್ರೀ ಭಾಗವತ, ಧಾರಾತೀರ್ಥವಾಹಿನಿ, ಶ್ರೀ ಕೃಷ್ಣಾವತಾರ"** (ದಶಮ ಸ್ಕಂಧಪೂರ್ವಾರ್ಧದ ಕಾದಂಬರೀ ರೂಪ) ಈಗ ತರಂಗಧಾರವಾಹಿಯಾಗಿ ಮುಗಿಯಲು, ಅಚ್ಚುಮನೆ ಸೇರಲು ಕಾದಿದೆ !

ಇನ್ನೂ.... ಹೇಳಿಬಿಡಲೇ ? ನನ್ನ ಆಪ್ತ ಮಿತ್ರರಾದ ಬೆಂಗಳೂರಿನ ಶ್ರೀ ಜಿ. ಕೆ. ಶ್ರೀನಿವಾಸಯ್ಯ ಅವರು ("ಪವನಜ ಪ್ರಕಾಶನ" ಎಂಬ ಹೊಸ ಸಂಸ್ಥೆಯನ್ನೇ ಈ ನನ್ನ ಕಾದಂಬರಿಗಳ ಮುದ್ರಣ, ಪ್ರಚಾರಕ್ಕಾಗಿ ಏರ್ಪಡಿಸಿದ ಧನಿಕ, ರಸಿಕ, ಸದಭಿರುಚಿಯ ಧರ್ಮಾತ್ಮರು), ನನ್ನನ್ನು ಸಮಗ್ರ ರಾಮಾಯಣವನ್ನು ಒಂದೆರಡು ಸಂಪುಟಗಳಲ್ಲಿ ಕಾದಂಬರಿ ಯನ್ನಾಗಿ ಬರೆದು ಕೊಡುವಂತೆ ಕೇಳುತ್ತಿದ್ದಾರೆ, ಒತ್ತಾಯಿಸುತ್ತಿದ್ದಾರೆ ! ಸಮಗ್ರಮಹಾಭಾರತದ ಕಾದಂಬರೀಕರಣವನ್ನು ಈಗಾಗಲೇ ಆರಂಭಿ ಸಿದ್ದು, 'ರಾಜಸೂಯ'ದ ಮೊದಲು ಭಾಗದ ಅನೇಕ ಅಧ್ಯಾಯಗಳು ಸಿದ್ಧವಾಗಿವೆ !

"ಸರ್ಪಯಾ"ಗದ ಕೆಲವು ಅಧ್ಯಾಯಗಳು ಸಿದ್ಧವಿವೆ ! ನನ್ನ ವೇದ ರಾಮಾಯಣ, ಭಾರತ, ಭಾಗವತ. ಸ್ತೋತ್ರ, ಪ್ರಬಂಧವಿವೇಚನೆ, ವ್ಯಾಖ್ಯಾನರೂಪ ಗ್ರಂಥಗಳಿಗೆ ಅಪಾರ ಬೇಡಿಕೆ ಇದ್ದು, ಬರೆದು ಮುದ್ರಿಸಲು ಉದಾರಿಗಳು ತಾವೇ ಮುಂದೆ ಬರುತ್ತಿದ್ದಾರೆ !

ಕನ್ನಡದ ಎಲ್ಲ ವಾರಪತ್ರಿಕೆಗಳಲ್ಲೂ ಧಾರ್ಮಿಕ, ಐತಿಹಾಸಿಕ, ಪೌರಾ ಣಿಕ ಧಾರಾವಾಹಿಗಳಿಗೆ ಬೇಡಿಕೆ ಇದ್ದು, ಪತ್ರಿಕಾಪ್ರಪಂಚದಲ್ಲಿ ಹೊಸಗಾಳಿ

ಎದ್ದಿರುವಂತಿದೆ ! "ತರಂಗ"ದ ಶ್ರೀ ಗುಲ್ವಾಡಿ ಅವರೇ ಈ ಚಳುವಳಿಯ ಅಧ್ವರ್ಯುಗಳೆನ್ನಬೇಕು ! ಅದು ಸತ್ಯ !!

'ತರಂಗ"ದಲ್ಲಿ ನನ್ನ 'ಚಾಣಕ್ಯ' ಬಂದೊಡನೆಯೇ ಈ ಕಾದಂಬರಿಯೂ ಸಿದ್ಧವಾಗಿ, ಶ್ರೀ ಗುಲ್ವಾಡಿ ಅವರ ಕೈ ಸೇರಿತ್ತು ! ಅಷ್ಟರಲ್ಲಿ ಅವರು ಬೇರೆ ಬೇರೆ ಧಾರಾವಾಹಿಗಳನ್ನು ನನ್ನಿಂದ ಅಪೇಕ್ಷಿಸಿ, ಬರೆಸುತ್ತಾ, ಪ್ರಕಟಿಸುತ್ತಾ ಬಂದುದರಿಂದ. ಇದು ಒಂದೆರಡು ವರ್ಷ ಅಲ್ಲೇ ಕುಳಿತಿದ್ದು, ನಮ್ಮ ಓದುಗರು ಚಡಪಡಿಸುತ್ತಿರುದರಿಂದ ವಾಪಸ್ಸು ಪಡೆದು ಹೀಗೆ ಬೇಗ ಹೊರತರಬೇಕಾಯಿತು ! "**ಇಷ್ಟವಿಲ್ಲದೆ ಪುಸ್ತಕದ ಮಾತೃಕೆಯನ್ನು ನಿಮಗೆ ಹಿಂದಿರುಗಿಸುತ್ತಿದ್ದೇನೆ**'' ಎಂದು ಅವರು ಕೆಂಪುಮಶಿಯಲ್ಲಿ ಒತ್ತುಕೊಟ್ಟು ಬರೆದು ಕಳುಹಿ ಉಪಕರಿಸಿದ್ದಾರೆ. ಆದುದರಿಂದ ನಿಮ್ಮ ಕೈ ಬೇಗ ಸೇರಿದೆ !

"**ಶ್ರೀಕೃಷ್ಣನೊಡನೆ ಸಂಭಾಷಣೆಗಳು**" ಎಂಬ ಹೊಸ ಮಾದರಿಯ ಒಂದು ಗ್ರಂಥ ಇಂದು, 'ಶ್ರೀಕೃಷ್ಣ ಜಯಂತಿ'ಯಂದು, ಬರೆಯಲು ಪ್ರೇರಣೆ ಆಗಿ, ಒಂದು ಅಧ್ಯಾಯ ಸಿದ್ಧತೆ ಆಗಿದೆ. ಶ್ರೀಕೃಷ್ಣಾವತಾರದ ಅವ್ಯಕ್ತಮರ್ಮಗಳನ್ನು ಅವನ ಬಾಯಿಂದಲೇ ಒಬ್ಬ ಭಕ್ತ ಕೇಳಿ ತಿಳಿದುಕೊಳ್ಳುವ ರೀತಿಯಲ್ಲಿ ಭಾರತ ಭಾಗವತಗಳ ರಸ್ಯರಹಸ್ಯಾರ್ಥಗಳ ನಿರೂಪಣೆ, ನಿವೇದನೆ ಇರುವ ಗ್ರಂಥ ಇದು.

ಇವೆಲ್ಲ ಯಾವಾಗ ಬರೆದು, ಮುದ್ರಿಸಿ, ನಿಮ್ಮ ಕೈಸೇರುವುದೋ ! ನನಗೂ ತವಕ, ಉತ್ಸಾಹ ಆದರೂ, ಮಿತಿಗಳ ನಡುವೆ ಒಮ್ಮೊಮ್ಮೆ ಚಿಂತೆ ಆಗುತ್ತದೆ !

ಈ ಸಲದ ಶ್ರೀರಾಮನವಮೀ ಪ್ರವಚನದ ನಂತರ ಧಾರವಾಡಕ್ಕೆ ಮರಳುವಾಗ ಅರಸೀಕೆರೆಯಲ್ಲಿ ಅಕಸ್ಮಾತಾಗಿ ರೇಲ್ವೆ ಕಂಬಿಯ ಮೇಲೆ

ಬಿದ್ದು, ಬಲಗೈ ಮಣಿಕಟ್ಟಿಗೇ ತುಂಬಾ ಪೆಟ್ಟಾಗಿ, ಪೆನ್ನು ಹಿಡಿಯುವುದೂ ಆಗದೆ ೨-೩ ತಿಂಗಳಕಾಲ ತುಂಬ ಹಿಂಸೆ ಅನುಭವಿಸಬೇಕಾಯ್ತು ! ಈಗ ನನ್ನ ಉಪಾಸ್ಯದೈವವಾದ ಶ್ರೀ ಸುದರ್ಶನನರಸಿಂಹ ಸ್ವಾಮಿ ನನ್ನ ಬಲಗೈ ಬೆರಳಿನ ಮೇಲೆಯೇ ವಿರಾಜಮಾನನಾಗಿ, ಇಷ್ಟಾದರೂ ಬರೆಯುವ ಶಕ್ತಿ ಕೊಟ್ಟಿದ್ದಾನೆ. ಅವನು ಭಗವಂತನ ಇಚ್ಛಾ, ಸಂಕಲ್ಪ ಸ್ವರೂಪವೇ. ಅವನಿಗೆ ಯಾವುದೂ ಅಸಾಧ್ಯವಲ್ಲ ! ಜಗತ್ತನ್ನೇ ನಡೆಸುವ ಅವನಿಗೆ ಒಂದು ಪೆನ್ನು ನಡೆಸುವ ಶಕ್ತಿ ಇಲ್ಲವೆಂದರೆ ಯಾವ ಆಸ್ತಿಕ ನಂಬುತ್ತಾನೆ !

ಈ ಎಲ್ಲ ಯೋಜನೆಗಳು ಅವನ ಕೈಲಿವೆ. ಹೆಚ್ಚೇನು ಹೇಳಲಿ ?

ಆದುದರಿಂದ ಮುನ್ನುಡಿ ಬರೆದುಕೊಟ್ಟ ಸಾಹಿತಿ, ನನ್ನ ಆಪ್ತ ಹಿತೈಷಿ, ಹಿರಿಯ ಮಿತ್ರ ಶ್ರೀ ಎನ್ಕೆ ಅವರಿಗೂ, ಮುದ್ರಕರಾದ ಶ್ರೀ ಶಿವ ಶಂಕರ ಪ್ರಿಂಟರ್ಸ್ ಅವರಿಗೂ, ರಕ್ಷಾಪತ್ರಚಿತ್ರವನ್ನು ಸಕಾಲಕ್ಕೆ ಸೊಗಸಾಗಿ ಬರೆದುಕೊಟ್ಟು, ಆಫ್‌ಸೆಟ್ಟ ಮುದ್ರಣದ ಉಸ್ತುವಾರಿಯನ್ನೂ ತಾವೇ ಗಮನಿಸಿ, ಉಪಕರಿಸಿದ ಚಿತ್ರಕಾರ ಮಿತ್ರ ಶ್ರೀ ಎಂ. ಸಿ. ದೇಸಾಯಿ ಅವರಿಗೂ,ಗ್ರಾಹಕರಾಗಿ ಮುಂಗಡ ಹಣ ಕಳುಹಿ ಉಪಕರಿಸಿದ ಓದುಗರಿಗೂ, ಉತ್ತೇಜಕರಿಗೂ, ಎಲ್ಲರಿಗೂ, ಲೇಖಕ ಕೃತಜ್ಞ—

"ಶ್ರೀ ಅಯೋಧ್ಯಾ" ಇಂತು ನಿಮ್ಮವ

**ಧಾರವಾಡ-7** **ಕೆ. ಎಸ್. ನಾರಾಯಣಾಚಾರ್ಯ**

## ಅರ್ಪಣೆ

ಭಾರತ ದೇಶದ ಸಾಂಸ್ಕೃತಿಕ ಏಕೀಕರಣಕ್ಕಾಗಿ, ಸಮಗ್ರತೆ, ರಾಷ್ಟ್ರದ ಸಾರ್ವಭೌಮತೆಗಾಗಿ ಇಡೀ ಆಯುಷ್ಯ, ತಪಸ್ಸು, ವಿದ್ಯೆಗಳನ್ನು ಮುಡಿಪಿಟ್ಟು ಪ್ರಾಣಾರ್ಪಣೆ ಮಾಡಿದ :

ಸಾವಿರಾರು ಋಷಿವರ್ಯರಿಗೂ

ಅವರ ಇಂದಿನ ಅಪರಾವತಾರರಾಗಿ ಬ್ರಹ್ಮಕ್ಷತ್ರ ತೇಜೋವಿಮಿಶ್ರಿತರಾಗಿ, ನಿಃಸ್ವಾರ್ಥ ಸೇವೆಯಲ್ಲಿರುವ ಋಷಿ ಪುತ್ರರಾದ, ರಾಷ್ಟ್ರದ ಎಲ್ಲ ಸ್ವಯಂಸೇವಕರಿಗೂ

ಈ ಗ್ರಂಥವು

**ಸ್ವಾತಂತ್ರ್ಯಪ್ರಾಪ್ತಿಯ**

**"ಸ್ವರ್ಣಮಹೋತ್ಸವ" ಸಂದರ್ಭದಲ್ಲಿ**

**ಅರ್ಪಿತ**

# ಅಧ್ಯಾಯಗಳ

## ಅನುಕ್ರಮಣಿ



**ಅಧ್ಯಾಯಗಳು**

# ೧. ಅಗಸ್ತ್ಯ

## ವಿಂಧ್ಯಾಟವಿಯ ಘೋರ ದೃಶ್ಯ !

ಅತಿಗಹನವಾದ ಘೋರ ವಿನ್ಧ್ಯಾಟವಿಯ ಮಧ್ಯೆ ಸಣ್ಣನದಿಯೊಂದು ಜುಳುಜುಳು ಶಬ್ದ ಮಾಡುತ್ತ ಹರಿಯುತ್ತಿತ್ತು. ಸುಮಾರು ಹದಿನಾರೋ ಹದಿನೆಂಟೋ ವಯಸ್ಸಿನ ಇಬ್ಬರು ಯುವಕರು ಕುದುರೆಗಳಿಂದಿಳಿದು ಎಚ್ಚರಿಕೆಯಿಂದ ಕ್ಷಣಕಾಲ ಸುತ್ತ ಎಲ್ಲೆಡೆಯೂ ನಿಟ್ಟಿಸಿ ನೋಡಿದರು. ಅಡವಿಯ ಯಾವ ಮರದ ಯಾವ ಎಲೆಯೂ ಅಲುಗಾಡಲಿಲ್ಲ. ಮಧ್ಯಾಹ್ನದ ಸೂರ್ಯ ಸುಡುತ್ತಿದ್ದ, ಯುವಕರು ಬಲು ದೂರದಿಂದ ಬಂದವರಂತೆಯೂ, ದಣಿದವರಂತೆಯೂ ಕಾಣುತ್ತಿದ್ದರು. ಅವರು ಕಿರಾತರ ವೇಷ ಧರಿಸಿದ್ದರೂ ಅವರ ಕಂಗಳಲ್ಲಿ ಅಧ್ಯಯನ ಶೀಲ ತಪಸ್ವಿಗಳ ಸಾತ್ತ್ವಿಕ ತೇಜಸ್ಸು ಎದ್ದು ಕಾಣುತ್ತಿತ್ತು. ಅರಣ್ಯದ ಕಾಡು ಬಂಡೆಗಳನ್ನೂ, ಕಣಿವೆಯನ್ನೂ, ಮರಗಿಡಗಳನ್ನೂ, ಪಶು, ಸರೀಸೃಪಾದಿಗಳನ್ನೂ ಶಂಕೆಯ ದೃಷ್ಟಿಯಿಂದ ನೋಡುತ್ತಾ, ಹಿಡಿದ ಕೆಲಸವನ್ನು ಸಾಧಿಸಿಯೇ ತೀರಿಸುವ ಹಠವೊಂದೂ ಅವರ ದೃಷ್ಟಿಗಳಲ್ಲಿ ಅಡಗಿತ್ತು.

ಇಬ್ಬರಲ್ಲಿ ಎತ್ತರದ ಯುವಕ ಆ ಇನ್ನೊಬ್ಬನನ್ನು ಕುರಿತು "ಪ್ರಿಯವ್ರತ ! ಬೇಗ ನಿನ್ನ ಸ್ನಾನಾಹ್ನಿಕ ಮುಗಿಸಿ ಬಾ. ನಾನಿಲ್ಲಿ ಎಚ್ಚರವಾಗಿ ಕಾಯುತ್ತಿರುತ್ತೇನೆ." ಎನ್ನುತ್ತಾ, ಎರಡೂ ಕುದುರೆಗಳನ್ನು ದಟ್ಟ ನೆರಳಿನ ನಡುವೆ ಒಂದು ಗಿಡಕ್ಕೆ ಕಟ್ಟಿ ಹಾಕಿದ.

ಪ್ರಿಯವ್ರತ ತನ್ನ ಕಿರಾತವೇಷವನ್ನು ಕಳಚಿ, ಆ ನದಿಯಲ್ಲಿಳಿದು ಸ್ನಾನ ಮಾಡಲಾರಂಭಿಸಿದ. ಇನ್ನೊಬ್ಬ ಯುವಕ ತನ್ನ ಬಿಲ್ಲಿನ ಹಗ್ಗದಲ್ಲಿ ಬಾಣ ಹೂಡಿ ಯುದ್ಧ ಸಂನ್ನದ್ಧನಾಗಿ ನಾಲ್ಕೂ ದಿಕ್ಕಿನತ್ತ ದೃಷ್ಟಿ ಹಾಯಿಸುತ್ತಾ ನುತ್ತಲಾರಂಭಿಸಿದ. ಕೆಲ ಕಾಲ ಯಾರಾವ ಶಬ್ದವೂ ಅಲ್ಲಿ ಕೇಳಿ ಬರಲಿಲ್ಲ.

ಪ್ರಿಯವ್ರತ ಸ್ನಾನ ಸಂಧ್ಯೆಗಳನ್ನು ಮುಗಿಸಿದವನೇ ಮತ್ತೆ ಕಿರಾತ ಉಡುಪನ್ನು ಧರಿಸಿ ಆ ಇನ್ನೊಬ್ಬ ಯುವಕನ ಬಳಿ ಬಂದು “ಮಿತ್ರ, ಚಾಕ್ರಾಯಣ! ನೀನೀಗ ನಿನ್ನ ಸ್ನಾನಾದಿಗಳನ್ನು ಮುಗಿಸಿ ಬಾ. ನಾನಿಲ್ಲಿ ಕಾವಲಿರುತ್ತೇನೆ” ಎಂದವನೇ, ನೆರಳಲ್ಲಿನ ಕುದುರೆಯ ಬಳಿ ಹೋಗಿ ಚೀಲದಿಂದ ಕೆಲವು ಕಂದ ಮೂಲ ಫಲಗಳನ್ನು ತಂದು ತಿನ್ನಲಾರಂಭಿಸಿದ. ಹಲವು ಕ್ಷಣ ಆ ಕತ್ತಲಲ್ಲಿ ಅವನಿಗೇನೂ ಕಾಣಲಿಲ್ಲ. ಸಿದ್ಧವಾದ ಬಿಲ್ಲು ಹೆಗಲಲ್ಲೇ ಇತ್ತು.

ಇದ್ದಕ್ಕಿದ್ದಂತೆ ಮರದ ಟೊಂಗೆಯೊಂದು ಸಪ್ಪಳ ಮಾಡಿದಂತಾಯಿತು! ಯುವಕ ಕಂದ ಮೂಲಗಳ ಗಂಟನ್ನು ಕೆಳಗೆ ಹಾಕಿ, ಬಿಲ್ಲಲ್ಲಿ ಬಾಣ ಹೂಡಿ ಆ ದಿಕ್ಕಿನತ್ತ ಗುರಿಯಿಟ್ಟ. ಮತ್ತೆ ಯಾವ ಶಬ್ದವೂ ಕೆಲಕ್ಷಣ ಕೇಳಿ ಬರಲಿಲ್ಲ.

ಸ್ನಾನಕ್ಕಿಳಿದಿದ್ದ ಚಾಕ್ರಾಯಣ ಮಿತ್ರನ ಚರ್ಯೆಯನ್ನು ಗಮನಿಸಿ, ಅವನ ಬಾಣದ ಗುರಿಯತ್ತ ದೃಷ್ಟಿ ಹಾಯಿಸಿದ! ಟೊಂಗೆಯಿಂದ ಟೊಂಗೆಯೊಂದಕ್ಕೆ ಮನುಷ್ಯಾಕೃತಿಯ ಕಪಿಯೊಂದು ಸರಿದದ್ದು ಅವನ ಚುರುಕಿನ ಕಣ್ಣಿಗೆ ಬಿದ್ದಿತು. ಒಡನೆಯೇ ಕೌಪೀನಧಾರಿಯಾಗಿಯೇ ದಡದತ್ತ ಧಾವಿಸಿ, ತನ್ನ ಬಿಲ್ಲುಬಾಣಗಳನ್ನು ಎತ್ತಿ, ಹೂಡಿ ಅವನೂ ಆ ಮರದ ಇನ್ನೊಂದು ಬದಿಗೋಡಿ, ಹಾಗೆ ಸರಿದ ಕಪಿ ಮಾನವನಾರೆಂದು ನೋಡಲಾರಂಭಿಸಿದ.

ಮೇಲಿದ್ದ ಮಾನವಾಕೃತಿ ಮರದ ನೆರಳಿನ ಎರಡೂ ಬದಿಯ

ಧನುರ್ಧಾರಿಗಳನ್ನು ನೋಡಿ ಕೈಯಲ್ಲಿದ್ದ ಈಟಿಯಂಥ ನಿಶಿತ ಶಸ್ತ್ರವೊಂದನ್ನು ಯಾರತ್ತ ಮೊದಲು ಎಸೆಯಬೇಕೆಂದು ನಿರ್ಧರಿಸುವಷ್ಟರಲ್ಲೇ ಪ್ರಿಯವ್ರತನ ಬಾಣ ಆವನ ಎದೆಯನ್ನು ಭೇದಿಸಿ ಆ ಆಕೃತಿಯನ್ನು ಕೆಳಗೆ ಉರುಳಿಸಿತು !

ಚಾಕ್ರಾಯಣ ಓಡಿ, ಕೆಳಗೆ ಬಿದ್ದ ಆ ಮನುಷ್ಯ ಪ್ರಾಣಿಯನ್ನು ಆ ಅಡವಿಯ ಕಿರಾತ ಭಾಷೆಯಲ್ಲಿ ಪ್ರಶ್ನಿಸಲಾರಂಭಿಸಿದಃ

"ಎಲೋ, ಪ್ರಾಗಪ್ರಾಯನೇ ! ಬೇಗ ಬೊಗಳು ! ಇಲ್ಲವಾದರೆ ನಿನ್ನ ಪ್ರಾಣ ಹೋಗುವ ಮೊದಲು ನಿನ್ನನ್ನು ಚಿತ್ರ ಹಿಂಸೆ ಮಾಡುತ್ತೇನೆ'' ಎನ್ನುತ್ತಾ ಮನುಷ್ಯನ ಐದು ಬೆರಳುಗಳ ಉಗುರುಗಳ ಆಕೃತಿಯ ಭಯಂಕರ ಹಿಂಸಾ ಯಂತ್ರವನ್ನು ತೋರಿಸಿದ.

ಸಾಯುತ್ತಿದ್ದ ಆ ಪ್ರಾಣಿಮಾನವ "ಅಗೋ, ಅಲ್ಲಿ, ಆ ಬಂಡೆಯಾಚೆ, ಒಂದು ಪರಿದಾರಿಯ ದೂರದಲ್ಲಿ, ನಿನ್ನ ಕಡೆಯ ವೃದ್ಧನೊಬ್ಬ ಸಾಯುತ್ತಿದ್ದಾನೆ. ಉಳಿಸುವೆಯಾದರೆ ಯತ್ನಿಸು. ಸುತ್ತಲ ಎತ್ತರದ ಮನಗಳಲ್ಲಿ ನನ್ನ ಕಡೆಯವರು ಕತ್ತಲಲ್ಲಿ ಅಡಗಿದ್ದಾರೆ. ಮರಗಳ ಮೇಲೆ ನಮ್ಮ ನಗಾರಿಗಳಿವೆ.'' ಎಂದವನೇ ಸತ್ತುಬಿಟ್ಟ.

ಯುವಕರಿಬ್ಬರೂ ಅವನ ಹೆಣವನ್ನು ಒಂದು ಪೊದರಿನಲ್ಲಿ ಅವಿತಿಟ್ಟರು. ಚಾಕ್ರಾಯಣ ಮತ್ತೆ ಸ್ನಾನಕ್ಕೆ ನದಿಗಿಳಿದ. ಪ್ರಿಯವ್ರತ ಗೆಡ್ಡೆಗೆಣಸು ತಿಂದು ಮುಗಿಸುವಷ್ಟರಲ್ಲಿ ಚಾಕ್ರಾಯಣ ಆಹ್ನೀಕ ಮುಗಿಸಿ ಬಂದು ತಾನೂ ಗಬಗಬನೆ ಒಂದೆರಡು ಕಂದ ಮೂಲ ತಿಂದು ಇಬ್ಬರೂ ನದಿಯ ನೀರು ಕುಡಿದು ಕೊಂಚ ದಣಿವಾರಿಸಿಕೊಂಡರು.

ಅವಿತಿಟ್ಟ ಹೆಣದ ಸೊಂಟದ ಕಠಾರಿಯನ್ನು ಕಿತ್ತು ಚಾಕ್ರಾಯಣ ತನ್ನ ಸೊಂಟಕ್ಕೆ ಸೇರಿಸಿದ. ಆ ನಿರುಪಯುಕ್ತ ಈಟಿ ಕುದುರೆಯ ಪಕ್ಕಕ್ಕೆ ಸೇರಿತು.

ಪ್ರಿಯವ್ರತ ತನ್ನ ಸಹಚರನ ಸೂಚನೆಯಂತೆ ಮರವೇರಿ ಆ ಸಣ್ಣ ನಗಾರಿಯನ್ನು ಪತ್ತೆ ಹಚ್ಚಿ ಕೆಳಗೆ ನೋಡಿದ !

"ಹೂಂ" ಎಂಬ ಚಾಕ್ರಾಯಣನ ಕಣ್ಣು ಸನ್ನೆಯಂತೆ ಆವನು ನಗಾರಿಯನ್ನು ಮೆಲ್ಲನೆ ಅದರ ಕಡ್ಡಿಯಿಂದ ಒಂದು ಸಲ ಸಪ್ಪಳ ಮಾಡಿದ.

ಮತ್ತೆ ಒಂದು ಕ್ಷಣ ಏನೂ ಸಪ್ಪಳವಿಲ್ಲ. ಆಮೇಲೆ ಅಂಥದೇ ಇನ್ನೊಂದು ಸಣ್ಣ ಸಪ್ಪಳ ದೂರದ ಕತ್ತಲ ಇನ್ನೊಂದು ಮರದತ್ತಣಿಂದ ಕೇಳಿ ಬಂತು. ಪ್ರಿಯವ್ರತ ಮತ್ತು ಚಾಕ್ರಾಯಣ ಒಬ್ಬರ ಮುಖ ಒಬ್ಬರು ನೋಡಿಕೊಂಡರು. ಮತ್ತೆ ಸನ್ನೆಯಂತೆ ಪ್ರಿಯವ್ರತ ಆ ನಗಾರಿಯನ್ನು ಹತ್ತಾರು ಸಲ ಈಗ ಕೊಂಚ ಜೋರಾಗಿ ಬಾರಿಸಿ, ಕೂಡಲೇ ಕೆಳಗಿಳಿದು ಚಾಕ್ರಾಯಣನನ್ನು ಕೂಡಿಕೊಂಡ. ಇಬ್ಬರೂ ಆ ಹೆಣವನ್ನು ತಾವಿದ್ದಲ್ಲಿಗೆ ತಂದು ನೆಲದಲ್ಲಿ ನೂಕಿ, ಸುತ್ತಣ ಪೊದರುಗಳಲ್ಲಿ ಎದುರು ಬದುರಾಗಿ ಅಡಗಿ ಕುಳಿತರು.

ಹಾಗೆ ಹತ್ತಾರುಸಲ ನಗಾರಿ ಬಾರಿಸುವುದೆಂದರೆ "ಅಪಾಯ ಜೋರಾಗಿದೆ" ಎಂಬರ್ಥವೆಂಬುದನ್ನು ಕಿರಾತರ ಸಂಜ್ಞೆಯನ್ನಾಗಿ ಈ ಮುಂಚೆಯೇ ಅವರು ತಮ್ಮ ಅನುಭವದಿಂದ ಅರಿತಿದ್ದರು. ಸುಮಾರು ಹತ್ತು-ಇಪ್ಪತ್ತು ಕರೀಬಣ್ಣದ ಪ್ರಾಣಿಮಾನವಾಕೃತಿಗಳು ತಾವಡಗಿದ್ದ ಮರಗಳ ಹಾವಿನಿಂದ ಕೆಳಗಿಳಿದು ದೂರದಿಂದ ತಮ್ಮ ಕಡೆಯವನೊಬ್ಬ ಅಷ್ಟು ದೂರದಲ್ಲಿ ಸತ್ತು ಬಿದಿರುವುದನ್ನು ಕಂಡು ಅಚ್ಚರಿಪಟ್ಟರು. ಅವನ ಎದೆಯ ಬಾಣವನ್ನು ಕಂಡು ಶತ್ರುವಾರೋ ಸಮೀಪದಲ್ಲಿರಬೇಕೆಂದೂ ಊಹಿಸಿ, ಇಬ್ಬರು ಆವನ ಶೋಧಕ್ಕೆ ಹೊರಟು, ಉಳಿದವರು ಆ ಹೆಣದ ಬಳಿ ಬಂದರು.

ಶೋಧಕ್ಕೆ ಹೊರಟವನೊಬ್ಬ ಪ್ರಿಯವ್ರತ ಅಡಗಿಕುಳಿತಿದ್ದ ಪೊದರಿನ ಬಳಿಯೇ ಬಂದುನಿಂತು ಸುತ್ತ ನೋಡಲಾರಂಭಿಸಿದ. ಪ್ರಿಯವ್ರತ

ನರಕ್ಕನೆ ಎದ್ದು ನೊಂಟದ ಕೆರಾರಿಯಿಂದ ಅವನ ಬೆನ್ನಿಗೆ ತಿವಿದು. ಪ್ರಾಣ ಮಾನವನು ಬಾಯಿಬಿಡಲಾರದಂತೆ ಅದನ್ನು ಮುಚ್ಚಿ, ಅವನನ್ನು ಹಿಂದೆಳೆದು ಹಾಕಿದ. ಸತ್ತವನು ಶಬ್ದವನ್ನೂ ಮಾಡಲಾಗದೆ ಕೆಳಗುರುಳಿ ಪೊದೆಯಲ್ಲಿ ಮರೆಯಾದ.

ಇನ್ನೊಬ್ಬ ಶೋಧಕ ಎದುರುದಿಕ್ಕಿನತ್ತ ಹೊರಟು, ಮರದ ನೆರಳಿ ನಲ್ಲಿ ಕುದುರೆಗಳನ್ನು ಕಂಡು ವಿಸ್ಮಿತನಾಗಿ "ಹೋ! ಎಂದರಚಬೇಕೆಂ ಬಷ್ಟರಲ್ಲಿ ಚಾಕ್ರಾಯಣನ ತೀಕ್ಷ್ಣವಾದ ಬಾಣವೊಂದು ಅವನಿಗೆದುರು ಕಡೆಯಿಂದ ಹಾದುಬಂದು ಅವನ ಬಾಯಿಯೊಳಗೇ ದೂಕ್ಕು, ಆ ಧ್ವನಿ ಯನ್ನಡಗಿಸಿ ಅವನನ್ನು ಕೆಳಗುರುಳಿಸಿತು.

ಹೆಣ ಬಿದ್ದ ಶಬ್ದದ ದಿಕ್ಕಿನತ್ತ ಉಳಿದವರು ದಿಢೀರನೆ ತಿರುಗಿ ನೋಡಿದರು. ಒಂದೆರಡು ಕ್ಷಣಗಳಲ್ಲಿ ಪ್ರಿಯವ್ರತನ ಮತ್ತು ಚಾಕ್ರಾಯ ಣನ ಬಾಣಗಳ ಅನಿರೀಕ್ಷಿತ ಸುರಿಮಳೆಯಿಂದ ಅವರೆಲ್ಲ ಹತರಾಗಿ ಅಲ್ಲಿಂದಲೇ ಸತ್ತುಬಿದ್ದರು.

*　　*　　*

ಪ್ರಿಯವ್ರತನೂ ಚಾಕ್ರಾಯಣನೂ ತಡಮಾಡದೆ, ಕುದುರೆಗಳನ್ನೇರಿ ಮೊದಲು ಸತ್ತವನು ತೋರಿದ ದಿಕ್ಕಿನತ್ತ ವೇಗವಾಗಿ ನಡೆದು ಒಂದು ಹರಿದಾರಿ ನಡೆದರು. ಗುರುತಿನ ಬಂಡೆ ಕಾಣಿಸಿತು. ಅದರ ಕೆಳಗಿನ ಇಳಿಜಾರಿನಲ್ಲಿ ಕೊಂಚ ದೂರದಲ್ಲಿ ಎಲ್ಲಿಂದಲೋ ಹೊಗೆ ಏಳುತ್ತಿತ್ತು. ನವಾರರು ಹೊಗೆಯ ಜಾಡನ್ನು ಹಿಡಿದೇ ಹೊರಟರು.

ಎತ್ತರದ ಚಾವಣಿಯ ಮಣ್ಣುಗೋಡೆಯ ಮನೆ ಅದು. ಹೊರಗೆ ನಾಲ್ಕೂ ದಿಕ್ಕುಗಳಲ್ಲಿ ನಾಲ್ಕಾರು ಜನ ಕಾವಲಿನವರು ಈಟಿಗಳನ್ನು ಹಿಡಿದು ಪಹರೆ ನಡೆಸುತ್ತಿದ್ದರು. ದೂರದಿಂದಲೇ ಅದನ್ನು ಗಮನಿಸಿದ ಚಾಕ್ರಾ ಯಣ ಪ್ರಿಯವ್ರತನಿಗೆ ಕುದುರೆ ನಿಲ್ಲಿಸುವಂತೆ ಹೇಳಿ, ತಾನೂ ಕೆಳಗಿಳಿದು

ಸುರಕ್ಷಿತ ಪ್ರದೇಶದಲ್ಲಿ ಅಶ್ವಗಳನ್ನು ಮರೆಸಿಟ್ಟು ಎಚ್ಚರೆಚ್ಚರವಾಗಿ ಕಾಲ ನಡಗೆಯಲ್ಲೇ ಆ ಮನೆಯನ್ನು ಸಮೀಪಿಸಿದರು.

ಸೂರ್ಯ ನೆತ್ತಿಯಿಂದ ಕೆಳಗೆ ಪಶ್ಚಿಮಕ್ಕೆ ವಾಲುತ್ತಿದ್ದ. ಕಾವಲಿನವರು ಬಳಲಿದ್ದಂತೆ ಕಂಡರು. ಪ್ರಿಯವ್ರತ ತನ್ನ ಜೋಳಿಗೆಯಿಂದ ಅಪೂರ್ವ ಗೆಣಸೊಂದನ್ನು ಕಾವಲಿನವರತ್ತ ದೂರದಿಂದ ಎಸೆದ! ನಾಲ್ವರೂ ಕೂಡಲೇ ಅತ್ತ ತಿರುಗಿ ಅದೇನೆಂದು ನೋಡಲು ಬಗ್ಗಿದರು. ಯಾರೊ ಹೊರಗಿನವರು ಬಂದಿರುವರೆಂದು ಹೊಳೆದು ತಲೆ ಎತ್ತುವಷ್ಟರಲ್ಲೇ ಚಾಕ್ರಾಯಣನ ಬಾಣಗಳು ಅವರನ್ನು ಸಂಹರಿಸಿದ್ದವು.

ಯುವಕರಿಬ್ಬರೂ ಮನೆ ಹೊಕ್ಕಾಗ ಕಂಡ ದೃಶ್ಯ ಎದೆಯೊಡೆಸಿತು!

ಛಾವಣಿಯ ಜೋಲಿಯಿಂದ ನೂಲು ಹಗ್ಗಗಳು ತೂಗಾಡುತ್ತಿದ್ದವು! ಇಬ್ಬರು ಮಹರ್ಷಿಗಳ ವೃದ್ಧ ಬಡಕಲು ಶರೀರಗಳು ತಲೆ ಕೆಳಗಾಗಿ ಅವರಿಂದ ತೂಗಾಡುತ್ತಿದ್ದುವು!! ತಲೆಗಳ ಕೆಳಗೆ ಭಯಂಕರ ಕೆಟ್ಟವಾಸನೆಯ ಹೊಗೆಯನ್ನುಗುಳುತ್ತಾ ಜ್ವಾಲೆಯಿಲ್ಲದ ಅಗ್ನಿಯು ಮೋಟ್ಟಿನ ಒಳಗೆ ಉರಿಯುತ್ತಿತ್ತು.

ಯುವಕರಿಬ್ಬರೂ ಕೂಡಲೇ ಹಗ್ಗಗಳನ್ನು ಕತ್ತರಿಸಿ, ಆ ಶರೀರಗಳನ್ನು ಕೆಳಗಿಳಿಸಿ ಶೈತ್ಯೋಪಚಾರ ಮಾಡಿ, ಅವರು ಬದುಕಿರುವರೋ ಹೇಗೆಂದು ನೋಡಲಾರಂಭಿಸಿದರು.

ಪ್ರಿಯವ್ರತನ ಕಂಗಳಲ್ಲಿ ನೀರುಗೂಡಿತು! ಒಂದು ಶರೀರ, ಹಲವು ತಿಂಗಳ ಹಿಂದೆ ವಸಿಷ್ಠರ ಆಶ್ರಮದಿಂದ ಮಾಯವಾಗಿದ್ದ ಹಿರಿಯ ನೈಷ್ಠಿಕ ಬ್ರಹ್ಮಚಾರೀ ಸತ್ಯಶ್ರವರೆಂಬ ಋಷಿಯದ್ದು!! ಬರೀ ಮೂಳೇ ಚಕ್ಕಳವಾಗಿದ್ದ ಆ ಶರೀರದಲ್ಲಿ ಈಗ ಜೀವ ಇರಲಿಲ್ಲ!! ಸತ್ತು ಒಂದು ದಿನವಾಗಿರಬೇಕು.

ಇನ್ನೊಂದು ಶರೀರ ಕಣ್ವಾಶ್ರಮದ ಕುಲಪತಿ ಪ್ರಗಾಥ ಕಣ್ವರದ್ದು! ಅದರಲ್ಲಿನ್ನೂ ಜೀವ ಹೋಗಿರಲಿಲ್ಲ!! ಕೊರಳಿನಿಂದ ಕ್ಷೀಣಸ್ವರವೊಂದು ಅಶ್ವಿನೀ ದೇವತೆಗಳ ಸೂಕ್ತವೊಂದನ್ನು ಪಠಿಸಲು ಬಹು ಪ್ರಯಾಸ ಪಡುತ್ತಿತ್ತು!

ಅದನ್ನು ಚಾಕ್ರಾಯಣ ಹೀಗೆ ಗುರುತಿಸಿದ ;

**''ಮಹಃ ಕ್ಷೋಣಸ್ಯಾಶ್ವಿನಾ ಕಣ್ವಾಯ ।**
**ಪ್ರಾಚ್ಯಂ ತದ್ವೃಷಣಾ ಕೃತಂ ವಾಂ ಯನ್ನಾರ್ಷದಾಯ**
**ಶ್ರವೋ ಅಧ್ಯದತ್ತಂ " ॥** (ಋ.ಸಂ. I-117-8)

ಮಹರ್ಷಿಯ ಕಣ್ಣು ಮುಚ್ಚಿದರೂ, ಅನ್ನಾಹಾರವಿಲ್ಲದೆ ಶರೀರ ಬಹು ಸೊರಗಿದ್ದರೂ ಅಭ್ಯಾಸ ಬಲದಿಂದ ಮಂತ್ರ ಅಷ್ಟು ಕ್ಷೀಣಾವಸ್ಥೆಯಲ್ಲೂ ಹೊರಬರುತ್ತಿತ್ತು. ಶೈತ್ಯೋಪಚಾರದಿಂದ ಮಹರ್ಷಿಗೆ ಎಲ್ಲೋ ಕೊಂಚ ಅರಿವಾಯಿತು,

ಯುವಕರು ಸನ್ನೆ ಮಾಡಿಕೊಂಡು ಏನು ಮಾಡುವುದೆಂದು ನಿಶ್ಚೈಸಿದರು. ಚಾಕ್ರಾಯಣ ಅಲ್ಲೇ ಉಳಿದು ಸತ್ತ ಋಷಿಯ ಶರೀರವನ್ನೂ, ಬದುಕಿರುವ ಋಷಿಯ ದೇಹವನ್ನೂ ರಕ್ಷಿಸುತ್ತಾ ಧನುರ್ಧರನಾಗಿ ಅಲ್ಲೇ ನಿಂತ.

ಪ್ರಿಯವ್ರತ ಎಚ್ಚರದಿಂದ ಸುತ್ತು ನೋಡುತ್ತ ನಡೆದು ಕುದುರೆಗಳನ್ನು ಶೀಘ್ರವಾಗಿ ಆ ಮನೆಯ ಬಾಗಿಲಿಗೆ ತಂದ.

ಯುವಕರಿಬ್ಬರೂ ಆ ದೇಹಗಳನ್ನು ಒಂದೊಂದು ಕುದುರೆಯ ಮೇಲೇರಿಸಿ ಕಟ್ಟಿ, ಸವಾರರಿಬ್ಬರೂ ಧನುರ್ಧಾರಿಗಳಾಗಿ, ಬಂದ ದಾರಿಯಲ್ಲೇ ಹೊರಟು ಬಹು ದೂರ ಪಯಣಿಸಿದರು.

ಮೊದಲು ದಾಟಿದ್ದ ಸಣ್ಣ ನದಿಯ ಬಳಿಗೆ ಬಂದು ಆ ದೇಹಗಳನ್ನು ಕೆಳಗಿಳಿಸಿದರು. ಸತ್ತಿದ್ದ ಸತ್ಯಶ್ರವನ ಶರೀರವನ್ನೂ ಅಲ್ಲೇ ಅಗ್ನಿ ಸಂಸ್ಕಾರ ಮಾಡಿದರು. ಕಣ್ವರಿಗಿನ್ನೂ ಪ್ರಜ್ಞೆ ಬಂದಿರಲಿಲ್ಲ. ಮತ್ತೆ ಶೈತ್ಯೋಪಚಾರ ಮಾಡಿ, ಬಿಸಿಲಾರಿಸಿಕೊಂಡು, ಒಂದೆರಡು ಗಳಿಗೆಯಲ್ಲಿ ಮತ್ತೆ ಕುದುರೆಯನ್ನೇರಿ, ಕಣ್ವರ ದೇಹವನ್ನೂ ಏರಿಸಿಕೊಂಡು, ಯುವಕರು ಪಶ್ಚಿಮದತ್ತ ಹೊರಟರು. ಅಗಸ್ತ್ಯಾಶ್ರಮ ಇನ್ನೂ ನಾಲ್ಕು ದಿನದ ಪ್ರಯಾಣದ ದೂರವಿತ್ತು.

---

# ೨. ಸಪ್ತರ್ಷಿಮಂಡಲ

ಗೋದಾವರೀ ತೀರದ ಅಗಸ್ತ್ಯಾಶ್ರಮದಲ್ಲಿ ಸಪ್ತರ್ಷಿಗಳ ಸಮ್ಮೇಳನ ನಡೆಯುತ್ತಿತ್ತು. ಹಿರಿಯ ಅಗಸ್ತ್ಯ ಕುಲಪತಿಗಳು (ಸುತಪಾಃ ಎಂಬುದು ಅವರ ಹೆಸರು) ಬಹು ವೃದ್ಧರಾಗಿ, ಅಶಕ್ತರಾಗಿ ಮರಣ ಶಯ್ಯೆಯಲ್ಲಿ ಮಲಗಿ ಬಹುದಿನಗಳಾಗಿದ್ದವು. ಅವರ ಏಕೈಕ ಪುತ್ರ ವಿಷ್ಣುವರ್ಮ ಅಗಸ್ತ್ಯರು ದುಃಖಾವಿಷ್ಟರಾಗಿ ತಂದೆಯ ಪಾದಗಳ ಬಳಿ ಕುಳಿತಿದ್ದರು. ಸುಮಾರು ಇಪ್ಪತ್ತೈದು ವರ್ಷಗಳ ತರುಣ ಋಷಿ; ಬ್ರಹ್ಮಕ್ಷತ್ರಗಳ ಎರಡೂ ತೇಜಸ್ಸು ಅವರ ಹೊಳವು ಕಂಗಳಲ್ಲಿ ಮಿಂಚುತ್ತಿದ್ದವು. ಕಪ್ಪಾದ ದಟ್ಟ ಗಡ್ಡಮೀಸೆಗಳಿಂದಲೂ, ಎತ್ತಿ ಕಟ್ಟಿದ ಜಟೆಯಿಂದಲೂ ಅಲಂಕೃತವಾಗಿ ಆ ದಿವ್ಯ ಮುಖದಲ್ಲಿ ತಾರುಣ್ಯ ಎದ್ದು ಕಾಣುತ್ತಿದ್ದರೂ, ವಯಸ್ಸಿಗೆ ಮೀರಿದ ದಿವ್ಯಾನುಭವ, ವ್ಯವಹಾರ ಜ್ಞಾನದ ಪಕ್ವತೆ, ಕಷ್ಟಸಹಿಷ್ಣುತೆ, ಕಾರ್ಯದಕ್ಷತೆ, ಲೋಕಾನುಗ್ರಹದೀಕ್ಷೆ, ಅದರ ಸಂಕಲ್ಪ. ಹಿಡಿದಿದ್ದನ್ನು ಬಿಡದೆ ಸಾಧಿಸುವ ಛಲ ಮುಂತಾದ ಸದ್ಗುಣಗಳು ಆ ತಾರುಣ್ಯಕ್ಕೊಂದು ಅಪೂರ್ವ ಶೋಭೆಯನ್ನೂ, ವಿಲಕ್ಷಣತೆಯನ್ನು ತಂದು ಕೊಟ್ಟಿದ್ದುವು.

ಹಿರಿಯ ಅಗಸ್ತ್ಯರ ಪತ್ನಿ ತೀರಿಕೊಂಡು ಹಲವು ವರ್ಷಗಳೇ ಆಗಿದ್ದುವು. ತಾಯಿಯನ್ನು ಕಳೆದುಕೊಂಡು ನೊಂದಿದ್ದ ಕಿರಿಯ ಆಗಸ್ತ್ಯರಿಗೆ ಈ ತಂದೆಯ ಅಗಲಿಕೆ ಈಗ ತಡೆಯಲಾರದ ಆಘಾತವಾಗಿದ್ದು ಅವರ ಮುಂದಿನ ಹಲವಾರು ಯೋಜನೆಗಳಿಗೆ ಬಲವಾದ ಪೆಟ್ಟಿನಂತಿತ್ತು.

ಅಗಸ್ತ್ಯ ಗುರುಕುಲ ಬಲು ವಿಚಿತ್ರವಾಗಿದ್ದುದು ಅದರ ಹಿನ್ನೆಲೆ. ವೇದಶಾಸ್ತ್ರಾದಿ ಅಧ್ಯಯನಗಳು ಮಾತ್ರ ಅಲ್ಲಿ ಕಲಿಸಲ್ಪಡುವುದಲ್ಲದೆ,

ಕುದುರೆ ಸವಾರಿ, ಕುದುರೆಯ ಸಾಕಣೆ, ಶಸ್ತ್ರಾಸ್ತ್ರಗಳ ಉಪಯೋಗ,
ಅವುಗಳ ತಯಾರಿ, ಸೈನ್ಯವ್ಯೂಹರಚನೆ, ರಾಜನೀತಿ, ಅರ್ಥಶಾಸ್ತ್ರ,
ವಾಣಿಜ್ಯ, ದಂಡನೀತಿ ಮೊದಲಾದ ವ್ಯಾವಹಾರಿಕ ಶಾಸ್ತ್ರಗಳ ಕಲಿಕೆಗೂ
ಅಲ್ಲಿ ಏರ್ಪಾಡಿದ್ದು, ಪ್ರಾಥಮಿಕ ಹಂತದ ಕ್ಷಾತ್ರವಿದ್ಯೆ ಬ್ರಾಹ್ಮಣರಿಗೂ
ಅಲ್ಲಿ ಕಡ್ಡಾಯವಿದ್ದಿತು.

ಹಿರಿಯ ಅಗಸ್ತ್ಯರಿಗೆ ಮೊದಮೊದಲು ಈ ಕಡ್ಡಾಯ ಒಪ್ಪಿಗೆ
ಯಿರಲಿಲ್ಲ. ಭೃಗುಮಹರ್ಷಿ ಇದನ್ನು ಅವರಿಗೆ ಮನವರಿಕೆ ಮಾಡಿ
ಕೊಟ್ಟು ತಾವೇ ಕೆಲಕಾಲ ಅಲ್ಲಿ ಅಶ್ವಘೋಷಣೆ, ಅಶ್ವವಿದ್ಯಾ ಉಪದೇಶ,
ಸವಾರಿ, ಯೋಧವೃತ್ತಿಯ ತರಪೇತಿ ಕೊಡಲು ನಿಂತಮೇಲೆ ಗುರು
ಕುಲದ ಸ್ವರೂಪವೇ ಬದಲಾಯಿತು. ಕಿರಿಯ ಅಗಸ್ತ್ಯರು ನಿರಂತರ
ಲೋಕ ಸಂಚಾರದಿಂದ ಪಡೆದ ಲೌಕಿಕ ಜ್ಞಾನ ಸಂಪತ್ತು, ಈ ಆಶ್ರಮದ
ವೈಶಿಷ್ಟ್ಯವನ್ನು ಹೆಚ್ಚಿಸಿತ್ತು. ಅತ್ರಿ, ಜಮದಗ್ನಿ, ಕಣ್ವ ಮೊದಲಾದ
ಮಹರ್ಷಿಗಳು ಈ ಬ್ರಾಹ್ಮಣ ಕ್ಷಾತ್ರ ವಿದ್ಯೆಗಳ ಸಮನ್ವಯವನ್ನು
ಸಮರ್ಥಿಸಿದರು. ತಾವೂ ಆಗಾಗ ಬಂದು ವಟುಗಳನ್ನು ಕುರಿತು ಉಪ
ದೇಶಿಸಿ, ಲೋಕದ ಅನೇಕ ರಾಜಕುಮಾರರ ಆಕರ್ಷಣೆಗೆ ನಾಂದೀ ಹಾಡಿ
ದ್ದರು. ವಸಿಷ್ಠ, ಆಂಗೀರಸ, ಸುತೀಕ್ಷ್ಣ, ಶರಭಂಗ, ವಾಲ್ಮೀಕಿ, ಚ್ಯವನ,
ಭರದ್ವಾಜ ಮೊದಲಾದ ಮಹರ್ಷಿಗಳು ಕೊಂಚಕಾಲ ಈ ಸಮನ್ವಯ
ವನ್ನು ಒಪ್ಪಲಿಲ್ಲವೆಂದರೂ ಕ್ರಮೇಣ ಒಗ್ಗಿಕೊಂಡರು; ವಿರೋಧಿಸು
ವುದನ್ನೂ ಬಿಟ್ಟರು. ಈಚೀಚೆಗೆ ವರ್ಷಕ್ಕೊಂದೆರಡು ಬಾರಿ ದೇಶದ
ವಿವಿಧ ಭಾಗಗಳ ಆಶ್ರಮಗಳಲ್ಲಿ ಒಂದೆರಡು ಬಾರಿ ಉತ್ತಮ ಬ್ರಾಹ್ಮ
ಣ್ಯಕ್ಕೂ ಉಜ್ಜ್ವಲ ಕ್ಷಾತ್ರಕ್ಕೂ ಉತ್ತೇಜಕರಾಗಲು ಒಪ್ಪಿ ಆಗಾಗ
ಸಪ್ತರ್ಷಿ ಮಂಡಲಗಳನ್ನು (ಸಮ್ಮೇಳನಗಳನ್ನು) ನಡೆಸಿಕೊಡಲು
ಒಪ್ಪಿಯೂ ಇದ್ದರು. ಅಂಥದೊಂದು ಈ ಸಲ ಈ ಅಗಸ್ತ್ಯಾಶ್ರಮ
ದಲ್ಲಿ ನಡೆದಿತ್ತು. ಮರಣಶಯ್ಯೆಯ ವೃದ್ಧಾಗಸ್ತ್ಯರನ್ನು ನೋಡಿ

ದಂತೆಯೂ ಆಯಿತು. ವಾರ್ಷಿಕ ಮೇಳವೂ ಆಯಿತು ಎಂದು ಸೇರಿದ್ದರು.

ಇದನ್ನು ವೀಕ್ಷಿಸಲು ಸಹಸ್ರಾರು ಋಷಿ ಮುನಿಗಳೂ, ವಟುಗಳೂ ಋಷಿಪತ್ನಿಯರೂ, ಸಣ್ಣಪುಟ್ಟ ದೊರೆಗಳೂ, ಆರ್ಯಾವರ್ತದ ಕ್ಷತ್ರಿಯ ಮುಖಂಡರೂ, ವಿಂಧ್ಯದ ಅಂಚಿನ ಅರಸರೂ, ವಣಿಕ್ ಶ್ರೇಷ್ಠರೂ, ಸಹಸ್ರಾರು ಶಿಷ್ಯರೂ ಅಲ್ಲಿಗೆ ಆಗಮಿಸಿದ್ದರು.

ಪ್ರಗಾಥ ಕಣ್ವ ಕುಲಪತಿಗಳು ಇನ್ನೂ ಏಕೆ ಬರಲಿಲ್ಲವೆಂದು ಉಳಿದವರು ಚಿಂತಾಕ್ರಾಂತರಾಗಿದ್ದರು. ಸಭೆ ಇನ್ನೂ ನಡೆದೇ ಇತ್ತು. ವಾನಪ್ರಸ್ಥ ದೀಕ್ಷೆ ಪಡೆದ ವೃದ್ಧ ಮಹರ್ಷಿ ಕುಲಪತಿಗಳು ಆರ್ಯಾವರ್ತದ ಬದಲಾದ ಪರಿಸ್ಥಿತಿಯನ್ನು ತಂತಮ್ಮ ದೃಷ್ಟಿಗಳಿಂದ ತೀಕ್ಷ್ಣವಾಗಿ ವಿವೇಚಿಸುತ್ತಾ, ಕಿರಿಯ ಋಷಿಗಳಿಗೆ, ಆಚಾರ್ಯರಿಗೆ, ವಟುಗಳಿಗೆ, ಶಿಷ್ಯರಿಗೆ ಅಪೂರ್ವ ಮಾಹಿತಿಗಳನ್ನೂ ಸಂದೇಶಗಳನ್ನೂ ಒದಗಿಸುತ್ತಿದ್ದರು.

ಭೃಗುಮಹರ್ಷಿಗಳು ಆಗ ವಿವರಿಸುತ್ತಿದ್ದುದು ಹೀಗೆ: "ಬ್ರಹ್ಮಚಾರಿಗಳೇ! ಸನಾತನ ಧರ್ಮಕ್ಕೆ ಇದು ಧರ್ಮಸಂಕಟದ ಕಾಲ. ಆರ್ಯಾವರ್ತದ ಸೂರ್ಯ-ಚಂದ್ರ ವಂಶೀಯ ದೊರೆಗಳು ಈಗ ಕ್ಷೀಣ ಪರಾಕ್ರಮರಾಗಿದ್ದು, ನಮ್ಮ ಕುಲಗಳು, ಆಶ್ರಮಗಳು ಅವರಿಂದ ರಕ್ಷಣೆ ಅಪೇಕ್ಷಿಸುವ ಕಾಲ ಹೋಯಿತು. ಸೋಮವಂಶದ ಸಹಸ್ರಾರ್ಜುನ, ನರ್ಮದಾ ನದೀ ತೀರದ ಮಾಹಿಷ್ಮತಿಯವನು, ಈಗೀಗ ಪ್ರಕಟವಾಗಿಯೇ ಬ್ರಾಹ್ಮಣ್ಯದ ವಿರುದ್ಧವೆಂಬಂತೆ ನಡೆಯುತ್ತಿದ್ದಾನೆ! ತೀರ ದಕ್ಷಿಣದಲ್ಲಿ ಪುಲಸ್ತ್ಯ ವಂಶದ ಬ್ರಾಹ್ಮಣರೇ ಬ್ರಾಹ್ಮಣ್ಯದ ವಿರುದ್ಧ ನಿಂತು ದುಷ್ಟ ಆಡಳಿತ ನಡೆಸಲಾರಂಭಿಸಿದ್ದಾರೆ!! ಕಿಷ್ಕಿಂಧೆಯ ವಾನರ ದೊರೆ ಅವನಿಗೆ ಮಿತ್ರನಾಗಿರುತ್ತಾ ಬ್ರಾಹ್ಮಣಸಂಸ್ಕೃತಿ ವಿಂಧ್ಯೆಯನ್ನು ದಾಟಿ ದಕ್ಷಿಣಕ್ಕೆ ಹರಿಯದಂತೆ ತಡೆಯುತ್ತಿದ್ದಾನೆ. ಕೃಷ್ಣವೇಣೀ ತೀರದ ಅನಾಗರಿಕ

ಜನಾಂಗದ ದೊರೆ ಇಲ್ವಲನು ವಾತಾಪಿ ಎಂಬ ತಮ್ಮನೊಡಗೂಡಿ, ಕೂಟ ಯುದ್ಧ ವಿಶಾರದನಾಗಿ ದಿನಕ್ಕೊಬ್ಬ ಕುಲಪತಿಯನ್ನು ಅಪಹಾರ ಮಾಡಿ ಸಾಯಿಸುತ್ತಿದ್ದಾನೆ. ಮೊನ್ನೆ ವಸಿಷ್ಠಾಶ್ರಮದ ನೈಷ್ಠಿಕ ಬ್ರಹ್ಮಚಾರೀ ಸತ್ಯಶ್ರವನು ನಾಪತ್ತೆಯಾದ ! ಈ ಒಂದೇ ವರ್ಷದಲ್ಲಿ ವಸಿಷ್ಠಾಶ್ರಮದಲ್ಲಿಯೇ ೧೯೭ ಮಹರ್ಷಿಗಳು ಕಾಣೆಯಾಗಿದ್ದಾರೆ. ಚ್ಯವನರ ಆಶ್ರಮದಲ್ಲಿನ ನೂರ್ವರು ಅಧ್ಯಾಪಕ ಋಷಿಗಳು ಹಿಡಿಯಲ್ಪಟ್ಟು ನರಭಕ್ಷಕರಿಂದ ಭಕ್ಷಿತರಾಗಿ ಆಶ್ರಮದಾಚೆಯ ದೂರದ ಗಿರಿ ಕಂದರದಲ್ಲಿ ಅವರ ಮೂಳೆಗಳನ್ನು ಎಸೆಯಲಾಗಿತ್ತು ! ಭರದ್ವಾಜಾಶ್ರಮದಲ್ಲಿ ಹೋದ ತಿಂಗಳು ಇಪ್ಪತ್ತು ಋಷಿಗಳು ವಿಚಿತ್ರ ರೀತಿಯಲ್ಲಿ ಕೊಲ್ಲಲ್ಪಟ್ಟರು. ಕಾಲೇಯ (ಕಾಲಕೇಯ) ರೆಂಬ ಸಮುದ್ರದಾಚೆಯ ಅಸುರರು ಈಗ ಈ ವಿಂಧ್ಯಾವಳೀ ಪ್ರದೇಶದಲ್ಲಿ ಆಶ್ರಯ ಪಡೆದು, ರಾತ್ರಿಯೆಲ್ಲ ಋಷ್ಯಾಶ್ರಮಗಳನ್ನು ಸುತ್ತುತ್ತಾ ಲೂಟಿ ಮಾಡುತ್ತಿರುವರಂತೆ. ಆಶ್ರಮದ ಹೊರವಲಯಗಳ ಗ್ರಾಮಸ್ಥರು ಅವರಿಗೆ ಆಶ್ರಯ ನೀಡಿದ ಹೊರತು ಸುಸಜ್ಜಿತ ಜನಹಿಂಸಕ ತಂಡಗಳು ಹೀಗೆ ಶಾಂತಿಪ್ರಿಯರಾದ ತಪಸ್ವಿಗಳಿಗೆ ಚಿತ್ರಹಿಂಸೆ ಮಾಡುವುದೆಂದರೇನು ? ಋಷಿಪತ್ನಿಯರಿಗೂ ಪುತ್ರಿಯರಿಗೂ ಉಪದ್ರವ ತಪ್ಪಿಲ್ಲ. ಮಾನಭಂಗಕ್ಕೊಳಗಾಗಿ ಆತ್ಮಹತ್ಯೆ ಮಾಡಿಕೊಂಡ ಋಷಿಪುತ್ರಿಯರೂ, ಚಿತ್ರಹಿಂಸೆಗಳಿಂದ ಸತ್ತ ಋಷಿಪತ್ನಿಯರೂ ಲೆಕ್ಕವಿಲ್ಲವಾಗಿದ್ದಾರೆ. ಹೀಗೇ ಬಿಟ್ಟರೆ ಅಧ್ಯಾತ್ಮ ಜ್ಞಾನ ಪಡೆಯಲು ಮುಂದಿನ ಪೀಳಿಗೆಯೇ ಇಲ್ಲವಾಗುತ್ತದೆ. ನಮ್ಮ ರಕ್ಷಣೆ ನಮ್ಮದೇ ಆಗಬೇಕಾದ ಕಾಲ ಬಂದಿದೆ. ಉತ್ತಮ ಕ್ಷಾತ್ರ ಬಲವನ್ನೂ, ಬ್ರಾಹ್ಮಣ ಬಲವನ್ನು ಬ್ರಾಹ್ಮಣರೇ ನಿರ್ಮಿಸಿ ಲೋಕವನ್ನುಳಿಸಬೇಕಾದ ಕಾಲ ಇದು. ನಮ್ಮ ಯುವಕರು ಹೆಚ್ಚು ಸಂಖ್ಯೆಯಲ್ಲಿ ಈ ಅಗಸ್ತ್ಯಾಶ್ರಮದ ನೂತನ ವಿದ್ಯಾಪದ್ಧತಿಯನ್ನನುಸರಿಸಿ ಶಸ್ತ್ರಶಾಸ್ತ್ರಗಳೆರಡರಲ್ಲೂ ತರಬೇತಿ ಹೊಂದಲೇಬೇಕು...'' ಇತ್ಯಾದಿ, ಮುಗಿಸಿದರು.

ಮಲಗಿದ್ದ ಹಿರಿಯ ಅಗಸ್ತ್ಯರ ಕಣ್ಣ ಸನ್ನೆಯಿಂದ, ಅವರ ಪಾದದ ಬಳಿಯಲ್ಲಿದ್ದ ಕಿರಿಯ ಅಗಸ್ತ್ಯರು ಮೇಲೆದ್ದು ತಂದೆಯ ಪಾದಗಳಿಗೆ ವಂದಿಸಿ, ಹೊರಬಂದು ವೇದಿಕೆಯ ಮೇಲೆ ಆಸೀನರಾಗಿದ್ದ ಸಭಾಧ್ಯಕ್ಷ ಅಂಗೀರಸರಿಗೆ ಸಾಷ್ಟಾಂಗ ನಮಸ್ಕರಿಸಿ.

"ಓಂ ! ನಮಸ್ಸದಸೇ! ನಮಃ ಸದಸಸ್ಪತಯೇ! ನಮಃ ಸಖೀನಾಂ ....'' ಎಂದು ಆರಂಭಿಸಿದರು. ಯುವಕರು ಕರತಾಡನ ಮಾಡಿದರು. ಅಗಸ್ತ್ಯರು ಮುಂದುವರೆದು ಹೇಳಲಾರಂಭಿಸಿದರು.

"ಬ್ರಹ್ಮನಿಷ್ಠರೇ ! ಭೃಗುಮಹರ್ಷಿಗಳ ಮಾತಿಗೆ ಎರಡನೆಯದೇ ಇಲ್ಲ. ವಿಂಧ್ಯ ಹಿಮಾಚಲಗಳ ನಡುವಿನ ಆರ್ಯಾವರ್ತದಲ್ಲೂ ದಕ್ಷಿಣದ ಅಸುರ, ದಾನವ, ದೈತ್ಯ ಪ್ರಭೇದಗಳ ಸಂಸ್ಕೃತಿದ್ವೇಷಿಗಳ ಪ್ರವೇಶ ಸುವ್ಯವಸ್ಥಿತವಾಗಿ ಆಗುತ್ತಿದೆ! ಶಂಬರ ಸತ್ತರೂ ಶಾಂಬರಸೈನ್ಯ ಸೇಡಿಗಾಗಿ ಕಾಯುತ್ತಿವೆ. ಕೋಸಲದ ಬಳಿಯ ತಾಟಕಾವನವೇ ಇದಕ್ಕೆ ಸಾಕ್ಷಿ. ಪಂಚನದ ಪ್ರಾಂತವೂ ಸುರಕ್ಷಿತವಿಲ್ಲ. ಗೋದಾವರಿಯ ಈ ಪಂಚವಟೀ ಪ್ರದೇಶವಂತೂ ರಾಕ್ಷಸಾವೃತವಾಗಿ ಹೋಗಿದೆ. ಕರಾವಳಿಯ ಯಕ್ಷರು ಕುಬೇರನೊಡನೆ ಭೂತಾಸ್ಥಾನಕ್ಕೆ ಹಿಮಾಲಯದ ಕಡೆ ಆಶ್ರಯ ಪಡೆಯಲು ಓಡುತ್ತಿದ್ದಾರೆ. ದಕ್ಷಿಣದ ತುದಿಯ ಲಂಕೆಯು ಅವರ ಬೀಡು ಪಾಳಾಯಿತು, ಯಕ್ಷ-ರಾಕ್ಷಸರಿಗೆ ಭಯಂಕರ ಅಂತರ್ಯುದ್ಧವಾಗಿ ರಾಕ್ಷಸರು ಜಯಿಸಿ ಕೊಬ್ಬಿದ್ದಾರೆ. ನಮ್ಮ ರುದ್ರನನ್ನು ಹೋಲುವ ಯಾವುದೋ ಬಗೆಯ ಭಯಂಕರ ದೈವವನ್ನು ಆರಾಧಿಸುವ ಇವರು ನಮ್ಮ ಪುಲಸ್ತ್ಯಮಹರ್ಷಿಯ ಸಂತಾನವೇ ಆಗಿರುವರು ! ಕಶ್ಯಪರ ಸಂತತಿಯ ಗರುಡರೂ, ನಾಗರೂ ಇನ್ನಿತರರೂ ನಿಸ್ಸಹಾಯಕರಾಗಿರುತ್ತಾರೆ. ವಿಂಧ್ಯಾಟವಿಯಲ್ಲಿ ನರಭಕ್ಷಕ ದಾನವ ಸಂತತಿಯ ನಾಸ್ತಿಕರು ತುಂಬಿದ್ದಾರೆ. ಇಲ್ವಲ ಇವರ ಒಡೆಯ, ಋಷಿಭಕ್ಷಣ, ಋಷಿಗಳಿಗೆ

ಚಿತ್ರಹಿಂಸೆ ಇವರ ಕಂಕಣಬದ್ಧ ಜೀವನ ರೀತಿಯಾಗಿದೆ. ನಮ್ಮ ಹೊಸ ಕ್ಷತ್ರಿಯ ದೀಕ್ಷೆಯ ಬ್ರಾಹ್ಮಣ ಸೈನ್ಯದ ಗೂಢಚರ್ಯೆಯಿಂದ ಇವರ ೧೫೮ ಚಿತ್ರಹಿಂಸಾ ವಿಹಾರ ಕ್ಷೇತ್ರಗಳು ಈ ವರೆಗೆ ಬೆಳಕಿಗೆ ಬಂದಿವೆ. ಕಣ್ವಾಶ್ರಮದ ಕುಲಪತಿಗಳು ಇಲ್ಲೇ ಎಲ್ಲೋ ಸಿಕ್ಕಿಕೊಂಡಿರಬೇಕು. ನಮಗೆ ಇಂದ್ರರಕ್ಷಣೆ ಇದೆ: ಅಗ್ನಿಯ ಬೆಂಬಲವಿದೆ: ಯಮ ನಮ್ಮ ಆಜ್ಞಾಧಾರಿಯಾಗಿದ್ದಾನೆ. ವಿಷ್ಣುವು ಈ ಅಸುರ ದಮನ ಯಾಗದ ಹೊಣೆ ಹೊತ್ತಿರುವನು. ನೀವೆಲ್ಲ ನನ್ನನ್ನು ಮಿತ್ರಾವರುಣರ ಪ್ರಸಾದದಿಂದ ಹುಟ್ಟಿದವನೆಂದು ನಂಬಿದ್ದೀರಿ. ವಸಿಷ್ಠರು ಭರತ ವಂಶೀಯ ದೊರೆಯೊಬ್ಬನಿಂದಲೇ ಸಾಕಷ್ಟು ಕಷ್ಟನಷ್ಟ ಅನುಭವಿಸಿ ಆಗಿದೆ. ಈ ನನ್ನ ಹಿರಿಯಣ್ಣ-ನನಗಿಂತ ಮೊದಲು ಮಿತ್ರಾವರುಣರ ಸಾಕ್ಷಾತ್ಕಾರ ಮಾಡಿದ ಮಹಾನುಭಾವರು. ತಮ್ಮ ತಪವನ್ನೆಲ್ಲ ನನಗೆ ಧಾರೆ ಎರೆದಿದ್ದಾರಷ್ಟೆ! ಭೃಗು ಪುತ್ರನೂ. ಜಮದಗ್ನಿ ಪುತ್ರನೂ. ಕಣ್ವ ಪುತ್ರನೂ ಈ ಅಗಸ್ತ್ಯಾಶ್ರಮದ ಅನುಭವವನ್ನೂ, ಸಂದೇಶವನ್ನೂ ದಿಕ್ಕು ದಿಕ್ಕುಗಳಿಗೆ ಒಯ್ಯಬೇಕು....".

ಸಭೆಯ ಮಧ್ಯದಿಂದ ಆಗಸ್ತ್ಯರದೇ ವಯಸ್ಸಿರಬಹುದಾದ ವೀತಹವ್ಯರು ಮೇಲೆದ್ದು ಕೈತೋರಿ ಮಾತಾಡಲು ಅನುಮತಿ ಕೋರಿದರು.

ಆಗಸ್ತ್ಯರ ಸೂಚನೆಯಂತೆ ಅವರು ವೇದಿಕೆಯ ಮೇಲೆ ಬಂದು ಗೋತ್ರಸೂತ್ರ ನಾಮೋಚ್ಚಾರಣ ಮಾಡಿ ಪರಿಚಯಿಸಿಕೊಂಡು ಹೀಗೆ ಹೇಳಲಾರಂಭಿಸಿದರು.

"ಅಗಸ್ತ್ಯರ ವಿವರಣೆ, ಮಾಹಿತಿ, ವಿಶ್ಲೇಷಣೆ ಚುರುಕಾಗಿದೆ. ಆದರೆ ಈ ಅಸುರ–ರಾಕ್ಷಸ-ದಾನವ ದಮನ ಕೆಲಸಕ್ಕೆ ದೇಶೀಯರೂ. ರಾಜಕೀ ಯದೂರರೂ ಆದ ಸಾಮಾನ್ಯ ಇತರ ವೃತ್ತಿನಿರತ ಪ್ರಜೆಗಳನ್ನೂ ಸೇರಿಸಿಕೊಂಡ ಹೊರತು ನಮ್ಮ ಕೆಲಸ ಪೂರ್ಣವೋ. ಯಶಸ್ವಿಯೋ ಆಗ

ಲಾರದು. ಉಪದ್ರವಕಾರರ ಭಾಷೆಯೂ ನಮಗೆ ತಿಳಿಯಬೇಕಾಗಿದೆ. ಅವರಿಗೆ ಕೇವಲ ಲೂಟಿಯ ಉದ್ದೇಶ್ಯವಿದ್ದರೆ ಬೇರೆ ಮಾತು. ಹಾಗಿಲ್ಲದೆ, ಅವರಿಗೂ ಸಿದ್ಧಾಂತಗಳು ಬೇರೆ ಇರುವುದಾದರೆ, ಅವನ್ನೂ ನಾವರಿತು, ಸೈದ್ಧಾಂತಿಕವಾಗಿಯೂ ಉತ್ತರಿಸಬೇಕಾಗುತ್ತದೆ. ಹಾಗೆ ಮಾಡದೆ ಅವರ ಬುದ್ಧಿವಂತೆ ಅನುಯಾಯಿಗಳನ್ನು ನಾವು ಬೇರ್ಪಡಿಸಲಾರೆವು ! ಅವರು ಬೇರೆಯಾದರೆ ನಮ್ಮ ಕೆಲಸ ಅರ್ಧ ಮುಗಿಯಿತು. ಇತ್ತ ಆರ್ಯಾವರ್ತದ ದುರ್ಬಲ ದೊರೆಗಳ ಆರ್ಥಿಕ ಬಲ ವೃದ್ಧಿ ಮಾಡ ಬೇಕಾದ ಕರ್ತವ್ಯವೂ ಇದೆ. ದಕ್ಷಿಣದ ಅಸುರ-ರಾಕ್ಷಸರ ಭಯಕ್ಕಂಜಿ ಋಷಿ ಸಂಸ್ಕೃತಿಯತ್ತ ಪ್ರಕಟ ಅಭಿಮಾನವನ್ನೂ ಬಲವನ್ನೂ ತೋರಲು ಅಸಮರ್ಥರಾದ ತಟಸ್ಥ ಅರಸರೂ ಇರುವರಷ್ಟೆ! ವಿಂಧ್ಯದ ಗಡಿಯ ಇವರನ್ನು ನಮ್ಮತ್ತ ಭದ್ರವಾಗಿ ಸೆಳೆದುಕೊಳ್ಳಲು, ರಕ್ಷಣೆ ಒದಗಿಸಲು ಮಹಾಯತ್ನವೂ ನಡೆಯುವುದಿದೆ. ಮಹಿಷಮಂಡಲದ ದುಂದುಭಿಯೂ ಮಾಯಾವಿಯೂ ಸ್ತ್ರೀ ಚಾಪಲ್ಯವುಳ್ಳ ನೀಚ ಅರಸರು. ಅವರ ತಂಗಿ ಮಂಡೋದರಿ, ಲಂಕೆಯ ಅರಸನಿಗೆ ಮಡದಿಯಾಗಿ ಹೋದಳು ! ಲಂಕೇಶ್ವರನ ಮೊದಲ ದಿಗ್ವಿಜಯ ವಾದುದ್ದರ ತಕ್ಷಶಿಲೆ, ಭೋಗ ವತಿಯವರನೆ ಆಗಿ ಎಷ್ಟು ಸ್ತ್ರೀಯರ ಮಾನ ಹರಣವಾಯಿತೋ ! ಎಷ್ಟು ಅರಸರು ಸತ್ತರೋ! ಪಂಚವಟೀ ಎಂಬ ಈ ಕ್ಷೇತ್ರಕ್ಕೆ ಅನತಿ ದೂರದ ಮತ್ತೊಂದು ಆಶ್ರಮದ ಸಹಸ್ರಾರು ಯುವ ಬ್ರಾಹ್ಮಣರು ಹೋದ ಕೆಲ ವರ್ಷಗಳಲ್ಲಿ ರಾಕ್ಷಸ ದೀಕ್ಷೆ ಪಡೆದುದು ನೆನಪಿದೆಯೆ ! ಖರದೂಷಣ ರೆಂಬುವರು ಈ ಹೊಸ ಪರಿವರ್ತಿತ ತರುಣ ರಾಕ್ಷಸರ ತರಬೇತಿಗಾಗಿ ಅಲ್ಲಿರುವರಂತೆ !! ಇವರನ್ನು ಮತ್ತೆ ಬಿಡಿಸಲು ಯತ್ನ ಆಗಬೇಡವೆ? ನಮಗೆ ಹಣವೂ ಬೇಕು, ಆಹಾರಬೇಕು, ಜನಬಲಬೇಕು. ಜನಕ್ಕೆ ನಮ್ಮ ವಿಚಾರ ತಿಳಿಸಲು ಅವರ ಭಾಷೆ, ರೀತಿ, ನೀತಿಗಳ ಅರಿವು ಬೇಕು. ನಮ್ಮ ವೈದಿಕ ಸಂದೇಶವನ್ನು ನಾಡಿಗೆ ಬೀರಲು ಕಟಿಬದ್ಧರಾದ ಶಾಂತ

ಹೃದಯಂದ ಸೌಮ್ಯಮಾತಿನ ಆಕರ್ಷಕ, ದೃಢಗಾತ್ರರಾದ ಯುವ ವರ್ಣಿಗಳು ಬೇಕು. ದೇಶೀಯ ವಿಚಾರಗಳ, ಸಮ್ಯ ವಿಚಾರಗಳ ಸಮನ್ವಯ ಸಾಧಿಸುವ ತಂತ್ರಗಳೂ ಬೇಕು...''

ಶಾಂಡಿಲ್ಯರೂ, ಶೌನಕರೂ ಏಕಕಾಲಕ್ಕೇ ಮೇಲೆದ್ದು ಏನೋ ಹೇಳಲು ತವಕಿಸಿದರು.

ಸಭಾಧ್ಯಕ್ಷ ಆಂಗೀರಸರು ಕೈಸನ್ನೆಯಿಂದ ಅವರನ್ನು ವೇದಿಕೆಯ ಬಳಿ ಬರಲು ಸೂಚಿಸಿದರು.

ಅವರು ಅಲ್ಲಿ ಬಂದು ಸೇರುವ ವೇಳೆಗೆ ಆಶ್ರಮದ ಬಾಗಿಲಲ್ಲಿ ಪ್ರಿಯವ್ರತನೂ ಚಾಕ್ರಾಯಣನೂ ಕುದುರೆಗಳ ಮೇಲೆ ಬರುತ್ತಾ- ಕೊಂಚ ಪ್ರಜ್ಞೆ ಬಂದಿದ್ದರೂ ಇನ್ನೂ ದಣಿದಿದ್ದ ಆರಕ್ತರಾದ ಕಣ್ವರನ್ನು ಕರೆತಂದದ್ದು ವೇದಿಕೆಯ ಮೇಲಿದ್ದ ಆಂಗೀರಸರ ಕಣ್ಣಿಗೆ ಬಿದ್ದಿತು!

"ಅರ್ಘ್ಯ, ಅರ್ಘ್ಯ!" ಎಂದು ಅವರು ಅಣತಿಯಿತ್ತೊಡನೆಯೇ ಕಿರಿಯ ಅಗಸ್ತ್ಯರೇ ಆಶ್ರಮದ್ವಾರಕ್ಕೆ ಧಾವಿಸಿದರು. ಆಶ್ರಮದ ಬ್ರಹ್ಮಚಾರಿಗಳು ಅರ್ಘ್ಯಪಾದ್ಯಗಳ ದಾರುಪಾತ್ರೆಗಳನ್ನು ಹಿಡಿದು ಗುರುಗಳನ್ನು ಒಡನೆಯೇ ಹಿಂಬಾಲಿಸಿದರು.

---

# ೩. ಪ್ರಗಾಢಕಣ್ವರ ಕರುಣಾಜನಕ ಕಥೆ

ಅಶಕ್ತರಾಗಿದ್ದ ಕಣ್ವರನ್ನು ಆಶ್ರಮದ ಶಿಷ್ಯರು, ನಾಜೂಕಾಗಿ ಏಕಾಂತವಾದ ಆಶ್ರಮವೊಂದರಲ್ಲಿ ಇಳಿಸಿ ಚಿಕಿತ್ಸೆಗೆ ತೊಡಗಿದರು. ಅಗಸ್ತ್ಯ ವಿಷ್ಣುಶರ್ಮರ ವ್ಯವಸ್ಥೆಯಂತೆ ಆಶ್ರಮದಲ್ಲಿ ಆಯುರ್ವೇದ ಮೂಲಿಕೆಗಳ ತೋಟವೊಂದು ಸಿದ್ಧವಾಗಿ ಪ್ರಸಿದ್ಧವಿತ್ತು. ಚ್ಯವನರು ಅವರ ಮೇಲ್ವಿಚಾರಣೆ ಕಾರಣರಾಗಿರುತ್ತಾ, ಅಂಥ ತೋಟಗಳನ್ನು ತಮ್ಮ ಆಶ್ರಮದಲ್ಲೂ ಇತರ ಕಡೆಗಳಲ್ಲೂ ಪ್ರಸಿದ್ಧಿಗೆ ತಂದಿದ್ದರು. ಇಲ್ಲಿ ಈಗ ಅವರೇ ಸಂಮ್ಮೇಳನಕ್ಕೆ ಬಂದುದೂ ಸುಯೋಗವಾಯಿತು. ಒಂದು ವಾರ ಕಾಲ ಸಿದ್ಧೌಷಧ ಪ್ರಯೋಗವಾಯಿತು. ನಾನಾ ವಿಧ ತೈಲಗಳನ್ನು ಮಹರ್ಷಿ ಕಣ್ವರ ಕೃಶವಾದ ಮೈಗೆ ಪಟುಗಳು ಲೇಪಿಸಿ, ಕಾಯಕಲ್ಪ ಮಾಡಿದರು. ಕಷಾಯಗಳ ಸೇವನೆ ಕ್ಲಪ್ತ ವೇಳೆಗಳಲ್ಲಿ ಚ್ಯುತಿಬಾರದಂತೆ ನಡೆದಿತ್ತು. ಚೈತನ್ಯ ದಾಯಕವಾದ ಮೂಲಿಕೆಗಳನ್ನು, ಅವರಿಗೆ ಮೂಗಿಗೆ ಹಿಡಿದು ಮೂಸಿಸಲಾರಂಭವಾಗಿತ್ತು. ಒಂದು ಹೊತ್ತು ಗಂಜಿ ಗಂಟಲಲ್ಲಿಳಿಯುವ ಸ್ಥಿತಿಗೆ ಅವರು ಆ ವಾರಾಂತ್ಯದಲ್ಲಿ ತಲುಪಿ, ಮೃತ್ಯುದವಡೆಯಿಂದ ಪಾರಾಗಿದ್ದರು. ಮೇಧಾತಿಥಿ. ದೇವಾತಿಥಿ ಎಂಬ ಅವರ ಪ್ರಿಯ ಶಿಷ್ಯರಿಬ್ಬರು ಋಷಿಗಳ ಬಳಿಯೇ ಇರುತ್ತಾ. (ವಾರುಣ) ಸ್ನಾನಕ್ಕೆ ಇನ್ನೂ ತಕ್ಕರಿಲ್ಲದ ಅವರಿಗೆ ಮಂತ್ರಸ್ನಾನವನ್ನು ತ್ರಿಕಾಲಗಳಲ್ಲೂ ಮಾಡಿಸುತ್ತಾ. ಅವರ ಆಹ್ನಿಕಗಳನ್ನು (ತ್ರಿಸಂಧ್ಯೆ, ಗಾಯತ್ರೀಜಪ ಇತ್ಯಾದಿ) ತಾವೇ ಮಾಡಿ ಅವರಿಗೆ ಧಾರೆ ಎರೆಯುತ್ತ ಕಣ್ವರ ಮನಕ್ಕೆನೋವಾಗದಂತೆ. ಯಾವ ಕೊರತೆಯೂ ಬಾರದಂತೆ, ಸೇವೆಗೈಯುತ್ತಿದ್ದರು. ಬ್ರಹ್ಮಾತಿಥಿ ಎಂಬ ಕಣ್ವರ ಇನ್ನೊಬ್ಬ ಶಿಷ್ಯ

ಆಶ್ರಮದ ಬಾಗಿಲಲ್ಲಿರುತ್ತಾ, ಬಹಳಷ್ಟು ಅತಿಥಿಗಳು ಏಕಕಾಲಕ್ಕೇ ಅಲ್ಲಿಗೆ ಬರುವುದನ್ನು ನಿಯಂತ್ರಿಸುತ್ತಾ ಕಣ್ವದೃಷ್ಟವಾದ ವೇದ ಮಂತ್ರ ಗಳನ್ನು ಪಠಿಸುತ್ತಾ, ಗುರುವಿಗೆ ಕಿವಿಗೆ ಅದು ಬೀಳುವಷ್ಟು ಗಟ್ಟಿಯಾಗಿ ಉಚ್ಚರಿಸುತ್ತಾ, ನೊಂದ ಆ ಗುರುಮನಸಕ್ಕೆ ಮಾನಸ ಉಪಚಾರಗೈಯ್ಯು ತ್ತಿದ್ದನು.

ಹಿರಿಯ ಅಗಸ್ತ್ಯರು (ಸುತವಾಃ ಎಂಬ ಕುಲಪತಿಗಳು) ಕ್ಷೀಣರಾಗಿ ದ್ದರೂ, ಚೈತನ್ಯಶಕ್ತಿ ಜಾಗ್ರತವಾಗಿದ್ದು, ಕಣ್ಣು ನನ್ನೆಯಿಂದಲೇ ಕಣ್ವರ ಪ್ರಗತಿಯ ಅಂಶಗಳನ್ನು ಶಿಷ್ಯರ ಮೂಲಕ ಆಗಾಗ ತಿಳಿದುಕೊಳ್ಳಲು ಕಾತುರರಾಗಿದ್ದರು. ಕಿರಿಯ ಅಗಸ್ತ್ಯವಿಷ್ಣುಶರ್ಮರು ಅದಕ್ಕೆ ಏರ್ಪ ಡಿಸಿಯೂ ಇದ್ದರು. ಈ ನಡುವೆ ಸಪ್ತರ್ಷಿಮಂಡಲದ ಸಭೆ ನಡೆದೇ ಇತ್ತು. ಸಂಸ್ಕೃತಿಯ ರಕ್ಷಣೆಗಾಗಿ ಏನು ಮಾಡಬೇಕೆಂಬುದನ್ನು ತಮ ತಮಗೆ ತೋರಿದಂತೆ ಒಬ್ಬೊಬ್ಬ ಋಷಿಯೂ ವಟುವೂ ಹೇಳುತ್ತಲೇ ಸಭೆ ನಡೆದಿತ್ತು. ಕಣ್ವರ ಕಥೆಯನ್ನು ಕೇಳಿ ಅರಿಯಲು ಎಲ್ಲರೂ ಉತ್ಸುಕರಾಗಿದ್ದರೂ, ಯಾರೂ ಅವಸರ ಪಡುವಂತಿರಲಿಲ್ಲ. ಮಹರ್ಷಿಯ ಸ್ಥಿತಿ ಹಾಗಿತ್ತು. ಮತ್ತೆ ವಾರ ಕಳೆಯಿತು.

ಕಣ್ವರು ಎದ್ದು ಕೂಡುವಂತಾದರು. ಸ್ವರ ಮಾತ್ರ ಕ್ಷೀಣಿಸಿಯೇ ಇತ್ತು. ಅಂದು ಹುಣ್ಣಿಮೆಯೂ ಆಗಿದ್ದು ಸಾಯಂಸಂಧ್ಯೆಯನ್ನು ಸ್ವಯಂ ಕಣ್ವರೇ ನಡೆಸಿದರು. ರಾತ್ರಿ, ಋಷಿ ಕೊಂಚ ಹಾಲು ಸ್ವೀಕರಿ ಸಿದ ನಂತರ ಕಿರಿಯ ಅಗಸ್ತ್ಯರೇ ಅಲ್ಲಿಗೆ ಬಂದು, ಅವರೊಡನೆ ಕುಶಲಾ ಲಾಪ ನಡೆಸಿ ನಡೆದಿದ್ದೇನೆಂದು ಕೇಳಲಾಗಿ, ಕಣ್ವರು ಕಣ್ಣೀರಿಟ್ಟು ನಡೆದು ದನ್ನು ಹೀಗೆ ಹೇಳಿದರು : (ಅದರ ಸಾರ ಹೀಗೆ).

* * *

ಅಂದಿಗೆ ಹಿಂದಿನ ಎರಡನೇ ತಿಂಗಳ ಸಂಜೆ. ಪ್ರದೋಷ ಕಾಲದಲ್ಲಿ

ಕಣ್ವಾಶ್ರಮದ ಗೋವುಗಳು ಏಕೋ ಹಿಂದಿರುಗಲಿಲ್ಲ ! ಸೂರ್ಯ ಅಸ್ತಮಿಸಿದ್ದ. ಕಣ್ವರಿಗೆ ಚಿಂತೆ ಅಧಿಕವಾಗಿ ಒಬ್ಬರೇ ಗೋವುಗಳನ್ನು ಹುಡುಕುತ್ತಾ ಹೊರಟರು. ಶಿಷ್ಯರು ನಾಲ್ವರು ಹಿಂಬಾಲಿಸಿದರೂ, ಋಷಿ ಅವರನ್ನು ತಡೆದು, "ಆಶ್ರಮಸ್ತ್ರೀಯರ ರಕ್ಷಣೆ ನಿಮ್ಮ ಭಾರ. ಇಲ್ಲೇ ನೀವು ಇರಬೇಕು. ನಾನು ಬಹುದೂರ ಹೋಗುವುದಿಲ್ಲ. ಗೋವು ಗಳು ಇಲ್ಲೆ ಎಲ್ಲೋ ಮೇಯುತ್ತಿರಬೇಕು. ನನ್ನ ಚಪಲಕ್ಕಾಗಿ ನೋಡಿ ಬರುತ್ತೇನೆ." ಎಂದವರೇ ಕಾಲುಗಳಲ್ಲಿ ಪಾದುಕೆಗಳನ್ನೂ ಮೆಟ್ಟದೆ, ಬರೀ ಕೃಷ್ಣಾಜಿನ ಹೊದ್ದು, ಕೈಯಲ್ಲಿ ಜಪಮಣಿ ಹಿಡಿದು, ರಾಕ್ಷೋಘ್ನ ಮಂತ್ರ ಪಠಿಸುತ್ತಾ ಆಶ್ರಮದ ಆಗ್ನೇಯದತ್ತ ಹೊರಟರು. ಶುಕ್ಲಪಕ್ಷ ಪಾಡ್ಯದರಿಂದ ಅಷ್ಟಿಷ್ಟು ಬೆಳಕಿತ್ತು. ಆಶ್ರಮದ ಸುತ್ತಲ ಕಾಡು ದಾರಿ ಗಳೆಲ್ಲ ಅವರಿಗೆ ಪರಿಚಿತವಾಗಿದ್ದವು.

ಒಂದು ಹರಿದಾರಿ ನಡೆಯುವಷ್ಟರಲ್ಲಿ ಆಶ್ರಮದ ಗೋವೊಂದರ 'ಅಂಬಾ'ರವ ಅವರ ಕಿವಿಗೆ ಬಿದ್ದು, ಮಹರ್ಷಿಗೆ ರೋಮಹರ್ಷ ವಾಯಿತು. "ಕಪಿಲೆ ! ನನ್ನ ತಾಯಿ ! ಇಲ್ಲಿರುವೆಯಾ ದೇವಿ ! ಏಕಿಷ್ಟು ತಡಮಾಡಿದೆಯಮ್ಮ !!" ಎನ್ನುತ್ತಾ ಮಹರ್ಷಿ ಗೋಧ್ವನಿಯಕಡೆ ಅದನ್ನು ಸಮೀಪಿಸಿದಾಗ ಎದೆಯೊಡೆಯುವ ದೃಶ್ಯ ಅವರಿಗೆ ಕಂಡಿತು. ಕಪಿಲೆ ಯನ್ನು ದುಷ್ಟರು ಒಂದು ಪೊದರಿಗೆ ಬೇರಿಗೆ ಕಟ್ಟಿ ಹಾಕಿದ್ದರು! ಅದರ ಕಾಲುಗಳನ್ನು ಕಡಿದು ಹಾಕಲಾಗಿತ್ತು ! ಕಪಿಲೆಯ ಪಕ್ಕದಲ್ಲಿ ಗೌರೀ, ಲಕ್ಷ್ಮೀ, ಗಂಗೆ ಹೊದಲಾದ ಆಶ್ರಮದ ಹತ್ತು ಪುಷ್ಟಗೋವುಗಳನ್ನು ಕೊಂದು, ರಕ್ತದ ಮಡುವೇ ಹರಿದಿತ್ತು. ಅವುಗಳ ತಲೆಗಳನ್ನು ಸಾಲಾಗಿ ಹೂಲೆಯಂತೆ ಕಪಿಲೆಯ ಬಳಿ ಇಡಲಾಗಿತ್ತು ! ಕ್ಷಣಕ್ಷಣವೂ ಆಶ್ರಮದ ಸುತ್ತು ಗಂಡಾಂತರವನ್ನೇ ನಿರೀಕ್ಷಿಸುತ್ತಿದ್ದರೂ, ಮಹರ್ಷಿಗೆ ಈ ಅನಿರೀಕ್ಷಿತ ಪ್ರಮಾಣದ ಭೀಕರ ದೃಶ್ಯದಿಂದ ಕ್ಷಣಕಾಲ ದಿಗ್ಭ್ರಾಂತಿಯಾಗಿ, ಮಾತೂ ಹೊರಡಲಿಲ್ಲ: ಮೈ ಬೆವರಿತು, ತಲೆ ಸುತ್ತಿತ್ತು: ಸಹಾಯಕರೂ, ಇಲ್ಲವೆ,

ಗೋಳನ್ನೂ ಕೇಳುವವರೂ ಇಲ್ಲದ ಆ ಅಸಹಾಯಕ ಪರಿಸ್ಥಿತಿಯಲ್ಲಿ ಏನು ಮಾಡುವುದೆಂದೂ ತಿಳಿಯಲಿಲ್ಲ. ನಡುಗುವ ಶರೀರದಿಂದ ಕಪಿಲೆಯ ಬಳಿ ಹೋಗಿ, ಅವರ ಮೈದಡವಿ, "ಅಮ್ಮಾ ! ನಿನಗೀ ಸ್ಥಿತಿಯೇ ! ನಿರಪರಾಧಿಗಳ ಗೋಳನ್ನು ಕೇಳಿ ಅಭಯಕೊಡುವ ಕ್ಷತ್ರಿಯರೆಲ್ಲ ಎಲ್ಲಿ ಹೋದರಮ್ಮಾ !" ಎನ್ನುತ್ತಾ ಅವರ ರಕ್ತಸಿಕ್ತ ಕಾಲುಗಳಿಗೆ ಏನಾದರೂ ಚಿಕಿತ್ಸೆ ಸಾಧ್ಯವೇ ಎಂದು ಪರೀಕ್ಷಿಸಲು ಮಂಡಿಯೂರಿ ಮಹರ್ಷಿ ಕೆಳಗೆ ಕುಳಿತರು. ಅಷ್ಟೇ ತಡ, ಎಲ್ಲಿಂದಲೋ ಸುತ್ತಲಿಂದ ಹಲವಾರು ಧೂರ್ತರು ಅವರನ್ನು ಸುತ್ತುವರೆದು ಅವರ ಕೈಕಾಲುಗಳಿಗೆ ಹಗ್ಗಕಟ್ಟಿ, ಕಿರಾತ ಭಾಷೆಯಲ್ಲಿ ಅವರನ್ನು ಹೀನಾಮಾನವಾಗಿ ಬೈದರು. ಆ ಭಾಷೆ ಮಹರ್ಷಿಗೂ ಗೊತ್ತಿದ್ದರಿಂದ ಅಲ್ಲೊಂದು ಸಂಭಾಷಣೆಯೇ ಏರ್ಪ ಟಿತು.

ಮಹರ್ಷಿ ; "ಯಾರಯ್ಯಾ ನೀವು ! ನಮ್ಮ ಗೋವುಗಳನ್ನೇಕೆ ಹೀಗೆ ಕೊಂದಿದ್ದೀರಿ ? ನನ್ನನ್ನೇಕೆ ಹಿಂಸಿಸುತ್ತೀರಿ? ನನ್ನಿಂದ ನಿಮಗೇನು ತೊಂದರೆ ಆಗಿದೆ ?"

ಧೂರ್ತ : "ಹುಚ್ಚು ಬ್ರಾಹ್ಮಣ ! ಅದನ್ನೆಲ್ಲ ವಿವರಿಸಲು ನಮಗೆ ಅಪ್ಪಣೆ ಆಗಿಲ್ಲ. ಗೋದಾವರಿಯಿಂದ ಈಚೆಗೆ ನೀವೂ ನಿಮ್ಮಂಥವರೂ ಯಾರೂ ಈ ವಿಂಧ್ಯಾಟವಿಯನ್ನು ದಾಟಿ ಹಾಗೂ ದಕ್ಷಿಣಕ್ಕೆ ಬರತಕ್ಕದ್ದಲ್ಲ. ಹಾಗೆ ತಡೆಯುವುದು ನಮ್ಮ ಕರ್ತವ್ಯ.'

ಮಹರ್ಷಿ : "ಈ ಕರ್ತವ್ಯವನ್ನು ನಿಮಗೆ ವಿಧಿಸಿದವರಾರು ? ವಿಶಾಲವಾದ ಈ ಜಂಬೂದ್ವೀಪದಲ್ಲಿ ಎಲ್ಲಿ ಸಂಚರಿಸಲೂ ನಮಗೆ ಯಾರ ಅಪ್ಪಣೆಯೂ ಬೇಕಿಲ್ಲ ! ನಮ್ಮಿಂದ ನಿಮಗೇನು ತೊಂದರೆ ಆಗಿದೆ ಹೇಳಿ. ನಮ್ಮಷ್ಟಕ್ಕೆ ನಮ್ಮ ಸ್ನಾನ, ಸಂಧ್ಯೆ, ಜಪ, ಅಗ್ನಿಹೋತ್ರ ಮಾಡುತ್ತಾ ತಪಸ್ಸಿನಲ್ಲಿರುವ ನಮ್ಮನ್ನು ವೃಥಾ ಹೀಗೇಕೆ ಹಿಂಸಿಸುತ್ತೀರಿ ? ನಮ್ಮ ಗೋವುಗಳು ನಿಮಗೇನು ಅಪರಾಧ ಮಾಡಿದ್ದವು ?"

ಆಗ ಎರಡನೆಯ ಧೂರ್ತ ಕೈಯ್ಯಲ್ಲಿದ್ದ ಭಯಂಕರ ದೊಣ್ಣೆಯಿಂದ ಮಹರ್ಷಿಯ ತಲೆಗೆ ಹೊಡೆಯುತ್ತಾನೆ. ಮಹರ್ಷಿಗೆ ಪ್ರಜ್ಞೆ ತಪ್ಪುತ್ತದೆ! ಉಳಿದವರು ಮಹರ್ಷಿಯ ಜ್ಞಾನ ತಪ್ಪಿದ ಶರೀರವನ್ನು ಒಯ್ದು, ದೂರದ ಒಂದು ಅಡವಿಯ ಗವಿಗೆ ಒಯ್ಯುತ್ತಾರೆ. ಅಲ್ಲಿ ಆ ಶರೀರ ವನ್ನು ಚಿತ್ರ ಹಿಂಸೆ ಮಾಡುತ್ತಾರೆ. ಮತ್ತೆ ದೂರದಲ್ಲಿನ ಎತ್ತರದ ಛಾವಣಿಯ, ಮಣ್ಣಿನ ಗೋಡೆಯ ಮನೆಗೆ ಅವನನ್ನು ಒಯ್ಯುತ್ತಾರೆ.

ಧೂರ್ತರ ಮೇಲ್ವಿಚಾರಕನಾದ ಒಬ್ಬ ಭಟ, ಯಮನಂತೆ ಶರೀರ ವುಳ್ಳ ಒಬ್ಬ ಅಧಿಕಾರಿ, ಅಲ್ಲಿ ಕಾದಿರುತ್ತಾನೆ. ಯಾವುದೋ ರಾಜ ಪುರುಷನಂತೆ ಕಾಣಬರುವ ಅವನೂ ಮಹರ್ಷಿಯನ್ನು ಸಂಸ್ಕೃತದಲ್ಲೇ, ವ್ಯಂಗ್ಯವಾಗಿ. ಮಾತಾಡಿಸುತ್ತಾನೆ.

"ಮಹರ್ಷಿಯೇ ! ವಿಂಧ್ಯಾಟವಿಗೆ ನಿನಗೆ ಇಕೋ ಸುಸ್ವಾಗತ ! ನಿನ್ನಂಥ ನೂರಾರು ಮಹರ್ಷಿಗಳಿಗೂ ಇದೇ ರೀತಿಯ ಸ್ವಾಗತ ಕಾದಿದೆ." ಎನ್ನುತ್ತಾ ಕಣ್ಣುಸನ್ನೆ ಮಾಡುತ್ತಾನೆ, ಧೂರ್ತರು ಬಂದು ಮಹರ್ಷಿ ಯನ್ನು ಹಿಡಿದು ತಂದು ಅವನೆದುರು ನಿಲ್ಲಿಸಿ, ಹೊಡೆಯುತ್ತಾರೆ. ಭಟ ಮಹರ್ಷಿಯ ಕೆನ್ನೆಗಳಿಗೆ ಕಲ್ಲಿನಂತಹ ತನ್ನ ಅಂಗೈಗಳಿಂದ ಪಟಪಟನೆ ಬಡಿಯುತ್ತಾನೆ.

"ಎಲೋ ಧೂರ್ತ ಋಷಿಯೇ ! ಸಾಮಾನ್ಯನಂತೆ ದುಡಿದು ತಿನ್ನುವ ರೀತಿಯಲ್ಲಿ ಬಾಳುತ್ತಾ ನಮ್ಮವರ ಸ್ನೇಹ ಸೇರಿದರೆ ಮಾತ್ರ ನಿನಗೆ ಮೋಕ್ಷ. ಈ ತಪಸ್ಸು, ದೇವರು, ಪರಲೋಕ, ನಿನ್ನ ಕಿವಿಗೇ ಕೇಳುವುದೆಂದು ನೀವು ಹೇಳುವ ಆ 'ಅಪೌರುಷೇಯ' ವೇದ ಮಂತ್ರ—ಈ ಎಲ್ಲ ಮೋಸಗಳನ್ನು ನೀನಿನ್ನು ಬಿಡುವುದಾದರೆ ಮಾತ್ರ ಉಳಿಯುವೆ. ಜನರನ್ನು ವಂಚಿಸುವ ಈ ದುರ್ವಿದ್ಯೆ ಈ ನಮ್ಮ ಪ್ರದೇಶಕ್ಕೆ ಬೇಕಿಲ್ಲ. ಗಂಟೆ ಕಟ್ಟಲೆ ಛಳಿ ಕಾಯುತ್ತಾ ಸುಖದಲ್ಲಿ ಕೂಡುವ ಮೋಸದ ಅಗ್ನಿಹೋತ್ರ ನನಗೆ ತಿಳಿ

ಯದೇ ? ಮನುಷ್ಯನಿಗೇ ತಿನ್ನಲು ಆಹಾರವಿಲ್ಲದಿರುವಾಗ, ಯಜ್ಞದಲ್ಲಿ ಎಷ್ಟೊಂದು ತುಪ್ಪ ಹಾಳು ಮಾಡುತ್ತೀರಿ ? ದುಡಿಸಬೇಕಾದ ಸುಖ ಸಾಧನವಾದ ಗೋವುಗಳನ್ನು ನೀವು ಪೂಜಿಸಿದ ಮಾತ್ರದಿಂದ ಅವು ದೇವತೆಗಳಾಗಿ ಬಿಡುವುವೋ ? ಈ ವಂಚಕ ಜೀವನ ಕ್ರಮ ಕೊನೆಗೊಳ್ಳಲೇ ಬೇಕು. ಅದೇ ನಮ್ಮ ಅರಸನ ಆಜ್ಞೆ."

ಮಹರ್ಷಿ ಇದನ್ನು ನಿರೀಕ್ಷಿಸಿದ್ದಂತೆ ತೋರುತ್ತದೆ. ದಿಟ್ಟವಾಗಿ ಉತ್ತರಿಸುತ್ತಾನೆ.

"ನನ್ನ ಶರೀರಕ್ಕೆ ನೀವು ಎಷ್ಟು ಚಿತ್ರಹಿಂಸೆಯನ್ನು ಬೇಕಾದರೂ ಮಾಡಿರಿ ! ನನ್ನ ಹೃದಯಾಂತರಾಳದ ಶ್ರದ್ಧೆಯನ್ನು ಮಾತ್ರ ಎಷ್ಟು ನೀವು ಅಲುಗಿಸಲಾರಿರಿ ! ಹೃದಯ ಶುದ್ಧಿಯಿಲ್ಲದ ಪಾಖಂಡರಿಗೆ ನಮ್ಮ ಶ್ರದ್ಧೆಯ ಮೂಲ ಬಿಂದುಗಳು ಅನುಭವಕ್ಕೆ ಎಂತು ಬಂದಾವು ? ಕಣ್ಣು ಮುಚ್ಚಿ "ಆಕಾಶದಲ್ಲಿ ಸೂರ್ಯನೇ ಇಲ್ಲ' ಎಂದರೆ ಸೂರ್ಯ ಇಲ್ಲದೇ ಹೋಗುವವನೇ ? ಜಗತ್ತನ್ನೇ ಸೃಷ್ಟಿಸಿ ನಡೆಸುವ ಅಗೋಚರ ಶಕ್ತಿಯೊಂದು ಇಲ್ಲದೆಯೋ ಆಶ್ಚರ್ಯಕರವಾದ ಈ ಜಗದ್ವ್ಯಾಪಾರ ನಡೆಯುವುದೇ ? ಹಗಲು-ರಾತ್ರಿ ವ್ಯವಸ್ಥೆಯನ್ನಾದರೂ ನೋಡು: ಇದನ್ನು ನೀನು ತಡೆಯಬಲ್ಲೆಯಾ ?"

ಭಟ : "ಮೂಢ ಋಷಿ ! ತನ್ನಷ್ಟಕ್ಕೆ ತಾನೇ ನಡೆಯುವ ಈ ಪ್ರಕೃತಿ ವ್ಯಾಪಾರದಲ್ಲಿ ಆಶ್ಚರ್ಯವೇನು ? ಯಾವ ಅಗೋಚರ ಶಕ್ತಿಯೂ ಇದಕ್ಕೆ ಬೇಡ. ಇಂಥ ಮೂಢ ವಿವರಣೆಗಳನ್ನು ನಮ್ಮ ಜನತೆ ಕೇಳುವುದು ಬೇಡ."

ಋಷಿ : "ನಿನ್ನೊಡನೆ ವ್ಯರ್ಥವಾಗಿ ಮಾತಾಡಿ ಫಲವೇನು." (ಮಾತನ್ನು ನಿಲ್ಲಿಸುತ್ತಾನೆ.)

ಆ ಕತ್ತಲ ಕೋಣೆಯಲ್ಲಿ ಅವರನ್ನು ಅನ್ನಾಹಾರವಿಲ್ಲದೆ ಬಂಧಿಸಿ ಭಟನೂ, ಧೂರ್ತರೂ ಹೋಗಿ ಬಿಡುತ್ತಾರೆ. ನಾಲ್ಕಾರು ದಿನಗಳು ನಂತರ ವಸಿಷ್ಠಾಶ್ರಮದ ಸತ್ಯಶ್ರವವೆಂಬ ಋಷಿಗಳನ್ನು ಅಲ್ಲಿಗೆ ಅದೇ ರೀತಿ ಭಟರು ಹಿಡಿದುತರುತ್ತಾರೆ. ಅವರಿಗೂ ಚಿತ್ರಹಿಂಸೆ ನಡೆಯುತ್ತದೆ, ಇಬ್ಬರನ್ನೂ ಆರ್ಯಸಂಸ್ಕಾರದೊರೆದು ತಮ್ಮ ಸೈನ್ಯಕ್ಕೆ ಸೇರುವಂತೆ ಭಟ ಕೇಳುತ್ತಾನೆ. ಋಷಿಗಳು ತಿರಸ್ಕರಿಸುತ್ತಾರೆ. ಭಟನಿಗೆ ರೇಗುತ್ತದೆ.

"ಹಗಲು-ರಾತ್ರಿ ವ್ಯವಸ್ಥೆಯ ಬಗೆಗೆ ಮಾತಾಡಿದ ಮೂಢ ಅನಾಗರಿಕ ಋಷಿಯೇ ! ಇನ್ನು ನಿಮಗಿಬ್ಬರಿಗೂ ಸತತ ರಾತ್ರಿಯ ವ್ಯವಸ್ಥೆಯನ್ನು ಮಾಡುತ್ತೇನೆ. ಯಾವ ನಿನ್ನ ದೇವತೆಗಳು ಬಂದು ಬೆಳಗಾಗಿಸುತ್ತಾರೋ ನೋಡೋಣ. ಬೆಳಗಾದಾಗ ಹಾಗಾಗಿದೆಯೆಂದು ಹೇಳುವರಾದರೂ ಬೇಡವೆ ?"

ಕಣ್ವರು : "ಅಶ್ವಿನಿಗಳಿರುವ ತನಕ ನನಗೇನು ಕಷ್ಟ?"

ಭಟ : "ಹಾಗಾದರೆ ಆ ಅಶ್ವಿನಿಗಳಿಗೂ ಇಲ್ಲಿ ನಿಮಗಾದ ಸ್ವಾಗತಕಾದಿದೆ" ಎನ್ನುತ್ತಾ ಕಣ್ಣು ಸನ್ನೆ ಮಾಡುತ್ತಾನೆ. ಧೂರ್ತರು ಬಂದು ಇಬ್ಬರು ಋಷಿಗಳ ಕಾಲ್ಗಳಿಗೂ ಹಗ್ಗ ಕಟ್ಟಿ ಆ ಎತ್ತರದ ಛಾವಣಿಯ ಅಟ್ಟದ ತೊಲೆಗೆ ಅವರನ್ನು ಮೇಲಿಂದ ತಲೆಕೆಳಗಾಗಿ ತೂಗು ಹಾಕಿ, ಕೈಗಳು ಜೋತು ಬೀಳದಂತೆ ಶರೀರಕ್ಕೆ ಕಟ್ಟಿ, ಕೆಳಗೆ ತಲೆ ತೂಗಾಡುವಂತೆ ಕೆಳಗೆ ಮೂರು ಅಡಿ ಅಂತರದ ನೆಲದಲ್ಲಿ ಹೊಟ್ಟಿನಲ್ಲಿ ಬೆಂಕಿ ಹಾಕಿ, ದುರ್ಗಂಧ ವಿಷ ದ್ರವ್ಯಗಳನ್ನು ಅದರಲ್ಲಿ ಸೇರಿಸಿ, ನಿರ್ದಯರಾಗಿ ಆ ಋಷಿಗಳನ್ನು ಅಲ್ಲಿ ನಾಯು ಬಿಟ್ಟು ಹೊರಗಿನ ಬಾಗಿಲು ಚಿಲಕಹಾಕಿ, ಸುತ್ತ ಪಹರೆ ಇಟ್ಟು ಹೊರಗೆ ಹೋಗುತ್ತಾರೆ.

“ನಿಲ್ಲಿ ! ನಿಮಗೆ ಇದನ್ನೆಲ್ಲ ಮಾಡುವಂತೆ ಅಪ್ಪಣೆ ಮಾಡಿದವರಾರು !” ಎಂದು ಕಣ್ವರು ಕೊನೆಯದಾಗಿ ಪ್ರಶ್ನೆ ಕೇಳುತ್ತಾರೆ ?”

ಭಟ ವಿಕಟವಾಗಿ ನಕ್ಕು “ಸಾಯುವವರಲ್ಲಿರುವ ನಿಮಗೆ ಹೇಳಿದರೆ ತಪ್ಪೇನಿಲ್ಲ; ಕೇಳಿ ಸಾಯಿ” ಎನ್ನುತ್ತಾ ಗಟ್ಟಿಯಾಗಿ ತನ್ನ ಅರಸನ ಹೆಸರು ಹೇಳುತ್ತಾನೆ, “ಇಲ್ವಲ ಮಹಾರಾಜರು !”

“ಇಲ್ವಲ”, “ಇಲ್ವಲ”, “ಇಲ್ವಲ” ಎಂದು ಆ ಇಡೀ ಕಾಡು ಪ್ರತಿಧ್ವನಿಸುತ್ತಾ ನೀರವತೆಯಲ್ಲಿ ಮುಳುಗುತ್ತದೆ.... ಮೊದಲು ನತ್ತಶ್ರವ, ಅನೇಕ ದಿನಗಳಾದ ಮೇಲೆ, ಸಾಯುತ್ತಾನೆ. ಕಣ್ವರ ಬಾಯಲ್ಲಿ ಆಶ್ವಿನಸೂಕ್ತವೊಂದು ಹೊರಹೊಮ್ಮುತ್ತದೆ.

---

# ೪. ವಿದರ್ಭರಾಜಕುಮಾರಿ

ಹಿರಿಯ ಅಗಸ್ತ್ಯರು ಮರಣಶಯ್ಯೆಯಲ್ಲಿರುವ ವಿಷಯ ಆರ್ಯಾವರ್ತದ ದೊರೆಗಳಿಗೆಲ್ಲ ತಿಳಿದು, ಒಬ್ಬೊಬ್ಬರಾಗಿ ಬಂದು ಮಹರ್ಷಿಯ ದರ್ಶನ ಪಡೆದು ಹೋಗಲಾರಂಭಿಸಿದ್ದರು. ಭರತವಂಶದ ಅರಸರು ತೀರ ಕ್ಷೀಣಸ್ಥಿತಿಯಲ್ಲಿದ್ದರು. ಹಿರಿಯ ಅಗಸ್ತ್ಯರ ಶಾಪದಿಂದ, ಆ ವಂಶದ ನಹುಷನೆಂಬ ಅರಸ, ಧಾರ್ಮಿಕನಾಗಿ ಒಮ್ಮೆ ಇಂದ್ರಪದವಿಗೇರಿದ್ದವನು, ಈಗ ಸರ್ಪವಾಗಿ ಎಲ್ಲೋ ಅಡವಿಯಲ್ಲಿರುತ್ತಾ ಶಾಪವಿಮೋಚನ ಕಾಲವನ್ನು ಕಾಯುತ್ತಿದ್ದಾನೆಂದು ಲೋಕದಲ್ಲಿ ಪ್ರಸಿದ್ಧವಿತ್ತು. ಆ ವಂಶದಲ್ಲಿ ಆಗ ಅರಸನಾಗಿದ್ದವನು 'ಅನಶ್ವ' ಎಂಬ ಬಡ ದೊರೆ. "ಒಂದು ಕುದುರೆಗೂ ಗತಿಯಿಲ್ಲದವನು" ಎಂಬುದು ಆ ಹೆಸರಿನ ಅರ್ಥ. ಇದರಿಂದ ಅವನ ಸೈನ್ಯ ಬಲ ಎಷ್ಟು ಕ್ಷೀಣಿಸಿತ್ತೆಂದು ಊಹಿಸಬಹುದಲ್ಲವೆ? ಕುದುರೆಗಳಿಗೇ ಮೊದಲು ದಾರಿದ್ರ್ಯವಿದ್ದ ಆ ಕಾಲದಲ್ಲಿ, ರಾಜನ ಐಶ್ವರ್ಯ ತಾನೇ ಎಷ್ಟು ಕ್ಷೀಣಿಸಿರಬೇಡ! ಪುರೂರವನಿಂದ ಇವನು ಸುಮಾರು ಮುವ್ವತ್ತಮೂರನೆಯ ಅರಸಾಗಿದ್ದವನು. ಭರತನಿಂದ ಒಂಭತ್ತನೆಯ ತಲೆಮಾರಿನವನಾದ ಇವನ ಹಿಂದೆ ಹಸ್ತಿ, ಕುರು ಮೊದಲಾದ ಪ್ರಸಿದ್ಧರೆಲ್ಲ ಆಳಿ ಅಳಿದಿದ್ದರು.

ಅತ್ತ ಸೂರ್ಯವಂಶೀಯ ಅರಸರೂ ಪ್ರಬಲವಿರಲಿಲ್ಲ. ಪೌರುಕುತ್ಸನೆಂಬ ದೊರೆ ತುಂಬ ಧಾರ್ಮಿಕನಾಗಿದ್ದರೂ ಅಸುರರ ಕಾಟದಿಂದ ಕ್ಷೀಣಿಸಿದ್ದನು.

ಮಧ್ಯಭಾರತದ ದಕ್ಷಿಣದ ಅಂಚಿಗೆ ಹೊಂದಿಕೊಂಡಂತೆ ವಿದರ್ಭರಾಜ್ಯವಿದ್ದಿತು. ಅಲ್ಲಿ ವೈದರ್ಭನೆಂಬ ಹೆಸರಿನ ಮುಪ್ಪಾದ ಅರಸೇ

ಆಳುತ್ತಿದ್ದನು. ಸಂತಾನ ಉತ್ಪಾದನ ವಯಸ್ಸಾಗುತ್ತ ಮೀರುತ್ತಾ ಬಂದರೂ ಅವನಿಗೆ ಹಿಂದೊಂದು ಕಾಲದಲ್ಲಿ ಮಕ್ಕಳೇ ಇರಲಿಲ್ಲ ! ಆಗ ಹಿರಿಯ ಅಗಸ್ತ್ಯರ ತಪೋಮಹಿಮೆಯಿಂದ ಒಂದು ಕನ್ಯಾರತ್ನ ಜನಿಸಿತ್ತು. ಅದು ಸುಮಾರು ಹದಿನಾರೋ ಹದಿನೆಂಟೋ ವರ್ಷದ ಹಿಂದಿನ ಕಥೆ.

* * *

ಹಿರಿಯ ಅಗಸ್ತ್ಯರು ಆಗ ಸುಮಾರು ಐವತ್ತು ದಾಟಿದ್ದ ಋಷಿ ಪುಂಗವರಾಗಿದ್ದರು. ಅವರ ಏಕೈಕ ಪುತ್ರ, ವಿಷ್ಣುಶರ್ಮ ಅಗಸ್ತ್ಯರು ಆಗ ಸುಮಾರು ಎಂಟು ವಯಸ್ಸಿನ ಬಾಲಕ. ತಂದೆ ಬಹು ಕುಳ್ಳಾದರೂ ಅಗ್ನಿಕಲ್ಪರಾದ ತಪೋನಿಷ್ಠರಾಗಿರುತ್ತಾ, ಸಾಮಾನ್ಯರು ಅವರ ದರ್ಶನಕ್ಕೂ ಹೆದರುತ್ತಿದ್ದರು. "ಅಗ್ನಿಶರಣ" ಎಂಬುದು ಅವರಿಗೆ ಅನ್ವರ್ಥವಾಗಿಯೇ ಬಿರುದಾಗಿ ಬಂದಿತ್ತು, ಹೆಸರು. ಕೊಂಚ ಮೈ ಬಣ್ಣ ಕಪ್ಪಾಗಿದ್ದರೂ, ಚುರುಕುಗಣ್ಣಿನ, ತೇಜಃ ಪುಂಜವಾದ ಅವರ ಮುಖದಲ್ಲಿ ವಿಶ್ವಕಲ್ಯಾಣದೀಕ್ಷೆಯ ಕಾಂತಿಯೊಂದು ಸಾಂದ್ರವಾಗಿ ಹರಡಿತ್ತು. ಕೊಂಚ ಗೊಗ್ಗರುಧ್ವನಿಯಾಗಿ, ಯಾರಿಗೂ ಅಪ್ಪಣೆ ಮಾಡುವ ಧೋರಣೆಯ ಅವರ ವಾಗ್ಝರಿಯನ್ನು ಕೇಳಿದವರಾರೂ ಅದಕ್ಕೆ ಮಾರು ಹೋಗದೆ ಇರುತ್ತಿರಲಿಲ್ಲ. ಆ ಮೋಹಕತೆ! ಇತರರನ್ನು ಪರವಶರಾಗಿಸುವ ಆಶಕ್ತಿ ಆ ಧ್ವನಿಗೆ ಎಲ್ಲಿಂದ ಬಂದಿರಬೇಕು ! ತಮಗೇ ದೃಷ್ಟವಾದ ವೇದ ಮಂತ್ರಗಳನ್ನು ಅವರು ಪಠಿಸುವುದೇ ಒಂದು ವಿಶಿಷ್ಟ ಶೈಲಿಯಲ್ಲಿ!! ಬ್ರಹ್ಮಸಾಕ್ಷಾತ್ಕಾರ ಅವರಿಗಾಗಿತ್ತೆಂಬುದನ್ನು ಅವರ ವೇದೋಚ್ಚಾರ ರೀತಿಯೂ, ಠೀವಿಯೂ, ಆ ಶಬ್ದಾನುಭವದಲ್ಲಿ ಅವರು ಮುಳುಗುತ್ತಿದ್ದ ರೀತಿಯೂ, ಅಜ್ಞರಿಗೂ ಮನದಟ್ಟಾಗಿಸುತ್ತಿದ್ದವು. ಅರೆನರೆತ ಗಡ್ಡ ಮೀಸೆ ತಲೆಗೂದಲುಗಳ ದಿವ್ಯಶಿರದಲ್ಲಿ ಎಷ್ಟು ಜ್ಞಾನವಿದ್ದಿತೋ ? ಅಳೆದವರಾರು ? ಯಾಗ ಭೂಮಿಯಲ್ಲಿ ಸೋಮಯಾಗ ಕಾಲದಲ್ಲಿ ಸೋಮರಸವನ್ನು ಶೇಖರಿಸಿಡುವ ಪಾತ್ರೆಗೆ ದ್ರೋಣವೆಂದು ಹೆಸರಷ್ಟೆ !

ಆ ದ್ರೋಣ ಕಲಶದಷ್ಟು ಪವಿತ್ರ ಅವರ ಶಿರಸ್ಸು ಎಂಬುದು ಋಷಿಗಳ ಸಂಘದಲ್ಲಿ ಪ್ರತೀತಿಯಾಗಿದ್ದ ವಿಚಾರ. ಋಷಿಗಳ ಜ್ಞಾನ ಪ್ರಮಾಣ ವನ್ನು ಅವರವರೇ ಅಳೆಯುವಾಗ, ಆ ದ್ರೋಣಕಲಶದಲ್ಲಿ ಶೇಖರವಾದ ಸೋಮರಸ ಪ್ರಮಾಣದಂತೆ ಅಳೆಯುತ್ತಿದ್ದು, ಆ ಇಡೀಪಾತ್ರೆಯೇ ಬ್ರಹ್ಮ ಜ್ಞಾನಕ್ಕೆ ಸಂಕೇತವಾಗಿ, 'ಪ್ರ-ಮಾಣ'ವಾಗಿ, 'ಮಾನ' ಎಂದು ಕರೆಯ ಲ್ಪಡುತ್ತಿದ್ದ ಕಾಲ ಅದು. ಇದರಿಂದಾಗಿ ವೇದಗಳಲ್ಲೇ ಈ ಮಹರ್ಷಿ 'ಮಾನ್ಯ'ರೆಂದು ಪ್ರ-ಪ್ರಥಮರಾಗಿ ಸ್ತುತಿಸಲ್ಪಟ್ಟು ಖ್ಯಾತರಾಗಿದ್ದರು. ಭರತಖಂಡದ ದುಃಸ್ಥಿಗೆ ಅವರಂತೆ ಮರುಗಿದ್ದವರು, ಅದರ ಉತ್ಥಾನಕ್ಕೆ ಚಿಂತಿಸಿ, ಕ್ರಿಯಾ ಶೀಲರಾಗಿದ್ದವರು ಇನ್ನೊಬ್ಬರಿರಲಿಲ್ಲ.

ಅನಾಥ ಋಷಿ ಪುತ್ರನೊಬ್ಬ ಇವರಿಗೆ ಶರಣಾದ. ತಾಯಿತಂದೆ ಬಂಧು ಬಳಗ ಯಾರೂ ಇಲ್ಲದ ಆ ಬಾಲನನ್ನು ಅಗಸ್ತ್ಯಪತ್ನಿ-ಅನುಮತೀ ದೇವಿ—ತನ್ನ ಪುತ್ರ ವಿಷ್ಣುಶರ್ಮನೊಡನೆ ಬೆಳೆಸಲು ಆಶಿಸಿದ್ದಳು. ಮಹರ್ಷಿ ಅವನಿಗೆ ಸೋಮಶ್ರವನೆಂದು ಹೆಸರಿಟ್ಟು ಕಿರಿಯ ಅಗಸ್ತ್ಯ ರೊಡನೆಯೇ ಬೆಳೆಸಲಾರಂಭಿಸಿ. ಅವನು "ಅಗಸ್ತ್ಯಭ್ರಾತ" ಎಂದೇ ಮುಂದೆ ಆರ್ಯಾವರ್ತದಲ್ಲಿ ಖ್ಯಾತನಾದ. ಇವನಿಗೆ ಆಯುರ್ವೇದ, ಅಶ್ವ ವಿದ್ಯೆ, ದಂಡನೀತಿ, ವಾರ್ತಾ ಮುಂತಾದ ಲೌಕಿಕ ವಿದ್ಯೆಗಳಲ್ಲಿ ಅಪಾರ ಆಸಕ್ತಿ ಇರುತ್ತಾ. ವೃದ್ಧಾಗಸ್ತ್ಯರು ತಾವು ಕುಲಪತಿಗಳಾದ ಮೇಲೆ, ಇವನಿಗಾಗಿಯೇ ಆಶ್ರಮದಲ್ಲಿ ಅಂಥ ನಾನಾ ವಿದ್ಯೆಗಳನ್ನು ಕಲಿಸುವ ವಿಚಕ್ಷಣ ವಿದ್ವಾಂಸರನ್ನು ನಾನಾ ಕಡೆಗಳಿಂದ ಹುಡುಕಿ ತಂದು ಸೇರಿಸಿ, ಅಗಸ್ತ್ಯಾಶ್ರಮ, ಲೌಕಿಕ ಪಾರಲೌಕಿಕ ವಿದ್ಯೆಗಳ ಸಂಗಮಸ್ಥಾನವಾಗಿ ಲೋಕೋತ್ತರವೂ, ಅಭೂತಪೂರ್ವವೂ ಆಗಿಹೋಯಿತು. ಸುಂದ ರನೂ, ಗೌರಾಂಗನೂ, ಎತ್ತರದ ಮೈಕಟ್ಟುಳ್ಳವನೂ ಆದ ಈ "ಅಗಸ್ತ್ಯಭ್ರಾತ", ವಿಷ್ಣುಶರ್ಮ ಅಗಸ್ತ್ಯರಿಗೆ "ತಮ್ಮ"ನೆಂದರೆ, ಇತರರು ನಂಬಲು ಕಷ್ಟವೆನಿಸಿದ್ದರೂ, ಸೋಮಶ್ರವನು ಈ ಕಿರಿಯ

ಅಗಸ್ತ್ಯರ ಬಗ್ಗೆ ನಡೆದುಕೊಳ್ಳುವ ರೀತಿಯಿಂದ ನಂಬಿಕೆ ಏರ್ಪಡು ತ್ತಿತ್ತು.

ಚ್ಯವನ, ಅತ್ರಿ, ಆಂಗೀರಸ, ಈ ಮಹರ್ಷಿಗಳ ಸಂತಾನದಲ್ಲಿ ಹಿರಿಯ ಅಗಸ್ತ್ಯರ ತಲೆಮಾರಿನವರೆಲ್ಲರಿಗೆ ಒಂದೇ ಧ್ಯೇಯವಿತ್ತು–ಭರತ ಖಂಡದ ಅನಾದಿ ಸಂಸ್ಕೃತಿಯ ಪುನರುತ್ಥಾನ.

ಆದರೆ ಕ್ಷತ್ರಿಯ ಸಂತಾನವೇ ಕ್ಷೀಣಿಸುತ್ತಿದ್ದ ಕಾಲ ಅದು ! ಯಾರ ಶಾಪವೋ ? ಪರಶುರಾಮರಿನ್ನೂ ಕಿರಿಯ ಅಗಸ್ತ್ಯರ ವಯಸ್ಸಿನವರೋ ಒಂದೆರಡು ವರ್ಷ ಹಿರಿಯರೋ ಆಗಿದ್ದ ಕಾಲ: ಹೈಹಯ ಕಾರ್ತವೀ ರ್ಯನ ದರ್ಪ ಇನ್ನೂ ಇಳಿದಿರಲಿಲ್ಲ ! ಹಾಗಾದರೆ ಕ್ಷತ್ರಿಯ ಸಂತಾನಕ್ಕೆ ಏನು ರೋಗ ಹಿಡಿದಿತ್ತು ? ಆರ್ಯಾವರ್ತದ ದೊರೆಗಳು ಅಕಾಲದಲ್ಲಿ ಮುಪ್ಪಾಗುವುದೂ, ಸಂತಾನಅಸಮರ್ಥರಾಗುವುದೂ. ಚಿಕ್ಕವಯಸ್ಸಿ ನಲ್ಲೇ ವಾರಸುದಾರರಿಲ್ಲದೇ ಸಾಯುವುದೂ, ಚರ್ಮರೋಗ, ಗುಹ್ಯ ರೋಗ,ಕ್ಷಯ ಮುಂತಾದ ರೋಗಗಳಿಗೆ ತುತ್ತಾಗುವುದೂ ಬಹುಸಾಮಾನ್ಯ ವಾಗಿದ್ದ ಕಾಲ. ರಾಜಸ್ತ್ರೀಯರಿಗೂ ಬಂಜೆಯತನ ಬಹು ಸ್ತ್ರೀಯರಿಗೆ ಕಾಡಿಸುತ್ತಿತ್ತು- ಹೀಗಾಗಿ ಎಷ್ಟೋ ಅರಸೊತ್ತಿಗೆಗಳು ನಿರ್ವಂಶವಾಗಿ ಬಿಡುತ್ತಿದ್ದವು. ಶುಕ್ರಪುತ್ರರಾದ ಶಂಡ, ಅಮರ್ಕರು ಅಸುರ ದೊರೆ ಗಳಿಗೆ ಪ್ರೋತ್ಸಾಹಿಸಿ, ಇಂಥ ರಾಜ್ಯಗಳು ಬೇಗ ಅವರ ಪಾಲೇ ಆಗುತ್ತಿ ದ್ದವು. ಇಲ್ವಲ ಅವರಿಗೆಲ್ಲ ಸಾರ್ವಭೌಮನಾಗಿ ಹೋಗಿದ್ದ. ಸ್ವಯಂ ಶುಕ್ರಾಚಾರ್ಯನಿಂದಲೇ "ಮೃತಸಂಜೀವನೀ" ವಿದ್ಯೆಯನ್ನರಿತಿದ್ದ ಇಲ್ವಲ ಆರ್ಯಾವರ್ತದ ದೊರೆಗಳಿಗೆ ಸಿಂಹಸ್ವಪ್ನದಂತಾಗಿದ್ದವನು! ಮಹಾ ರೂಪವಂತನೂ, ವಿದ್ಯಾವಂತನೂ, ಶೂರನೂ, ಪ್ರಜಾವತ್ಸಲನೂ ಆದ ಅವನು ಈ ಮಾಯಾ ವಿದ್ಯೆಯೂ ಕೈಗೂಡಿದ ಮೇಲೆ ದಿನಕ್ಕೊಂದ ರಂತೆ ಆರ್ಯ ಅರಸುಪೀಠಗಳನ್ನು ಗೆಲ್ಲುವುದರಲ್ಲೂ, ಅಪಹರಿಸುವುದ

ರಲ್ಲೂ, ಅವರ ಮೇಲೆ ನಾನಾ ವಿಧವಾದ ಯಾತು, ಕೃತ್ಯಗಳನ್ನು ಮಾಡುವುದರಲ್ಲೂ ನಿಪುಣನಾಗಿ ವಿಂಧ್ಯದ ದಕ್ಷಿಣದಲ್ಲಿ ಅವನೇ ಅನಭಿಷಿಕ್ತ ಸಮ್ರಾಟ್ ಆಗಿದ್ದ ಕಾಲ. ಉತ್ತರಭಾರತವನ್ನೂ ಗೆದ್ದು ಚಕ್ರವರ್ತಿಯಾಗುವ ಹಂಬಲ. ಇಂದ್ರಸಂಥ ಪುತ್ರನನ್ನು ಪಡೆಯುವ ಬಯಕೆ ಅವನಿಗೆ ಪ್ರಬಲವಾಗಿತ್ತು. ಇಂಥ ಶೂರ. ದಕ್ಷ. ಮೇಧಾವೀ ಅರಸನಲ್ಲಿ ನ್ಯಾಯ. ಧರ್ಮ. ಸತ್ಯಗಳು ಮಾತ್ರ ಇಲ್ಲವಾಗಿ. ದೇವತೆಗಳು ಅವನನ್ನು ಪುತ್ರಹೀನನಾಗುವಂತೆ ಶಪಿಸಿದ್ದುದು ಪ್ರಸಿದ್ಧವಿತ್ತು. ಚಿಕ್ಕ ವಯಸ್ಸಿನಲ್ಲಿ ಇಲ್ವಲ, ಶಂಬರಾಸುರನಲ್ಲಿ ಗುರುಕುಲ ವಾಸ ಮಾಡಿ ಅವನಿಂದ ಆಸುರೀ ಅರ್ಥಶಾಸ್ತ್ರದ ಪ್ರಾವೀಣ್ಯವನ್ನು ಪಡೆದಿದ್ದ, ಶ್ರುತಬಿಂದು ಎಂಬ ಮಹರ್ಷಿಯನ್ನನುಸರಿಸಿ. ಆರ್ಯದೀಕ್ಷೆ ಪಡೆದು, ಉಪನೀತನಾಗಿ ವೇದಶಾಸ್ತ್ರಗಳನ್ನೂ ಅಧ್ಯಯನ ಮಾಡಿ. ಸಂಸ್ಕೃತ ಭಾಷೆ, ಸಾಹಿತ್ಯಗಳನ್ನು ಚೆನ್ನಾಗಿಯೇ ಯಾವ ಮಹರ್ಷಿಯೂ ತಲೆದೂಗುವಂತೆ ಅಭ್ಯಾಸ ಮಾಡಿದ್ದ. ಆಹ! ಅವನೊಬ್ಬ ಆರ್ಯನೇ ಆಗಿಬಿಟ್ಟಿದ್ದರೆ ಆರ್ಯಾವರ್ತದ ಪುಣ್ಯ ಹೇಗಿರುತ್ತಿತ್ತೋ ಏನೋ !! ಆದರೆ ಬಾಲ್ಯದ ಆಸುರೀ ಸಂಸ್ಕಾರ ಅದನ್ನಾಗಗೊಡಲಿಲ್ಲ. ಅವನು ಕಲಿತುದೆಲ್ಲ ಆರ್ಯಸಂಸ್ಕೃತಿಯ ವಿನಾಶಕ್ಕೇ ಮುಂದೆ ಉಪಯೋಗವಾಯಿತು. ಶ್ರುತಬಿಂದುವಿಗೆ ಮಹರ್ಷಿಗಳು ಬಹಿಷ್ಕಾರ ಹಾಕಲಿಲ್ಲವಾದರೂ, ಅವರು ಋಷಿ ಸಂಘದಲ್ಲಿ ತಲೆ ಎತ್ತಿ ನಡೆಯದಂತೆ ಮಾಡಿತ್ತು, ಇಲ್ವಲ ಅವರ ಶಿಷ್ಯನಾಗಿದ್ದನೆಂಬ ಸಂಗತಿ.

ಇಲ್ವಲನಿಗೆ ಬಹು ವಿಧೇಯನಾದ ತಮ್ಮ ಒಬ್ಬ ಇದ್ದ. ಅವನೇ ವಾತಾಪಿ. ಅಣ್ಣನ ವಿದ್ಯೆಯೆಲ್ಲ ತಮ್ಮನಿಗೂ ಕರಗತವಿದ್ದು ಮಕ್ಕಳಿಲ್ಲದ ಇಲ್ವಲ ಅವನನ್ನೇ ತಮ್ಮನೆಂಬುದರ ಬದಲು ಮಗನೆಂದೇ ಭಾವಿಸಿದ್ದ. ಅಣ್ಣ ತಮ್ಮಂದಿರಲ್ಲಿ ಸುಮಾರು ೨೫ ವರ್ಷದ ಅಂತರವಿದ್ದುದೂ ಅದಕ್ಕೆ

ಕಾರಣವಿರಬೇಕು. (ಇಲ್ವಲನಿಗಾಗ ಸುಮಾರು ಹಿರಿಯ ಅಗಸ್ತ್ಯರ ವಯಸ್ಸೇ ಆಗಿತ್ತು.)

ಹಿರಿಯ ಅಗಸ್ತ್ಯರು, ಸಂತಾನ ಹೀನರಾಗಿದ್ದ ಆರ್ಯಾವರ್ತದ ದೊರೆಗಳಿಗೆ ಮಕ್ಕಳಾಗುವಂತೆ ಗುಹ್ಯಕರೆಂಬ ಗಂಧರ್ವರಿಂದ, ಒಂದು ಅಪೂರ್ವ ಸಂತಾನ ವಿದ್ಯೆಯನ್ನು ಪಡೆದು ಬಂದಿದ್ದರು! ಅಥರ್ವಣಿಕ ಮಂತ್ರಗಳಿಂದ ಅಗ್ನಿಯನ್ನುಪಚರಿಸಿ, ಅಪೂರ್ವ ಚರುವೊಂದನ್ನು ಯಜ್ಞೇಶ್ವರನ ಪ್ರಸಾದವನ್ನಾಗಿ ಅವರು ಆ ಬಂಜೆತಾಯಂದಿರಿಗೆ ಅನುಗ್ರಹಿಸಿದರೆಂದರೆ, ಹೋಗಿಯಿತು ಅವರ ಬಂಜೆತನ! ಆ ಚರುವಿನಲ್ಲಿ ಯಾವ ಸಿದ್ಧೌಷಧಗಳನ್ನು ಅವರು ಹಾಕಿರುತ್ತಿದ್ದರೋ! ಯಾವ ಮಂತ್ರದಿಂದ ಆ ಚರು ಮಂತ್ರಿತವಾಗಿರುತ್ತಿತ್ತೋ! ಚರುವನ್ನು ಪ್ರಾಶನ ಮಾಡಿದ ತಾಯಿಯು ನಿಜಗರ್ಭವತೀ ಆಗಿರುವ ತನಕ ಅವಳಿಗೆ ಅಗಸ್ತ್ಯಾಶ್ರಮದಲ್ಲಿ ಅಗ್ನಿಶುಶ್ರೂಷೆ ಕಡ್ಡಾಯವಾಗಿರುತ್ತಿತ್ತು. ಆ ಕಠಿಣ ನಿಯಮಕ್ಕೆ ಒಳಗಾದ ಅರಸುಪತ್ನಿಗೆ ಲೋಕ ಪೂಜ್ಯರಾದ ಮಕ್ಕಳೇ ಜನಿಸುತ್ತಿದ್ದರು. ಈ ಮರ್ಮ ಗೊತ್ತಿದ್ದುದು ಇನ್ನೂ ಮೂರು ಮಹರ್ಷಿಗಳಿಗೆ ಮಾತ್ರ. ಭೃಗು. ಚ್ಯವನ, ಭರದ್ವಾಜ ಇವರಿಗೆ.

* * *

ಆಗಿನ್ನೂ ಬ್ರಹ್ಮಬ್ರಾಹ್ಮಣ ದ್ವೇಷಿಯಾಗಿಲ್ಲದ ಇಲ್ವಲ ತನ್ನ ಅಪುತ್ರತ್ವ ನೀಗಿಸಲು ಒಮ್ಮೆ ಭೃಗುವನ್ನು ಪ್ರಾರ್ಥಿಸಿದ್ದ. ವೇದ-ವೈದಿಕ ಮೌಲ್ಯಗಳ ಅವನ ನಿಷ್ಠೆ ಇನ್ನೂ ಪ್ರಕಟವೂ ದೃಢವೂ ಆಗಿಲ್ಲದ ಅವನ ಆ ಅವಸ್ಥೆಯಲ್ಲಿ ಅವನಿಗೆ ಉಪಕರಿಸಬೇಕೋ ಬೇಡವೋ ಎಂದು ನಿಶ್ಚಯಿಸಲಾಗದೆ ಭೃಗು "ಯೋಚಿಸೋಣ. ಆಮೇಲೆ ಬಾ" ಎಂದು ಬಿಟ್ಟಿದ್ದ. ಅವಮಾನಿತನೂ ಕುಪಿತನೂ ಆ ಇಲ್ವಲ ಭರದ್ವಾಜರಲ್ಲಿಗೆ ಹೋದ! ಆ ವೇಳೆಗಾಗಲೇ ಭರದ್ವಾಜರಿಗೆ ಭೃಗುವಿನಿಂದ ಸಮಾಚಾರ

ಹೋಗಿದ್ದ, ಭರದ್ವಾಜರೂ, "ನೀನಿನ್ನೂ ಬಹಳ ತಪಸ್ಸು ಮಾಡಬೇಕು". ಎಂದು ಬಿಟ್ಟರು. ಇಲ್ವಲನಿಗೆ ಮುಖಕ್ಕೆ ಹೊಡೆದಂತಾಯಿತು! ಅಂಗಿರ ಸರಲ್ಲಿಗೆ ಹೋದ. ಅವರು "ನಿನ್ನ ಸಂತಾನ, ಲೋಕಕ್ಕೆ ಉದ್ಧಾರಕವಾಗುವ ನಂಬಿಕೆ ಮೊದಲು ನನಗೆ ಬರಲಿ, ಆಮೇಲೆ ಯಾಗಮಾಡಿಸುವೆ" ಎಂದು ಬಿಚ್ಚು ಮಾತಿನಲ್ಲೇ ಆಡಿದರು. ಬಹು ಕುಪಿತನಾಗಿ ಇಲ್ವಲ ನೇರವಾಗಿ ಅಗಸ್ತ್ಯರನ್ನೇ ಬಂದು ಪ್ರಾರ್ಥಿಸಿದ. ಎದುರು ನೋಡುತ್ತಿದ್ದ ಹಿರಿಯ ಅಗಸ್ತ್ಯರು. "ವತ್ಸ! ಈಗಲೇ ನಿನಗೆ ಸಂತಾನವಾದರೆ ಅದು ಮಹರ್ಷಿ ಗಳ ಸಂತಾನಕ್ಕೆ ಮಾರಕವಾದೀತು. ನೀನು ನಾಲ್ಕೈದು ಸಂವತ್ಸರ ನಮ್ಮ ಆಶ್ರಮದಲ್ಲೇ ವಾಸಿಸುವಂತೆ ನಮ್ಮೊಡನೆ ಅಗ್ನಿ ಶುಶ್ರೂಷೆ ಮಾಡುತ್ತಿರು. ನಿನ್ನ ರೇತಸ್ಸು ಸಾತ್ವಿಕವಾಯಿತೆಂದು ಅಗ್ನಿಪುರುಷ ನನಗೆ ಖಾತರಿ ಮಾಡಿಕೊಟ್ಟಾಗ ಖಂಡಿತ ನಿನಗೆ ಪುತ್ರೋತ್ಪಾದನೆ ಮಾಡಿಸುತ್ತೇನೆ'' ಎಂದು ಶಾಂತರಾಗಿಯೇ, ಪ್ರಜಾವತ್ಸಲ ಭಾವ ದಿಂದಲೇ ಹೇಳಿದರೂ, ಇಲ್ವಲನಿಗೆ ತಾಳಲಾರದ ಅಪಮಾನವೂ, ಅಗಸ್ತ್ಯಶಾಪದ ಭಯವೂ ಏಕಕಾಲಕ್ಕೇ ಉಂಟಾಗಿ, ಮನೋಭಾವ ವನ್ನು ಹೊರಗೆ ತೋರ್ಪಡಿಸದೆ, "ಗುರುಗಳೇ! ನನ್ನ ರಾಜ್ಯ ಅನಾಯಕಪಾಳೆಯ ಆಗಬಾರದು! ಅಲ್ಲೊಂದು ವ್ಯವಸ್ಥೆ ಮಾಡಿ ಬರು ತ್ತೇನೆ" ಎಂದು ಹೊರಟವನೇ ಅಂದಿನಿಂದ ಬೇರೊಂದು "ವ್ಯವಸ್ಥೆ'' ಯನ್ನೇ ಮಾಡಲಾರಂಭಿಸಿದ. ಬ್ರಹ್ಮ ಬ್ರಾಹ್ಮಣ, ಬ್ರಾಹ್ಮಣ್ಯ ದನಿರ್ಮೂಲ ನದ ವ್ಯವಸ್ಥೆ ಅದು !!

**ಯೇ ಸನ್ತಿ ವಿದ್ಯಾಃ ತಪಸೋಪಪನ್ನಾಃ**
**ತೇಷಾಂ ವಿನಾಶಃ ಪ್ರಥಮಂ ನು ಕಾರ್ಯಃ ॥**

ಎಂದೇ ತನ್ನ ರಾಜ್ಯದಲ್ಲಿ ತನ್ನ ಸಾಮಂತರಿಗೂ, ಪಾಳೆಯಗಾರರಿಗೂ, ಸಹಾಯಕರಿಗೂ, ದಂಡನಾಯಕರಿಗೂ ರಹಸ್ಯದಲ್ಲಿ ಸಂಸ್ಕೃತದಲ್ಲಿ ಸಂದೇಶ ಹೊರಡಿಸಿದ, "ಬ್ರಾಹ್ಮಣರಂತೆ ! ತಪಸ್ಸು ಮತ್ತು ವಿದ್ಯೆಗಳು ಅವ

ರನ್ನು ಪ್ರಬಲರನ್ನಾಗಿಸಿವೆಯಷ್ಟೆ! ಬಹು ಸಂಖ್ಯಾಕರಲ್ಲದ ಇವರನ್ನು ವಿದ್ಯಾವಿಹೀನರೂ ತಪೋಹೀನರು ಆಗಿ ಪರಿವರ್ತಿಸಿದರೆ ಅವರು ತಾವೇ ಹಾಳಾಗಿ, ನಮ್ಮ ರಾಜ್ಯ, ನಿರಾಬಾಧವಾಗಿ ಉಳಿಯುತ್ತದೆ. ಆದ್ದರಿಂದ ಯಾಗ, ದಾನ, ತಪಸ್ಸು, ಗುರುಕುಲ, ಎಲ್ಲೆಲ್ಲಿದ್ದರೂ, ನಡೆದರೂ ನಾನಾ ಉಪಾಯಗಳಿಂದ ಕೆಡಿಸಬೇಕು. ಬ್ರಾಹ್ಮಣರಿಗೆ ಯಾರೂ ಆಶ್ರಯ ಕೊಡಬಾರದು. ವೇದ, ದೇವರು ಪರಲೋಕಗಳ ಬಗ್ಗೆ ಮಾತಾಡುವ ವರನ್ನು ಕೊಲ್ಲಿರಿ! ಅವರ ನಾಲಗೆಗಳನ್ನು ಸೀಳಿಸಿ ಕಿತ್ತೆಸೆಯಿರಿ. ಈ ಲೋಕದ ಬಾಳುವೆಯೇ ಪರಮಧ್ಯೇಯವೆಂಬ, ಆಳುಗನ ಶ್ರಮವೆಲ್ಲ ಇದರ ಸೌಖ್ಯ ವೃದ್ಧಿಗೇ ಇರಬೇಕೆಂಬ ಧರ್ಮದೂರವಾದ ಶಂಬರಾಸುರನ ಆರ್ಥಿಕ ದೃಷ್ಟಿಯೇ ಪ್ರಚುರವಾಗಲಿ. ಅದು ಜನಪ್ರಿಯವಾಗಲು ಶ್ರಮವೂ ಇಲ್ಲ". ಎಂದು ಪ್ರಚಾರ ನಡೆಸಿದ! ಆಸುರೀ ದೃಷ್ಟಿ ಲೋಕಪ್ರಚಾರ ಮಾಡುದು ಹೀಗೆ.

* * *

ವಿದರ್ಭರಾಜ ವೈದರ್ಭನೂ ಒಮ್ಮೆ ಹೀಗೆ ಓಡಿಯ ಅಗಸ್ತ್ಯರ ಶರಣಾದ! "ಪ್ರಭೂ! ಮಹರ್ಷೇ! ನಾನು ಸಂತಾನ ಹೀನನಾದರೆ, ದಕ್ಷಿಣಾಪಥಕ್ಕೆ ದ್ವಾರವೆನಿಸಿದ ನನ್ನ ರಾಜ್ಯ, ಮುಂದೆ, ಅಸುರಾಕ್ರಾಂತ ವಾಗುವುದೇ ಖಂಡಿತ. ಅದು ತಮಗೆ ಸಮ್ಮತವೇ ? ಲೋಕಕಲ್ಯಾಣ ದೀಕ್ಷೆಯ ತಮಗೆ ಇದು ಹಿತವೆನಿಸೀತೇ ?" ಎಂದು ಯಾಚಿಸಿದ. ವೈದರ್ಭನ ಪತ್ನೀ ದಾಕ್ಷಾಯಣಿಯೂ ಋಷಿಪಾದಗಳಲ್ಲಿ ಶರಣಾದಳು. ಅಗಸ್ತ್ಯರು, "ಪಾರ ಕಾಲ ಇಲ್ಲಿದ್ದು ಅಗ್ನಿಶುಶ್ರೂಷೆ ನಡೆಸಿ, ದೇವತೆ ಗಳನ್ನು ಪ್ರಾರ್ಥಿಸುತ್ತೇನೆ; ಆಮೇಲೆ ನಿಮಗೆ ಉತ್ತರ" ಎಂದು ಹೇಳಿ ಮೌನವ್ರತಕ್ಕಿಳಿದರು.

ಅಗಸ್ತ್ಯಾಶ್ರಮ ಬಲು ವಿಚಿತ್ರವಿತ್ತು! ಬಹುವಿಸ್ತಾರವಾದ ಆ ಆಶ್ರಮದಲ್ಲಿ ಒಂದೊಂದು ದೇವತೆಯ ಉಪಾಸನಕ್ಕೂ ಒಂದು

ಪ್ರತ್ಯೇಕ ಸ್ಥಾನವಿತ್ತು. ಮೂಲದ ಗುರುಕುಲದ ಸುತ್ತ ಪಸರಿಸಿದ್ದ ಆ ದಿವ್ಯಸ್ಥಾನಗಳಲ್ಲಿ, ವಿಷ್ಣುಸ್ಥಾನ. ಮಹೇಂದ್ರಸ್ಥಾನ, ಸೂರ್ಯಸ್ಥಾನ, ಸೋಮಸ್ಥಾನ, ಭಗಸ್ಥಾನ, ಕೌಬೇರಸ್ಥಾನ, ಧಾತುಃಸ್ಥಾನ, ವಾಯು ಸ್ಥಾನ. ಅನಂತ (ನಾಗರಾಜ) ಸ್ಥಾನ, ಗಾಯತ್ರೀಸ್ಥಾನ, ವಸುಸ್ಥಾನ, ಪಾಶಹಸ್ತನಾದ ವಾರುಣಸ್ಥಾನ, ಕಾರ್ತಿಕೇಯ (ಕೌಮಾರ)ಸ್ಥಾನ, ಯಮಧರ್ಮಸ್ಥಾನ. – ಹೀಗೆ ನಾನಾ ದೇವತೆಗಳ ಆಲಯಗಳಿದ್ದವು. ಆಲಯಗಳೆಂದರೆ ಈಗಿನಂತೆ ಪ್ರತಿಮಾ, ಪ್ರತೀಕಗಳ ಆರಾಧನಾ ಸ್ಥಾನ ಗಳಲ್ಲ ! ಆ ಆ ದೇವತೆಗಳಿಗುಚಿತವೂ, ಪ್ರಸಿದ್ಧವೂ ಆದ ವೃಕ್ಷ ವನಸ್ಪತಿ ವಿಶೇಷಗಳನ್ನು ಅಲ್ಲಲ್ಲಿ ನೆಟ್ಟು ಬೆಳೆಸಿ, ಚೈತ್ಯಗಳನ್ನು ಮಾಡಲಾಗಿತ್ತು. ಆ ದೇವತೆಗಳಿಗುಚಿತವಾದ ಪುಷ್ಪಗಳಿಂದ, ಮಂತ್ರವಿಶೇಷಗಳಿಂದ, ಯಾಗವಿಶೇಷಗಳಿಂದ ತುಷ್ಟರಾದ ಆ ದೇವತೆಗಳು ಮಹರ್ಷಿಗೆ ಆಗಾಗ ಅಪೇಕ್ಷೆಯಾದಂತೆ ಕಾಣಿಸಿಕೊಂಡು, ರಹಸ್ಯವಾಗಿ ಸಂಭಾಷಣೆಯನ್ನು ಮಾಡುತ್ತಿದ್ದರು. ಒಂದು ಉತ್ತುಂಗ ವೃಕ್ಷ. ಅದರ ಸುತ್ತ ವಿಶಾಲ ವಾದ ಕಟ್ಟೆ; ಕಟ್ಟೆಯ ಮೇಲೆ ಯಜ್ಞವೇದಿಕೆ: ದೇವತೆಯು ಪ್ರಸನ್ನ ವಾಗಬೇಕಾದಲ್ಲಿ, ದರ್ಭೆ, ದೂರ್ವೆ, ತುಳಸೀ, ಸಮಿತ್ತುಗಳ ಕುರುಹು ಗಳು, ಧಾನ್ಯ ವಿಶೇಷಗಳು, ಅವರವರಿಗೆ ಉಚಿತವಾದ ಮಂಡಲಾಕಾರದ ತಾಂತ್ರಿಕ ಚಿತ್ರ, ಚಕ್ರಗಳು ಇವು ಯಾರನ್ನೂ ದಿಙ್ಮೂಢರನ್ನಾಗಿಸುತ್ತಿ ದ್ದವು! ಒಂದೊಂದು ಸ್ಥಾನಕ್ಕೂ ಅಷ್ಟಷ್ಟು ಅಂತರವಿದ್ದು, ಹತ್ತಿ ಪ್ಪತ್ತು ವಟುಗಳು ಸದಾ ಒಂದೊಂದರ ಮೇಲೂ ಹಗಲಲ್ಲಿ ಕೂತು ಆ ದೇವತೆಗಳಿಗೆ ವಿಶಿಷ್ಟವಾದ ಮಂತ್ರಗಳನ್ನು ಪಠಿಸುತ್ತಾ, ಅದು ಬ್ರಹ್ಮ ಲೋಕವೆಂಬ ಸಾತ್ವಿಕ ಭ್ರಮೆಯನ್ನು ಮೂಡಿಸುತ್ತಿದ್ದರು.

ಒಮ್ಮೆ ಇಬ್ಬರು ವಟುಗಳಲ್ಲಿ ಒಂದು ವಿಚಿತ್ರ ಸಂಭಾಷಣೆ ಏರ್ಪ ಟ್ಟಿತ್ತು;

ಪಶುಮಿತ್ರ : "ನಮ್ಮ ಗುರುಗಳು ಎಲ್ಲ ದೇವತೆಗಳಿಗೂ ಸ್ಥಾನ ಮಾಡಿದ್ದಾರೆ ! ರುದ್ರಸ್ಥಾನ ಏಕೆ ಮಾಡಲಿಲ್ಲವೋ ಏನೋ !"

ಸಹವೇಧಸ : "ದೇವರಹಸ್ಯವನ್ನು ಕೆದಕಬಾರದು: ಎಲ್ಲಿ ಯಾದರೂ ಗಟ್ಟಿಯಾಗಿ ಹೇಳೀಯೆ ! ಗುರುಗಳು ಶಪಿಸಿಯಾರು''

ಈ ಮಾತು ಅಲ್ಲೇ ವೃಕ್ಷದ ಹಿಂದೆ ನಿಂತಿದ್ದ ಕಿರಿಯ ಅಗಸ್ತ್ಯರಿಗೆ ಕಿವಿಗೆ ಬಿತ್ತು: ಕೂಡಲೇ ಮುಂಬಂದು ಅವರಿಗೆ ಎಚ್ಚರಿಸುತ್ತಾರೆ! "ಮೂಢ ಬಾಲರೇ ! ರುದ್ರನೆಂದರೆ ವೇದೋಕ್ತ ಅಗ್ನಿಯೇ ಎಂಬುದನ್ನು ನೀವು ಅರಿಯುವಾದರೆ ಈ ಗುರುಕುಲದಲ್ಲಿ ನಿಮಗೇನು ಕೆಲಸ? ಅಗ್ನಿ ಕಾರ್ಯ ನಡೆಯುವುದೆಲ್ಲ ರುದ್ರಸ್ಥಾನವೇ ! ಅನಾರ್ಯರ ಅರ್ಥದಲ್ಲಿ ಅಲ್ಲ. ಅಗ್ನಿಯೇ ನಮಗೆ ಪ್ರಥಮ ಉಪಾಸ್ಯದೈವ, ಸೃಷ್ಟಿ, ಸ್ಥಿತಿ, ಲಯ ಎಲ್ಲಕ್ಕೂ ಅವನೇ ಮೂಲಸ್ಥಾನ, ಮೂಲಕ್ಷೇತ್ರವೆಂದ ಮೇಲೆ ಬೇರೊಂದು ರುದ್ರಸ್ಥಾನವೇಕೆ ? ಪಾಮರರು ಭಾವಿಸುವ 'ರುದ್ರ ಸ್ಥಾನ' (ಸ್ಮಶಾನ) ಆಶ್ರಮದ ಆಚೆಯೇ ಇದೆಯಲ್ಲವೇ ? ವೈದಿಕ ಶ್ರದ್ಧೆಯನ್ನು ವಿಭಿನ್ನವಾಗಿಸುವ ಇಂಥ ಒಡಕು ಮಾತುಗಳು ಕುಲಪತಿ ಗಳ ಕಿವಿಗೆ ಬಿದ್ದರೆ ನಿಮ್ಮನ್ನು ಆಶ್ರಮಭ್ರಷ್ಟರನ್ನಾಗಿ ಮಾಡುವರು ಜೋಕೆ. ನಾಳೆಯಿಂದ ಇಂಥ ದೇವತಾಪ್ರತ್ಯೇಕತಾವಾದಗಳನ್ನು ಎತ್ತದಿ ರಲಿ" ಎಂದು ಅಪ್ಪಣೆಮಾಡಿ ಹೋದರು. ಅಲ್ಲಿಗೆ ಮುಗಿಯಿತು, ಕಿರಿಯ ವಟುಗಳ ಚೋದ್ಯಗಳು.

ವೈದರ್ಭ ಅರಸುದಂಪತಿಗಳು ವಾರಕಾಲ ಅಗ್ನಿಶುಶ್ರೂಷೆ ಮಾಡಿದರು. ಆ ವಾರ ಪೂರ್ತಾ ಹಿರಿಯ ಅಗಸ್ತ್ಯರು ಮೌನದಲ್ಲಿ ರುತ್ತಾ, ಭಗಸ್ಥಾನದ ಚೈತ್ಯದಡಿ ಯಾಗ ಮುಗಿಸಿ, ದೇವತಾ ದರ್ಶನಕ್ಕೆ ಕಾದರು, ಸೂರ್ಯೋದಯಕ್ಕೆ ಮೂರುವರೆ ಗಂಟೆ ಮುಂಚೆ ಭಗ

ದೇವತೆ ಋಷಿಯ ಮಾನಸದಲ್ಲಿ ಪ್ರತ್ಯಕ್ಷವಾಯಿತು. ಬಹು ಸುಂದರ ವಾದ, ಆದರೆ ಎರಡೂ ಕಣ್ಣು ತೆರೆಯದೆಯೇ ಮುಚ್ಚಿಕೊಂಡ ಭವ್ಯ ದೇವಾಕೃತಿ, ತೇಜೋಮಯವಾಗಿ, ಹಾರ, ಕೇಯೂರ, ಭೂಷಣ, ದಿವ್ಯವಸ್ತ್ರಾಲಂಕೃತವಾಗಿರುತ್ತಾ, ಸುಶಿಖಾಂತವಾಗಿ ಬಂಗಾರದ ಮೂರ್ತಿಯಂತೆ ಥಳಥಳನೆ ಹೊಳೆಯುತ್ತಿದ್ದ ಆ ಮೂರ್ತಿಯನ್ನು ಒಳಗಣ್ಣಿನಿಂದ ಸಾಕ್ಷಾತ್ಕಾರ ಮಾಡಿದ ಮಹರ್ಷಿ ಎದ್ದು ದಂಡಪ್ರಣಾಮ ಮಾಡಿದರು.

ಮಹರ್ಷಿ : "ದೇವ ! ಇಷ್ಟೊಂದು ಕರಾರು ವಾಕ್ಕಾಗಿ ಭಕ್ತ ರನ್ನನುಗ್ರಹಿಸಿ ಅವರೆದುರು ಪ್ರತ್ಯಕ್ಷನಾಗುವ ನಿನ್ನನ್ನು ಅರಿತವರೂ 'ಕುರುಡ ದೇವತೆ' ಎಂದು ಕರೆಯುವುದು ವಿಡಂಬನೆಯಲ್ಲವೇ ?"

ಭಗವಂತ : "ಮಹರ್ಷೇ ! ನನಗೆ ಕಣ್ಣುಂಟೆಂಬುದನ್ನು ಕಣ್ಣಿದ್ದ ಋಷಿಗಳು ಕಾಣುವರೆಂಬುದನ್ನು ನೀನು ಚೆನ್ನಾಗಿ ಬಲ್ಲೆ! ಆದರೂ ನಾನು ಸದಾ ಕಣ್ಣು ಮುಚ್ಚಿಗುವುದರಿಂದ ಪಾಮರರು ಹಾಗೆ ತಿಳಿದಿ ದ್ದಾರು ! ನಾನು ಭಕ್ತರಿಗೂ, ಭಕ್ತರಲ್ಲದವರಿಗೂ ಸೇರಬೇಕಾದ ಕರ್ಮಾ ಯತ್ತ ಫಲಗಳನ್ನು ನಿಷ್ಪಕ್ಷಪಾತವಾಗಿ ಕೊಡಬೇಕಾದ್ದರಿಂದ ಹಾಗೆ ಸದಾ ಕಣ್ಣು ಮುಚ್ಚಿರುತ್ತೇನೆ. ಕಣ್ಣು ಬಿಟ್ಟರೆ ನನಗೂ ಮನಸ್ಸು ವಿಚಲಿತ ಆದೀತಲ್ಲವೇ ? ನಾನು ಕೊಡುವುದೇ ಭಾಗ್ಯ, ಭಾಗಧೇಯ ಎಂಬುದನ್ನು ನನ್ನ ಹೆಸರಿನ ಸಂಬಂಧದಿಂದ ನಿರುಕ್ತಶಾಸ್ತ್ರ ನಿನಗೆ ತಿಳಿಸಿದೆ ಯಷ್ಟೆ ! ನನ್ನ ಹೆಸರಿನ ಸಂಬಂಧದಿಂದಲೇ ಭಕ್ತ, ಭಾಗವತ, ಭಗವಂತ ಶಬ್ದಗಳೂ ಹುಟ್ಟಿವೆಯೆಂದರೆ ಸಕಲ ಮೂಲವೂ ನಾನೆಂಬರ್ಥದಲ್ಲಿ ವೇದಶಬ್ದಗಳು ನನ್ನನ್ನು ಗೌರವಿಸುತ್ತವೆ. ನೋಡು, ನಾನು ಕಣ್ಣು ಮುಚ್ಚಿದರೂ ಎಷ್ಟು ಚೆನ್ನಾಗಿ ಕಾಣುತ್ತೇನೆ ? ಕಣ್ಣುತೆರೆದಿದ್ದರೂ ನಿಮ್ಮ ಮರ್ತ್ಯ ಮಾನವರು ಇಷ್ಟು ಚೆಲುವಾಗಿರುವುದುಂಟೇ ? ಇದೆಲ್ಲ

ಇರಲಿ ! ನೀನು ನನ್ನ ಸೌಂದರ್ಯ ಪ್ರಶಂಸೆಗಾಗಿ ನನ್ನನ್ನು ಕರೆಯಲಿಲ್ಲ ವಷ್ಟೆ !"

ಮಹರ್ಷಿ ; "ಪ್ರಭೊ ! ಸರ್ವಜ್ಞನಾದ ನೀನು ಆರ್ಯ ಸಂಸ್ಕಾರವುಳ್ಳ ಅರಸರಿಗೇಕೆ ಒಲಿಯಲಾರೆ ? ಅಥವಾ ಆಸುರೀ ಸಂತಾನವನ್ನು ಬೆಳೆಸುವ ಆಸೆ ದೇವತೆಯಾದ ನಿನ್ನನ್ನು ಕಾಡಬಹುದೇ ?

ಭಗವಂತ ; "(ನಕ್ಕು) ಓಹೋ ! ಆ ವಿದರ್ಭರಾಜ ನಿನ್ನ ಮೊರೆಹೊಕ್ಕಿದ್ದಾನಲ್ಲವೆ ? ಇರಲಿ, ಅವನಿಗೊಂದು ಅನುಗ್ರಹ ಮಾಡೋಣ. ಆದರೆ ನಾನು ಅಸುರರಿಗೂ, ಆರ್ಯ ಅರಸರಿಗೂ ಅವರವರದೆ ಕರ್ಮ ಗಳಂತೆಯೇ ಫಲಕೊಡುತ್ತಿರುವೆನಷ್ಟೆ ? ಇಲ್ವಲನಿಗೆ ನಾನು ಮಕ್ಕಳನ್ನು ಕೊಡದುದು ನಿನಗೆ ಗೊತ್ತಿದೆಯಲ್ಲ ? ನನ್ನ ಮೇಲೆ ಪಕ್ಷಪಾತದ ಆರೋಪವನ್ನು ನಿನ್ನಂಥ ಮಹರ್ಷಿ ಮಾಡಬಹುದೇ ?''

ಮಹರ್ಷಿ ; "ದೇವಾ! ನಾನು ಮಾಡಿದ್ದು ಆರೋಪವಲ್ಲ ! ಲೋಕ ಕಲ್ಯಾಣ ದೀಕ್ಷೆಯ ಉದ್ಗಾರ ಮಾತ್ರ. ಇಲ್ವಲನಿಗೆ ಸಂತಾನ ಬೇಡ. ಈ ವಿದರ್ಭದೊರೆಗೆ ? ಇತರ ಆರ್ಯ ಅರಸರಿಗೆ ? ಅಂಥ ಸಂತಾನವಿಲ್ಲದೆ ಆಗಸ್ತ್ಯ ಲೋಕದಲ್ಲಿ ಏನು ಸಾಧನೆ ಮಾಡುವನೆಂದು ತಾವು ಬಯಸುತ್ತೀರಿ ? ಪ್ರಭು ! ನಾನು ಬ್ರಾಹ್ಮಣ ಸಂತಾನವನ್ನೂ ಕ್ಷತ್ರಿಯ ಸಂತಾನವನ್ನೂ ಬೆಳೆಸುವ ಸಲುವಾಗಿ ಅಲ್ಲವೆ ತಪಸ್ಸು ಮಾಡು ತ್ತಿರುವುದು ?"

ಭಗವಂತ : "ವಿದರ್ಭದೊರೆಗೆ ಸಂತಾನವಿಲ್ಲವೆಂದು ಯಾರು ನಿನಗೆ ಹೇಳಿದರು ?''

ಮಹರ್ಷಿ : (ಬಹುಸಂತುಷ್ಟನೂ, ಚಕಿತನೂ ಆಗಿ, ಮತ್ತೆ ಸಾಷ್ಟಾಂಗ ನಮಸ್ಕಾರ ಹಾಕಿ) : "ದೇವೋತ್ತಮ ! ನನ್ನ ಯಾಗ

ಸಾರ್ಥಕವಾಯಿತು ! ಎಂಥ ಪುತ್ರರತ್ನವನ್ನು ಆ ದಂಪತಿಗಳಿಗೆ ಅನುಗ್ರಹಿಸುವೆ ?"

ಭಗವಂತ : "ಮಹರ್ಷೇ ! ಅವಸರ ಪಡಬೇಡ. ಪುತ್ರಸಂತಾನದಿಂದ ಮಾತ್ರ ಲೋಕ ಕ್ಷೇಮವೆಂದು ಭಾವಿಸಬೇಡ ! ನಿನ್ನನ್ನು ಹಡೆದವಳೂ ತಾಯಿಯಷ್ಟೆ ? ವಿದರ್ಭರಾಜನಿಗೆ ಹೆಣ್ಣು ಸಂತಾನವಾಗಲು ಮಾತ್ರ ಕರ್ಮಫಲವಿದೆ. ಅವನ 'ಭಾಗ್ಯ' ಅದುವೇ ! ಎಂಥ ಉಜ್ಜ್ವಲ ಚಾರಿತ್ರದ ಹೆಣ್ಣು ಅವಳಾಗುವಳೆಂದು ನೋಡುವೆಯಂತೆ. ಅವಳು ನಿನಗೇ ಸೊಸೆಯಾಗಿ, ಅವಳೂ ಮಹರ್ಷಿಯಾಗಿ ನಿನ್ನ ಸಂತಾನವನ್ನೂ ಮುಂದುವರೆಸಿ ಲೋಕಪಾವನೆಯಾಗುತ್ತಾಳೆ- ಇದು ದೇವರಹಸ್ಯ- ಯಾರಿಗೂ ಮುಂಚೆ ತಿಳಿಯಬಾರದು. ಅರಸನಿಗೂ, ನಿನ್ನ ಪುತ್ರನಿಗೂ ಸಹ. ಇದಕ್ಕೆ ನೀನು ಕಾರಣಪುರುಷನಾಗುವುದೂ ನಿನ್ನ ಭಾಗ್ಯ".

ದೇವತೆ ಅಂತರ್ಧಾನವಾಯಿತು ! ಆಗಸ್ತ್ಯರು ಧನ್ಯಭಾವದಲ್ಲಿ ಬಹುಹೊತ್ತು ಹಾಗೇ ಕುಳಿತಿದ್ದರೊ. ಮುಖವೆಲ್ಲ ಬೆವರಿ, ಮುತ್ತಿನಂತೆ ಬೆವರ ಹನಿಗಳು ಮುಖವನ್ನಲಂಕರಿಸಿದ್ದವು. ಮಹರ್ಷಿಯ ಮೌನ ಮುರಿಯಿತು, "ವಿಷ್ಣು, ವಿಷ್ಣು!'' ಎಂದು ಮಗನನ್ನು ಕರೆದರು. ಕಂದೆರೆದ ಮಹರ್ಷಿಪಾದಗಳಲ್ಲಿ ಕಿರಿಯ ಅಗಸ್ತ್ಯರು ನಮಸ್ಕರಿಸಿ ಎದ್ದರು, ವೈದರ್ಭದಂಪತಿಗಳನ್ನು ಕರೆತರುವಂತೆ ಆಜ್ಞೆಯಾಯಿತು. ಭಗದೇವತೆಯ ನಕ್ಷತ್ರವಾದ ಪೂರ್ವಫಲ್ಗುನೀ ನಕ್ಷತ್ರದಲ್ಲಿ ಪೂರ್ಣಾಹುತಿಯಾಗುವಂತೆ ಪುತ್ರಕಾಮೇಷ್ಟಿಯನ್ನು ಸ್ವಯಂ ಅಗಸ್ತ್ಯರೇ ಅಧ್ವರ್ಯುವಾಗಿ ನಡೆಸಿದರು. ಸಪ್ತರ್ಷಿಗಳೂ ಅಸಂಖ್ಯಾತ ಮಹರ್ಷಿಮಂಡಲವೂ ಸೇರಿ ಆ ಯಾಗಭೂಮಿಯೆಲ್ಲ ದೇವಭೂಮಿಯಾಗಿ ಹೋಯಿತು. ನಹಸ್ರಾರು ಬಾಲವೃದ್ಧ ಮಹರ್ಷಿಗಳ ಸ್ವರದಿಂದ ಮಂತ್ರ ಹೊರಹೊಮ್ಮಿತ್ತು.

**ಭಗೋಃ ಹ ದಾತಾ | ಭಗ ಇತ್ಪ್ರದಾತಾ | ಭಗೋ ದೇವೀಃ**
**ಫಲ್ಗುನೀರಾವಿವೇಶ | ಭಗಸ್ಯೇತ್ತಂ ಪ್ರಸವಂ ಗಮೇಮ ....|**

ವೈದರ್ಭದಂಪತಿಗಳಿಗೆ ಯಾಗಾಂತ್ಯದಲ್ಲಿ ಯಾಗಶೇಷವಾದ ಚರು ವನ್ನು ನೀಡಲಾಯಿತು. ದಾಕ್ಷಾಯಣೀ ದೇವಿಯು ಭಕ್ತಿಯಿಂದ ಅದನ್ನು ಪ್ರಾಶನ ಮಾಡಿದಳು. ಒಂದು ದೈವೀ ತೇಜಸ್ಸು ಅವಳನ್ನು ಹೊಕ್ಕಂತೆ ಅವಳಿಗೆ ಅನುಭವವಾಯ್ತು.

ಅಗಸ್ತ್ಯರು ಹೇಳಿದರು . "ದೊರೆಯೆ! ಇಂದಿಗೆ ಹತ್ತನೇ ತಿಂಗಳಲ್ಲಿ ನಿನಗೆ ಪುತ್ರಿಯೊಬ್ಬಳು ಜನಿಸುವಳುಃ ಹೆಣ್ಣೆಂದು ತಿರಸ್ಕರಿಸ ಬೇಡ. ಅವಳು ಸ್ವಯಂ ಋಷಿಯಾಗಿ ವೇದಮಂತ್ರಗಳನ್ನು ಸಾಕ್ಷಾತ್ಕರಿ ಸುವಳು. ಮಹರ್ಷಿಯೊಬ್ಬನ ಕೈ ಹಿಡಿಯುವಳು. ಅವಳ ಮೂಲಕ ನಿನ್ನ ವಂಶ ಬೆಳೆಯುವುದು. ನಿರಾಶನಾಗಬೇಡ. ಅಂಥ ಸುಂದರಿಯು ಅಪ್ಸರೆಯರಲ್ಲೂ ಇರಲಾರಳು, ಮಗು ಹುಟ್ಟಿದ ಮೇಲೆ ನಾನೇ ಹೆಸರಿಡುತ್ತೇನೆ. ಇನ್ನು ರಾಣಿ ಇಲ್ಲಿಯೇ ಇದ್ದು ಪ್ರಸವಕಾಲ ದತನಕ ನಮ್ಮ ಶುಶ್ರೂಷೆಯಲ್ಲಿರಲಿ. ನಿನಗೆ ಅವಕಾಶವಾದಾಗ ನೀನೂ ಬಂದು ಸೇವೆ ಮಾಡುತ್ತಿರು.' ಎಂದು ಆಶೀರ್ವದಿಸಿದರು.

* * *

ಹಾಗೆ ಹತ್ತನೇ ತಿಂಗಳಲ್ಲಿ ಹುಟ್ಟಿದ ಕನ್ಯಾರತ್ನವೇ ಲೋಪಾ ಮುದ್ರೆ! ಜಿಂಕೆಯ ಕಂಗಳು. ಸಿಂಹದ ಸೊಂಟ, ಬಂಗಾರದ ಮೈಬಣ್ಣ, ಕೋಗಿಲೆಯ ಕಂಠ, ತಾವರೆಯ ಎಸಳಿನ ಕಂಗಳ ನೋಟ. ಮಲ್ಲಿಗೆ ಅರಳಿ ದಂತೆ ನಗೆ, ಆನೆಯಂತೆ ಗಂಭೀರ ನಡಗೆ, ನವಿಲಿನ ವೈಯ್ಯಾರ,—ಹೀಗೆ ಪ್ರಕೃತಿಸೃಷ್ಟಿಯ, ಪ್ರಾಣಿ. ಪಶುಪಕ್ಷಿಗಳ ಎಲ್ಲ ಸೌಂದರ್ಯಗಳ (ಮುದ್ರೆಗಳ)ನ್ನೂ (ಲೋಪ)–ತಿರಸ್ಕಾರ ಮಾಡುವಂತೆ, ಸೌಂದರ್ಯದ

ಗಣೆಯಾಗಿ ಜನಿಸಿದ್ದರಿಂದ ಮಹರ್ಷಿಯೇ ಅವಳಿಗೆ ಲೋಪಾಮುದ್ರಾ ಎಂದು ಹೆಸರಿಟ್ಟು ಆಶೀರ್ವದಿಸಿದರು.

ನಾಮಕರಣವಾದೊಡನೆ ವೈದರ್ಭದಂಪತಿಗಳು ಸಂತಸದಿಂದ ತಮ್ಮ ರಾಜಧಾನಿಗೆ ತೆರಳಿದರು. ಸಪ್ತರ್ಷಿ ಮಂಡಲ ಈ ಕನ್ಯಾಮಣಿ ಯಿಂದ ಬಹಳ ನಿರೀಕ್ಷೆ ಮಾಡಿ, ಕಾಲಕಾಯುತ್ತಿತ್ತು. ಆಗಾಗ ಆಶ್ರಮಕ್ಕೆ ಬರುತ್ತಿದ್ದುದರಿಂದ ಕಿರಿಯ ಅಗಸ್ತ್ಯರಿಗೂ ಲೋಪಾಮುದ್ರೆಗೂ ಬಾಲ್ಯದಿಂಲೇ ಪರಿಚಯವೂ, ಒಂದು ವಿಶೇಷವಾದ ಸಲುಗೆಯೂ, ಒಂದು ದೈವೀ ಆಕರ್ಷಣೆಯೂ ಪರಸ್ಪರವಾಗಿ ಬೆಳೆಯಿತು.

ಹಿರಿಯ ಅಗಸ್ತ್ಯರು ಮಗನಿಗೆ ಆಗಾಗ ಬೋಧಿಸುತ್ತಿದ್ದ ಉಪ ದೇಶವಿದು. "ಪುತ್ರ ! ಮನಸ್ಸಿನ ಹುಚ್ಚು ಭಾವನೆಗಳಿಗೆ ವಶವಾದವ ನಿಂದ ಯಾವ ಲೋಕ ಕಲ್ಯಾಣ ಕಾರ್ಯವೂ ಆಗುವುದಿಲ್ಲ. ದೇವರು ನಿನ್ನ ನ್ನೊಂದು ಮಹತ್ಕಾರ್ಯಕ್ಕೆ ಕರೆಸಿದ್ದಾನೆ, ಈ ಭೂಮಿಗೆ. ಆ ಗುರಿ ಏನೆಂದು ನಿನಗೇ ಸಕಾಲದಲ್ಲಿ ತಿಳಿಯುವುದು. ಅದನ್ನು ಹುಸಿ ಮಾಡ ಬೇಡ. ಅದಕ್ಕಾಗಿ ಉಗ್ರ ಬ್ರಹ್ಮಚರ್ಯವನ್ನು ನೀನು ನಡೆಸುವುದಿದೆ, ದೇವ ರಹಸ್ಯವನ್ನು ನಾನು ಬಿಚ್ಚಿ ಹೇಳುವಂತಿಲ್ಲ." ಎನ್ನುತ್ತಾ, ಭಾವ ಆವೇಶದಿಂದ ತಾವೇ ಪುಲಕಿತರಾಗಿ ಮಾತು ನಿಲ್ಲಿಸಿ, ಆನಂದ ಬಾಷ್ಪ ಹಾಕುವರು! ಇಂಥ ಹಲವು ಸಾವಿರ ಪ್ರಸಂಗಗಳನ್ನು ಕಂಡಿದ್ದ ಕಿರಿಯ ಅಗಸ್ತ್ಯರಿಗೆ ಆಗೆಲ್ಲ ಮೈಯ್ಯಲ್ಲಿ ವಿದ್ಯುತ್ ಸಂಚಾರವಾಗುತ್ತಿತ್ತು. ಮರೆಯಲಾಗದ ಸಿಡಿಲ ಮಾತಿನಂತೆ ಅದು ಅಷ್ಟು ಸ್ಪಷ್ಟವಾಗಿ ಕಿರಿಯ ಮಹರ್ಷಿಯ ಮನದಲ್ಲಿ ಅಚ್ಚೊತ್ತಿತ್ತು.

* * *

ಗುರುವರ್ಗ್ಯನ ಮರಣ ಶಯ್ಯೆಯ ವಾರ್ತೆ ಕೇಳಿ ವೈದರ್ಭದಂಪತಿ ಗಳೂ ಲೋಪಾಮುದ್ರೆಯೂ ಅಂದು ಅಗಸ್ತ್ಯಾಶ್ರಮಕ್ಕೆ ಬಂದಿದ್ದರು.

ಅಕಸ್ಮಾತ್ ಆಶ್ರಮದ ದ್ವಾರದಲ್ಲೇ ಕಿರಿಯ ಅಗಸ್ತ್ಯರು ಯಾರನ್ನೋ ಕಳುಹಲು ಬಂದಿದ್ದು, ಈ ರಾಜದಂಪತಿಗಳನ್ನು ಸ್ವಾಗತಿಸುವಂತಾಯ್ತು! ಮೊದಲು ರಾಜರಾಣಿಯರು ರಥದಿಂದಿಳಿದೊಡನೆಯೇ, ಲೋಪಾಮುದ್ರೆಯೂ ರಥದಿಂದಿಳಿದುದನ್ನು ಅಗಸ್ತ್ಯರು ಕಂಡರು! ಕ್ಷಣ ಕಾಲ ಅವರ ಕಂಗಳೂ ರಾಜಕುವರಿಯ ಕಂಗಳೂ ಸಂಧಿಸಿದವು. ಕಿರಿಯ ಮಹರ್ಷಿ, ಮನಸ್ಸು ವಿಚಲಿತವಾಯಿತೆನ್ನುವಷ್ಟರಲ್ಲಿ ಅನ್ಯತ್ರ ದೃಷ್ಟಿ ಹೊರಳಿಸಿದರು. ಲೋಪಾಮುದ್ರೆಯ ಸಖಿ ಇದನ್ನು ಗಮನಿಸಿದಳು. ಅರಸು ಪರಿವಾರದವರು ಅಷ್ಟರಲ್ಲಿ ಬಂದು ಒಡೆಯರ ಸುತ್ತ ನಿಂತು ಆಶ್ರಮಸ್ಥ ಋಷಿ, ವಟುಗಳ ಗಮನ ಸೆಳೆದರು. ಅರ್ಘ್ಯಪಾದ್ಯ ಸತ್ಕಾರ ನಡೆದು. ಮಧುಪರ್ಕವಾಗಿ, ಅತಿಥಿಗಳು ನೇರವಾಗಿ ಹಿರಿಯ ಅಗಸ್ತ್ಯರ ಹಾಸಿಗೆ ಬಳಿಸಾರ್ದು, ಅವರ ಪಾದಗಳನ್ನು ಮುಟ್ಟಿ, ಕಣ್ಣಿಗೊತ್ತಿಕೊಂಡು ಕುಳಿತರು.

ಯಾರೂ ಮಾತಾಡದ ಆ ಸಭೆ ಅಂದು ಬಹು ಗಂಭೀರವಾಗಿದ್ದಿತು. ಹಿರಿಯ ಮಹರ್ಷಿಯ ಪಾದಗಳ ಬಳಿ ಸ್ವಯಂ ರಾಜಕುವರಿಯೇ ಕುಳಿತು, ಸಣ್ಣ ಮಗುವಿನಂತೆ ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ಅರಸ ದಂಪತಿಗಳ ದುಃಖ ಕಟ್ಟೆಯೊಡೆಯಲು ಅದು ಕಾರಣವಾದರೂ, ಹೇಗೋ ಸ್ಥಿಮಿತಕ್ಕೆ ತಂದುಕೊಂಡರು.

ರಾಜಕುಮಾರಿಯ ಕಣ್ಣೀರು ಕಂಡು, ಮಹರ್ಷಿಯ ತಲೆಯ ಬಳಿ ಕುಳಿತಿದ್ದ ಕಿರಿಯ ಅಗಸ್ತ್ಯರಿಗೂ ಕಣ್ಣಂಚು ಒದ್ದೆಯಾಯಿತು! ಮತ್ತೆ ಇಬ್ಬರ ದೃಷ್ಟಿಗಳೂ ಒಂದಾದವು.

---

## ೫. ಇಲ್ವಲನ ತಂತ್ರ !

ಹಿರಿಯ ಅಗಸ್ತ್ಯರು ಯಜ್ಞಮುಗಿದ ವೇದಿಯ ಅಗ್ನಿಯಂತೆ ಕ್ರಮೇಣ ಸಂಶಾಂತರಾಗುತ್ತಿದ್ದರೂ, ಮನಸ್ಸಂಕಲ್ಪ ಬಲದಿಂದ ಇನ್ನೂ ಜೀವ ಹಿಡಿದಂತೆ ತೋರುತ್ತಿದ್ದಿತು. ಆಹಾರ ತೊರೆದು ಅವರು ಎಷ್ಟೋ ದಿನವಾಗಿದ್ದು ಗಂಗಾಜಲವನ್ನು ಮಾತ್ರ ಆಗಾಗ ಶಿಷ್ಯರು ಅವರ ಬಾಯಲ್ಲಿ ಹಾಕುತ್ತಿದ್ದರು. "ತಂ ಅಗ್ನಿಮಿವ ಸಂಶಾಂತಂ," "ಸಮುದ್ರಮಿವ ಸಂಶುಷ್ಕಂ" ಎಂಬ ಹೋಲಿಕೆಗಳು ಅವರಿಗೇ ಒಪ್ಪುವಂತಿದ್ದವು. ಇದೇ ಅಗಸ್ತ್ಯರು ಹಿಂದೆ ಅಸಾಧ್ಯ ಚರಿತೆಗಳನ್ನೆಲ್ಲ ಮೆರೆದರೇ ! ಎಂದು ನಂಬುವುದೇ ಕಷ್ಟವಾದಂತೆ ಈಗಿನ ಅವರ ಸ್ಥಿತಿ ಇದ್ದಿತು. ಅವರು ಬೇಕಾದಾಗ ಪ್ರಾಣ ಬಿಡಬಲ್ಲ ಯೋಗಿಗಳಾಗಿಯೂ, ಅವರ ಸ್ಥಿತಿ ತೀರಕ್ಷೀಣಿಸಿಯೂ, ಅವರು ಪ್ರಾಣಧಾರಣೆ ಮಾಡಿದ ರೀತಿಯನ್ನು ಕಂಡವರಿಗೆ, ನಿಸ್ಸಂಶಯವಾಗಿ, ಅವರ ಮನದಲ್ಲೇನೋ ಇನ್ನೂ ಒಂದು ಸುಪ್ತ ಬಯಕೆ ಇರುವುದೂ, ಅದು ನೆರವೇರುವ ಆಸೆ ಉದಿಸಿದೊಡನೆಯೇ ಅವರು ಜೀಹ ತೊರೆಯಬಹುದೆಂದೂ ನಿಚ್ಚಳವಾಗಿ ಅರಿವಾಗುತ್ತಿತ್ತು. ಆ ಬಯಕೆ ಏನಿರಬಹುದು ? ಕಿರಿಯ ಅಗಸ್ತ್ಯರೋ, ಲೋಪಾಮುದ್ರೆಯೊ, ವೈದರ್ಭನೋ ಊಹಿಸಬಲ್ಲರೇ ?

ಆರ್ಯಾವರ್ತದ ದೊರೆಗಳು ಒಬ್ಬೊಬ್ಬರಾಗಿ ಮಹರ್ಷಿಯ ದರ್ಶನ ಪಡೆದು ಹೊರಡುತ್ತಾ, ದಿನಂಪ್ರತಿ ಬರುವ, ಹೋಗುವ, ಅರಸರ ಸಂಖ್ಯೆಗೆ ಏನೂ ಕಡಿಮೆ ಇರಲಿಲ್ಲ- ಆಶ್ರಮದಲ್ಲಿ ಅತಿಥಿಸತ್ಕಾರಕ್ಕೇನೂ ಕೊರತೆ ಇರಲಿಲ್ಲ. ಆಶ್ರಮದ ಪರಿಸರದಲ್ಲೇ ಉತ್ತಮ ವ್ಯವಸಾಯದ ಭೂಮಿಯೂ. ದೊಡ್ಡ ಗೋಶಾಲೆಯೂ, ಅಲ್ಲಿ ದುಡಿಯುವ,

ಶುಶ್ರೂಷಾಪರರಾದ ಸಹಸ್ರಗಟ್ಟಳೆ ವಟು-ವಿದ್ಯಾರ್ಥಿಗಳೂ, ಅಧ್ಯಾಪಕರೂ. ಮೇಲ್ವಿಚಾರಕರೂ, ಇವರಿಗೆಲ್ಲ ಆಹಾರ ಸಿದ್ಧಪಡಿಸುವ ಋಷಿ ಪತ್ನಿಯರೂ, ಅಡುಗೆಯ ಶೂದ್ರರೂ, ಧಾನ್ಯದವಸಗಳನ್ನು ಶೇಖರಿಸಿಡುವ ಸುವ್ಯವಸ್ಥಿತ ಕಣಜಗಳೂ ಇದ್ದು, ಆ "**ಆಶ್ರಮ**" ಅನ್ವರ್ಥವಾಗಿಯೇ ಶ್ರಮವಹಿಸಿ ದುಡಿಯುವ ತಾಪಸರ ದಿವ್ಯತಾಣವಾಗಿತ್ತು.

ಬರುವ ಒಬ್ಬೊಬ್ಬ ದೊರೆಯೂ ಆಶ್ರಮಕ್ಕೆ ಕಾಣಿಕೆಯಾಗಿ ದವಸ ಧಾನ್ಯಗಳನ್ನೂ, ಹೊನ್ನನ್ನೂ, ಮಣಿಕನಕ ಭೂಷಣಗಳನ್ನೂ ತಂದು ಅರ್ಪಿಸುತ್ತಿದ್ದರು. ಹೊನ್ನು, ರಾಜರ ಆತಿಥ್ಯಕ್ಕೂ, ಅರಸರ ಕಾಣಿಕೆಗೂ ವಿನಿಯೋಗವಾಗುತ್ತಿತ್ತು. ಮಣಿಕನಕಭೂಷಣಗಳು ಆಶ್ರಮದ ನಾನಾ ದೇವತೆಯ ಸ್ಥಾನಗಳ ಅಲಂಕಾರಕ್ಕೂ, ಗೋಶಾಲೆಯ ಗೋವುಗಳ ಶೃಂಗಾರಕ್ಕೂ ವಿನಿಯೋಗವಾಗುತ್ತಿತ್ತು. ಚೀನಾಂಬರಗಳನ್ನು ಅರಸರು ತಂದು ಕಾಣಿಕೆ ಇತ್ತರೂ, ಅವು ಇತರ ಅರಸರ ಸತ್ಕಾರಕ್ಕೇ ವಿನಿಯೋಗವಾಗುತ್ತಿದ್ದು, ಅರಸರ ಸಂಸರ್ಗದಿಂದ ಆಶ್ರಮದ ನಿಯಮಗಳಾಗಲೀ ಸರಳತೆಯಾಗಲಿ, ಕಠಿಣ ಜೀವನ ಕ್ರಮವಾಗಲೀ, ಏನೂ ಚ್ಯುತಿಬಾರದೆಯೇ ನಡೆದಿತ್ತು. ಹಲವು ಅರಸರು ಉತ್ತಮ ಗೋವುಗಳನ್ನೂ ಕರುಗಳನ್ನು ಮಾತ್ರ ಕಾಣಿಕೆಯಾಗಿ ತರುತ್ತಿದ್ದರು ! ರಾಜಪುತ್ರರನ್ನೂ ಅಲ್ಲಿ ವಿದ್ಯಾರ್ಜನೆಗಾಗಿ ಬಿಟ್ಟುಹೋಗುತ್ತಿದ್ದರು, ರಾಜಪುತ್ರಿಯರಿಗೂ ಅಧ್ಯಯನಕ್ಕೆ ಅಲ್ಲಿ ಅವಕಾಶವಿದ್ದು, ಅವರನ್ನು ಸೂಕ್ಷ್ಮ ಪರೀಕ್ಷೆಗೊಳಪಡಿಸಿ ಆಯ್ದುಕೊಳ್ಳಲಾಗುತ್ತಿತ್ತು. ಸ್ವಯಂ ಲೋಪಾಮುದ್ರೆಯೂ ಐದಾರು ವರ್ಷ ಹಾಗೆ ಅಲ್ಲಿ ಓದಿ, ಋಷಿಪತ್ನಿಯರ ಉಸ್ತುವಾರಿಯಲ್ಲಿ ಕಠಿಣ ಕ್ರಮಜೀವನಕ್ಕೆ ಹೊಂದಿ ಹಿಗ್ಗಿದ್ದವಳು

ಕೋಸಲದ ಪೌರುಕುತ್ಸ, ಹಸ್ತಿನಾವತಿಯ ಅನಸ್ವಾ, ಮಾಳವದ ಬ್ರಧ್ನಾಶ್ವ, ಗಂಗಾದ್ವಾರದ ಶ್ರುತರ್ವಾಣ, ಪಂಚನದ ಪ್ರಾಂತದ ಸಿಂದು

ಣೇಣ, ವಂಗದ ಇಂದ್ರಸೇನ, ಪುಂಡ್ರದೇಶದ ವೀರಸಿಂಹ, ಮದ್ರದ ಶೂರಸೇನ, ಅವಂತಿಯ ಮಹಾಭೋಜ, ಗಾಂಧಾರದ ಮಕರಧ್ವಜ ಮೊದಲಾದ ಔತ್ತರೇಯ ಅರಸರೆಲ್ಲ ಹಾಗೆ ಬಂದು ಹೋಗಿ ಆಗಿತ್ತು.

ದಕ್ಷಿಣದಲ್ಲಿ ಮಾಹಿಷ್ಮತಿಯ ಹೈಹಯ ಸಹಸ್ರಾರ್ಜುನ ಇನ್ನೂ ಬಂದಿರಲಿಲ್ಲ. ಕೃಷ್ಣವೇಣೀ ನದಿಯಿಂದ ಹಿಡಿದು ಕಾವೇರಿಯತನಕದ ಪ್ರಾಂತವೆಲ್ಲ ಆಗ ಇಲ್ವಲನ ವಶವಾಗಿದ್ದು, ಅವನು ಚಕ್ರವರ್ತಿಯಾಗುವ ಕನಸುಕಾಣುತ್ತಿದ್ದ. ಅವನೂ ಮಹರ್ಷಿಯ ದರ್ಶನಕ್ಕೆ ಬಂದಿರಲಿಲ್ಲ. ದ್ರಾವಿಡವೆಂದು ಆಗ ಖ್ಯಾತವಾದ ಕಾವೇರಿಯ ದಕ್ಷಿಣಸೀಮೆಯಲ್ಲಿ ಹೇಳಿಕೊಳ್ಳಬಲ್ಲ ಪರಾಕ್ರಮದ ಅರಸರಾರೂ ಇಲ್ಲದೆ, ಅಲ್ಲಿನ ಸಣ್ಣ ಪುಟ್ಟ ಅರಸೊತ್ತಿಗೆಗಳು ಇಲ್ವಲನಿಗೇ ಕಪ್ಪಕೊಡುತ್ತಿದ್ದವು. ಅಗಸ್ತ್ಯರೆಂಬುವರೊಬ್ಬರು ಇರುವರೆಂಬ ಅರಿವೂ ಸಹ ಅವರಲ್ಲಿ ಅನೇಕರಿಗೆ ಇದ್ದಂತೆ ಕಾಣಲಿಲ್ಲ ಆಕಾಲದಲ್ಲಿ! ಕುಂತಲ, ಕೇರಳ, ಪಾಂಡ್ಯಗಳೆಂದು ಅಮೇಲೆ ಪ್ರಸಿದ್ಧವಾದ ಭಾಗಗಳಲ್ಲಿ ನಿಷಾದರೂ, ರಾಕ್ಷಸರೂ ಆಳುತ್ತಿದ್ದು ಅವರೆಲ್ಲ ಲಂಕೆಯ ಅರಸರಿಗೆ ಅಧೀನರಾಗಿದ್ದರು. ಇವರಾರೂ ಅಗಸ್ತ್ಯರನ್ನು ಕಾಣಬರುವ ಪ್ರಸಂಗವೇ ಇರಲಿಲ್ಲ.

ಸಹಸ್ರಾರ್ಜುನ ಆಗ ಇಲ್ವಲನನ್ನು ಪ್ರಬಲನೆಂದು ಪರಿಗಣಿಸಿರಲಿಲ್ಲ. ಇಬ್ಬರಲ್ಲೂ ಒಂದು ಬಗೆಯ ಸ್ನೇಹವೂ ಇತ್ತು. ಸಹಸ್ರಾರ್ಜುನ ದತ್ತಾತ್ರೇಯರ ವರದಿಂದ ಹುಟ್ಟಿದವನೆಂಬ ಪ್ರಸಿದ್ಧಿ ಇದ್ದು, ಅವನು ಆಗ ಸಾಕಷ್ಟು ಧಾರ್ಮಿಕನಾಗಿಯೂ ಇದ್ದಕಾಲ. ನರ್ಮದೆಯಿಂದ ಗೋದಾವರೀವರೆಗಿನ ಪ್ರಾಂತಕ್ಕೆ ಅರಸನಾಗಿದ್ದ ಅವನಿಗೆ ಉತ್ತರದ ಮತ್ತು ದಕ್ಷಿಣದ ಜನರ ಸಂಸ್ಕೃತಿಗಳನ್ನು ಬೆಸೆದು ಭದ್ರಮಾಡುವ ಅವಕಾಶ ಬೇಕಾದಷ್ಟಿದ್ದರೂ, ಅವನು ಆಕಡೆ ಲಕ್ಷ್ಯಕೊಡದೆ, ತನ್ನ ರಾಜ್ಯದಲ್ಲಿ

ತಾನು ತೃಪ್ತನಾಗಿ, ವಿಶಾಲಭಾರತದ ದೃಷ್ಟಿಯನ್ನೇ ಅವಲಂಬಿಸದೇ, ಋಷಿಮುನಿಗಳನ್ನೂ ಬಹಳ ಹಚ್ಚಿಕೊಂಡಿರಲಿಲ್ಲ.

**ಕಾರ್ತವೀರ್ಯಾರ್ಜುನೋ ನಾಮ ರಾಜಾ ಬಾಹುಸಹಸ್ರವಾನ್ ।**
**ಯಸ್ಯ ಸ್ಮರಣಮಾತ್ರೇಣ ನಷ್ಟದ್ರವ್ಯೋಽಪಿ ಲಭ್ಯತೇ ॥**

ಎಂಬ ಪ್ರಶಂಸೆ ಅವನ ಬಗೆಗೆ ಆಮೇಲೆ ಪುರಾಣಪ್ರಸಿದ್ಧವಾದುದ್ದು. ಆಗತಾನೇ ಉದಿಸಿ, ಜನರ ಬಾಯಲ್ಲಿ ಪ್ರಸಾರವಾದ ಧರ್ಮದ ಕಾಲ ಅದು. ಕಳ್ಳಕಾಕರ ಬಾಧೆ ಎಳ್ಳಷ್ಟೂ ಇಲ್ಲದ ಆ ಸಮೃದ್ಧಿಯ ಕಾಲದಲ್ಲಿ ಯಾವುದು ಎಲ್ಲಿ ಹಾಕಿದ್ದರೆ ಅಲ್ಲೇ ಆ ರಾಜ್ಯದ ಮನೆಮನೆಗಳಲ್ಲಿ ರುತ್ತಿತ್ತಂತೆ ! ಕೈ ಮರೆತು ಬೇರೊಂದೆಡೆ ಇಟ್ಟವಸ್ತುವೂ, ಆ ರಾಜನನ್ನು ಸ್ಮರಿಸಿದೊಡನೆಯೇ ಕೈವಶವಾಗುತ್ತಿತ್ತೆಂದರೆ, ಅದು ಎಂಥ ತಪಸ್ಸಿನ ಕಾಲ, ಧರ್ಮದ ಕಾಲ !

ಇಂಥವನು ಮುಂದೆ ಬ್ರಾಹ್ಮಣದ್ವೇಷಿ ಹೇಗಾದ? ಪರಶುರಾಮ ರಿಂದ ಹೇಗೆ ಹತನಾದ ? ಆ ಕಥೆ ನಮ್ಮ ಪ್ರಕೃತಕ್ಕೆ ಸಂಬಂಧ ಪಟ್ಟುದೇ ಆಗುತ್ತದೆ.

ಕೊನೆಗೊಮ್ಮೆ ಸಹಸ್ರಾರ್ಜುನನೂ ಮಹರ್ಷಿಅಗಸ್ತ್ಯರ ಕೊನೆಯ ದರ್ಶನಕ್ಕೆ ಬಂದ ! ಮಧ್ಯವಯಸ್ಸಿನ ತೇಜೋಮೂರ್ತಿಯಾದ ಅವನಿಗೆ ಉಚಿತ ಸತ್ಕಾರವೂ ಆಯಿತು ! " ಮಹರ್ಷೆ ! ತಮಗೇನಾದರೂ ಕೊನೆಯ ಬಯಕೆ ಇದ್ದರೆ ತಮ್ಮ ಶಿಷ್ಯನಾದ ಈ ಅರ್ಜುನನಿಗೆ ಆಜ್ಞಾ ಪಿಸಬೇಕು. ಸಿದ್ಧನಿದ್ದೇನೆ'' ಎಂದು ಸೌಜನ್ಯ ಪೂರ್ಣನಾಗಿಯೇ ಬಿನ್ನೈ ಸಿದ. ಮಲಗಿದ್ದ ಹಿರಿಯ ಅಗಸ್ತ್ಯರು ಕಣ್ಣನ್ನು ಅಗಲವಾಗಿ ತೆರೆದು. ಮುಖದಲ್ಲಿ, ತುಟಿಗಳಲ್ಲಿ ಮಂದಸ್ಮಿತವನ್ನು ಕೊಂಚ ಸೂಸಿ, ಕಿರಿಯ ಅಗಸ್ತ್ಯರತ್ತ ದೃಷ್ಟಿಹೊರಳಿಸಿದರು. ಕಿರಿಯರು ಹಿರಿಯರ ಬಲ

ತೋಳನ್ನು ಹಿಡಿದೆತ್ತಿ, ನಮಸ್ಕರಿಸಿದ್ದ ಅರ್ಜನನ ಶಿರದಮೇಲೆ ಅದ
ನ್ನಿಟ್ಟು, ತಂದೆಯುಪರವಾಗಿ "ತ್ವಗ್ಂ ಧರ್ಮೇ ಸ್ಥಿರೋ ಭವ"
("ನೀನು ಧರ್ಮಾಚರಣೆಯಲ್ಲಿ, ಧಾರ್ಮಿಕ ಪ್ರಜ್ಞೆಯಲ್ಲಿ ಭದ್ರವಾಗಿ
ನಿಲ್ಲು") ಎಂದು ಹರಸಿದರು. "ಇದೇನು ಮಹಾಕೋರಿಕೆ!" ಎಂಬ
ಕಿಂಚಿತ್ ಅಹಂಕಾರ ಆಗ ಅಲ್ಲೇ ಅರಸನ ಮನಸ್ಸಿನಲ್ಲಿ ಅಂಕುರವಾದ
ದ್ದನ್ನು ಬಹಳ ಜನ ಋಷಿಗಳು ಅರಿಯಲಿಲ್ಲ! ಪಕ್ಕದಲ್ಲಿದ್ದ ಜಮದಗ್ನಿ
ಗಳು ಅರಸನ ಮುಖನೋಡಿ "ಇದು ಸಾಮಾನ್ಯ ಕೋರಿ
ಕೆಯೋ ಆಶೀರ್ವಾದವೋ ಅಲ್ಲ!!" ಎಂಬ ಭಾವವನ್ನು ತೋರಿದರು.
ಅದು ಅರ್ಜುನ ಮತ್ತು ಜಮದಗ್ನಿ ಇಬ್ಬರಿಗೇ ತಿಳಿಯಿತಾಗಿ, ಉಳಿದ
ವರು ವಿಶೇಷವನ್ನೇನೂ ಗಮನಿಸಲಿಲ್ಲ. ಅರ್ಜುನ ಪರಿವಾರಸಮೇತನಾಗಿ
ಹೊರಟ. ಹೊರಡುತ್ತಾ, ಅವನ ದೃಷ್ಟಿ ದೂರದಲ್ಲಿ ಬಿಡಾರದಲ್ಲಿದ್ದ
ವೈದರ್ಭ ದಂಪತಿಗಳ ಮೇಲೂ, ಲೋಪಾಮುದ್ರೆಯ ಮೇಲೂ
ಬಿದ್ದಿತು! "ಯಾರವರು? ಯಾರವಳು ಆ ಕನ್ಯಾಮಣಿ" ಎಂದು
ಪಕ್ಕದಲ್ಲಿದ್ದ ಋಷಿಕುಮಾರರನ್ನು ಕೇಳಿ ಅರಿತ. ಆದರೆ, ನಿಲ್ಲದೆ ಪಯಣ
ಸಿದ.

*　　　*　　　*

ಇಲ್ವಲನಿಗೂ ಅಗಸ್ತ್ಯರ ಮರಣಶಯ್ಯೆಯ ವಿಷಯ ತಿಳಿದಿತ್ತು.
ಆರ್ಯಸಂಸ್ಕಾರಕ್ಕೆ ಒಂದು ಕಾಲದಲ್ಲಿ ಒಳಗಾಗಿಯೂ, ಈಗ ರಹಸ್ಯ
ದಲ್ಲಿ ಅವರ ನಿರ್ನಾಮಕ್ಕೇ ಎಳೆಸಿ, ಗೂಢವಾಗಿ ನೂರಾರು ಋಷಿಗಳನ್ನು
ಅಪಹರಿಸಿ. ಚಿತ್ರಹಿಂಸೆ ಮಾಡಿ ಕೊಲ್ಲಿಸಿದ್ದ ಅವನು ಈಗೇನು ಮಾಡ
ಬೇಕು? ಗೋದಾವರಿಯ ಉತ್ತರ ತೀರದಲ್ಲಿದ್ದ ಬಡತಾಪಸಿ ಅಗಸ್ತ್ಯ
ರನ್ನು ಕೃಷ್ಣವೇಣೀ ತಟದ ಮಣಿಮತೀ ಪುರಿಯ ಅರಸೂ, ಪರೋಕ್ಷ
ವಾಗಿ ದಕ್ಷಿಣಪಥಕ್ಕೇ ಪ್ರಭುವೂ ಆದ ತಾನು ಇಲ್ವಲ – ಹೋಗಿ ನೋಡ

ಬೇಕೆ ? ಅದು ಲಾಭದಾಯಕವೋ ಅಲ್ಲವೋ ? ಋಷ್ಯಾಶ್ರಮ ತನ್ನನ್ನು ಗೌರವಿಸುವುದೋ ಇಲ್ಲವೋ !

ಚಿಂತಿಸಿದ ಇಲ್ವಲ, ರಹಸ್ಯದಲ್ಲಿ ಮಂತ್ರಾಲೋಚನಾ ಸಭೆಯನ್ನು ಕರೆದ. ಅರ್ಧರಾತ್ರಿಯಲ್ಲಿ ಏಕಾಂತವಾಗಿ ಸೇರಿದ್ದ ಆ ಸಭೆಯಲ್ಲಿ ಇಲ್ವಲನಲ್ಲದೆ, ಶುಕ್ರಪುತ್ರರಾದ ಶಂಡ ಅಮರ್ಕರೂ, ಇನ್ನೊಂದೆರಡು ದುರ್ಬ್ರಾಹ್ಮಣರೂ ಇದ್ದರು !

"ಅರಸೇ ! ನೀನು ಅಲ್ಲಿ ಹೋಗುವುದರಿಂದ ಲಾಭವೇ ಹೊರತು ನಷ್ಟವಿಲ್ಲ" ಎಂದು ಶಂಡರು ಅಭಿಪ್ರಾಯಪಟ್ಟರು.

" ಅದು ಹೇಗೆ ? " ದೊರೆಯ ಪ್ರಶ್ನೆ.

"ದಕ್ಷಿಣಾಪಥದಿಂದ ಬೇರಾರೂ ಮಹರ್ಷಿಯ ಯೋಗಕ್ಷೇಮ ವಿಚಾರಣೆಗೆ ಹೋಗಿಲ್ಲವೆಂಬ ಸುದ್ದಿ ನಮಗೆ ಬಂದಿದೆ. ಬಹುಶಃ ಮಹರ್ಷಿಯ ಕಡೆಯವರು ನಿನ್ನನ್ನು ನಿರೀಕ್ಷಿಸಿಯೂ ಇದ್ದಾರು. ಅಗಸ್ತ್ಯರ ದರ್ಶನದಿಂದ ಖಂಡಿತ ಮತ್ತಷ್ಟು ಪ್ರಬಲನಾಗುವೆಯೇ ಹೊರತು ಕ್ಷೀಣಿಸ ಲಾರೆ ! ಋಷಿಗಳು ತಾವಾಗಿಯೇ ನಿನ್ನನ್ನಾಶೀರ್ವದಿಸಿದರೆ, ನಿನ ಅದೃಷ್ಟ ! ಈ ವೇಳೆಯಲ್ಲಿ ಮಹರ್ಷಿಸಂಘವೇ ಅಲ್ಲಿದೆ. ಅವರಾರೂ ನಿನ್ನನ್ನು ತಿರಸ್ಕರಿಸುವುದು ಅಸಂಭವ. ನೀನಿನ್ನೂ ಆರ್ಯ ಸಂಸ್ಕೃತಿಯ ಪ್ರೇಮಿಯೆಂಬ ನಾಟಕವಾಡಲು ಇದು ನಿನಗೆ ಉತ್ತಮಾವಕಾಶ ! ಉಳಿದ ಋಷಿಗಳು ಅದನ್ನೀಗ ನಂಬುವುದು ನಿನಗೆ ಅವಶ್ಯ. ಮಹರ್ಷಿದರ್ಶನಕ್ಕೆ ಬಂದಿರುವ, ಬರುತ್ತಿರುವ ಔತ್ತರೇಯ ಅರಸರ ಬಲಾಬಲ ಪರೀಕ್ಷೆಗೂ. ಸಿಂಹಾವಲೋಕನಕ್ಕೂ ಇದು ಸದವಕಾಶ. ಅತ್ತ ದಂಡನ್ನು ಯಾವಾಗ ಎತ್ತಬಹುದೆಂಬುದನ್ನು ನಿರ್ಣಯಿಸಲೂ ಅದು ನಿನಗೆ ಸಹಾಯಕ. ಋಷಿಗಳ ಬಲವನ್ನು ನೀನು ಆಗ ಸುಲಭವಾಗಿ ಅಳೆಯಬಹುದು. ಅವ ರನ್ನು ನಿವಾರಿಸುವ ಉಪಾಯವನ್ನು ನೀನು ಅರಿತರೆ ಉತ್ತರಾಪಥವೆಲ್ಲ

ನಿನ್ನ ವಶವಾದಂತೆಯೇ ಎಂದು ತಿಳಿ. ಅಗಸ್ತ್ಯ ಸಾಮಾನ್ಯನಲ್ಲ. ಉತ್ತರದ ಸಂಸ್ಕೃತಿಯ ಮಾಂಗಲ್ಯ ಅವನು. ಆರ್ಯದೊರೆಗಳ ವ್ಯಕ್ತಿತ್ವದ ರಕ್ತನಾಡಿಯೇ ಅಗಸ್ತ್ಯ. ಸಪ್ತರ್ಷಿಮಂಡಲದಲ್ಲೂ ಉಗ್ರಜ್ವಾಲೆಯ ತಾರೆ ಅವನು. ಒಂದೇ ಒಂದು ಭಯವೆಂದರೆ, ಅವನು ಏಕದೃಷ್ಟಿಯಿಂದಲೇ ನಿನ್ನ ಹೃದಯಾಂತರಾಳದ ಆಶಯವನ್ನು ಅರಿಯಬಲ್ಲ !! ಕ್ರೂರದೃಷ್ಟಿಯಿಂದಲೇ ನಿನ್ನನ್ನು ಸುಟ್ಟು ಬೂದಿಮಾಡಲೂ ಬಲ್ಲ. ಆತ ಕಣ್ಣುಮುಚ್ಚಿದ್ದನೆಂದರೆ ನಿನ್ನ ಭಾಗ್ಯ. ಆ ಕಿರಿಯ ಅಗಸ್ತ್ಯನೂ ಅಸಾಮಾನ್ಯನೇ ! ತಂದೆಗೆ ಸರಿಯಾದ ಮಗ ! ಆದರೆ ವಯಸ್ಸು ಚಿಕ್ಕದು. ಮಹರ್ಷಿಯ ಕುಲಪತಿ ಸ್ಥಾನದಲ್ಲಿ ಅವನು ಅಭಿಷಿಕ್ತನಾಗುವ ಮೊದಲೇ, ಹಿರಿಯ ಅಗಸ್ತ್ಯ ಕಣ್ಣು ಮುಚ್ಚುತ್ತಿರುವ ಈ ಸುಸಂಧಿ ನಿನ್ನ ಭಾಗ್ಯೋದಯಕಾಲ. ಬಿಡಬೇಡ" ಎಂದು ಶಂಡ ಸುದೀರ್ಘವಾಗಿ ವಿವರಿಸಿದ. ಅಮರ್ಕ ಅದಕ್ಕೆ ಒಗ್ಗರಣೆ ಹಾಕಿದ. ದುರ್ಬ್ರಾಹ್ಮಣರು ಅದನ್ನು ಅನುಮೋದಿಸಿದರು. ಇಲ್ವಲ ಉತ್ಸಾಹಗೊಂಡ. ಅದೇ ಸರಿಯೆಂದು ನಿಶ್ಚಯಿಸಿದ.

ಮರುದಿನ ಬೆಳಿಗ್ಗೆ ಇಲ್ವಲ ಸ್ನಾನ ಮುಗಿಸಿ, ಆಯುಧಾಗಾರಕ್ಕೆ ಹೋಗಿ ಅಪೂರ್ವವಾದ ಆಯುಧಭಂಡಾರವನ್ನು ನಾನಾವಿಧ ಗಂಧ ಪುಷ್ಪಧೂಪದೀಪಗಳಿಂದ ಪೂಜಿಸಿದ. ಅದೇ ಅವನ ದೇವಾಲಯವಾಗಿತ್ತು ದೇವತೆಗಳಲ್ಲಿ ನಂಬಿಕೆ ಇದ್ದವನಾದರೂ ಅವರನ್ನು ದ್ವೇಷಿಸಿಸಲು ಆರಂಭವಾಗಿತ್ತು ! ಇಂದ್ರಸಮಪುತ್ರ ತನಗೆ ಬೇಕೆಂದು ಯಾಗ ಮಾಡಿಸಲು ಯಾರೆಲ್ಲ ಋಷಿಗಳ ಕಾಲಿಗೆ ಬಿದ್ದನಲ್ಲ ! ! ಎಲ್ಲರೂ ತಿರಸ್ಕರಿಸಿದ್ದರಿಂದ ಆ ದೇವತೆಗಳನ್ನೇ ಗೆಲ್ಲುವ, ಋಷಿಗಳನ್ನು ನಿರ್ನಾಮಮಾಡುವ ಸಂಕಲ್ಪತೊಟ್ಟು, ಅಂದಿನಿಂದ ಪುರುಷಪ್ರಯತ್ನವನ್ನೇ ಸರ್ವಸ್ವವೆಂದು ಭಾವಿಸಿ ಸಂಬಿ ಶಾಂಬರನ ನಾಸ್ತಿಕ ಮೂಲದ ಆರ್ಥಿಕ ಸಾಮಾಜಿಕ ವ್ಯವಸ್ಥೆಗೆ ಮನ ಸೋತು ಆಶ್ರಯಿಸಿದ್ದವನಲ್ಲವೇ ? ಅದರಿಂದ ರಾಜ್ಯದ ಅರೆಪಣವೂ

ಸುಳ್ಳುಧರ್ಮ, ದೇವರು. ಸತ್ಯಗಳಿಗೆ "ಪೋಲಾ"ಗದೆ, ಕೆರೆ, ಕಟ್ಟೆ, ಭಾವಿ, ನೀರಾವರೀ ಅಭಿವೃದ್ಧಿ ಕಾರ್ಯಗಳಿಗೂ, ದೀನದಲಿತರ ಉದ್ಧಾರಕ್ಕೂ ಮುಡಿಪಾಗಿ, ಸಹಸ್ರಾರು ಜನರ ಪಾಲಿಗೆ ಅವನೇ ದೇವರಾಗಿದ್ದ! ಜನಪ್ರಿಯತೆಗಳಿಸಿದವನು ಏನನ್ನು ಸಾಧಿಸಲಾರ!! ಆಯುಧಾಭಿಮಾನೀ ದೇವತೆಗಳು ಅವನನ್ನು ಹರಸಿದರು.

ಅಲ್ಲಿಂದ ಇಲ್ವಲ ಶುಕ್ರಾಚಾರ್ಯನ ಅರಮನೆಗೆ ಹೊರಟ! ದೈತ್ಯ ಗುರುವಿನ ವಾಸದ ಮನೆ ಬಡಬ್ರಾಹ್ಮಣನ ಕುಟೀರವಾಗಿರಲಿಲ್ಲ. ಶುಕ್ರ, ವಿಲಾಸೀ, ಭೋಗಪ್ರಿಯ. ಸರ್ವಜ್ಞನಾದ ಅವನ ಜ್ಞಾನಭಂಡಾರವೆಲ್ಲ ದಿನ ದಿನವೂ ದೇವತೆಗಳ ನಾಶಕ್ಕೆ ಹೊಸ ಉಪಾಯಗಳನ್ನು ಹುಡುಕುವುದ ರಲ್ಲೇ ವಿನಿಯೋಗವಾಗುತ್ತಿತ್ತು! ಸ್ವಯಂ ಬ್ರಾಹ್ಮಣನಾದ ಅವನು ಬ್ರಾಹ್ಮಣ್ಯದ ವಿನಾಶಕ್ಕೆ ಎಲ್ಲ ದಾರಿಗಳನ್ನೂ ಬಲ್ಲವನಾಗಿದ್ದ. ಬ್ರಾಹ್ಮಣ್ಯ ಇನ್ನೂ ಉಳಿದಿದ್ದುದು ಅವನ ದುರ್ದೈವ. ದೈತ್ಯರು ಅವನನ್ನು ತಮ್ಮ ಪಾಲಿನ ದೈವವೆಂದೇ ಬಗೆದು, ಅವನಲ್ಲಿ ಬ್ರಾಹ್ಮಣ್ಯದ ಕುರುಹು ಲವಲೇಶವೂ ಇಲ್ಲದ್ದನ್ನು ಬಹುವಾಗಿ ಮೆಚ್ಚಿ, ನೆಚ್ಚಿಕೊಂಡಿ ದ್ದರು. ಅವನ ಜಾತ್ಯತೀತತೆ, ಧರ್ಮಾತೀತತೆ ಅಷ್ಟು ಪರಿಪೂರ್ಣ ವಾಗಿತ್ತು! ವಯಸ್ಸಾಗಿ, ಇತರರಿಗೆ ಓಡಾಡಲೂಬಾರದ ವಯಸ್ಸಿನ ಆ ಸ್ಥಿತಿಯಲ್ಲೂ ಶುಕ್ರ ಗಟ್ಟಿಮುಟ್ಟಾಗಿಯೇ ಇದ್ದ! ಅಮೃತ ಪ್ರಾಶನ ವನ್ನು ಅಸುರರಿಗೆ ಮಾಡಿಸುವ ಅವನ ತಂತ್ರ ವಿಷ್ಣುಮಾಯೆ, ಮೋಹಿನಿ. ಯಿಂದ ಮಣ್ಣು ಪಾಲಾಗಿದ್ದರೂ, ಬೇರೊಂದು ಬಗೆಯ ಅಸುರ ಸಂಜೀವನೀ ವಿದ್ಯೆ ಅವನಿಗೆ ಕರಗತವಾಗಿತ್ತಲ್ಲವೆ? ಅವನ ವೈದ್ಯ ಪದ್ಧತಿಯೇ ಬೇರೆ! ರಾಜನೀತಿಯೇ ಬೇರೆ! ಸಾಮಾಜಿಕ ಕಲ್ಪನೆಯೇ ಬೇರೆ! ದೇವತೆಗಳೂ ಋಷಿಗಳೂ ನಂಬಿದ್ದ, ಆಚರಿಸುತ್ತಿದ್ದ ಎಲ್ಲಕ್ಕೂ ಅವನು ಬೇರೊಂದನ್ನೇ–ಪ್ರತಿಯನ್ನಾಗಿ ಕಲ್ಪಿಸಿದ್ದವನಲ್ಲವೇ? ಪ್ರತಿ ಸೃಷ್ಟಿಯನ್ನೇ ಮಾಡಬಲ್ಲ ಶಕ್ತಿಯಿದ್ದ ಶುಕ್ರ. ರಾಕ್ಷಸ, ದೈತ್ಯ, ದಾನವ,

ಅಸುರರ, ಏಕಮೇವ ಆಶ್ರಯನಾಗಿರುತ್ತಾ, ಅವರೆಲ್ಲರ ಆರಾಧ್ಯ ಗುರುವೂ ಆಗಿ, ಅವರೆಲ್ಲರನ್ನೂ ತನ್ನ ಕೈಗೊಂಬೆಗಳಂತೆ ಕುಣಿಸುತ್ತಿದ್ದ ನೆಂದರೆ. ಅವನ ವೈಭವವನ್ನು ಕೇಳಬೇಕೋ ?

ಶುಕ್ರನ ಅರಮನೆ. ಇಲ್ವಲನ ಅರಮನೆಯಂತೆಯೇ ಇತ್ತು. ಬೆಳ್ಳಿ ಅವನಿಗೆ ತುಂಬಾ ಪ್ರಿಯವಾದ ಲೋಹ ! ಎಲ್ಲೆಲ್ಲೂ ಬೆಳ್ಳಿಯ ಪಾತ್ರೆ ಗಳೇ ಆ ಅರಮನೆಯಲ್ಲಿ ! ದೀಪಸ್ತಂಭಗಳೂ, ಪಾನೀಯ ಬಟ್ಟಲು ಗಳೂ, ಉಗುಳುವುದಕ್ಕೆಂದೂ ಅಲ್ಲಲ್ಲಿ ಸಿದ್ಧವಾಗಿದ್ದ ತಾಂಬೂಲ ಸ್ವೀಕಾರಕ್ಕಿದ್ದ ಖಾಲಿ ಪಾತ್ರೆಗಳೂ, ಧೂಪಸ್ತಂಭಗಳೂ, ತೂಗು ದೀಪ ಸ್ತಂಭಗಳೂ, ತೂಗು ದೀಪಗಳೂ, ಕೊನೆಗೆ ಶುಕ್ರನ ಪಲ್ಲಂಗವೂ ಎಲ್ಲವೂ ಬೆಳ್ಳಿಯವೇ ಆಗಿದ್ದು ಹಗಲು ರಾತ್ರಿಗಳಲ್ಲೂ ಮಿನುಗುತ್ತಿದ್ದವು. ಅಂಗಳ ದಲ್ಲಿ ಯಾವಾಗಲೂ ನರ್ತಕಿಯರು ಸರದಿಯಂತೆ ನರ್ತಿಸಿ ಹೋಗುತ್ತಿ ದ್ದರು ! ಅವರಿಗೆ ಬಹುಮಾನ ಕೊಡಲು ಶುಕ್ರನ ಪಕ್ಕದಲ್ಲಿ ಸದಾ ಮುತ್ತು, ವಜ್ರ, ಮಾಣಿಕ್ಯ, ಹವಳಗಳ ಗಣಿಯೇ ಇರುತ್ತಿತ್ತು ! ಅವನ್ನೂ ಬೆಳ್ಳಿಯ ದೊಡ್ಡ ಗೂಡೆಗಳಲ್ಲಿಟ್ಟಿರುತ್ತಿದ್ದರು ! ಅವು ಎಲ್ಲಿಂದ ಬರು ತ್ತಿದ್ದವೋ ! ಶುಕ್ರ ಯಾವಾಗ ನಿದ್ರೆ ಮಾಡುತ್ತಿದ್ದನೋ ? ಅಥವಾ ಈಗ ಅವನಿಗಿದ್ದ ಒಂದೇ ಕಣ್ಣಿಗೇ ನಿದ್ರೆಯಾದರೂ ಏಕೆ ಬೇಕು ? ಬಲಿಯ ಯಾಗದಲ್ಲಿ ವಾಮನನಿಗೆ ಭೂದಾನ ಕೊಡ ಹೊರಟ ಅರಸನ ಗಿಂಡಿಯಿಂದ ನೀರು ಬಾರದಂತೆ ಮಾಡಲು ಯೋಗ ಶಕ್ತಿಯಿಂದ ಆ ತೂಬಿನಲ್ಲಿ ಕುಳಿತು, ನೀರು ಬೀಳದಾಗ, ವಾಮನನ ಕೈಯ್ಯಿನ ಪವಿತ್ರದ ದರ್ಭೆಯಿಂದ ಚುಚ್ಚಿದಾಗ ಹೋದ ಆ ಕಣ್ಣು ಹೇಗೂ ಸರಿಯಾಗಲಿಲ್ಲ ! ಶುಕ್ರನಿಗೆ ಆಗ ತನ್ನ ಹೊಸ ವೈದ್ಯಕೀಯ ಪದ್ಧತಿಯಲ್ಲೇ ನಂಬಿಕೆ ಕಳೆದಿತ್ತು ! ಅವನ ಬೋಧನೆಯಿಂದ ಉದ್ಧಾರವಾದ ಯಾವ ಅಸುರ ದೊರೆಯೂ ಇರಲಿಲ್ಲವಾದರೂ, ಶುಕ್ರನ ಹೊಸ ಯೋಜನೆಗಳಿಗೂ ಅವನ್ನನುಮೋದಿಸುವ ಭ್ರಷ್ಟ ಅಸುರ ಅರಸರಿಗೂ ಕೊರತೆ ಇರಲಿಲ್ಲ !

ಬ್ರಹ್ಮ ಸೃಷ್ಟಿಯ ಈ ವೈಚಿತ್ರ್ಯದಲ್ಲಿ ಶುಕ್ರನದು ಅಗ್ರಸ್ಥಾನ. ಸುಂದರಾಂಗನೂ, ಒಕ್ಕಣ್ಣನೂ, ಸುವೇಷ ಭೂಷಿತನೂ, ಮೃದುಭಾಷಿಯೂ, ಇಂಪು ಸ್ವರದವನೂ ಆದ ಶುಕ್ರ ಆಗ ತೂಗುಯ್ಯಾಲೆಯಲ್ಲಿ ಶಯನಿಸಿ ಒಂದು ಅದ್ಭುತ ನೃತ್ಯವನ್ನು ವೀಕ್ಷಿಸುತ್ತಿದ್ದ.

ಇಲ್ವಲನ ಸವಾರಿ ಬರುತ್ತಿದೆಯೆಂದು ದೂರದ ವಾದ್ಯಗಳು ಮೊಳಗಲು, ನರ್ತಕಿಯರು ಚದುರಿದರು. ಶುಕ್ರ, ತೂಗುಯ್ಯಾಲೆಯ ಮೇಲೆ ಎದ್ದು ಕುಳಿತು, ದೂರದಿಂದ ತನ್ನ ಪ್ರಿಯಶಿಷ್ಯ ಬರುತ್ತಿದ್ದುದನ್ನು ಕಂಡು ಹಿಗ್ಗಿದ. ರಾಜಸ ಪ್ರಕೃತಿಯ ಅವನ ಮುಖದಲ್ಲಿ ಮಂದಹಾಸವೂ ವಿಚಿತ್ರವಾಗಿ, ಕೊಂಚ ಭಯಂಕರವಾಗಿಯೇ ತೋರಿಕೊಂಡಿತು! ಒಂದೇ ಕಣ್ಣಿನ ಆ ದೃಷ್ಟಿ, ಎಲ್ಲಿ ಬಿದ್ದರೂ ಅದು ಎಲ್ಲರನ್ನೂ ನೋಡುವಂತೆಯೇ ಇರುತ್ತಾ, ನೋಡುಗರಿಗೆ ಭಯಾವಹವಾಗಿಯೇ ಇರುತ್ತಿತ್ತು. ಕಣ್ಣಿನ ಹಿಂದಿನ ಮೆದುಳಿನಲ್ಲಿ ಏನೇನು ಚಿಂತನೆಗಳಿದ್ದವೆಂಬುದನ್ನು ಮಾತ್ರ ಯಾರೂ, ಇಲ್ವಲನೂ ಊಹಿಸದಂತೆ, ಆ ದೃಷ್ಟಿ ಬಲುಅಗಾಧವಾಗಿ ಆಗ ನಮಸ್ಕರಿಸಿದ ಇಲ್ವಲನ ಮೇಲೆ ಬಿತ್ತು, "ಜಯ ವಿಜಯೀ ಭವ, ಮೇಲೇಳು ವತ್ಸ" ಎಂದ ಶುಕ್ರ, ಶಿಷ್ಯನನ್ನು ಪ್ರೇಮದಿಂದ ಆಲಿಂಗಿಸಿದ,

ಇಲ್ವಲ ಗುರುಪಾದತಲದಲ್ಲಿ ಕುಳಿತ. ಶುಕ್ರನೇ ಮಾತನಾಡಲಾರಂಭಿಸಿದ :

ಶುಕ್ರ : "ಅರಸೇ ! ನೀನು ಅಗತ್ಯವಾಗಿ ಅಗಸ್ತ್ಯಾಶ್ರಮಕ್ಕೆ ಹೋಗಿ ಬಾ. ಅದರಲ್ಲಿ ನಮ್ಮ ಹಿತವೇ ಅಡಗಿದೆ."

ಇಲ್ವಲ : "ಪೂಜ್ಯರಿಗೆ ನನ್ನ ಇಂಗಿತ ಹೇಗೆ ಅರ್ಥವಾಯಿತು ?"

ಶುಕ್ರ : "ಹಾಗೆ ಅರ್ಥವಾಗದಿದ್ದರೆ ನಾನು ದೈತ್ಯಗುರುವಾಗಿ ಏನಗೇನು ಪ್ರಯೋಜನ ? ನೆನ್ನೆ ರಾತ್ರಿ ನನ್ನ ಪುತ್ರರನ್ನು ಆಪ್ತಾಲೋಚನೆಗೆ

ಕರೆಸಿದೆಯಲ್ಲವೇ ? ಬೇರೆಲ್ಲ ವಿಷಯಗಳಲ್ಲೂ ನಿನ್ನ ರಾಜ್ಯ ಸುಭಿಕ್ಷ ವಾಗಿರುವಾಗ ನಿನಗೇತರ ಚಿಂತೆ ಎಂದು ತರ್ಕಿಸಿದೆ. ಅತ್ತ ಅಗಸ್ತ್ಯ ಸಾಯುವುದರಲ್ಲಿದ್ದಾನೆ ಎಂಬ ವದಂತಿಯೂ ಇದೆ. ಆರ್ಯಾವರ್ತದ ಎಲ್ಲ ವಿಪತ್ತುಗಳನ್ನೂ ನಿನ್ನ ಸಂಪತ್ತನ್ನೇ ಆಗಿಸಲು ಸದಾ ಯತ್ನಿಸುತ್ತಿರುವ ನನಗೆ, ನೆನ್ನೆ ರಾತ್ರಿಯ ನಿನ್ನ ಸಭೆ ಇದೇ ವಿಷಯಕ್ಕೆ ಇದ್ದೀತೆಂದು ಸುಲಭವಾಗಿ ತಿಳಿಯಲಾರದೇ ? ವತ್ಸ ! ನೀನು ಬುದ್ಧಿಶಾಲಿ. ನಿನ್ನ ಪೂರ್ವಜರು ಮಾಡಿದ ತಪ್ಪುಗಳನ್ನು ನೀನು ಮಾಡಬೇಡ. ಮೇಲ್ನೋರಿಕೆಯ ವಿನಯ, ದೇವಪ್ರೇಮ, ಋಷಿಗೌರವ, ಯುಕ್ತಿಯುಕ್ತ ವಾಕ್ಯಗಳು, ಮಂದಸ್ಮಿತ, ಕ್ಷಣ ಮಾತ್ರದಲ್ಲಿ ಶತ್ರುವಿನ ಹೃದಯವನ್ನರಿಯಬಲ್ಲ ಕುಶಾಗ್ರಮತಿ, ಸಮಯಪ್ರಜ್ಞೆ — ಇವು ಇದ್ದರೆ ಎಂಥವನೂ ಅಧಿಕಾರವನ್ನು ಪಡೆಯಬಲ್ಲ, ವಿಸ್ತರಿಸಬಲ್ಲ, ಸ್ಥಿರವಾಗಿ ಉಳಿಯಬಲ್ಲ ಎಂದು ನಿನಗೆ ನಾನು ಎಷ್ಟೋ ಸಲ ಹೇಳಿಲ್ಲವೇ, ಈಗದನ್ನು ಮಾಡಿ ತೋರಿಸು."

ಇಲ್ವಲ : " ಹಾಗಾದರೆ ಯಾವಾಗ ಹೊರಡಲಿ ? "

ಶುಕ್ರ : "ಮೂರ್ಖರು ಮುಹೂರ್ತ ನೋಡಿಯಾರು! ಮನಸ್ಸಿಗೆ 'ಜಯ'ವೆಂದು ತೋರಿದ ಸಿದ್ಧಗಳಿಗೆಯೇ ಶುಭಮುಹೂರ್ತ. ಹೇಡಿಗಳು ನವಗ್ರಹಗಳನ್ನಾಶ್ರಯಿಸಿಯಾರು ! ಪುರುಷಪ್ರಯತ್ನದ ವಿಶ್ವಾಸಿಗೆ ಅದು ಏನೂ ಬೇಕಿಲ್ಲ "

ಇಲ್ವಲನಿಗೆ ನಗೆ ಬಂದಿತು ! ಶುಕ್ರ ಅದನ್ನರಿತು ಮುಂದುವರೆಸಿದ !

ಶುಕ್ರ : " ನಾನೂ ನವಗ್ರಹಗಳಲ್ಲಿ ಒಬ್ಬನೆಂದು ಭಾವಿಸಿ, ನನ್ನನಾಶ್ರಯಿಸುವುದೂ ತಪ್ಪೆಂದು ನಾನು ಹೇಳಿದ್ದಾಗಿ ತಿಳಿಯಬೇಡ ಗ್ರಹವಾಗಿ ನಾನು ಮಾಡುವುದು ಬೇರೆ ! ನಿನ್ನ ಮಂತ್ರಿಯಾಗಿ ನಾನು ಮಾಡು

ವುದು ಬೇರೆ ! ನಾನೀಗ ಆಕಾಶದಲ್ಲಿಲ್ಲ ! ನಿನ್ನ ಬಳಿಯೇ ಇರುವೆ ! ನಾನಿದ್ದಲ್ಲಿ ದೇವಗುರುವೂ ನಿಸ್ತೇಜನಾಗುತ್ತಾನೆ. ನಿನ್ನನ್ನು ಯಾವತ್ತು ಪರಿಗ್ರಹ ಮಾಡಿದೆನೋ ಅವತ್ತೂ ನಿನಗೆ ಶುಕ್ರದೆಸೆ ಅಡರಿತ್ತು. ನಿನ್ನ ಜಾತಕದಲ್ಲಿ ಇದು ಮುಗಿಯುವದೇ ಇಲ್ಲ"

" ಪೂಜ್ಯರಿಗೆ ನಾನು ಇನ್ನೇನು ಹೇಳುವುದುಳಿಯಿತು ! " ಎನ್ನುತ್ತಾ ಗುರುವಿಗಭಿವಂದಿಸಿ ಇಲ್ವಲ ಮೇಲೆದ್ದ.

ಶುಕ್ರ ಇನ್ನಷ್ಟು ಹಿತೋಕ್ತಿ ಹೇಳಿದ : " ವಾತಾಪಿಯನ್ನೂ ಕೂಡ ಕರೆದುಕೊಂಡು ಹೋಗು. ಅಧ್ಯಯನಶೀಲರಾದ ಹತ್ತೆಂಟು ಬ್ರಾಹ್ಮಣರೂ ಇಲ್ಲಿಯವರು ನಿನ್ನನ್ನನುಸರಿಸಲಿ. ಕಾಣಿಕೆಗಳನ್ನು ಮರೆಯಬೇಡ. ನಾಲ್ಕಾರು ದಿನ ಅಗಸ್ತ್ಯಾಶ್ರಮದಲ್ಲೇ ತಂಗಿ. ಸ್ಥಳ ವಿಶೇಷಗಳನ್ನೂ, ಕಿರಿಯ ಅಗಸ್ತ್ಯನ ಮನೋಧರ್ಮವನ್ನೂ, ಏರ್ಪಾಡುಗಳನ್ನೂ ಉತ್ತರಾಪಥದ ಅರಸರ ಮನೋಬಲಾದಿಗಳನ್ನೂ, ಚೆನ್ನಾಗಿ ತಿಳಿದು ಬಾ, ನಿನ್ನ ರಾಜ್ಯದ ವಿಶೇಷ ಪಾನೀಯ, ಮಧು, ಆಸವ, ಮೈರೇಯಾದಿಗಳ ರುಚಿಯನ್ನು ಆ ಬಡಋಷಿಗಳಿಗೂ ಉತ್ತರದ ಬಡಕಲು ಅರಸರಿಗೂ ಉಣಿಸಿ ಬಾ. ಅವರ ಮನಸ್ಸನ್ನು ಮರ್ದಿಸಿದೆಯಾದರೆ ನಿನ್ನ ಕೆಲಸ ಅರ್ಧ ಮುಗಿದಂತೆಯೇ,'' ಎಂದು ಸೂಕ್ಷ್ಮವಾಗಿ ಅರುಹಿದ.

ಇಲ್ವಲನ ಸವಾರಿ ಅಗಸ್ತ್ಯಾಶ್ರಮದತ್ತ ಹೊರಟಿತು.

* * *

ಕಿರಾತ ವೇಷದಲ್ಲಿ ಅಗಮನೆಯ ಊಳಿಗದಲ್ಲಿದ್ದ ಅಗಸ್ತ್ಯಾನುಚರರಾದ ಸ್ಥಾನಿಕರು ಈ ಸಮಾಚಾರವನ್ನು ಊರ ಹೊರಗೆ ಕಟ್ಟಿಗೆ ಆಯುವವರ ವೇಷದಲ್ಲಿದ್ದ ಅಗಸ್ತ್ಯರ ಗೂಢಚಾರರಿಗೆ ಅರುಹಿದರು. ಗಿಡದಿಂದ ಗಿಡಕ್ಕೆ ಟೊಂಗೆಯಿಂದ ಟೊಂಗೆಗೆ ಕಾಡಿಗೆ ಹಬ್ಬುತ್ತಾ ಮಿಂಚಿನ ವೇಗದಲ್ಲಿ ಈ ಸಮಾಚಾರ ಅಗಸ್ತ್ಯಾಶ್ರಮಕ್ಕೆ ಮುಟ್ಟಿತು.

ಕೃಷ್ಣವೇಣೀ ತೀರದ ಅಸುರ ದೊರೆಯ ಸಮಾಚಾರ, ಗೋದಾವರೀ ತೀರದ ಅಗಸ್ತ್ಯಾಶ್ರಮಕ್ಕೆ ತಿಳಿಯುವ ವೇಳೆಗೆ ಇಲ್ವಲನ ಪ್ರಯಾಣ ಅಗಸ್ತ್ಯಾಶ್ರಮಕ್ಕೆ ಇನ್ನೂ ಒಂದು ವಾರ ಕಾಲದಷ್ಟು ದೂರವಿದ್ದಿತು.

ಅಗಸ್ತ್ಯರು ಕಿರಿಯರು ಚಕಿತರಾದರು ! "ಬ್ರಹ್ಮಬ್ರಾಹ್ಮಣ ದ್ವೇಷಿಯಾದ ಇವನಿಗೆ ಇಲ್ಲೇನು ಕೆಲಸ !'' ಎಂದು ಚಿಂತಿಸಿದರು. ಕ್ಷಣ ಮಾತ್ರದಲ್ಲಿ ಇಲ್ವಲನ ಯೋಜನೆ ತಿಳಿಯಿತು ! ಪ್ರಗಾಥ ಕಣ್ವ, ಭೃಗು, ಅತ್ರಿ, ಆಂಗೀರಸರೊಡನೆ ಕಾರ್ಯಾಲೋಚನೆ ಮಾಡಿ ಒಂದು ನಿಶ್ಚಯಕ್ಕೆ ಬಂದರು. ಸಪ್ತರ್ಷಿ ಮಂಡಲ ಅದನ್ನನುಮೋದಿಸಿತು. ಇಲ್ವಲನನ್ನು ಮುಗಿಸುವುದು ಈಗ ಸಕಾಲವಲ್ಲ ಎಂಬ ಋಷಿ ಮಂಡಳಿ ಏಕಾಭಿಪ್ರಾಯ ಪಟ್ಟಿತ್ತು, ಅವನ ಮನಃಸ್ಥೈರ್ಯವನ್ನು ಕೆಡಿಸಿ, ಬ್ರಹ್ಮತೇಜೋ ಪರಾಕ್ರಮವನ್ನು ಅವನಿಗೆ ಮನದಟ್ಟು ಮಾಡಿ ಕೊಟ್ಟು, ಹೊಸಕ್ಷತ್ರ ಪೀಳಿಗೆಗೆ ಮಹರ್ಷಿಗಳು ಕಂಕಣಬದ್ಧರಾಗಿ, ಅದು ಬೆಳೆಯುತ್ತಿರುವುವನ್ನು ಅವನಿಗೆ ನಿಚ್ಚಳವಾಗಿ ಮನವರಿಕೆ ಮಾಡಿ ಕೊಟ್ಟು ಕೊನೆಯದಾಗಿ ಎಚ್ಚರಿಕೆ ನೀಡಬೇಕೆಂದೂ, ಆಶ್ರಮಸ್ತ್ರೀಯರ ರಕ್ಷಣೆಗೆ ವಿಶೇಷ ಪಡೆ ಸಿದ್ಧವಾಗಿರಬೇಕೆಂದೂ, ವಿಷ, ಮಂತ್ರ, ಔಷಧ, ಪ್ರಯೋಗಗಳಿಗೂ ಯಾತು ಪ್ರಯೋಗಕ್ಕೂ ಬಲಿಯಾಗದಂತೆ ಆಶ್ರಮಸ್ಥ ವಟುಗಳೂ ವೃದ್ಧರೂ ಕಣ್ಣುಗಾವಲಾಗಿರಬೇಕೆಂದೂ, ಇಲ್ವಲನ ಮನೋಗತಾಭಿಪ್ರಾಯವನ್ನು ಚೆನ್ನಾಗಿ ಅರಿಯುವುದು ಈ ಸಂದರ್ಭದಲ್ಲಿ ಆಶ್ರಮಕ್ಕೆ ಲಾಭವಾಗಬೇಕೆಂದೂ ಸಪ್ತರ್ಷಿ ಮಂಡಲ ಆದೇಶ ನೀಡಿತು.

ಹಿರಿಯ ಅಗಸ್ತ್ಯರಿಗೆ ಈ ವಿಷಯವನ್ನು ಹೇಗೆ ಹೇಳುವುದು ? ಅವರ ಆರೋಗ್ಯವೂ, ಈಗಿನ ಸಂದರ್ಭವೂ ಸರಿಯಿಲ್ಲವಾದಾಗ ಈ ವಿಷಮ ಸಮಾಚಾರವನ್ನು ಅವರಿಗೆ ವಿಪರೀತ ಪರಿಣಾಮವಾಗದಂತೆ

ತಿಳಿಸಿ, ಅವರ ಆಶೀರ್ವಾದ, ಸಮ್ಮತಿ ಪಡೆಯಲು ಕಿರಿಯ ಅಗಸ್ತ್ಯರು ಒಂದುಪಾಯ ಮಾಡಿದರು.

ಹಿರಿಯ ಅಗಸ್ತ್ಯರಿಗೂ ಇಲ್ವಲ ಅಪರಿಚಿತನೇನಲ್ಲ! ಅಂಥ ಗೂಢ ವಂಚಕರ ಜಾಲವನ್ನೆಲ್ಲ ಪತ್ತೆಮಾಡಿಯೇ ಅವರು ಸುಪ್ರಸಿದ್ಧವಾದ, ವಿಷಾಪಹಾರ ಮಂತ್ರವನ್ನು ಪ್ರತ್ಯಕ್ಷ ಮಾಡಿಕೊಂಡಿದ್ದರು. ಆಶ್ರಮಸ್ಥರಿಗೆಲ್ಲ ಅದು ಕಂಠಪಾಠವೂ ಆಗಿತ್ತು. ಅದರ ಒಂದು ಮಂತ್ರವನ್ನು ಕಿರಿಯ ಅಗಸ್ತ್ಯರು ಆ ಸಂಜೆ, ಸಾಯಂ ಸಂಧ್ಯೆಯಾದ ಮೇಲೆ, ತಂದೆಗೆ ಪಾದಾಭಿವಂದನಮಾಡಿ, ಅವರ ಪಾದಗಳ ಬಳಿಕುಳಿತು, ಕಿವಿಯ ಸಮೀಪದಲ್ಲಿ ಉಸುರಲು ಹೋದರು.

ಮಗ ಕಿವಿಯ ಹತ್ತಿರ ಬರುತ್ತಾ "ಏನೋ ರಹಸ್ಯ ಸಂದೇಶವಿರುವಂತಿದೆ" ಎಂಬುದನ್ನು ಹಿರಿಯ ಮಹರ್ಷಿ ಅರ್ಥ ಮಾಡಿಕೊಂಡು ಮಗನ ಮುಖವನ್ನೇ ಉತ್ಸುಕತೆಯಿಂದ ನೋಡಲಾರಂಭಿಸಿದರು. ಚಿತ್ರದಲ್ಲಿ ಬರೆಯುವಂಥ ಸನ್ನಿವೇಶ ಅದು! ಅಷ್ಟೊಂದು ಅಶಕ್ತಿಯ ಆ ಅವಸ್ಥೆಯಲ್ಲೂ ಮಹರ್ಷಿಯ ಕಂಗಳ ಚುರುಕು, ಸೂಕ್ಷ್ಮತೆ, ವಿಷಯವನ್ನರಿಯುವ ಉತ್ಸುಕತೆ, ಅವರಿಗೆ ಈ ಲೋಕವ್ಯವಹಾರದ ಶ್ರದ್ಧೆ, ಅವರ ಪವಿತ್ರತೆಯ ಸಂಬುಗೆಯನ್ನು ಯಾರಿಗೂ ಮನವರಿಕೆ ಮಾಡಿಕೊಡುವಂತಿತ್ತು.

ಕಿರಿಯ ಅಗಸ್ತ್ಯರು ತಂದೆಗೆ ಕೇಳುವಷ್ಟು ಹಿತಮಿತ ಸ್ವರದಲ್ಲಿ ಉಚ್ಚರಿಸಿದ ಮಂತ್ರ ಹೀಗೆ:—

**ಏತ ಉತ್ಯೇ ಪ್ರತ್ಯದೃಶ್ರನ್ ಪ್ರದೋಷಂ ತಸ್ಕರಾ ಇವ |**
**ಅದೃಷ್ಟಾ ವಿಶ್ವದೃಷ್ಟಾಃ ಪ್ರತಿಬುದ್ಧಾ ಅಭೂತನ ||**

ಇದನ್ನು ಕೇಳಿದೊಡನೆಯೇ ಹಿರಿಯರು ಮರಣಶಯ್ಯೆಯಿಂದ ಎದ್ದು

ಚಾಲಿತ ಯಂತ್ರದಂತೆ ಅರ್ಧಮರ್ಧ ಮೇಲಕ್ಕೇ ಎದ್ದು ಕುಳ್ಳಿರಲಾರಂಭಿಸಿದರು ! ! ಆ ಮಂತ್ರದಲ್ಲಿ ಆ ಶಕ್ತಿ ಇದ್ದಿತು !!!

ಕಿರಿಯ ಅಗಸ್ತ್ಯರ ಜೊತೆಗೆ ಭೃಗುಗಳೂ ಆಗ ಕೂಡಿಕೊಂಡು ಆ ಹಿರಿಯರನ್ನು ಮತ್ತೆ ಮಲಗಿಸಿ, ಅವರ ಪಾದಗಳನ್ನು ಕಣ್ಣಿಗೊತ್ತಿಕೊಂಡರು.

ಹಿರಿಯರು ಆ ಮಂತ್ರೋಚ್ಚಾರಣೆಯಿಂದ ಉದ್ದಿಷ್ಟವಾದ ಪುತ್ರನ ಅರ್ಥ ತಮಗೆ ತಿಳಿಯಿತೆಂಬುದನ್ನು ತೋರಿಸಿಕೊಡಲು, ಅದಕ್ಕೆ ಸಂಬಂಧಿಸಿದ ಇನ್ನೊಂದು ಮಂತ್ರವನ್ನು ಕ್ಷೀಣಸ್ವರದಲ್ಲಿ ಹೀಗೆ ಉಚ್ಚರಿಸಿದರು.

**ದ್ಯೌರ್ವಃ ಪಿತಾ ಪೃಥಿವೀ ಮಾತಾ ಸೋಮೋ ಭ್ರಾತಾ**
**ಅದಿತಿಃ ಸ್ವಸಾ ।**
**ಅದೃಷ್ಟಾ ವಿಶ್ವದೃಷ್ಟಾಃ ತಿಷ್ಠತೇಳಯತಾ ಸು ಕಂ ॥**

ಮಂತ್ರವನ್ನು ಪೂರ್ತ ಉಚ್ಚರಿಸಲಾಗದೇ, ನಿಲ್ಲಿಸಿ, ನಿಲ್ಲಿಸಿ ತಡವರಿಸುತ್ತಾ ಹೇಳಿದ ಆ ಗಾಂಭೀರ್ಯ, ಅಪೂರ್ವವಾಗಿತ್ತು. ಮಂತ್ರ ಮುಗಿದೊಡನೇ ಮಹರ್ಷಿಯ ಕಂಗಳು ನೀರುತುಂಬಿತುಳುಕಿ, ಅರ್ಥಬಲ್ಲವರಿಗೆ ಅದೊಂದು ಉಪನ್ಯಾಸವನ್ನೇ ಮಾಡಿದಂತೆ ಆಯಿತು.

(ವೇದವ್ಯಾಸರು ವೇದವಿಭಾಗ ಮಾಡಿದ ನಂತರ ಇವು ಈಗಿನ ವ್ಯವಸ್ಥೆಯಂತೆ ಋಕ್‌ಸಂಹಿತೆಯ ಪ್ರಥಮ ಮಂಡಲದ ೧೯೧ ನೇ ಸೂಕ್ತದ ೫ ಮತ್ತು ೬ ನೇ ಮಂತ್ರಗಳಾಗಿ ಸಂಯೋಜಿಸಲ್ಪಟ್ಟಿವೆ.)

ಕಿರಿಯ ಅಗಸ್ತ್ಯರು ಉಚ್ಚರಿಸಿದ ಮಂತ್ರದ ಅರ್ಥ ಹೀಗೆ; "ಅಯ್ಯೊ! ಆಶ್ರಮಸ್ಥರೇ !! ಈಗ ನೀವು ಪ್ರತಿಬದ್ಧರಾಗಿ, ಜಾಗ್ರತರಾಗಿ ಇರಬೇಕಾದುದು ಅತ್ಯವಶ್ಯ. ಏಕೆಂದರೆ ವಿಷಪೂರ್ಣ ಜಂತುಗಳು, ಈ ಸಂಧ್ಯಾಕಾಲದ ಮಬ್ಬಿನಲ್ಲಿ, ಕಳ್ಳರಂತೆ ಕಾಣಿಸಿಕೊಳ್ಳಲಿವೆ ! ನೀವು ಅವುಗಳನ್ನು ಕಾಣುವುದು ಕಷ್ಟವಾದರೂ ಅವು ನಿಮ್ಮನ್ನು ನೋಡುತ್ತಲೇ ಇರುತ್ತವೆ. ! ಎಚ್ಚರಿಕೆ ಇರಲಿ."

ಹಿರಿಯ ಅಗಸ್ತ್ಯರಿಗೆ ಇದರ ಸಂದರ್ಭ ಥಟ್ಟನೆ ಹೊಳೆದು, ಯಾರೋ ವಿಷಜಸ್ತುಪ್ರಾಯನಾದ ಒಬ್ಬ ಅನಾರ್ಯನು ಈಗ ಮಹರ್ಷಿಯ ದರ್ಶನಕ್ಕಾಗಿ ವೇಷತೊಟ್ಟು ಬರುತ್ತಿರುವನೆಂದೂ, ಆಶ್ರಮಸ್ಥರು ಸನಾ ಜಾಗರೂಕರಾಗಿರುವ ಅವಶ್ಯಕತೆಯುಂಟೆಂದೂ, ಹಿರಿಯರು ಹಿಂದೆ ಕಂಡವಿಷಜಸ್ತುವೊಂದು ಬರುತ್ತಿರುವುದರಿಂದ ಅದರ ಯಥಾ ಯೋಗ್ಯನಿಗ್ರಹಕ್ಕೆ ತಮ್ಮ ಅಪ್ಪಣೆ ಕಿರಿಯರಿಗೂ ಇತರರಿಗೂ ಬೇಕಾದ ಅವಶ್ಯಕತೆಯುಂಟೆಂದೂ, ಅದನ್ನೂ ಉಪಾಯಾಂತರದಿಂದ ತಿಳಿಸಿ, ಆಶೀರ್ವಾದಕ್ಕಾಗಿ ಎಲ್ಲರೂ ಕಾದಿರುವರೆಂದೂ ಅರ್ಥವಾಯಿತು.

ಕಿರಿಯರ ಜಾಣ್ಮೆಯನ್ನು ಹಿರಿಯ ಅಗಸ್ತ್ಯರು ಮೆಚ್ಚಿದರೋ, ಏರೆ ಸಂದೇಶ ತಿಳಿಸಲೆಂದೇ ಅರ್ಧಮರ್ಧ ಹಾಸಿಗೆಯಿಂದೇಳುವ ಪ್ರಯತ್ನ ಮಾಡಿದ್ರು.

ಆದರೆ ನಿಗ್ರಹಕ್ಕೆ ಮೊದಲು ಆ ವಿಷಜಸ್ತುವಿಗೆ ಆಶ್ರಮದ ಉಪದೇಶ ಒಂದು ತೀವ್ರಬಗೆಯಲ್ಲಿ ಆಗಲೆಂಬಂತೆ ಅವರು ಉಚ್ಚರಿಸಿದ ಆ ಅನುಬಂಧೀಮಂತ್ರವು ಹೀಗೆ ಅರ್ಥಕೊಟ್ಟಿತ್ತು.

"ಎಲೈ ವಿಷಜನ್ತುಗಳೇ, (ನಮ್ಮಂತೆಯೇ) ನಿಮಗೂ ದ್ಯುಲೋಕವೇ ತಂದೆ; ಭೂಮಿಯೇ ತಾಯಿ; ಸೋಮನೇ ಸೋದರ; ಅದಿತಿಯೇ ಸೋದರಿ ಆಗಿದ್ದಾರೆ. ನೀವು ಅಡಗಿರುವುದು ಗೂಢಪ್ರದೇಶದಲ್ಲಿ, ಹೌದು: ನಿಮಗೆ ವಿಶ್ವವನ್ನೇ ಅರಿಯಬಲ್ಲ ಶಕ್ತಿಉಂಟೆಂಬುದೂ ನಿಜವೇ. ಆದರೆ ನೀವು ಎಲ್ಲಿದ್ದೀರೋ ಅಲ್ಲೇ ಸುಖವಾಗಿರುವುದು (ಎಲ್ಲರಿಗೂ) ಒಳ್ಳೆಯದು."

ಋಷಿಯ ಅಗಸ್ತ್ಯರು ಇಲ್ವಲನಂಥವರಿಗೆ ಹಿಂದೊಂದು ಸಂದರ್ಭದಲ್ಲಿ ದೇವತೆಗಳ ಆಜ್ಞೆಯಂತ ಕಳುಹಿದ ಸಂದೇಶ ಇದು. ಇದರ ಹೃದಯ ವೈಶಾಲ್ಯವನ್ನು ಏನೆಂದು ವಿವರಿಸೋಣ ! "ಅಯ್ಯಾ ! ವಿಷಜನ್ತುಗಳಂತೆ ಬಿಲದಲ್ಲೇ ಅಡಗುವ ಪ್ರಯತ್ನದ ಸಂಕುಚಿತ ಮಾನವರೇ, ದಾನವರೇ ! ಈ ಭೂಮಿ ಎಲ್ಲ ನಿಮ್ಮದೇ ಎಂಬ — ಇತರರು ಮಣ್ಣಿನ ಮಕ್ಕಳಲ್ಲ ವೆಂಬ — ಪ್ರತ್ಯೇಕತಾ, ಸಂಕುಚಿತ ಮನೋಭಿಪ್ರಾಯ ಸಲ್ಲದು; ಈ ಭೂಮಿಯ ಮೇಲೆ ವಾಸಿಸುವ ಎಲ್ಲ ಮಾನವರೂ ಒಂದೇ ಕುಲದವರು; ಏಕೆಂದರೆ ಆಕಾಶಾಭಿಮಾನಿದೇವತೆಯೇ ನಮ್ಮೆಲ್ಲರಿಗೂ ಸಮಾನ ತಂದೆ ! ಈ ಭೂಮಿಯೇ ಎಲ್ಲರ ತಾಯಿ. ಆನಂದದ ಸ್ವರೂಪಿಯಾದ ಸೋಮನೇ ಎಲ್ಲರಿಗೂ ಸೋದರ, ವಿಶ್ವದ ಅನಂತತೆಯ ಪ್ರತೀಕಳಾದ ಅದಿತಿಯೇ ನಮ್ಮೆಲ್ಲರ ಸೋದರಿ. ನೀವು ವಿಶ್ವವನ್ನೇ ನೋಡಬಲ್ಲ ಶಕ್ತಿಯುಳ್ಳ ವರು ! ಇತರರಿಗೆ ತಿಳಿಯದಂತೆ ನೀವು ಅಲ್ಲಲ್ಲಿ ಅಡಗಿ ಪ್ರಯೋಜನ ವೇನು? ವಿಶಾಲ ವಿಶ್ವವನ್ನು ನೀವು ನೋಡಬೇಡವೇ? ನೀವು ನಿಮ್ಮ ಸ್ಥಾನಗಳಲ್ಲಿ ಸುಖವಾಗಿರಬೇಕೆಂಬುದೇ ನಮ್ಮ ಆಸೆ. ನಾವು ಅದಕ್ಕೆ ಭಂಗ ತರುವವರಲ್ಲ. ನೀವೂ ನಮಗೆ ತೊಂದರೆ ಮಾಡದೆ, ಇಬ್ಬರೂ ಸಹ ಬಾಳ್ವೆ ನಡೆಸೋಣ."

ಇಲ್ವಲ, ಮಹರ್ಷಿಗಳ ಬಗ್ಗೆ, ವಿಶೇಷವಾಗಿ ಅಗಸ್ತ್ಯರ ಬಗ್ಗೆ ನಡೆಸಿದ್ದ ಅಪಪ್ರಚಾರಕ್ಕೆ ಅಂದು ಇದು ನೇರ ಉತ್ತರವಾಗಿ ತೋರಿತು.

ಮಗನ ಹೃದಯ, ತಂದೆಯ ಹೃದಯ ಒಂದೇ ಆಗಿದ್ದ ಅಚ್ಚರಿಯ ಸಂದರ್ಭ ಅದು. ಮೇಲೆದ್ದ ಕಿರಿಯ ಅಗಸ್ತ್ಯರು ಗಂಟೆಯಂತೆ ಗಟ್ಟಿಯಾದ ಸ್ವರದಲ್ಲಿ "ಪ್ರತಿಬುದ್ಧಾ ಅಭೂತನ" ಎಂದು (ಎಚ್ಚರವಾಗಿರಿ) ಎಂದು ಗರ್ಜಿಸಿದರು. ಉಳಿದ ಋಷಿಗಳೆಲ್ಲ ಅದನ್ನು ಪ್ರತ್ಯುಚ್ಚಾರ ಮಾಡಿ, ಎಲ್ಲರಿಗೂ ಅದನ್ನು ಕೇಳಿಸಿದರು. ಆ ಸಂಧ್ಯಾಕಾಲ ಹೀಗೆ ಪ್ರತಿಬುದ್ಧ ವಾಗಿ, ಇಲ್ವಲನಿಗೆ ವಿಶೇಷ ಸ್ವಾಗತಕ್ಕೆ ಏರ್ಪಾಡಾಯಿತು.

---

## ೬. ಅಗಸ್ತ್ಯಾಶ್ರಮದಲ್ಲಿ ಇಲ್ವಲ!

ಒಂದು ವಾರ ಕಳೆಯಿತು. ಆಶ್ರಮಕ್ಕೆ ಒಂದು ಹರಿದಾರಿ ದೂರ ದಲ್ಲಿ ಇಲ್ವಲ ಮಿತಪರಿವಾರದೊಡನೆ ಸಮೀಪಿಸಿದ ವಾರ್ತೆ ಅಗಸ್ತ್ಯಾ ಶ್ರಮಕ್ಕೆ ತಲುಪಿತು.

ಕಿರಿಯ ಅಗಸ್ತ್ಯರು ಆಶ್ರಮಕ್ಕೆ ಅಷ್ಟದಿಗ್ಬಂಧನ ಮಾಡಿಸಿದರು. ಋಷಿಸಂಘ ಗಗನ ಮುಟ್ಟುವಂತೆ ಮಂತ್ರ ಘೋಷ ಮಾಡಿತು.

**ಯೇ ದೇವಾಃ ಪುರಸ್ಸದೋಽಗ್ನಿನೇತ್ರಾಃ ರಕ್ಷೋಹಣಸ್ತೇನಃ**
**ಪಾಂತು ತೇ ನೋಽವಂತು ತೇಭ್ಯೋ**
**ನಮಸ್ತೇಭ್ಯ ಸ್ವಾಹಾ** ........ಇತ್ಯಾದಿ.

"ಯಾವ ದೇವ ಗಣಗಳು ಅಗ್ನಿಯ ನೇತೃತ್ವದಲ್ಲಿ ಪೂರ್ವ ದಿಕ್ಕಿನಲ್ಲಿ ವಾಸಿಸುವರೋ, ಯಾವ ಆ ದೇವತೆಗಳು ರಾಕ್ಷಸರನ್ನು ನಾಶಪಡಿಸ ಬಲ್ಲರೋ, ಅವರು ಅಲ್ಲೇ ಇರುತ್ತಾ ನಮ್ಮನ್ನು ರಕ್ಷಿಸಲಿ, ಪಾಲಿಸಲಿ, ಅವರಿಗೆ ನಮಸ್ಕಾರ. ಇವರಿಗೆ ಇಕೋ, ಬಲಿಯನ್ನಿಡುತ್ತೇನೆ....." ಎನ್ನುತ್ತಾ ಕ್ರಮವಾಗಿ ದಿಕ್ಕುಗಳಲ್ಲಿ ಪುಷ್ಪ, ಅಕ್ಷತೆ, ತೀರ್ಥಗಳನ್ನು ಚೆಲ್ಲುತ್ತಾ, ಆಶ್ರಮದ ಸುತ್ತಾ ಮಂತ್ರರಕ್ಷೆಯನ್ನು ಮಾಡಿದರು. ಆಗ ಅಗ್ನಿಯೇ ಪೂರ್ವದಿಕ್ಕಿನ ರಕ್ಷಕನಾಗಿಯೂ, ದಕ್ಷಿಣಕ್ಕೆ ಯಮನೂ, ಪಶ್ಚಿಮಕ್ಕೆ ಸೂರ್ಯನೂ ಉತ್ತರಕ್ಕೆ ವರುಣನೂ, ಊರ್ಧ್ವ ದಿಕ್ಕಿಗೆ ಬೃಹಸ್ಪತಿಯೂ ರಕ್ಷಕರಾಗಿದ್ದು, "ದಿಕ್ ಪಲ್ಲಟ" ಇಲ್ಲದಿದ್ದ ಕಾಲ ಅದು.

ಋಷಿಗಳ ಮಂತ್ರವಾಣಿಗೆ ಮನಸೋತು ಅವರ ಒಳಗಣ್ಣಿಗೆ ಕಾಣುವಂತೆಯೇ ಆ ಆ ದೇವಗಣಗಳು ತಂತಮ್ಮ ದಿಕ್ಕಿನಲ್ಲಿ ಬರುತ್ತಾ. ತಮ್ಮ ಆಯುಧ ವಾಹನ ವಿಶಿಷ್ಟರಾಗಿ. ಆಶ್ರಮದ ರಕ್ಷೆಯ ಹೊಣೆಯನ್ನು ಹೊತ್ತರು !

ಆಶ್ರಮದ ಹೊರವಳೆಯದ ನದೀ ತೀರ್ಥಗಳಿಗೆ ರಾಕ್ಷಸರು ವಿಷ ಪ್ರಯೋಗ ಮಾಡುವುದನ್ನು ತಡೆಯಲು, ತೀರ್ಥರಕ್ಷಕರಾಗಿ ಭೃಗು ಪರಿವಾರದ, ಹೊಸತರಬೇತೀ ಪಡೆದ ಯುವವಟುಗಳು ನಿಯಮಿಸಲ್ಪಟ್ಟರು. ಇಲ್ವಲನ ಸೈನ್ಯದ ಕಣ್ಣಿಗೆ ಬೀಳದಂತೆ. ತಾವು ಮಾತ್ರ ಅವರನ್ನು ಕಾಣಲಾಗುವಂತೆ, ಸಮಯ ಬಿದ್ದರೆ, ಪಾನೀಯ ದೂಷಕರನ್ನು ಹಿಡಿಯುವಂತೆಯೂ, ಸಂಹರಿಸುವಂತೆಯೂ, ಆಯಕಟ್ಟಿನ ಸ್ಥಳದಲ್ಲಿ ಭೃಗುಶಿಷ್ಯರು ಅಡಗಿ ಕುಳಿತರು.

ಆಂಗೀರಸ ಶಿಷ್ಯರಿಗೆ ಒದಗಿದ ಆ ಅರಣ್ಯದ ರಕ್ಷಣೆಯ ಕೆಲಸ ದೊರೆಯಿತು. ಇಲ್ವಲನ ಕಡೆಯವರು ಕಾಡಿಗೇ ಬೆಂಕಿ ಇಟ್ಟರೋ ? ಶಿಷ್ಯರು ಅಡವೀ ಜನರ ವೇಷ ಧರಿಸಿ ಅಲ್ಲಲ್ಲಿ ಚದುರಿ ಅಡಗಿಕೊಂಡರು.

ಧನುರ್ಬಾಣ ಧಾರಿಗಳಾದ ಕಣ್ವಶಿಷ್ಯರು ಇಲ್ವಲನ ಸೈನ್ಯವನ್ನು ಗೂಢವಾಗಿ ಹಿಂಬಾಲಿಸಲಾರಂಭಿಸಿದ್ದರು. ಅವರ ಚಲನ ವಲನಗಳ ಮೇಲೆ ಕಣ್ಣಿಟ್ಟು ಮುಖ್ಯ ಸಂಗತಿಗಳನ್ನು ಮುಂಚಿತವಾಗಿ ಆಶ್ರಮಕ್ಕೆ ತಿಳಿಸುವ ಏರ್ಪಾಟು ಅವರ ಹೊಣೆಯಾಗಿತ್ತು.

ಆಶ್ರಮದ ಆಹಾರ ಧಾನ್ಯಾನಿನ ರಕ್ಷೆ ಗೋತಮರ ಶಿಷ್ಯರ ಪಾಲಿಗೂ ಗೋಶಾಲೆಯ ರಕ್ಷೆ ಜಮದಗ್ನಿ ಶಿಷ್ಯರಿಗೂ, ಸ್ತ್ರೀಯರ ರಕ್ಷೆ ಅತ್ರಿ ಶಿಷ್ಯರಿಗೂ, ಸ್ವಾಗತ ಕಾರ್ಯ ಪ್ರಿಯವ್ರತ ಮತ್ತು ಚಾಕ್ರಾಯಣರ ನೇತೃತ್ವದ ಇಪ್ಪತ್ತು ವಯಸ್ಕ, ನುರಿತ ಅಗಸ್ತ್ಯಶಿಷ್ಯರಿಗೂ ವಹಿಸಲ್ಪಟ್ಟವು.

ಮುಖ್ಯ ಗೂಢಚಾರನಾದ ಧೃತವ್ರತನಿಂದ ಅಂದು ಮುಂಜಾವಿನಲ್ಲಿ ಬಂದ ವಾರ್ತೆ. ಇಲ್ವಲ ತನ್ನ ಸೋದರ ವಾತಾಪಿಯೊಡನೆ ಬರುತ್ತಿದ್ದಾನೆ. ನೂರು ನುರಿತ ಮಾಯಾವೀ ಯೋಧರು ಅವನ ಅಂಗರಕ್ಷಕರಾಗಿ ಬರುತ್ತಿದ್ದಾರೆ. ಅವನ ಮಂತ್ರಿಗಳಾರೂ ಬಳಿ ಇಲ್ಲ. ಪ್ರಬಲವಾದ ಅವನ ದೊಡ್ಡ ಸೇನೆ ನೂರು ಹರಿ ದಾರಿ ದೂರದಲ್ಲಿ ಗೋದಾವರೀ ತೀರದಲ್ಲಿ ಬೀಡು ಬಿಟ್ಟಿದೆ. ಇಲ್ವಲನ ಕುದುರೆಗಳು ಬಲಿಷ್ಠವಾಗಿವೆ. ಇಲ್ವಲನ ಉದ್ದೇಶ್ಯ, ಅಗಸ್ತ್ಯಾಶ್ರಮದಲ್ಲಿ ಮಾಹಿತಿ ಸಂಗ್ರಹಿಸುವುದು—ಪ್ರಬಲ ಋಷಿಗಳಾರು. ಅವರ ಸನ್ನಾಹವೇನು, ಉತ್ತರಭಾರತದ ಯಾವ ಯಾವ ಅರಸರು ಇನ್ನೂ ಪ್ರಬಲ ಉಂಟು. ಅವರಿಗೆ ಯಾವ ಋಷಿಗಳ ಪ್ರೋತ್ಸಾಹ, ಮಾರ್ಗದರ್ಶನವಿದೆ. ಹಿರಿಯ ಅಗಸ್ತ್ಯರು ಅಸ್ತಂಗತರಾದರೆ ಕಿರಿಯರ ಮುಂದಿನ ಉದ್ಯೋಗವೇನು ? ತಮ್ಮ ಚಿತ್ರಹಿಂಸಾ ವಿಹಾರದಿಂದ ತಪಿಸಿಕೊಂಡ ಕಣ್ವ ಇನ್ನೂ ಬದುಕಿರುವನೇ ? ಹಾಗೆ ಋಷಿಗಳ ರಕ್ಷಣೆಗೆ ಹೊಸವ್ಯೂಹ ಏರ್ಪಟ್ಟಿರುವುದು ನಿಜವೇ ? ಅವರ ಬಲ ಎಷ್ಟು ? ಇತ್ಯಾದಿ.

* * *

ಆಶ್ರಮದ ಮಹಾದ್ವಾರದಲ್ಲಿ ಇಲ್ವಲ ಕಾಣಿಸಿಕೊಂಡ! ಅಲ್ಲಿ ಯಾವ ಶೃಂಗಾರವೂ ತನ್ನ ಸ್ವಾಗತಕ್ಕಿಲ್ಲದುದನ್ನು ಕಂಡು ದುಮ್ಮಾನದಿಂದ ಮನಸ್ಸು ವ್ಯಗ್ರವಾಯಿತು. ಇದನ್ನು ಅರಿತನೋ ಎಂಬಂತೆ, ಅಲ್ಲಿ ದ್ವಾರದಲ್ಲೇ ನಿಂತಿದ್ದ ಚಾಕ್ರಾಯಣ :—

“ಮಹಾರಾಜರಿಗೆ ಸ್ವಾಗತ! ಹಿರಿಯ ಅಗಸ್ತ್ಯರ ಸದ್ಯದ ಪರಿಸ್ಥಿತಿಯಲ್ಲಿ ಯಾರಿಗೂ ಇಲ್ಲಿ ಸಡಗರದ ಸ್ವಾಗತಕ್ಕೆ ಏರ್ಪಾಡಿಲ್ಲ’’ ಎಂದವನೇ ಕಣ್ಣು ಸಂಜ್ಞೆ ಮಾಡಿದೊಡನೆ. ಸಿದ್ಧರಾಗಿದ್ದ ವಟುಗಳು ವೇದಘೋಷ ಮಾಡಿದರು.

**ದೇವಾಸುರಾಸ್ಸಂಯತ್ತಾ ಆಸನ್ ಕನೀಯಾಗ್ಂಸೋ ದೇವಾ ಆಸನ್, ಭೂಯಾಗ್ಂಸೋ ಅಸುರಾಸ್ತೇ ದೇವಾ ಏತಾ ಇಷ್ಟಕಾ ಅಪಶ್ಯನ್........**

ಇದನ್ನು ಕೇಳಿದೊಡನೆಯೇ ಇಲ್ವಲ ಒಳಗೊಳಗೇ ಸಿಡಿಮಿಡಿ ಗುಟ್ಟಿದರೂ ಹೊರಗೆ ತೋರ್ಪಡಿಸುವಂತಿರಲಿಲ್ಲಿ! ವಾತಾಪಿಗೂ ಮುಖಭಂಗವಾಯಿತು! ಆದರೆ ಹೃದಯದನ್ನು ಪ್ರಕಟಿಸದೆ ಮುಚ್ಚಿಡುವ ನಾಟಕದಲ್ಲಿ ಅವನೂ ಅಗ್ರಜನಿಗೇನೂ ಕಮ್ಮಿಯಿರಲಿಲ್ಲ.

ಅಷ್ಟು ಕೋಪಗೊಳ್ಳುವ ವಿಷಯ ಈ ಮಂತ್ರದಲ್ಲೇನಿತ್ತೆಂದು ಹೇಳೋಣವೇ ? "ದೇವತೆಗಳೂ ಅಸುರರೂ ತಂತಮ್ಮ ಕೈ ಮೇಲಾಗಲು ಪರಸ್ಪರ ಯತ್ನಿಸಿದ್ದರು. ದೇವತೆಗಳ ಸಂಖ್ಯೆ ಯಾವಾಗಲೂ ಕಡಿಮೆಯೇ !! ಅಸುರರ ಜನಸಂಖ್ಯೆಯೋ ಹೆಚ್ಚು !!! ಆಗ ತಮ್ಮ ಬಲ, ಸಂತತಿ ವೃದ್ಧಿ ಪಡಿಸಲು ದೇವತೆಗಳಿಗೆ ಈ ಒಂದು ಯಾಗವು ಪ್ರತ್ಯಕ್ಷವಾಯಿತು. ನಾಲ್ಕು ದಿಕ್ಕುಗಳನ್ನೂ, ಮೇಲು ಕೆಳಗಿನ ದಿಕ್ಕುಗಳನ್ನೂ ಆಗ ವಿಶೇಷ ಮಂತ್ರಗಳಿಂದ ಅವರು ಜಯಿಸಿ. ಅಸುರರನ್ನು ಸೋಲಿಸಿದರು." ಎಂದರ್ಥ.

ಇದನ್ನು ಆಗ ಸ್ವಾಗತಕ್ಕೆ ಆಯ್ದುಕೊಟ್ಟವರು ಸ್ವಯಂ ಕಿರಿಯ ಅಗಸ್ತ್ಯರು! (ಈಗಿನ ಕೃಷ್ಣಯಜುಸ್ ಸಂಹಿತೆಯಲ್ಲಿ ಇದು 5-3-11ರಲ್ಲಿ ಬರುತ್ತದೆ.) ಅದು ಸಮಯೋಚಿತವೂ, ಇಲ್ವಲನಿಗೆ ತಾತ್ಕಾಲಿಕ ಸಂದೇಶವೊಂದನ್ನು ಮುಟ್ಟಿಸುವುದಾಗಿಯೂ ಇದ್ದಿತು. ಅದರ ಧ್ವನಿ ಹೀಗಿತ್ತು. "ಎಲೋ ಇಲ್ವಲ! ಅಸುರರಾಜನಾದ ನಿನಗೆ ಈಗ ನಿನ್ನವರ ಜನ ಬಲ ಬಹಳ ಇರಬಹುದು- ದೇವ ಪಕ್ಷಪಾತಿಗಳಾದ ನಾವು ಈಗಲೂ (ಯಾವಾಗಲೂ) ಕಡಿಮೆ ಸಂಖ್ಯೆಯವರೇ ಇರಬಹುದು. ಅದು ದೊಡ್ಡ ವಿಷಯವಲ್ಲ. ಆಗಾಗ ನಮಗೂ ಬಲಿಷ್ಠರಾಗುವ

ಯೋಗ ಬರುತ್ತದೆ- ನಮ್ಮ ನಿಜ ಬಲ ಇರುವುದು ವೇದದಲ್ಲಿ, ಯಾಗಗಳಲ್ಲಿ, ಯಜ್ಞಗಳಲ್ಲಿ. ಅಂಥದೊಂದು ಈಗ ನಡೆಯುವುದರಲ್ಲಿದೆ. ಹತ್ತು ದಿಕ್ಕುಗಳನ್ನೂ ನಾವು ಇನ್ನು ಜಯಿಸುತ್ತೇವೆ. ನಿನ್ನವರ ಆಟ ಇನ್ನು ನಡೆಯಲಾರದು." ಎಂದು.

ಬುದ್ಧಿವಂತನಾದ ಇಲ್ವಲ ಅದನ್ನರಿತು ಹೇಗೆ ಸುಖಿಯಾಗಿದ್ದಾನು ?... ಆಶ್ರಮ ದ್ವಾರದಿಂದ ನಾಲ್ಕೈದು ಅಡಿ ಒಳಗಿಡುವಷ್ಟರಲ್ಲೇ ಪ್ರಗಾಥಕಣ್ವರ ಕೃಶ ಆಕೃತಿ ಅಲ್ಲಿ ನಿಂತಿದ್ದು, ತನ್ನನ್ನೇ ತೀಕ್ಷ್ಣ ದೃಷ್ಟಿಯಿಂದ ನೋಡುತ್ತಿರುವುದನ್ನು ಇಲ್ವಲ ಗಮನಿಸಿದ. ಮನಃಸ್ಥೈರ್ಯ ಮತ್ತೂ ಕುಸಿಯಿತು ! ಅದರೂ ನುಂಗಿಕೊಂಡ !!

"ರಾಜಾಶೀರ್ವಾದಕ್ಕೆ ಈ ಮಂತ್ರವನ್ನು ನಾನೆಲ್ಲೂ ಈವರೆಗೆ ಕೇಳಿರಲಿಲ್ಲ !'' ಎಂದು, ಹೊಸದನ್ನು ಕೇಳಿ ಸಂತಸಪಟ್ಟವನಂತೆ ಪ್ರಿಯವ್ರತನ ಕಿವಿಯಲ್ಲಿ ಮೆಲ್ಲನೆ ಉಸುರಿದ. "ಕಪಟೀ ಋಷಿಗಳಿರಾ ! ನಿಮ್ಮ ಅರ್ಥ ನನಗೆ ತಿಳಿಯಿತು !'' ಎಂಬುದರ ಸೂಚನೆ ಅದಾಗಿತ್ತು ! ಅದಕ್ಕೆ ಪ್ರಿಯವ್ರತ ಥಟ್ಟನೆ ಉತ್ತರಿಸಿದ.

"ಮಹಾರಾಜರೇ ! ಇಲ್ಲಿ ಯಾವುದೂ ಪೂರ್ವ ಸಿದ್ಧತೆಯಂತೆ ನಡೆಯುವುದಿಲ್ಲ. ಅಂದಂದಿನ ಪರಿಸ್ಥಿತಿಗನುಗುಣವಾಗಿಯೇ ಆ ಆ ಮಂತ್ರಗಳು ದೈವಪ್ರೇರಿತವಾಗಿ ವಟುಗಳ ಬಾಯಲ್ಲಿ ಬರುತ್ತವೆಯಷ್ಟೆ ! ಅರ್ಥಶೂನ್ಯವಾದ ಹಿಂದಿನ ಆಚಾರಗಳಿಗೆ ಅಗಸ್ತ್ಯಾಶ್ರಮದಲ್ಲಿ ಅವಕಾಶವಿಲ್ಲ. ಅಂತೂ ತಾವಿನ್ನೂ ವೇದಾಭಿಮಾನಿಗಳೂ, ವೇದಾಭಿಜ್ಞರೂ ಆಗಿರುವುದು ಮಹರ್ಷಿಗಳ ಪುಣ್ಯ :'' ಎಂದು ವ್ಯಂಗ್ಯೋಕ್ತಿಯನ್ನಾಡಿದ.

ಅಷ್ಟರಲ್ಲಿ ಇಲ್ವಲ ಮುಂದೆ ಅಡಿಯಿಡದಂತೆ ಪೂರ್ವದಿಗ್ಭಾಗದಲ್ಲಿ ಆಸೀನರಾಗಿದ್ದ ಅಗ್ನಿನೇತೃತ್ವದ ದೇವತೆಗಳು ಅವನ ಮುಂದೆ ಭಯಂಕರ ಅಗ್ನಿಜ್ವಾಲೆಯ ಕಿಚ್ಚನ್ನು ಗಗನದೆತ್ತರಕ್ಕೆ ಅಲ್ಲಿ ಅವನೊಬ್ಬನ ಒಳಗಣ್ಣಿಗೆ ಕಾಣುವಂತೆ ಮಾಡಿದರು !

ಇಲ್ವಲ ದಿಢೀರನೆ ನಿಂತ ! ಪರಿವಾರದವರೂ ಸಹ !! ಋಷಿ ಸಂಘ ಒಳಗೊಳಗೇ ನಕ್ಕಿತು. "ಮಹಾರಾಜರು ದಯಮಾಡಿಸಬೇಕು !' ಎಂದು ಮತ್ತೆ ಅಣಕದ ಸ್ವಾಗತ ನೀಡಿದರು.

ಏನೂ ಹೇಳಲೂ ತೋರದ ಇಲ್ವಲ, "ಇದು ಪವಿತ್ರ ಆಶ್ರಮ ! ನಾವು ದಾರಿಯ ಆಯಾಸದಿಂದಲೂ, ಭಿನ್ನ ಆಚಾರ ವಿಚಾರದಿಂದಲೂ ದೂಷಿತರಾಗಿದ್ದೇವೆ. ನಮಗೆ ಇಲ್ಲೇ ಬಿಡಾರ ಕಲ್ಪಿಸುವುದು ಒಳ್ಳೆಯದು" ಎಂದು ಸಾಮೋಪಾಯದಿಂದ ಸೂಚಿಸಿದ.

ಚಾಕ್ರಾಯಣ ತಲೆವಾಗಿದ. ಆಶ್ರಮದ ಹೊರವಳಯದಲ್ಲಿ ಇಲ್ವಲನ ಪರಿವಾರಕ್ಕೆ ಹೊಂದುವ ಬೀಡಾರ ಬೇಗ ನಿರ್ಮಾಣವಾಯಿತು. ಆತಿಥ್ಯ ನಡೆಯಿತು. ಸಪ್ತರ್ಷಿಗಳೂ ತಾವಾಗಿ ಬಂದು ಇಲ್ವಲನಿಗೆ ದರ್ಶನವಿತ್ತರು! ಆ ಮಹಾವ್ಯಕ್ತಿಗಳ ನಾಮೂಹಿಕ ಸಾತ್ವಿಕ ತೇಜಸ್ಸಿನಲ್ಲಿ ಇಲ್ವಲನ ಆಸುರೀ ತೇಜಸ್ಸು ಮುಳುಗಿಹೋಯಿತು ! ಅವನಿಗರಿವಿಲ್ಲದೆಯೇ ಅವನ ಅಂತಃಸತ್ತ್ವ ಕುಸಿದು, "ನಾನೂ ವೈದಿಕ ವಾತಾವರಣದಲ್ಲೇ ಮುಂದುವರೆದಿದ್ದರೆ !" ಎಂಬ ಭಾವ ಕ್ಷಣ ಮಾತ್ರದಲ್ಲಿ ಮಿಂಚಿ ಮಾಯವಾಯಿತು ! ಅದರ ಬೆನ್ನಿಗೇ ಅವನ ಆಸುರೀ ಮರಭಿಮಾನ ತಲೆ ಎತ್ತಿ ಆ ವಾತಾವರಣದಲ್ಲೇ ನಾನು ಮುಂದುವರೆದಿದ್ದರೆ ಭರತ ಖಂಡದ ಚಕ್ರವರ್ತಿಯಾಗುವ ನನ್ನ ಕನಸು ಈಡೇರುತ್ತಿತ್ತೇ ?" ಎಂಬ ಆತ್ಮ ಸಮರ್ಥನೆ ತಲೆ ಎದ್ದು ಮತ್ತೆ ಆತ್ಮವಿಶ್ವಾಸ

ಒಂದು ರೀತಿಯಲ್ಲಿ ಮೂಡಿ, ತಾನಲ್ಲಿಗೆ ಬಂದಿದ್ದ ಉದ್ದೇಶ್ಯದ ಸಮಯ ಪ್ರಜ್ಞೆ ಉದಯವಾಯಿತು.

ಎದುರಿಗೆ ನಿಂತಿದ್ದ ಸಪ್ತರ್ಷಿಗಳಿಗೆ ಈ ಆಸುರೀ ಮನಃಪಟಲ ದಲ್ಲಿದ್ದ ಬಿರುಗಾಳಿಯ ಅಲೆಗಳು ಒಂದೊಂದಾಗಿ ಪರಿಚಿತವಾದಂತೆ, ಏಕಕಾಲಕ್ಕೇ ಎಲ್ಲರ ಮುಖಗಳಲ್ಲೂ ತಿರಸ್ಕಾರ ರೂಪದ ಮಂದ ಸ್ಮಿತ ವೊಂದು ಕಾಣಿಸಿಕೊಂಡಿತ್ತು! ಅದನ್ನು ಗಮನಿಸಿದ ಇಲ್ವಲ ಮತ್ತೆ ನಾಚಿದ !!

ಕಿರಿಯ ಅಗಸ್ತ್ಯರು ಇಲ್ವಲನಿಗೆಂದರು: "ರಾಜನ್ ! ತಾವಿಲ್ಲಿಗೆ ಬರಲು ಯೋಚಿಸಿ, ಬಂದದ್ದು ನಮಗೆ ಅನಿರೀಕ್ಷಿತವಾದರೂ ದೈವ ಪ್ರೇರಿತವೇ ಸರಿ. ಆಳುವ ಅರಸ ಯಾವ ಮೂಲದವನಾದರೂ ಧರ್ಮ ದಂತೆ ಆಳಿದರೆ ಅವನಲ್ಲಿ ಸರ್ವಾಂತರಾತ್ಮನಾದ ಭಗವಾನ್ ವಿಷ್ಣುವಿನ ಅಂಶವುಂಟು ಎಂದು ಶಾಸ್ತ್ರಗಳು ಹೇಳುತ್ತವೆ. ತಾವು ಪ್ರಜಾವತ್ಸಲ ರೆಂದೂ, ಜನಕ್ಷೇಮ ಕಾರ್ಯದಲ್ಲಿ ಅವಿರತವಾಗಿ ತೊಡಗಿರುವವರೆಂದೂ ಕೇಳಿಬಲ್ಲೆವು. ಅಭಿವರ್ಧತಾಂ. ಇದಕ್ಕೆ ದೇವತೆಗಳ ಮತ್ತು ಮಹರ್ಷಿ ಗಳ ಬೆಂಬಲವೂ ಇರುವಂತಾಗುವುದು ಲೋಕಕ್ಕೂ ಅರಸರಿಗೂ ಒಳ್ಳೆ ಯದು. ಋತವು ಯಾರಿಗೂ ಅನಿವಾರ್ಯವಾದ ವಿಶ್ವನಿಯಮ. ಅದನ್ನು ನಾವೋ ನೀವೋ ಏರ್ಪಡಿಸಲಿಲ್ಲ! ಅದರ ರಕ್ಷಕ ದೇವರು. ಅಥವಾ ಅವನೇ ಋತ. ಒಮ್ಮೆ ಗುರುಕುಲ ವಾಸ ಮಾಡಿ ಬಂದ ನಿಮಗೆ ಇದು ಅಪರಿಚಿತ ಪರಿಭಾಷೆಯೇನಲ್ಲ. ತಾವು ವೇದಮಾರ್ಗದಲ್ಲಿ ಮುಂದುವರೆಯುವುದು ಹಿರಿಯ ಕುಲಪತಿಗಳಿಗೆ ಈಗ ಸಂತಸ ತರುವ ವಾರ್ತೆಯಾದೀತು. ದರ್ಭೆ ಹಿಡಿಯುವ ಕೈ, ಖಡ್ಗ, ಧನುರ್ಬಾಣ ಗಳನ್ನು ಹಿಡಿಯುವಂತಾಗಿರುವ ಈ ವೈಪರೀತ್ಯಕ್ಕೆ, ಕಾಲ ಪುರುಷನ ಚಕ್ರ ತೀಕ್ಷ್ಣವಾಗಿ ಸುತ್ತುತ್ತಿರುವ ಈ ವಿಷಮತೆಗೆ, ಕಾರಣರಾದವರು

ಋತ-ಸತ್ಯಗಳ ಪರಿಧಿಯೊಳಗೇ ಮತ್ತೆ ಬರುವುದು ಕ್ಷೇಮ. ವೇದಾರ್ಥ ಗಳು ಬ್ರಾಹ್ಮಣರ ಸ್ವತ್ತಲ್ಲ! ಅವು ಸಾರ್ವತ್ರಿಕ. ಜ್ಯೌತಿಷಿ ಪಂಚಾಂಗವನ್ನು ಬರೆಯಬಲ್ಲನೇ ವಿನಾ, ಗ್ರಹನಕ್ಷತ್ರಗಳನ್ನು ನಿರ್ಮಿಸಿಯಾನೇ! ಗ್ರಹಾದಿ ಗಳು ಜ್ಯೌತಿಷಿಗಳ ಸ್ವತ್ತೇ ?"

ದಿಢೀರನೆ ಎದ್ದ ಈ ಸಾತ್ತ್ವಿಕೋಪದೇಶದಿಂದ ಚಕಿತನಾದರೂ ಇಲ್ವನ ಮನಸ್ಸಿನ ಮೇಲೆ ಈ ಉಪದೇಶ, ತಾತ್ಕಾಲಿಕವಾಗಿಯಾದರೂ ಸತ್ ಪರಿಣಾಮ ಮಾಡಿತ್ತು.

"ಮಹರ್ಷೇ! ನಿಮ್ಮ ಒಂದೊಂದು ಮಾತೂ ಪುತ್ರಹೀನನಾದ ನನ್ನ ಮನಸ್ಸಿಗೆ, ಬೇಸಿಗೆಯ ಮಳೆಯಂತೆ ತಂಪೀಯುತ್ತಿದೆ. ವಂದನೆಗಳು. **ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ......** ನನ್ನಂಥ ಅರಸು ನತ್‌ಸಂತಾನಕ್ಕೆ ಇಚ್ಛಿಸುವುದೂ ಆ ಋತದೊಳಗೇ ಬರಲಾರದೇ ?" ಎಂದು ತನ್ನ ವೇದ-ವೈದಿಕ ದ್ವೇಷ ಮೂಲದ ಹಳೆಯ ಪ್ರಕರಣವನ್ನು ನೆನೆಸಿ, ಆತ್ಮಸಮರ್ಥನೆ ಮಾಡಿಕೊಳ್ಳುವವನಂತೆ ಪ್ರಶ್ನಿಸಿದ.

ಅಗಸ್ತ್ಯ : "ದೊರೆಯೇ ! ಇಚ್ಛೆಯೆಲ್ಲ ಸಿದ್ಧಿ ಆಗಿದ್ದರೆ ಮಾನವರೆಲ್ಲ ದೇವರಾಗಿ ಬಿಡುತ್ತಿದ್ದರು! ಇಚ್ಛೆಗಳನ್ನು ವರ್ಗೀಕರಿಸುವವನೂ ಈಡೇರಿ ಸುವವನೂ ದೇವರು. ಬ್ರಹ್ಮರ್ಷಿಗಳಲ್ಲ!! ಅವರು ಬ್ರಹ್ಮವಶವರ್ತಿಗ ಳಾದ, ಬ್ರಹ್ಮಸಂಕಲ್ಪಾಧೀನರಾದ, ಬ್ರಹ್ಮ ಉಪಕರಣಗಳು. ಅವರು ಉಪ ಕರಿಸಿದರೂ, ನಿರಾಕರಿಸಿದರೂ ಅದರಲ್ಲಿ ದೈವೇಚ್ಛೆಯುಂಟು. ಅದನ್ನು ಪ್ರತಿಭಟಿಸುವುದು ದೈವೀಸ್ವಭಾವವಲ್ಲ!"

ಇಲ್ವಲ : "ಹಾಗಾದರೆ ಪುರುಷ ಪ್ರಯತ್ನಕ್ಕೆ ಅರ್ಥವೇ ಇಲ್ಲವೇ ? ಸಾಹಸ ಪ್ರವೃತ್ತಿಯೇ ಕೆಟ್ಟದ್ದೇ? ನಿಮ್ಮ ಆಯುರ್ವೇದವಿಜ್ಞಾನ, ಶಿಲ್ಪ ನೈಪುಣ್ಯ, ಅಥರ್ವಣಿಕ ವಿದ್ಯೆಗಳು ಹೇಗೆ ಹುಟ್ಟಿದವು ?"

ಅಗಸ್ತ್ಯ : "ದೊರೆಯೇ ! ನೀವಿಲ್ಲಿ ವಾಕ್ಯಾರ್ಥವಿಚಾರಕ್ಕೋ, ಧರ್ಮಜಿಜ್ಞಾಸೆಗೋ ಬರಲಿಲ್ಲವೆಂಬುದನ್ನು ನೀವೂ ನಾವೂ ಅರಿತೇ ಇದ್ದೇವೆಂದ ಮೇಲೆ ಈ ವಿವಾದದಿಂದ ಏನು ಪ್ರಯೋಜನ ? ಆಗಲೇ ಹೇಳಿದೆನಲ್ಲ : ಯಾವ ಶಾಸ್ತ್ರವೂ ಋತದ ಪರಿಧಿಯೊಳಗೇ ಹೊರತು ಆಚೆ ಗಲ್ಲ. ಆಯುರ್ವೇದವು ಮೃತಸಂಜೀವನಿಯನ್ನು ಉಪದೇಶಿಸಿಲ್ಲ ! ಬದುಕುವವನ ಆಯುಸ್ಸನ್ನು ರಕ್ಷಿಸಿ, ಆರೋಗ್ಯದ ಸೂತ್ರಗಳನ್ನು ತಿಳಿಸಿ, ಋತಕ್ಕೆ ಒಳ ಪಡುವ ಸುಖೀ ವಿಧಾನವನ್ನು ಮಾತ್ರ ಬೋಧಿಸುತ್ತದೆ. ಇದನ್ನು ವಿರೋಧಿಸುವವರು ನಿಃ-ಋತರೆನಿಸುತ್ತಾರೆ. ಋತಬಾಹಿರರು ಅವರು. ತಾವು ತಪ್ಪಿದ್ದು ಇಲ್ಲೇ. ಈ ವಿಚಾರ ಈಗ ಸಾಕು. ನಮಗೆ ಅತಿಥಿಯಾಗಿರುವ ತಮ್ಮ ಮನವನ್ನು ನಾವು ಕೆದುಕುವುದೂ ನೋಯಿಸು ವುದೂ ನಮಗೆ ಸರಿಯಲ್ಲ."

ಇಲ್ವಲ : (ಅಗಸ್ತ್ಯರ ವಾಕ್ ಚಾತುರ್ಯವನ್ನು ಮನದಲ್ಲೇ ಮೆಚ್ಚಿ, ವಿಕಾರಭಾವವನ್ನು ತೋರ್ಪಡಿಸದೆ,)

"ಮಹರ್ಷೇ, ಹಿರಿಯ ಅಗಸ್ತ್ಯರ ಪಾದದರ್ಶನವನ್ನು ನಾನೀಗ ಮಾಡಬಹುದೇ ? '

ಅಗಸ್ತ್ಯ : "ಏರ್ಪಡಿಸುತ್ತೇನೆ." ಎಂದವರೇ ಅಗಸ್ತ್ಯಭ್ರಾತಾ ಎನಿಸಿದ್ದ ಸೋಮಶ್ರವನನ್ನು ಅತಿಥಿಗಳ ಮೇಲ್ವಿಚಾರಣೆಗೆ ಅಲ್ಲೇ ನಿಲ್ಲಿಸಿ, ಕಿರಿಯ ಅಗಸ್ತ್ಯರು ಅಗ್ನಿಸ್ಥಾನಕ್ಕೆ ತೆರಳಿದರು. ಸ್ನಾನ ಮಾಡಿ ವಿಧಿವತ್ತಾಗಿ ಅಗ್ನಿಯನ್ನು ಅರ್ಚಿಸಿ, "ತ್ವಮಗ್ನೇ ರುದ್ರೋ ಅಸುರೋ ಮಹೋ ದಿವಸ್ತ್ವಗ್ಂ ಶರ್ಧೋ..." "ಘೃತಂ ಪೀತ್ವಾ ಮಧು ಚಾರುಗವ್ಯಂ ಪಿತೇವ ಪುತ್ರಂ ಅಭಿರಕ್ಷತಾದಿಮಂ !" ಇತ್ಯಾದಿ ಮಂತ್ರಗಳನ್ನು ಶ್ರದ್ಧೆ ಯಿಂದ ಪಠಿಸಿ, ಘೃತಾಹುತಿಗಳನ್ನಿತ್ತು ಎದ್ದು ಹಿರಿಯ ಅಗಸ್ತ್ಯರ ಬಳಿ ನಡೆದರು. ಶಿಷ್ಯರಿಗೆ ಕಣ್ ಸನ್ನೆಯಿಂದ ಸೂಚಿಸಿದಂತೆ ಅವರು ಆಶ್ರಮ ದ್ವಾರಕ್ಕೆ ನಡೆದು ಅಗಸ್ತ್ಯ ಸೋದರನಿಗೆ ಈ ವಿಷಯವನ್ನು ತಿಳಿಸಿದರು.

ಶಾಂತನಾಗಿ ಅಗ್ನಿದೇವ ಇಲ್ವಲನನ್ನು ಆಶ್ರಮದೊಳಕ್ಕೆ ಬಿಡಲು, ಇಲ್ವಲನ ಪರಿವಾರ ಒಂದು ವಿಚಿತ್ರ, ಅಭೂತ ಪೂರ್ವ ಸಾತ್ತ್ವಿಕ ಮನಃ ಪರಿವರ್ತನೆಯೊಡನೆ ನಿಧಾನವಾಗಿ ಮುಂದಕ್ಕೆ ಅಡಿಯಿಡಲಾರಂಭಿಸಿತು.

ಹಿರಿಯ ಅಗಸ್ತ್ಯರು ಪೂರ್ಣವಾಗಿ ಆಗ ಕಣ್ಣುಮುಚ್ಚಿದ್ದರು. ಇಲ್ವಲ ಪರಿವಾರದೊಡನೆ ನಮಸ್ಕರಿಸ ಹೋದ. ಮಹರ್ಷಿ ಕೊಂಚ ಕೈಯೆತ್ತಿ ಅದು ಬೇಡವೆಂದು ತಡೆಯುವಂತೆ ಸನ್ನೆಮಾಡಿದ. ಕೊಂಚ ಹೊತ್ತು ಆ ಶಯ್ಯೆಯ ಬಳಿ ಕುಳಿತ ಇಲ್ವಲನಿಗೆ ತಾನಾಗ ಅನುಭವಿಸುತ್ತಿದ ಆ ವಿಚಿತ್ರ ಸಾತ್ತ್ವಿಕಶಕ್ತಿಯ ಪ್ರಭಾವ, ಸೆಳೆತಗಳು ತೀವ್ರತಮವಾಗಿ ಅನುಭವಕ್ಕೆ ಬರಲಾರಂಭಿಸಿದವು. ಈ ಶಕ್ತಿಯ ಮುಂದೆ ತಾನಾಶ್ರಯಿಸಿದ್ದ ಬೇರಾವ ಶಕ್ತಿಯೂ ತುಚ್ಛವಾದಂತೆ ಆ ಗಳಿಗೆಯಲ್ಲಿ ತೋರಿತು. ಮೇಲೆದ್ದವನೇ ಮತ್ತೆ ಮಾನಸಿಕವಾಗಿ ನಮಸ್ಕರಿಸಿ ಆಶ್ರಮದಿಂದ ಹೊರ ನಡೆದ. ಪರಿವಾರ ಹಿಂಬಾಲಿಸಿತು. ಋಷಿ ಸಂಘ ಅವರನ್ನು ಸುತ್ತುವರಿದೇ ಇದ್ದರು.

ನಾಲ್ಕಾರು ಕಡೆ ನೋಟ ಹರಿಸುತ್ತಿದ್ದ ಇಲ್ವಲನ ಕಣ್ಣಿಗೆ ಕವಾಯಿತು ಮಾಡುತ್ತಿದ್ದ ವಟುಗಳೂ, ಅಶ್ವಾರೋಹಿಗಳಾಗಿಯೂ ನಾನಾ ಆಯುಧಗಳನ್ನು ಬಳಸುವುದನ್ನು ಕಲಿಯುತ್ತಲೂ, ಕಲಿಸುತ್ತಲೂ ಇದ್ದ ಯುವ ಋಷಿಗಳೂ ಕಣ್ಣಿಗೆ ಬಿದ್ದರು ! "ನಾನು ಕೇಳಿದ್ದು ನಿಜ !" ಎಂದುಕೊಂಡ ! ಸೋಮಶ್ರವ ಹೇಳಿದ : "ನಿಜ ಮಾತ್ರವಲ್ಲ ! ದೊರೆಯೆ ! ಇವರೇ ಇನ್ನು ಆರ್ಯಾವರ್ತದ ರಕ್ಷಕರು" ಎಂದದ್ದು ಮತ್ತೆ ಇಲ್ವಲನಿಗೆ ಚಕಿತನಾಗುವಂತೆ ಮಾಡಿತು, "ಇಲ್ಲಿ ಎಲ್ಲರಿಗೂ ಅನ್ಯರ ಮನಸ್ಸನ್ನೋದುವ ಶಕ್ತಿಯಿರುವಂತಿದೆ" ಎಂದುಕೊಂಡ. ಸೋಮಶ್ರವ ಮತ್ತೆ "ಹೌದು" ಎಂದಾಗ. ಮನದಲ್ಲೂ ಕಾಪಟ್ಯಕ್ಕೆ ಇಲ್ಲಿ ಅವ

ಕಾಶವಿಲ್ಲದ ಆ ನಿರ್ಬಂಧಕ್ಕೆ ಇಲ್ವಲ ನಿಜವಾಗಿಯೇ ಆಗ ಮನ ಸೋತ.

ಹೊರ ಬಂದು ಕಿರಿಯ ಅಗಸ್ತ್ಯರು ಹೇಳಿದರು: "ದೊರೆಯೆ ! ನೀವು ನಿಜವಾಗಿಯೇ ಮತ್ತೆ ವೇದಮಾರ್ಗಕ್ಕೆ ಬರಬೇಕೆಂಬುದು ನಮ್ಮ ಹಿರಿಯರ ಈಗಿನ ಇಚ್ಛೆ".

ಇಲ್ವಲ : "ನಾನು ವೇದ ಮಾರ್ಗವನ್ನು ತ್ಯಜಿಸಿಯೇ ಇಲ್ಲವಲ್ಲ! "

ಅಗಸ್ತ್ಯ ; "ಅದಕ್ಕೆ ಈ ಪ್ರಗಾಥಕಣ್ವರು ಸಾಕ್ಷಿಯೇ ! ಅಥವಾ ನಿಮಗೆ ಪರಿಚಿತರಾದ ಈ ಪ್ರಿಯವ್ರತ ಚಾಕ್ರಾಯಣರೋ ? ಅಥವಾ ನಿಮ್ಮ ಗುರು ಶುಕ್ರಾಚಾರ್ಯರೋ ?"

ಇಲ್ವಲ : (ಮನದಲ್ಲೇ ಕುಪಿತನಾಗಿ) "ಅಡವಿಯಲ್ಲಿ ನಡೆಯುವುದಕ್ಕೆಲ್ಲಾ ಇಲ್ವಲ ಹೊಣೆಯೇ !"

ಅಗಸ್ತ್ಯ : "ದಕ್ಷಿಣಾಪಥದ ಅನಭಿಷಿಕ್ತ ದೊರೆಗೆ ಎಲ್ಲವೂ ಹೊಣೆಯೇ ! ಆ ದಕ್ಷಿಣಾಪಥಕ್ಕೆ ಅಗಸ್ತ್ಯ ಕಾಲಿಡುವ ದಿನ ದೂರ ವಿಲ್ಲ : ಅದಕ್ಕೆ ಸ್ವಾಗತ ಇರುವುದೆಂದು ಭಾವಿಸಲೇ ?"

ಇಲ್ವಲ : "ಅದು ನನ್ನ ನಾಡಿನ, ಜನತೆಯ ಭಾಗ್ಯೋದಯ ವೆಂದು ಭಾವಿಸುತ್ತೇನೆ."

ಅಗಸ್ತ್ಯ ; "ಇದು ಹುಡುಗಾಟಿಕೆಯ ಮಾತಲ್ಲ. ಅಗಸ್ತ್ಯನ ದಿಗ್ವಿಜಯದ ಅರ್ಥವನ್ನು ದೇವತೆಗಳು ಮಾತ್ರ ಬರೆಯಬಲ್ಲರು."

ಇಲ್ವಲ ; "ಅವರು ಬರೆಯದೇ ಇದ್ದರೆ ಇಲ್ವಲ ತಿಳಿಯಲಾರನೇ ?"

ಅಗಸ್ತ್ಯ : "ತಿಳಿದರೆ ಲೋಕಕ್ಕೆ ಕ್ಷೇಮ."

ಇಲ್ವಲ : "ಆ ಕ್ಷೇಮಯಾಚನೆಗೇ ನಾನು ಬಂದದ್ದು."

ಅಗಸ್ತ್ಯ : "(ನಕ್ಕು) ಅರಸೇ ! ಜೀವನವೆಲ್ಲ ಒಂದು ಅಭಿನಯ ಕ್ಷೇತ್ರ. ಅಭಿನಯಕ್ಕೆ ಒಗ್ಗಿಕೊಂಡರೆ. ಎಂಥ ಪಾತ್ರವೂ ಪಾತ್ರಧಾರಿಯನ್ನು ಪರಿವರ್ತಿಸಿಯೇ ಬಿಡುತ್ತದೆ. ಚಾಕ್ಷುಷಮನ್ವಂತರದಲ್ಲೇ ಸಿದ್ಧವಾದ ಈ ಸತ್ಯ, ಈಗಿನ ವೈವಸ್ವತ ಮನ್ವಂತರಕ್ಕೂ ಅನ್ವಯವಾದುದೇ."

ಇಲ್ವಲ : "ಇಲ್ಲವೆಂದವರಾರು ?" ಎನ್ನುತ್ತಾ ಮುಂದೆ ನಡೆದ.

* * *

ನಾಲ್ಕಾರು ಕಡೆ ಕಣ್ಣು ಹಾಯಿಸುತ್ತಿದ್ದ ವಾತಾಪಿಯ ದೃಷ್ಟಿಪಥಕ್ಕೆ ಆಗ ಸಖಿಯರೊಡನೆ ಓರಿಯ ಅಗಸ್ತ್ಯರ ನಮಸ್ಕಾರಕ್ಕೆ ಹೊರಟಿದ್ದ ಲೋಪಾಮುದ್ರೆ ಕಾಣಿಸಿಕೊಂಡಳು ! ವಾತಾಪಿಯ ನಡೆ ನೋಟ ನಿಂತಿತು ! ಅವಾಕ್ಕಾಗಿ ನೋಡುತ್ತಾ ನಿಂತ !! ಇಲ್ವಲನೂ ಅದನ್ನು ಗಮನಿಸಿ ಅಲ್ಲೇ ನಿಂತ ! ಇದನ್ನೆಲ್ಲ ನೋಡಿದ ಅಗಸ್ತ್ಯರು ಮತ್ತೆ ಮಾತು ಪ್ರಾರಂಭಿಸಿದರು.

ಅಗಸ್ತ್ಯ : "ಪಾಮರರು ಜೇನನ್ನು ಆಸೆ ಪಡುತ್ತಾರೆಯೇ ಹೊರತು ಅದರ ರಕ್ಷಣೆಗೆ ಜೇನು ದುಂಬಿಗಳು ಇರುವುದನ್ನು ಗಮನಿಸಲಾರರು ! ಗುಲಾಬಿಗೆ ಕೈ ಹಾಕುವವನು ಅದು ಮುಳ್ಳಿನ ಗಿಡದ ಮೇಲಿರುವುದನ್ನು ಮರೆಯುವುದುಂಟು—ಆ ಕನ್ಯಾಮಣಿ ವಿದರ್ಭರಾಜಕುಮಾರಿ. ನಮ್ಮ ಹಿರಿಯರ ಅನುಗ್ರಹದಿಂದ ಆ ರಾಜನಿಗೆ ಮಗಳಾಗಿ ಹುಟ್ಟಿದಳೆಂಬ ಅಭಿಮಾನ, ಅವರ ತಪಸ್ಸು ಅವಳ **ರಕ್ಷಣೆಗಿದೆ.** ದೈವಯತ್ನ ಹೇಗಿದೆಯೋ ! ಯಾರು ಬಲ್ಲರು ? ವೇದಮಾರ್ಗಾವಲಂಬಿ

ಯಾಗಿರುವ ಯಾವ ಯುವಕ ಅವಳ ಕೈಹಿಡಿಯುವನೋ ? ಅದಕ್ಕೆ ವೇಳೆ ಯಾವಾಗ ಬರುತ್ತದೆಯೋ ? ಯಾರಿಗೆ ಗೊತ್ತು ?"

ಇಲ್ವಲ : "ಏಕೆ ? ಆ ದೊರೆ ಸ್ವಯಂವರ ಏರ್ಪಡಿಸಬಾರದೇಕೆ ?" ಎನ್ನುತ್ತಾ ವಾತಾಪಿಯ ಮುಖ ನೋಡುತ್ತಾನೆ.

ಅಗಸ್ತ್ಯ : "ಒಮ್ಮೆ ಹಾಗೆ ಏರ್ಪಡಿಸಿ ಆಯಿತು. ಅಗಸ್ತ್ಯತಪೋ ರಕ್ಷಿತಳೆನ್ನುವ ಕಾರಣದಿಂದ ಆರ್ಯಾವರ್ತದ ಎಷ್ಟೋ ರಾಜಕುಮಾರರು ಆ ಸಭೆಗೆ ಬರಲೇ ಇಲ್ಲ !!"

ಇಲ್ವಲ : "ಎಂಥ ದುರ್ದೈವಿಗಳು !.... ಮಹರ್ಷಿ ! ದಕ್ಷಿಣಾಪಥದವರಿಗೆ ಆ ಅವಕಾಶವುಂಟೇ ?"

ಅಗಸ್ತ್ಯ : "ಪ್ರಯತ್ನ ನಡೆಯಬಹುದು. ಯಾರು ಬೇಡವೆಂದರು ? ಆದರೆ ಆ ಕನ್ಯೆ ವೇದಮಾರ್ಗವಲಂಬಿಯನ್ನು ಬಿಟ್ಟು ಯಾರನ್ನೂ ಒಲ್ಲಳು ಎಂದು ನನ್ನ ಅನಿಸಿಕೆ. ಅಥವಾ ಆಕೆಯೂ ನಮ್ಮಲ್ಲಿ ಅನೇಕರಂತೆ ಬ್ರಹ್ಮಚರ್ಯ ವ್ರತದಲ್ಲೇ ನಿಂತು ಬಿಡುವಳೋ ! ಸ್ತ್ರೀಚಿತ್ತವನ್ನು ನಾವಾರೂ ಅರಿಯೆವು."

* * *

ಹೊರಡುವ ಮುಂಚೆ ಅಗಸ್ತ್ಯಸೋದರ ಇಲ್ವಲನಿಗೆ ಮನದಟ್ಟು ಮಾಡಿಕೊಟ್ಟ; ಅಗಸ್ತ್ಯಾಶ್ರಮ ಎಚ್ಚೆತ್ತಿದೆ. ಆರ್ಯಾವರ್ತದ ಮತ್ತು ವೇದಮಾರ್ಗದ ರಕ್ಷಣೆಗೆ ಹೊಸ ಕ್ಷತ್ರಿಯರೂ ಬ್ರಾಹ್ಮಣರೂ ಉದಿಸಿ ಬರುತ್ತಿದ್ದಾರೆ. ಮಾಯಾವಿಗಳ ಚಲನವಲನಗಳೆಲ್ಲ ಅಗಸ್ತ್ಯಾಶ್ರಮಕ್ಕೆ ಗೊತ್ತಿದೆ. ಈ ತಪೋಭೂಮಿ ಗೊಡ್ಡಲ್ಲ ! ಒಂದೊಂದು ಕುಲಪತಿಯ ಆಶ್ರಮವೂ ಇನ್ನೂ ಹೀಗೆ ಪರಿವರ್ತನೆಯ ಮಾರ್ಗಕ್ಕೆ ಒಳಪಡುವುದು. ಅಗಸ್ತ್ಯರು ಶೀಘ್ರವೇ ಉತ್ತರಾಪಥದ ಕ್ಷತ್ರಿಯರ ಸಂಘಟನೆಗೆ ಹೊರಡ

ಲಿದ್ದಾರೆ. ತಡೆಯಾಗಿರುವುದು ಹಿರಿಯರ ಈಗಿನ ಸ್ಥಿತಿಯಿಂದ. ಸಪ್ತರ್ಷಿಗಳು ಈ ವಿಷಯದಲ್ಲಿ ಏಕಾಭಿಪ್ರಾಯವುಳ್ಳವರು. ಹೊಸಆಶ್ರಮಗಳು ದಕ್ಷಿಣಕ್ಕೂ ಇನ್ನು ಕಾಲಿಡುವುವು. ಅಸುರರು ಈ ಎಚ್ಚರಿಕೆಯನ್ನು ಗಮನಿಸುವುದು ಕ್ಷೇಮ—ಎಂದು.

ಇಲ್ವಲ ಭಾರವಾದ ಹೃದಯದೊಡನೆ ಮಣಿಮತೀಪುರಿಗೆ ಪಯಣ ಆರಂಭಿಸಿದ.

—*—

## ೭ ಹಿರಿಯ ಅಗಸ್ತ್ಯರ ಅಸ್ತಮಾನ

ಇಲ್ವಲ ಮರುಪಯಣಿಸಿದ ಮರುದಿನ ; ಮಧ್ಯಾಹ್ನದ ಸೂರ್ಯ ನೆತ್ತಿಗೇರುತ್ತಿದ್ದ. ಕಿರಿಯ ಅಗಸ್ತ್ಯರು ಇನ್ನೇನು ಮಾಧ್ಯಾಹ್ನಿಕ ಸ್ನಾನಕ್ಕೆ ಹೊರಟು ನಿಂತರು. ತಂದೆಯ ಮುಖದಲ್ಲಿ ಏನನ್ನೋ ಕಂಡು ಅಲ್ಲೇ ನಿಂತರು. ಕ್ಷಣ ಮಾತ್ರದಲ್ಲಿ ಆಶ್ರಮದ ವಾಸಿಗಳೂ ಅತಿಥಿಗಳೂ ಎಲ್ಲ ಅಲ್ಲಿ ಕೂಡಿದರು.

ಹಿರಿಯರು ಪುತ್ರನನ್ನು ಕಣ್ಣಗಲಿಸಿ ನೋಡಲಾರಂಭಿಸಿದರು ! ಮತ್ತಾರನ್ನೋ ಹುಡುಕುವಂತೆ ಅವರ ಕಂಗಳು ಸುತ್ತ ನಿಂತಿದ್ದವರನ್ನೆಲ್ಲ ಕ್ರಮವಾಗಿ ವೀಕ್ಷಿಸಲಾರಂಭಿಸಿದವು. ಅವರ ಪ್ರಿಯ ಶಿಷ್ಯರು ಒಬ್ಬೊಬ್ಬರಾಗಿ ಮುಂದೆ ಬಂದು ಕಾಣಿಸಿಕೊಂಡು, "ತಮ್ಮನ್ನಲ್ಲ, ಅವರು ಕರೆಯುತ್ತಿದ್ದುದು" ಎಂಬ ಭಾವ ಅವರ ಮುಖದಲ್ಲಿ ಕಂಡೊಡನೆಯೇ ಹಿಂಜರಿಯುತ್ತಿದ್ದರು. ಇನ್ನಾರೂ ಉಳಿಯದಾಗ ಅಗಸ್ತ್ಯಸೋದರನ ಮುಖದಲ್ಲಿ ಮಂದಹಾಸವೊಂದು ಮಿಂಚಿ, ದೂರದಲ್ಲಿ ಅಳುತ್ತಾ ನಿಂತಿದ್ದ ಲೋಪಾಮುದ್ರೆಯನ್ನು ಕರೆತಂದು ಹಿರಿಯ ಅಗಸ್ತ್ಯರ ಮುಂದೆ ನಿಲ್ಲಿಸಲಾಯಿತು. ಧನ್ಯ, ತೃಪ್ತ, ಆನಂದದ ಮಿಂಚೊಂದು ಆಗ ಆ ಹಿರಿಯರ ಮುಖದಲ್ಲಿ, ಕಂಗಳಲ್ಲಿ ಮಿಂಚಿತು. ವೈದರ್ಭದಂಪತಿಗಳು ಅಲ್ಲೇ ಬಳಿಯಿದ್ದು ಗುರುಗಳ ಇಂಗಿತವನ್ನು ಅರಿಯಲು ಯತ್ನಿಸುತ್ತಿದ್ದರು.

ಒಮ್ಮೆ ಪುತ್ರ, ಕಿರಿಯ ಅಗಸ್ತ್ಯರನ್ನೂ ಮತ್ತೊಮ್ಮೆ ಲೋಪಾಮುದ್ರೆಯನ್ನೂ, ಆ ಹಿರಿಯರ ಕಂಗಳು ಕ್ರಮವಾಗಿ ನೋಡುತ್ತಾ, ಏನನ್ನೂ ಹೇಳದೆ ಕ್ರಮಶಃ ಮುಚ್ಚಲಾರಂಭಿಸಿ, ನೀರುತುಂಬಿ ಹರಿಯಲಾರಂಭಿಸಿದವು.

ಅವರಿಗೆ ಏನೋ ಕೊರತೆಯಿದೆಯೆಂಬುದು ಆ ಕಂಗಳಲ್ಲಿ ಕಾಣಬರು ತ್ತಿತ್ತು. ಬಹುಕ್ಷೀಣರಾಗಿದ್ದ ಅವರು ಮಾತನ್ನಾಡುವ ಸ್ಥಿತಿಯಲ್ಲೂ ಇರ ಲಿಲ್ಲ; "ಇದು ದೇವರಹಸ್ಯ; ಯಾರಿಗೂ ಮುಂಚೆ ತಿಳಿಯಬಾರದು. ಅರಸನಿಗೂ, ನಿನ್ನ ಪುತ್ರನಿಗೂ ಸಹ! ಇದಕ್ಕೆ ನೀನು ಕಾರಣಪುರುಷ ನಾಗುವುದೂ ನಿನ್ನ ಭಾಗ್ಯ" ಎಂದು ಭಗದೇವತೆ, ಹಿಂದೊಮ್ಮೆ ಲೋಪಾ ಮುದ್ರೆಯ ಜನನಕ್ಕೆ ಸಂಬಂಧಪಟ್ಟಂತೆ ಆಡಿದ ವಾಕ್ಯವನ್ನು ಆ ಋಷಿ ಹೃದಯ ಪ್ರಾಯಶಃ ನೆನೆಯುತ್ತಿದ್ದಿರಬೇಕು.

ಅಗಸ್ತ್ಯರು ಪುತ್ರನನ್ನೂ, ವಿದರ್ಭ ರಾಜಕುಮಾರಿಯನ್ನೂ ಕ್ರಮ ವಾಗಿ ನೋಡುತ್ತಿದ್ದುದರ ಮರ್ಮ ಜಮದಗ್ನಿ, ಭೃಗು, ಆಂಗೀರಸಾದಿ ಸಪ್ತರ್ಷಿಗಳಿಗೆ ಕೊಂಚ ಅರ್ಥವಾಯಿತು. ರಾಜಕುಮಾರಿಗೇ ಕೊಂಚ ನಾಚಿಕೆಯಾಗಿ ತಲೆತಗ್ಗಿಸಿದಳು. ಕಿರಿಯ ಅಗಸ್ತ್ಯರು ಮಾತ್ರ ವಿಚಲಿತ ರಾಗದೇ ಕುಳಿತಿದ್ದವರು ದೃಷ್ಟಿಯನ್ನು ಎತ್ತಲೂ ಹೊರಳಿಸದೇ ಹಾಗೇ ಕುಳಿತರು. ಕೊನೆಗೆ, ಹಿರಿಯರ ದೃಷ್ಟಿ ಅವರ ಮೇಲೆಯೇ ನೆಟ್ಟಿತು. ಮಗ ತನ್ನ ಬಲ ಕೈ ಹಸ್ತವನ್ನು ಮುಂದೆ ಚಾಚಿ, ಹಿರಿಯರ ಆಶೀರ್ವಾದ ಬೇಡುವಂತೆ ಅವರ ಬಲಗೈಯ್ಯನ್ನೆತ್ತಿ ತಮ್ಮ ನೆತ್ತಿಯ ಮೇಲಿಟ್ಟು ಕೊಂಡರು; "ಅಪ್ಪಾ! ನಿಮ್ಮ ಬಯಕೆಗಳನ್ನೀಡೇರಿಸುತ್ತೇನೆ, ಭರತ ವರ್ಷವನ್ನು ಏಕೀಕರಿಸುತ್ತೇನೆ. ವಿಂಧ್ಯನನ್ನು ಮಲಗಿಸುತ್ತೇನೆ. ಅಸುರರಿಗೆ ಪಾಠಕಲಿಸುತ್ತೇನೆ. ನೀವು ನೆಟ್ಟ ಬ್ರಹ್ಮಕ್ಷತ್ರ ಸಸಿಗಳನ್ನು ಪೋಷಿಸಿ ಬೆಳೆಸುತ್ತೇನೆ. ನನ್ನ ಆಯುಷ್ಯವನ್ನೆಲ್ಲ ಇದಕ್ಕೇ ಮುಡಿಪಾಗಿ ಡುತ್ತೇನೆ.'' ಎಂದು ಸ್ವಪ್ರೇರಣೆಯಿಂದ ವಚನಕೊಟ್ಟರು. ಆ ಕ್ಷಣ ದಲ್ಲಿ ಹಿರಿಯರ ಮುಖದಲ್ಲಿ ಆ ವರೆಗೆ ಸ್ಪಷ್ಟವಿಲ್ಲದ ಒಂದು ತೃಪ್ತಿ ಎದ್ದು ಕಾಣಲಾರಂಭಿಸಿತು. ಅವರು ಆ ದೇವ ರಹಸ್ಯವನ್ನು ಹೊರಗೆಡಹ ದೆಯೇ, ಕಿರಿಯ ಅಗಸ್ತ್ಯರು ಅದಕ್ಕೆ ಬದ್ಧವಾಗಿರುವುದಾಗಿ. ತಮಗರಿ

ವಿಲ್ಲದೆಯೇ ತಾವೇ ಮಾತು ಕೊಟ್ಟ ಮುರ್ಮ ಸಪ್ತರ್ಷಿಗಳಿಗೆ ಮಾತ್ರ ಅರ್ಥವಾಯಿತು. ಅಥವಾ ಅಗಸ್ತ್ಯಭ್ರಾತೃವಿಗೂ ತಿಳಿಯಿತು. ವೈದರ್ಭ ದಂಪತಿಗಳಿಗೆ ಅದು ತಿಳಿಯಿತೋ ಇಲ್ಲವೋ, ಲೋಪಾಮುದ್ರೆಗೆ ಒಂದು ಬಗೆಯ ಅನಿರ್ವಚನೀಯ ರೋಮಹರ್ಷಾನುಭವವಾಗಿ, ಆ ವಿಚಿತ್ರ ಸಂದರ್ಭದಲ್ಲಿ, ಭಾವೋತ್ಕರ್ಷದ ಸಂಮಿಶ್ರತೆಯಲ್ಲಿ ಆ ಆನಂದ ಪ. ವಶತೆಗೆ ಸ್ಪಷ್ಟ ಕಾರಣಗಳು ಅರಿವಿಗೆ ಬರಲಿಲ್ಲವೇನೋ !

ಕ್ರಮೇಣ ಹಿರಿಯ ಮಹರ್ಷಿಯ ಕಂಗಳು ಮುಚ್ಚಿ. ಮತ್ತೆ ತೆರೆಯ ಲಾರದೆ, ಆ ಹಿರಿಯ ಚೇತನ ಆ ಆಶ್ರಮವನ್ನೂ, ಆ ತಪೋವಿಹಾರ ಕ್ಷೇತ್ರವನ್ನೂ, ಆರ್ಯಾವರ್ತವನ್ನೂ, ಭಗವಂತನ ಈ ಲೀಲಾವಿಭೂತಿ ಎನಿಸಿದ ಮರ್ತ್ಯಲೋಕವನ್ನೂ ಬಿಟ್ಟು ಬಹುದೂರ, ಬಹುದೂರ, ಸರಿ ಯಿತು. ಪುನರ್ಜನ್ಮವಿಲ್ಲದ ಬೆಳಕಿನ ಲೋಕಕ್ಕೆ ಅದು ಸೇರಿ ಅಜರಾ ಮರವಾಗಿ ಉಳಿದು, ನಕ್ಷತ್ರಗಳ ಬೆಳಕಿನೊಡನೆ ಬೆರೆತುಹೋಯಿತು. ಆಶ್ರಮಸ್ಥರೆಲ್ಲ ಕಣ್ಣೀರಿಟ್ಟು ಮಹರ್ಷಿಯ ಮರ್ತ್ಯ ಶರೀರ ಸಂಸ್ಕಾರ ಕಾರ್ಯದಲ್ಲಿ ತೊಡಗಿದ್ದರು.

* * *

ವಿದರ್ಭರಾಜ ದಂಪತಿಗಳು ಕುಂಡಿನಪುರಕ್ಕೆ ಪ್ರಯಾಣ ಹೊರಟು ನಿಂತರು. ಲೋಪಾಮುದ್ರೆಗೆ ಕಿರಿಯ (ಇನ್ನು ಮುಂದೇ ಇವರೇ ಬರೀ 'ಅಗಸ್ತ್ಯ'ರೆಂಬ ವ್ಯವಹಾರಕ್ಕೆ ಬಾಧ್ಯರಾದವರು), ಅಗಸ್ತ್ಯ ರೊಡನೆ ಏಕಾಂತವಾಗಿ ಅರೆಗಳಿಗೆ ಮಾತನ್ನಾಡಬೇಕೆನ್ನಿಸಿತ್ತು. ಹಿರಿಯರು ಅಂತ್ಯಕಾಲದಲ್ಲಿ ಪದೇ ಪದೇ ಅವಳ ಕಡೆಗೆ ನೋಡುತ್ತಿದ್ದ ನೋಟದಲ್ಲಿ ಅವಳಿಗೇನೋ ಅರ್ಥವಾಗಿದ್ದದ್ದು ಸರಿಯೋ ತಪ್ಪೋ ಎಂಬುದರ ಸ್ಥಿರೀಕರಣಕ್ಕಾಗಿ ಆ ಅವಕಾಶ ಬೇಕಾಗಿತ್ತು. ತಂದೆ ತಾಯಿಗಳೊಡನೆ ಕೇಳಲು ಸಂಕೋಚ, ನುತ್ತ ಬರೀ ಋಷಿಗಳೇ ಇದ್ದ ವಾತಾವರಣದಲ್ಲಿ

ಯಾರನ್ನು ಎಲ್ಲಿಗೆ ದೂತರನ್ನಾಗಿ ಕಳುಹಿಸುವುದು ? ಅದು ಅರಮನೆ ಯಲ್ಲವಲ್ಲ! ಅಗಸ್ತ್ಯರೂ ಹಾಗೆ ಏಕಾಂತದಲ್ಲಿ ದೊರೆಯುವವರಾಗಿರ ಲಿಲ್ಲ. ಸದಾ ಆಶ್ರಮಸ್ಥರು ಸುತ್ತುವರೆದಿರುತ್ತಿದ್ದರು. ಆದುದರಿಂದ ಸದವಕಾಶಕಾಯುತ್ತಾ ರಾಜಕುವರಿ, ಊರ ಕಡೆಗಿನ ತನ್ನ ಮಾತಾಪಿತೃ ಗಳ ಪಯಣವನ್ನು ಮುಂದೂಡಿಸುತ್ತಾ, "ಕ್ರಿಯೆಗಳೆಲ್ಲ ಮುಗಿಯಲಿ", ಎಂದು ಕಾರಣ ಕೊಟ್ಟು ಕಾದಿದ್ದಳು.

ಇತ್ತ ಶ್ರಾದ್ಧ ಕರ್ಮಗಳೆಲ್ಲ ವಿಧಿವತ್ತಾಗಿ ನಡೆದಿದ್ದವು. ಏಕೋದ್ದಿ ಷ್ಟಕ್ಕೆ ಆಂಗೀರಸರೇ ನಿಯೋಜಿಸಲ್ಪಟ್ಟರು. ಹನ್ನೆರಡನೆಯ ದಿನದ ಕರ್ಮ ದಲ್ಲಿ ವಿಷ್ಣುಸ್ಥಾನಕ್ಕೆ ಭೃಗುವೂ, ವಿಶ್ವೇದೇವತೆಗಳ ಸ್ಥಾನದಲ್ಲಿ ಅತ್ರಿ ಮತ್ತು ಚ್ಯವನರೂ. ಪಿತೃಸ್ಥಾನಕ್ಕೆ ವಸಿಷ್ಠರೂ. ವಿಶೇಷ ಸ್ಥಾನಕ್ಕೆ ಭಾರದ್ವಾಜರೂ ನಿಯೋಗವಾದರು. ಅರ್ಘ್ಯಸಂಯೋಜನೆ ಕ್ರಮವಾಗಿ ನಡೆಯಿತು. ಪಿಂಡಸಂಯೋಜನೆಯ ಕಾಲದಲ್ಲಿ **"ಸಂಗಚ್ಛಧ್ವಂ ಸಂವದಧ್ವಂ....."** ಮಂತ್ರೋಚ್ಚಾರವಾಗುತ್ತಾ ಎರಡು ರಾಶಿಯಾದ ಪಿಂಡವನ್ನು ಒಗ್ಗೂಡಿಸಲು ಬಹುಶ್ರಮ ಪಡಬೇಕಾಯಿತು ! ಒಗ್ಗೂಡಿ ಸಿದ ಪಿಂಡ ಮತ್ತೆ ಎರಡಾಗುತ್ತಿತ್ತು! ಈ ವೈಚಿತ್ರ್ಯವನ್ನು ಹಿಂದೆಂದೂ ಯಾರೂ ಕಂಡೋ ಕೇಳಿಯೋ ಇಲ್ಲದ ವಿಷಯವಾಗಿರುತ್ತಾ ಅಗಸ್ತ್ಯರು ಶ್ರಾದ್ಧಭೂಮಿಯಲ್ಲೇ ಚಿಂತಾಕ್ರಾಂತರಾದರು ! "ಇದೇನು ! ಇಲ್ವಲನ ಯಾತುಕೃತ್ಯವೇ ?'' ಎಂಬ ಸಂಶಯ ಆವರಿಸಿತು. ಕ್ಷಣ ಕಾಲ "ಛೆ! ಸ್ವಯಂ ದೇವತೆಗಳೇ ರಕ್ಷಿಸುತ್ತಿರುವ ಆಶ್ರಮದಲ್ಲಿ ಭೂತಪ್ರೇತ ಪಿಶಾಚಿ ಗಳ ಕೃತ್ಯಕ್ಕೆ ಅವಕಾಶವೆಲ್ಲ ?" ಎಂಬ ಪರಿಹಾರದಿಂದ ಆ ಸಂಶಯದೂರ ವಾಯ್ತು. ಯಾರನ್ನು ಕೇಳುವುದು ? ವಿಶೇಷ ಸ್ಥಾನದಲ್ಲಿದ್ದ ಭಾರ ದ್ವಾಜರು ಆಗ ಮೌನದಲ್ಲಿದ್ದು ಮಾತಾಡುವಂತಿರಲಿಲ್ಲ. ಅತ್ರಿ, ಭೃಗು ಚ್ಯವನರೂ ಅದೇ ನಿಯಮಕ್ಕೆ ಬದ್ಧರಾಗಿದ್ದು ಏನೂ ಹೇಳುವಂತಿರ ಲಿಲ್ಲ. ಬಹಳ ಸಲ ಯತ್ನಿಸಿಯೂ ಪಿಂಡಭಾಗಗಳು ಒಗ್ಗೂಡಲಿಲ್ಲ ! !

ಅಪರಾಹ್ನ ಮುಗಿಯುತ್ತ ಬಂದಿತ್ತು! ಏನೂ ತೋರದೆ ಅಗಸ್ತ್ಯರು ಖಿನ್ನರಾಗಿ ಮೌನವಾಗಿ ಅಳಲಾರಂಭಿಸಿದರು.

ಈ ಸಮಾಚಾರ ಆಶ್ರಮದ ಎಲ್ಲ ಋಷಿಗಳಿಗೂ ವಟುಗಳಿಗೂ ಆ ವೇಳೆಗೆ ತಿಳಿದು ಎಲ್ಲರೂ ಖಿನ್ನರಾಗಿದ್ದರು. ಶಕುನ ಶಾಸ್ತ್ರ ತಿಳಿದ ಋಷಿಗಳೂ ಜ್ಯೌತಿಷ ವಿದ್ವಾಂಸರೂ ಎಷ್ಟು ಚಿಂತಿಸಿದರೂ ಸಮಸ್ಯೆ ಬಗೆಹರಿಯಲಿಲ್ಲ.

ವಿದರ್ಭದ ಅರಸು ದಂಪತಿಗಳಿಗೂ ಈ ವೈಚಿತ್ರ್ಯ ತಿಳಿದು ಖೇದವಾಗಿತ್ತು. ಸೂರ್ಯ ಮುಳುಗಲು ಒಂದೇ ಒಂದು ಗಳಿಗೆ ಉಳಿದಿತ್ತು.

*   *   *

ಶ್ರಾದ್ಧ ಭೂಮಿಯಲ್ಲಿ ಸ್ತ್ರೀಯರು ಪ್ರವೇಶ ಮಾಡುವಂತಿರಲಿಲ್ಲ! ಅಡುಗೆಯವರನ್ನು ಅಗಸ್ತ್ಯರು ಕರೆಸಿ. "ನಿವೇದನ ತಯಾರಿಯಲ್ಲಿ ಏನಾದರೂ ವ್ಯತ್ಯಾಸವಾಯಿತೇ ?'" ಎಂದು ಕೇಳಿದರು. ಎಲ್ಲ ಸರಿಯಾಗೇ ಇದ್ದದ್ದು ತಿಳಿದು ಮತ್ತೆ ಮನಸ್ಸು ಚಿಂತೆಯಿಂದ ಭಾರವಾಯಿತು. ಹಿರಿಯರು ಇನ್ನಾರಾದರೂ, ಅನುಭವಸ್ಥರು ಪರಿಹಾರ ಹೇಳುವರು ಉಂಟೋ ? ಎಂದು ಆಶ್ರಮಕ್ಕೆ ಹೇಳಿ ಕಳುಹಿದರು. ಸಮಾಚಾರ ಬರಲು ಕಾದರು.

ಒಬ್ಬ ವಟು ಏನೋ ಸಮಾಚಾರ ತಂದು ಅಗಸ್ತ್ಯರ ಕಿವಿಯಲ್ಲಿ ಉಸುರಿದ! ಅಗಸ್ತ್ಯರು ಚಕಿತರಾದರು !! ಏನೂ ಮಾಡಲು ತೋರದೆ ತಲೆತಗ್ಗಿಸಿದಾಗ, ಅದೂ ಸರಿ ಎನಿಸಿ, ನಿಮಂತ್ರಿತ ಋಷಿಗಳ ಮುಖವನ್ನು ಸಲಹೆ ಕೇಳುವಂತೆ ನೋಡಿದರು,

ನಾಲ್ವರೂ ನಿಮಂತ್ರಿತರು "ಅದೇನು ?" ಎಂಬಂತೆ ಮುಖ ಭಾವ ತೋರಿಸಲು, ಅಗಸ್ತ್ಯರು ಹೇಳಿದರು.

"ಮಹರ್ಷಿಗಳೇ ! ಲೋಪಾಮುದ್ರೆ ಈ ಸಮಸ್ಯೆಗೆ ಸಾಧ್ಯವಾದ ಒಂದು ಪರಿಹಾರ ಸೂಚಿಸುವಳಂತೆ ! ಸಣ್ಣ ಹುಡುಗಿ ಎನ್ನುವಂತಿಲ್ಲ ! ಹಿರಿಯರ ಅನುಗ್ರಹದಿಂದಲೇ ಜನಿಸಿದವಳು, ಹಿರಿಯರ ಬಳಿಯೇ ಅನೇಕ ಶಾಸ್ತ್ರಗಳನ್ನು ಓದಿದವಳು. ಇಲ್ಲಿನ ಆಚಾರ ವಿಚಾರಗಳೆಲ್ಲ ಅವಳಿಗೆ ಚೆನ್ನಾಗಿ ಗೊತ್ತು. ಆದರೆ ಈಗ ಅವಳು ಇಲ್ಲಿ ಬರುವಂತಿಲ್ಲ ! ಏನು ಮಾಡುವುದು ?"

ಮಹರ್ಷಿಗಳು ಕೈಸನ್ನೆಯಿಂದ ಏನೋ ಸೂಚನೆ ಮಾಡಿದರು. ಅದರರ್ಥ, "ಶ್ರಾದ್ಧ ನಡೆಯುತ್ತಿದ್ದ ಸ್ಥಳಕ್ಕೆ ಲೋಪಾಮುದ್ರೆ ಬರಲಿ: ಒಂದು ಪರದೆ ಅಥವಾ ತೆರೆಯ ಹಿಂದೆ ಕುಳಿತಿದ್ದು, ಅವಳು ಅಗಸ್ತ್ಯರಿಗೆ ಸಲಹೆ ನೀಡಲಿ. ಉಪಯುಕ್ತವಾದರೆ ಏಕೆ ಬೇಡ ?" ಎಂಬಂತಿತ್ತು.

ಅಗಸ್ತ್ಯರ ಅಪ್ಪಣೆಯಂತೆ ಒಂದು ಪರದೆಯ ಹಿಂದೆ ಲೋಪಾಮುದ್ರೆ ಬಂದು ಕುಳಿತಳು. ಅಗಸ್ತ್ಯರು ಪ್ರಶ್ನಿಸಿದರು.

ಅಗಸ್ತ್ಯ ; "ರಾಜಕುಮಾರಿ ! ನೀವು ಹೇಳುವುದೇನುಂಟೋ. ಹೇಳಿ. ಮಹರ್ಷಿಗಳು ನಿರ್ಣಯಿಸುತ್ತಾರೆ."

ಲೋಪಾಮುದ್ರೆ ; "ಮಹರ್ಷೇ ! ಹಿರಿಯರು ತೀರಿಕೊಳ್ಳುವ ಮುಂಚೆ ಅವರಿಗೇನೋ ಆತಂಕವಿದ್ದುದು ನೆನಪಿದೆಯೇ ?"

ಅಗಸ್ತ್ಯ : "ಹೌದು"

ಲೋಪಾ : "ಅದಕ್ಕೆಂದು ತಾವು ಅವರಿಗೆ ಕೊಟ್ಟ ಕೊನೆಯಲ್ಲಿ ಮಾತೊಂದನ್ನು ಕೊಟ್ಟಮೇಲೆ ನಿಶ್ಚಿಂತರಾಗಿ ಅವರು ಪ್ರಾಣಬಿಟ್ಟುದು ತಮಗೆ ನೆನಪಿದೆಯಲ್ಲವೇ?"

ಅಗಸ್ತ್ಯ : ‘‘ಹೌದು, ದೇವಿ”

ಲೋಪಾ : ‘‘ ಆ ಮಾತುಗಳನ್ನು ತಾವಾಡಿದಾಗ ಅವುಗಳ ಅರ್ಥ ವನ್ನೆಲ್ಲ ಬಲ್ಲಿರಷ್ಟೇ? ’’

ಅಗಸ್ತ್ಯ : ‘‘ಹೌದು’’

ಲೋಪಾ : ‘‘ ಅದರಲ್ಲಿ ಯಾವುದಾದರೊಂದು ಭರವಸೆ ಈಡೇರು ವುದೋ ಇಲ್ಲವೋ ಎಂಬ ಸಂದೇಹ ಇನ್ನೂ ಹಿರಿಯರಿಗಿದ್ದರೆ, ತಾವು ಅದನ್ನು ಎತ್ತಿ ಸ್ಪಷ್ಟವಾಗಿ ಈಗ ಹೇಳಿ, ಅವರನ್ನು ತೃಪ್ತಿಪಡಿಸಿ, ಪಿಂಡ ಸೇರುವುದೋ ಇಲ್ಲವೋ ನೋಡಬಹುದಲ್ಲ !’’

ಅಗಸ್ತ್ಯ : “ಛೀ ! ನಮ್ಮ ಹಿರಿಯರಿಗೆ ಆ ವಿಷಯದಲ್ಲಿ ಸಂದೇಹ ವಿದ್ದೀತೆ ?”

ಲೋಪಾ : ‘‘ಪ್ರಯತ್ನಕ್ಕೆ ನಷ್ಟವೇನಿಲ್ಲವಲ್ಲ !’’

ಅಗಸ್ತ್ಯ : ‘‘ಆಗಲಿ” (ಎನ್ನುತ್ತಾ ಮತ್ತೆ ಪ್ರಜ್ಞೆಯನ್ನು ಪುನರು ಚ್ಚರಿಸುತ್ತಾರೆ.)

“ಭರತವರ್ಷವನ್ನು ಏಕೀಕರಿಸುತ್ತೇನೆ, ವಿಂಧ್ಯನನ್ನು ಮಲಗಿಸು ತ್ತೇನೆ; ಅಸುರರಿಗೆ ಪಾಠ ಕಲಿಸುತ್ತೇನೆ, ನೀವು ನೆಟ್ಟ ಬ್ರಹ್ಮಕ್ಷತ್ರ ಸಸಿ ಗಳನ್ನು ಪೋಷಿಸುತ್ತೇನೆ, ನನ್ನ ಆಯುಷ್ಯವನ್ನೆಲ್ಲ ಇದಕ್ಕೇ ಮುಡಿಪಾಗಿಡು ತ್ತೇನೆ,”

ಲೋಪಾ : ‘‘ಇದಕ್ಕೆ ಮುಂಚೆಯೂ ಇನ್ನೊಂದು ವಾಕ್ಯವನ್ನಾ ಡಿದ್ದಿರಿ, ನೆನೆಪಿದೆಯೋ !’’

ಅಗಸ್ತ್ಯ : ‘‘ಇದೇ, ನಿಮ್ಮ ಬಯಕೆಗಳನ್ನೆಲ್ಲ ಈಡೇರಿಸುತ್ತೇನೆ, ಎಂದಿದ್ದೆ ಅಷ್ಟೆ.’’

ಲೋಪಾ ; "ಸ್ವಾಮಿೂ ! ತಾವು ತಪ್ಪಾಗಿ ಅರ್ಥಮಾಡಬಾರದು. ಅಧಿಕ ಪ್ರಸಂಗವೆಂದೂ ತಿಳಿಯಬಾರದು. ಹಿರಿಯರು ಹಗಲೆಲ್ಲ, 'ಒಂದು ದೇವ ರಹಸ್ಯವಿದೆ. ಹೇಳುವಂತಿಲ್ಲ' ಎನ್ನುತ್ತಿದ್ದುದು ನೆನೆಪಿದೆಯೇ ?

ಅಗಸ್ತ್ಯ ; "ಹೌದು, ಅದು ದೇವರಹಸ್ಯವಾಗಿ, ಅವರು ಬಾಯಿಬಿಟ್ಟು ಹೇಳದೆಯೇ ಹೋದರೆ ನಾನೇನು ಮಾಡಬೇಕು ?"

ಲೋಪಾ ; "ಅಲ್ಲಿಯೇ ಮರ್ಮವಿರುವಂತಿದೆ ! ತಾವು ಇನ್ನು ಮುಂದೆ ಅಗಸ್ತ್ಯಗೋತ್ರ ಸಂತಾನದ ಬಗೆಗೆ ಏನನ್ನು ಯೋಚಿಸಿರು ವಿರಿ ? ತಮಗೆ ನೈಷ್ಠಿಕ ಬ್ರಹ್ಮಚರ್ಯದಲ್ಲಿ ಆಸಕ್ತಿ ತೋರಿರುವುದನ್ನು ಇಡೀ ಆಶ್ರಮವೇ ಬಲ್ಲುದು. ತಮ್ಮ ಹಿರಿಯರೂ ಬಲ್ಲರಷ್ಟೆ ! ಆ ದೇವ ರಹಸ್ಯಕ್ಕೂ ಇದಕ್ಕೂ ಸಂಬಂಧವಿರಬಹುದೇ ?"

ಅಗಸ್ತ್ಯ : ( ಚಕಿತರಾಗಿ ) "ಏನು ಹೇಳುತ್ತಿರುವಿರಿ, ರಾಜ ಕುಮಾರಿ ?"

ಲೋಪಾ : "ತಾವು ಈಗ ಪಿಂಡರೂಪದ ತಂದೆಯವರಿಗೆ ನಮ ಸ್ಕರಿಸಿ ಗೋತ್ರ ಪ್ರವರೋಚ್ಚಾರ ಮಾಡಬಹುದೇ ?"

ಅಗಸ್ತ್ಯ : "ಆಗಲಿ, ತಪ್ಪಿಲ್ಲ, ಅದರಿಂದೇನು ?"

ಲೋಪಾ : "ಮಾಡಿ, ಹಿರಿಯರೇ, ಹೇಳುತ್ತೇನೆ."

ಹಾಗೇ ಮಾಡಿ ಅಗಸ್ತ್ಯರು ಪ್ರವರ ಹೇಳುತ್ತಾರೆ.

ಅಗಸ್ತ್ಯ : "ಅಭಿವಾದಯೇ, ಅಗಸ್ತ್ಯ ದಾರ್ಢ್ಯಚ್ಯುತ ಐಧ್ಮ ವಾಹ ತ್ರಯಾರ್ಷೇಯ ಪ್ರವರಾನ್ವಿತ ಅಗಸ್ತ್ಯಗೋತ್ರಃ ಆಶ್ವಲಾಯನ ಸೂತ್ರಃ ಋಗಧ್ಯಾಯೀ ವಿಷ್ಣುಶರ್ಮಾಽಹಂ ಭೋಃ...."

ಲೋಪಾ : "ಸ್ವಲ್ಪ, ಚರಿತ್ರೆಯನ್ನು ನೆನೆಯಬಹುದೇ ?

ಅಗಸ್ತ್ಯ : "ಅದಕ್ಕೇನು ? ಈ ಗೋತ್ರದಲ್ಲಿ ಹಿಂದೆ ವಿಶಾಲರು, ಕಾಲಾಯನರು, ಔಪದಹಯನರು, ಕುಲ್ಮಾಷದಂಡಿ, ಮುಂತಾದ ವಂಶಗಳೆಲ್ಲ ಆಗಿ ಹೋದವು. ಅವರ ಪೈಕಿ ಈಗ ಯಾರೂ ಉಳಿಯಲಿಲ್ಲ ! ನಮ್ಮ ಪ್ರವರ, ಪರಂಪರೆಯ ಮೂವರಲ್ಲೂ ಇಧ್ಮವಾಹರು ಕ್ರತುವಿಗೆ ದತ್ತಕ ಹೋಗಿ ಬಿಟ್ಟರು; ದೃಢಚ್ಯುತರು ಪುಲಹರಿಗೆ ದತ್ತಕವಾದರು ಪುಲಹರು ಮುಂದೆ ಯಕ್ಷರೂ, (ಪೌಲಸ್ತ್ಯರು ರಾಕ್ಷಸರೂ) ಆದ ನಿಮಿತ್ತ ಆ ಮೂಲಪುರುಷರು, ನಮ್ಮ ಕೂಟಸ್ಥರನ್ನು ಹೀಗೆ ಕೇಳಿ ದತ್ತಕ ಪಡೆದುಕೊಂಡವರಾದರು. ಉಳಿದ ನಮ್ಮ ಪೂರ್ವಜರು ತಂದೆಗೆ ಒಬ್ಬನೇ ಮಗನೆಂಬ ಕ್ರಮದಲ್ಲಿ ಉಳಿಯುತ್ತಾ ಬಂದಿದ್ದೇವೆ. ನಾನಾದರೂ ದ್ರೋಣಕಲಶದಲ್ಲಿ ವೈಜ್ಞಾನಿಕ ವಿಧಿಯಿಂದ, ಮಿತ್ರಾವರುಣರ ಕೃಪೆಯಿಂದ ಹುಟ್ಟಿದೆನೆಂದು ಹಿರಿಯರೆಲ್ಲ ಬಲ್ಲರು. ಈ ಚರಿತ್ರೆಯಲ್ಲಿ ದೇವ ರಹಸ್ಯವೆಲ್ಲಿದೆ ?

ಲೋಪಾ : "ಅಲ್ಲೇ ಇದೆ ! ಹಿರಿಯರು ಕುಪಿತರಾಗಬಾರದು ! ನಾನು ಅಜ್ಞೆ. ತಮಗೆ ತಿಳಿದುದನ್ನೇ ನೆನೆಪಿಸುತ್ತಿದ್ದೇನೆ, ಹೊಸದಾಗಿ ಕಲಿಸುತ್ತಿಲ್ಲ–**ಸ್ಮಾರಯೇ ನ ತು ಶಿಕ್ಷಯೇ!** "

ಅಗಸ್ತ್ಯ : "ಕುಮಾರಿ ! ಇಷ್ಟು ಪೀಠಿಕೆ ಏಕೆ ? ನೇರವಾಗಿ ಹೇಳಬಾರದೆ ?"

ಲೋಪಾ : "ಸ್ವಾಮಿೂ ! ತಂದೆಗೆ ಒಬ್ಬನೇ ಮಗನಾದ ತಾವು ಈಗ ನೈಷ್ಠಿಕ ಬ್ರಹ್ಮಚರ್ಯವನ್ನು ಕೈಕೊಂಡರೆ ಅಗಸ್ತ್ಯ ಸಂತಾನದ ಗತಿ ಏನಾಗುವುದು ? ಹಿರಿಯರಿಗೆ ಈ ಚಿಂತೆ ಇರಲಾರದೇ ? ಅವರ ಇಷ್ಟಾರ್ಥವನ್ನೆಲ್ಲ ಕೈಗೂಡಿಸುವುದಾಗಿ ತಾವು ಮಾತು ಕೊಟ್ಟಾಗ ಇದು

ತಮ್ಮ ಗಮನದಲ್ಲಿದ್ದಿತೋ; ಇಲ್ಲವೋ; ಹಿರಿಯರಿಗೆ ಅದರಿಂದ ನೆಮ್ಮದಿ ಆಗಿ, ಪ್ರಾಣ ಬಿಡಲಿಲ್ಲವೇ ? .... ನಮಸ್ಕಾರ. ಅಜ್ಞಾಳ ಅಧಿಕ ಪ್ರಸಂಗ ವನ್ನು ಕ್ಷಮಿಸಬೇಕು.''

ಎನ್ನುತ್ತಾ ಲೋಪಾಮುದ್ರೆ ನಮಸ್ಕರಿಸಿ ನಡೆದಳು !! ತೆರೆ ಎದ್ದಿತು ! ನಿಮಂತ್ರಿತರು ವಿಸ್ಮಿತರಾದರೂ ಲೋಪಾಮುದ್ರೆಯ ಚಾತುರ್ಯವನ್ನೂ, ಶಾಸ್ತ್ರವಿವೇಚನಾ ಪ್ರಜ್ಞೆಯನ್ನೂ ಮೆಚ್ಚಿ, ಸಂತಸದ ಮಂದಹಾಸ ಸೂಸಿದರು.

ಒಂದು ಬಗೆಯಲ್ಲಿ ಅಗಸ್ತ್ಯರಿಗೂ ಇದರಿಂದ ಸಂದೇಹ ಪರಿ ಹಾರವೂ, ದುಗುಡ ನಿವಾರಣೆಯೂ ಆದರೂ, ತಮ್ಮ ಸಂಕಲ್ಪಕ್ಕೆ ಇದು ಚ್ಯುತಿ ತಂದದ್ದರಿಂದ ಖೇದವೂ ಆಯಿತು. "ಬ್ರಹ್ಮಚರ್ಯ ಪಾಲನೆ ಇಲ್ಲದೆ ಹಿರಿಯರ ಆ ಉಳಿದ ಆಸೆಗಳನ್ನು – ಭರತ ವರ್ಷದ ಏಕೀ ಕರಣ, ಅಸುರ ನಿರ್ಮೂಲನ, ಇತ್ಯಾದಿಗಳನ್ನು ಮಾಡುವುದೆಂತು ? ಏನಾದರೂ ಪರ್ಯಾಯದ ಪರಿಹಾರವಿದೆಯೋ ? ಹೆಚ್ಚು ಯೋಚಿಸುವು ದಕ್ಕೂ ವೇಳೆಯಿಲ್ಲ ! ಸೂರ್ಯಮುಳುಗಲು ಕೊಂಚವೇ ವೇಳೆ ಉಳಿಯಿತು. "ಹೇಗಾದರಾಗಲಿ, ಪ್ರತಿಜ್ಞೆ ಮಾಡಿ ನೋಡುತ್ತೇನೆ" ಎಂದವರೇ, ಪಿಂಡದೆದುರು ಬಲಗಾಲ ಮಂಡಿಯನ್ನೂ ಕೆಳಗೆ ಊರಿ ಕುಳಿತು ಹೀಗೆ ಪ್ರತಿಜ್ಞೆ ಗೈಯ್ಯುತ್ತಾರೆ.

''ಪೂಜ್ಯ ಪಿತೃಪಾದರೇ ! ಅಗಸ್ತ್ಯಗೋತ್ರವನ್ನು ನಾಮಾವಶೇಷ ಮಾಡಲು ನಾನು ಬಿಡುವುದಿಲ್ಲ ! ಇದು ಸತ್ಯ ! ಅಗಸ್ತ್ಯಸಂತಾನವನ್ನು ಖಂಡಿತ ಬೆಳೆಸುತ್ತೇನೆ."

ಮತ್ತೆ ಪಿಂಡಸಂಯೋಜನೆಗೆ ಯತ್ನಿಸಿದಾಗ, ಪಿಂಡಭಾಗಗಳು ಕೂಡಿಕೊಂಡು ಒಂದಾದದ್ದು ಆ ದಿನ ಆಶ್ರಮದಲ್ಲಿ ಪವಾಡವೆನಿಸಿತು !

ನಿಮಂತ್ರಿತರು ವಿಸರ್ಜಿತರಾದ ಮೇಲೆ, ರಾತ್ರಿಯೆಲ್ಲ ಅಗಸ್ತ್ಯರು ನಿದ್ರಿಸಲಿಲ್ಲ !

ತಮ್ಮ ಬ್ರಹ್ಮಚರ್ಯ ವ್ರತವನ್ನು ಬಿಡದೆಯೇ ಗೋತ್ರ ಬೆಳೆಸುವ ಬೇರೊಂದು ಉಪಾಯ ಉಂಟೇ ?–ಎಂಬುದನ್ನು ಬಹುವಾಗಿ ಚಿಂತಿಸಿದರು. ಏನೂ ಹೊಳೆಯಲಿಲ್ಲ. ಸೂರ್ಯೋದಯ ಆಗಿಯೇ ಹೋಯಿತು !

* * *

ಇನ್ನೆರಡು ದಿನ ಕಳೆಯಿತು. ಸಪ್ತರ್ಷಿಗಳು ಅಗಸ್ತ್ಯರನ್ನು ಆಶ್ರಮದ ಕುಲಪತಿ ಎಂದು ಪಟ್ಟಾಭಿಷೇಕ ಮಾಡಿದರು ! ಋಷಿ ಸಂಘ ಸಂತಸ ಪಟ್ಟಿತು. !!

ಸಪ್ತರ್ಷಿಗಳು ತಂತಮ್ಮ ಆಶ್ರಮಕ್ಕೆ ಹೊರಟು ನಿಂತರು. ಹಲವರು ಕುದುರೆಗಳ ಮೇಲೂ, ಮತ್ತೆ ಹಲವರು ಎತ್ತಿನಗಾಡಿಗಳಲ್ಲೂ, ಸ್ತ್ರೀಯರೂ ವಟುಗಳೂ ಏರಿಕುಳಿತು ಪ್ರಯಾಣಕ್ಕೆ ಸಿದ್ಧರಾದರು. ವೃದ್ಧರಾದರೂ, ಸಪ್ತರ್ಷಿಗಳೂ, ಅವರ ವೃದ್ಧಾನುಚರರೂ ಪಾದಯಾತ್ರೆಯನ್ನೇ ಕೈಕೊಂಡರು. ಮುಂಚೂಣಿಯ ಪಯಣಿಗರು ಅದನ್ನು ಸುಗಮವಾಗಿಸುತ್ತಿದ್ದರು.

ಆಶ್ರಮದ ಬಾಗಿಲಲ್ಲಿ ವೈದರ್ಭ ದಂಪತಿಗಳೂ ಲೋಪಾಮುದ್ರೆಯೂ ರಥವೇರುವ ಮುಂಚೆ ಅಗಸ್ತ್ಯರಿಗೆ ನಮಸ್ಕರಿಸಿದರು. ಅಗಸ್ತ್ಯಸೋದರ ಅವರನ್ನೆಲ್ಲ ಮುಂದಿನ ನದೀತಟಾಕಗಳವರೆಗೆ ಕಳುಹಿಬರಲು ಹೊರಟಿದ್ದ

ಜಮದಗ್ನಿ, ಆಂಗೀರಸರು "ವತ್ಸ, ಹೋಗಿಬರುತ್ತೇವೆ. ಆಶ್ರಮ ಎಂದಿನಂತೆ ಸಾಗುವುದೂ, ನಿನ್ನ ಪ್ರತಿಜ್ಞೆ ಪೂರೈಸುವುದೂ ಈಗ ನಿನ್ನ ಕೈಲೇ ಇದೆ" ಎಂದು ಎಚ್ಚರಿಸಿದರು.

ಹಿರಿಯರನ್ನು ಕಳೆದುಕೊಂಡ ದುಃಖ ಉಮ್ಮಳಿಸಿ ಅಗಸ್ತ್ಯರು ಇವರಿಗೆ ನಮಸ್ಕಾರಮಾಡಿ, ಎದ್ದುನಿಂತು, ಏನೋ ನೆನಪಾಗಿ" ಹಿರಿಯರೇ ಅದೇನೋ ದೇವರಹಸ್ಯವೆಂದು ಲೋಪಾಮುದ್ರೆ ಹೇಳಿದ್ದು.... ಅದೇನು! ನನ್ನ ಹಿರಿಯರು ಬಲ್ಲವರಾಗಿರಬೇಕು ! ಅವರ ಆಪ್ತರೂ, ಸಹಾಧ್ಯಾ ಯಿಗಳೂ ಆದ ತಮಗೆ ಅದು ಗೊತ್ತಿರಬೇಕಲ್ಲ ? ನಾನದನ್ನು ಅರಿಯ ಬಹುದೇ ?''

ಜಮದಗ್ನಿ, ಅಂಗೀರಸರು ಒಬ್ಬರ ಮುಖವನೊಬ್ಬರು ನೋಡಿ ಕೊಂಡರು ! ಅಂಗೀರಸರ ಮುಖಸನ್ನೆಯಂತೆ ಜಮದಗ್ನಿ ಅಗಸ್ತ್ಯರ ಕಿವಿಯಲ್ಲಿ ಮೆಲ್ಲನೆ ಉಸುರಿದರು; "ಲೋಪಾಮುದ್ರೆ ನಿನಗೆ ಪತ್ನಿ ಯಾಗಲು ಹುಟ್ಟಿದವಳು !!!"



# ೮ ಲೋಪಾಮುದ್ರೆ-ಅಗಸ್ತ್ಯರ ವಿವಾಹ

ಅಗಸ್ತ್ಯಾಶ್ರಮದಿಂದ ಹೊರಟ ಇಲ್ವಲ ದಾರಿಯುದ್ದಕ್ಕೂ ಅಪಮಾನದಿಂದ ತಪ್ತನಾದ.ಅವನಿಗೆ ಬೇಕಾದ ಮಾಹಿತಿಗಳು ದೊರೆತವಾದರೂ ತಾನೆಣಿಸಿದಂತೆ ಯಾವುದೂ ನಡೆಯಲಿಲ್ಲ ! ಆಶ್ರಮದೊಳಗೇ ಹೋಗಬಿಡದೆ ಅಗ್ನಿ ತಡೆದದ್ದು, ತಾನು ವಿಕ್ಷಿಪ್ತನಂತೆ ಆಶ್ರಮದ ಹೊರಗೇ ಇಡಲ್ಪಟ್ಟದ್ದು. ಆಯೋಜಿತ ವೇದಮಂತ್ರಗಳಿಂದ ತನಗೆ ಸ್ವಾಗತ ದೊರೆಯದೇ 'ದೇವಾಸುರ ಯುದ್ಧ' ಪ್ರಸ್ತಾವದ ಎಚ್ಚರಿಕೆಯನ್ನು ಋಷಿಸಂಘ ತನಗೆ ಸ್ವಾಗತದ ನೆಪದಲ್ಲಿ ತಲುಪಿಸಿದ್ದು, ಅಗಸ್ತ್ಯಾಶ್ರಮದ ವಟುಗಳು ತನ್ನ ಮತ್ತು ತನ್ನ ಸೈನ್ಯದ ಮೇಲೆ ಗೂಢಚರ್ಯೆ ನಡೆಸಿದ್ದು, ಅವರೆಲ್ಲ ತನ್ನ ಮತ್ತು ತನ್ನವರ ಮೇಲೆ ಸಮರ ಸನ್ನಾಹದಲ್ಲಿರುವುದು, ಅದನ್ನು ಅಗಸ್ತ್ಯರೇ ಎಚ್ಚರಿಕೆಯ ಭಾಷೆಯಲ್ಲಿ ತನಗೆ ತಿಳಿಸಿದ್ದು, ತಾನು ನಡೆಸುತ್ತಿರುವ ಋಷಿಪೀಡೆ, ಆ ಬಗೆಯ ಹಿಂಸಾವಿಹಾರದ ಬಗೆಗೆ ಅಗಸ್ತ್ಯರಿಗೆ ಮಾಹಿತಿ ಇರುವುದು, ಲೋಪಾಮುದ್ರೆ ತನ್ನ ತಮ್ಮನಿಗೆ ದೊರೆಯಲಾರಳೆಂಬ ಅಗಸ್ತ್ಯರ ಎಚ್ಚರಿಕೆ - ಎಲ್ಲಕ್ಕಿಂತ ಹೆಚ್ಚಾಗಿ, ಆಶ್ರಮದವರು ತನ್ನನ್ನು ಪದೇಪದೇ 'ಅನಾರ್ಯ'ನೆಂದು ವ್ಯವಹರಿಸುತ್ತಾ, ಬಹಿಷ್ಕೃತನಂತೆ ಕಂಡುದು ಇದೆಲ್ಲ ಮರೆಯದ ಮಾಯದ ಹುಣ್ಣನ್ನು ಅವನ ಮನದಲ್ಲಿ ಏರ್ಪಡಿಸಿತ್ತು !

"ಅಗಸ್ತ್ಯ ! ಸೇಡು ತೀರಿಸಿಕೊಳ್ಳದೆ ಬಿಡುವುದಿಲ್ಲ !" ಎಂದು ಶಪಥಮಾಡುತ್ತಾ ಮಣಿಮತೀಪುರಿಗೆ ಇಲ್ವಲ ಮತ್ತೆ ತಲುಪುವ ವೇಳೆಗೆ ಮೂರು ತಿಂಗಳ ವೇಳೆ ಹಿಡಿಯಿತು. ಅಗಸ್ತ್ಯಾಶ್ರಮದ ಗೋದಾವರೀ ತೀರದಿಂದ ಮಣಿಮತೀಪುರಿಗೆ ವಿಂಧ್ಯವನ್ನು ಬಳಸ ಬರುವ ಅನಿವಾ-

ರ್ಯತೆ ಇತ್ತು. ಹಿಮಾಲಯನನ್ನೂ ಮೀರಿಸಿ ಬೆಳೆಯುವ ಎತ್ತರದ ವಿಂಧ್ಯದ ಬಯಕೆಗೆ ಯಾರೂ ಅಂಕುಶ ಹಾಕುವವರಿರಲಿಲ್ಲ. ಪಶ್ಚಿಮದ ಈಗಿನ ಕರಾವಳೀ ಪ್ರಾಂತ ಎಂಬುದು ಆಗ ಇರಲಿಲ್ಲ. ಸಹ್ಯಾದ್ರಿಯೇ ಸಿಂಧು ಸಮುದ್ರದ ತೀರದ ಗೋಡೆಯಾಗಿ ದಕ್ಷಿಣ ಭಾರತವನ್ನು ರಕ್ಷಿಸುತ್ತಿತ್ತು. ಪೂರ್ವದ ಗಂಗಾಸಾಗರದ ಅಂಚಿಗೆ ನೀಲಾಚಲ ತಲೆ ಎತ್ತಿ ನಿಂತು, ಇವೆರಡೂ, ತ್ರಿಕೋಣದ ಎರಡು ಬಾಹುಗಳಂತೆ ಉದಕ ಮಂಡಲದ ನೀಲಗಿರಿಯಲ್ಲಿ ಸೇರಿ, ಈ ಮಧ್ಯದ ಪ್ರದೇಶ ದುರ್ಗಮವಾಗಿ ಅಸುರರಿಗೆ ಸುರಕ್ಷಿತವಿತ್ತು. ಇದರ ಉತ್ತರಕ್ಕೇ ಮಧ್ಯಭಾರತದಲ್ಲಿ ದಿನೇ ದಿನೇ ಬೆಳೆಯುತ್ತಿದ್ದ ವಿಂಧ್ಯ, ಪೂರ್ವಪಶ್ಚಿಮವಾಗಿ ನಿಂತು, ಜಂಬೂ ದ್ವೀಪದ ಈ ಭಾಗ ತಲೆಕೆಳಗಾದ ತ್ರಿಕೋಣಾಕಾರವಾಗಿ ಕಾಣುತ್ತಿತ್ತು. ಈ ತ್ರಿಕೋಣದ ದಕ್ಷಿಣಕ್ಕೆ ಪ್ರಕಟವಾಗಿಯೇ ನಿರ್ಋತರು, ರಾಕ್ಷಸರು, ಯಕ್ಷರು, ಪಿಶಾಚರು ನೆಲೆಸಿ, ಆ ಭಾಗದ ಜನರನ್ನು ಪೀಡಿಸುತ್ತಾ, ಅಲ್ಲಿ ಸಂಸ್ಕೃತಿಯ ಸುಳಿವೇ ಇಲ್ಲದಂತೆ ಮಾಡಿದ್ದರು. ಲಂಕೆಯ ರಾವಣ –ಪೂರ್ವದ ಮಾಲೀ, ಸುಮಾಲೀ, ಎಂಬ ಅಸುರ ದೊರೆಗಳು ಇವಕ್ಕೆಲ್ಲ ಪ್ರೋತ್ಸಾಹ ನೀಡುತ್ತಿದ್ದರು.

ವರ್ಷವುರುಳಿತು. ತಂದೆಯ ವಾರ್ಷಿಕ ಕ್ರಿಯೆಗಳನ್ನೆಲ್ಲ ವಿಧಿವತ್ತಾಗಿ ಮುಗಿಸಿದ ಅಗಸ್ತ್ಯಕುಲಪತಿಗಳು ಉತ್ತರಭಾರತದ ಆರ್ಯಾವರ್ತದೊರೆ ಗಳನ್ನು ಕಂಡುಬರುವ ಕಾರ್ಯಕ್ರಮ ಹಾಕಿಕೊಂಡು, ಸೋಮಶ್ರವನೆಂಬ ತಮ್ಮ ಸೋದರನನ್ನು ಆಶ್ರಮದಲ್ಲಿ ನಿಲ್ಲಿಸಿ ತಾವು ಆ ಯಾತ್ರೆಯ ಮೊದಲ ಹೆಜ್ಜೆಯಲ್ಲಿ ವಿದರ್ಭಕ್ಕೆ ಹೊರಟಿದ್ದರು. ಚಾಕ್ರಾಯಣ ಮತ್ತು ಪ್ರಿಯವ್ರತರು ದಕ್ಷಿಣದತ್ತ ಕಣ್ಣಿಟ್ಟು ದೂರದ ಇಲ್ವಲನ ಚಲನ ವಲನಗಳನ್ನು ಗೂಢಚಾರ ಮುಖೇನ ತಿಳಿಯುತ್ತ, ಋಷಿಪೀಡೆಯ ಅವನ ತಂತ್ರಗಳನ್ನು ವಿಫಲಗೊಳಿಸುವ ಮಹಾ ಕಾರ್ಯದಲ್ಲಿ ನಿಯುಕ್ತ

ರಾದಬಳಿಕ ಅಗಸ್ತ್ಯರು ನಿಶ್ಚಿಂತೆಯಿಂದ ಕುಂಡಿನಪುರಕ್ಕೆ ಪ್ರಯಾಣ ಬೆಳೆಸಿದರು. ನೂರಾರು ಗಾಡಿಗಳಲ್ಲಿ ಆಶ್ರಮಸ್ಥರು ಹಿಂಬಾಲಿಸಲಾಗಿ ಅಗಸ್ತ್ಯರು ಪಾದಯಾತ್ರೆಯಲ್ಲೇ ವಿದರ್ಭವನ್ನು ತಲುಪಲು ನಾಲ್ಕೈದು ತಿಂಗಳೇ ಆದವು.

ವಿದರ್ಭರಾಜಧಾನಿಯಲ್ಲಿ ಅಗಸ್ತ್ಯರಿಗೆ ಅಪೂರ್ವರಿಯ ಸ್ವಾಗತ ನಡೆಯಿತು. ಊರವರೆಲ್ಲ ಈ ವ್ಯಕ್ತಿವಿಶೇಷವನ್ನು ಮಾಳಿಗೆಗಳ ಮೇಲಿಂದಲೂ, ರಸ್ತೆಯ ಇಕ್ಕೆಲಗಳಿಂದಲೂ ಸಂದರ್ಶಿಸಿ "ಇಷ್ಟು ಕುಳ್ಳವ್ಯಕ್ತಿಗೆ ಇಷ್ಟು ಸಾಹಸ ಉಂಟೇ ?" ಎಂದು ಆಶ್ಚರ್ಯಪಟ್ಟರು. ದೊರೆ ಚಿಂತಯಲ್ಲಿರುವಂತೆ ಅಗಸ್ತ್ಯರಿಗೆ ಗೋಚರವಾಯಿತು.

"ದೊರೆಯೇ ! ಏನು ಚಿಂತೆಗೆ ಕಾರಣ ? ಇಷ್ಟು ದೊಡ್ಡ ಪರಿವಾರದೊಡನೆ ನಾವು ಬಂದುದು ತಮ್ಮ ರಾಜ್ಯಕ್ಕೆ ಪೀಡೆಯೇ ಆಯಿತೇನೋ ! ಆಶ್ರಮದ ಪದ್ಧತಿಯನ್ನು ನಾವು ಬಿಡುವಂತಿಲ್ಲ ! ನಾವಿಲ್ಲಿ ಬಂದುದು ನಿಮ್ಮ ಆರ್ಥಿಕ, ರಾಜಕೀಯ ವ್ಯವಸ್ಥೆಗಳನ್ನು ಕಣ್ಣಿಂದ ಕಂಡು ಇಂಥ ಅರಸರಿಗೆ ಅಭಿವೃದ್ಧಿಯ ಸೂಚನೆಗಳನ್ನಿತ್ತು, ಧೈರ್ಯ ತುಂಬಿ, ಇಲ್ವಲನ ದುರುದ್ದೇಶವನ್ನು ತಡೆಯುವಂತೆ ತಮ್ಮಂಥವರನ್ನೆಲ್ಲ ಒಗ್ಗೂಡಿಸಿ, ಆರ್ಯಸಂಸ್ಕೃತಿಯ ಮೂಲೋದ್ದೇಶ್ಯಕ್ಕೆ ನೀರೆರೆದು ಬೆಳೆಸುವುದೇ ಆಗಿದೆ. ಹೇಗೂ ಒಂದೆರಡು ದಿನಗಳಲ್ಲಿ ಇಲ್ಲಿಂದ ಮುಂದೆ ನಡೆಯುತ್ತೇವೆ–ಅವಂತೀ, ಉಜ್ಜಯಿನಿ, ಮಾಲವ, ಕೋಸಲ, ವಿದೇಹ, ಅಂಗವಂಗಾದಿ ದೊರೆಗಳನ್ನೂ ಕಾಣುವುದಿದೆ.........." ಎಂದು ಹೇಳಿದರು.

ರಾಜ . "ಮಹರ್ಷೇ ! ತಾವು ಹಾಗೆ ಭಾವಿಸಿದರೆ ನನ್ನ ದೌರ್ಭಾಗ್ಯವೆನ್ನುತ್ತೇನೆ. ಚಿಂತೆಗೆ ಕಾರಣ ಬೇರೆಯೇ ಇದೆ........ ಈಗೊಂದು ವಾರದ ಹಿಂದೆ ಇಲ್ವಲನ ಪುರೋಹಿತರಾದ, ಶುಕ್ರಪುತ್ರರೇ ಸ್ವಯಂ ಬಂದು,

ನಮ್ಮ ಕುಮಾರಿಯನ್ನು ವಾತಾಪಿಗೆ ಕೊಟ್ಟು ವಿವಾಹಮಾಡುವಂತೆ ಸೂಚನೆಯನ್ನು ಮುಂದಿಟ್ಟು, ಅನೇಕ ಅಮೂಲ್ಯಕಾಣಿಕೆಗಳನ್ನೂ ಒಪ್ಪಿ ಸಿದ್ದಾರೆ. ನಾನಿದನ್ನು ಎದುರು ನೋಡಿರಲಿಲ್ಲ. ಏನು ಹೇಳುವುದೆಂದು ತಿಳಿಯದೆ, ಅವರನ್ನು ಇಲ್ಲೇ ಕೆಲದಿನಗಳು ಇರುವಂತೆ ಹೇಳಿ, ಯೋಚಿಸಿ ಉತ್ತರಿಸುವುದಾಗಿ ಹೇಳಿದ್ದೇನೆ. ನಮ್ಮ ಪುರೋಹಿತರಾದ ಶಾಂಖಾಯ ನರಿಗೂ ಏನೂ ಹೊಳೆಯಲಿಲ್ಲ. ಮಗಳನ್ನು ಕೊಡದೇ ಇದ್ದರೆ ಬಲವತ್ ವಿರೋಧ ಏರ್ಪಟ್ಟು ಆರ್ಯಾವರ್ತವನ್ನು ಕಬಳಿಸುವ ಇಲ್ವಲನ ಯತ್ನ ದಲ್ಲಿ ವಿದರ್ಭವೇ ಮೊದಲನೇ ತುತ್ತಾಗಬಹುದು! 'ಇಲ್ಲ' ಎಂದರೆ, ನೇರವಾಗಿಯೇ ನಾನೇ ಮಗಳನ್ನು ಮೃತ್ಯುವಿನ ದವಡೆಗೆ ನೂಕಿವಂತಾಗು ವುದಲ್ಲದೆ', ನಾನೇ ವಿದರ್ಭವನ್ನು ಮೊದಲ ತಾಂಬೂಲವನ್ನಾಗಿ ಇಲ್ವಲನಿಗೆ ಕೊಟ್ಟು ಆರ್ಯಾವರ್ತದ ನಿರ್ನಾಮಕ್ಕೂ ಕಾರಣನಾಗುತ್ತೇನೆ. ಹೇಗೂ ಇಲ್ವಲನಿಗೇ ಲಾಭ! ಈ ಇಕ್ಕಟ್ಟಿನಿಂದ, ಸಂಕಟದಿಂದ ಪಾರಾಗಿಸಲು ದೇವರೇ ನಿಮ್ಮನ್ನು ಇತ್ತ ಕಳುಹಿದ, ಉಪಾಯವನ್ನು ಹೇಳಬೇಕು." ಮರು ದಿನ ಉತ್ತರಹೇಳುವುದಾಗಿ ತಿಳಿಸಿ ಅಗಸ್ತ್ಯರು ಸ್ವಯಂ ಸಂಧ್ಯೆಗೆ ಇಳಿದರು

*　　*　　*

ಸಂಧ್ಯೆ ಮುಗಿಸಿದ ಅಗಸ್ತ್ಯರು ದೇವಗುರು ಬೃಹಸ್ಪತಿಯನ್ನು ವಿಧಿವತ್ತಾಗಿ ಧ್ಯಾನಿಸಿ ಅವರನ್ನು ಋಜ್ ಮಂತ್ರಪೂರ್ವಕವಾಗಿ ಆಹ್ವಾನಿಸಿದರು : ದರ್ಭೆಗಳನ್ನು ಹಾಸಿ, ಯಪೋದಕವನ್ನು ದೇವ ತೀರ್ಥದಿಂದ ಅರ್ಪಿಸಿ, ಅಕ್ಷತೆಯಿಂದ, ದೂರ್ವಾದಳದಿಂದ ಅಭ್ಯರ್ಚಿಸಿ, ಶಿಷ್ಯರ ಮುಖ ನೋಡುತ್ತಾ ಒಂದು ಮಂತ್ರವನ್ನು ಹೀಗೆ ಆರಂಭಿಸಿದರು. ಗಗನ ಬಿರಿ ಯುವಂತೆ ಶಿಷ್ಯಗಣ ಅದನ್ನು ಅನೂಚ್ಚಾರವಾಡಿತು:

ಆ ದೈವ್ಯಾ ವೃಣೀಮಹೇಽವಾಂಸಿ
ಬೃಹಸ್ಪತಿರ್ನೋ ಮಹ ಆ ಸಖಾಯಃ ।
ಯಥಾ ಭವೇಮ ಮೀಢ್ಹುಷೇ ಅನಾಗಾ
ಯೋ ನೋ ದಾತಾ ಪರಾವತಃ ಪಿತೇವ ॥

("ಸ್ನೇಹಿತರೇ ! ಈಗ ನಾವು ಬೃಹಸ್ಪತಿಯಿಂದ, ಆ ದೇವೋತ್ತಮನೇ ಮಾತ್ರ ಅನುಗ್ರಹಿಸಬಲ್ಲ ರಕ್ಷಣೆಯನ್ನು ಕುರಿತು ಪ್ರಾರ್ಥಿಸೋಣ. ನಮ್ಮ ಪ್ರಾರ್ಥನೆಯನ್ನೂ ಹವಿಸ್ಸನ್ನೂ ಆ ದೇವನು ಖಂಡಿತ ಸ್ವೀಕರಿಸುತ್ತಾನೆ. ತಂದೆಯು ಬಲುದೂರದಿಂದ ಸಂಪಾದಿಸಿ ತಂದ ಧನವನ್ನು ಪುತ್ರರಿಗೆ ಕೊಂಡುಬಂದು ಅನುಗ್ರಹಿಸುವಂತೆ ಈ ದೇವನೂ ನಮಗೆ ಸದಾ ದಾತೃ ಆಗಿದ್ದಾನೆ. ಪಾಪರಹಿತರಾಗಿ ನಾವು ಅವನನ್ನು ಪೂಜಿಸೋಣ.'') (ಈಗಿನ ಋಕ್ಸಂಹಿತೆಯಲ್ಲಿ ಇದು 7-97-2 ಆಗಿದೆ.)

ಮಂತ್ರೋಚ್ಚಾರಮಾಡಿ, ಶಿಷ್ಯರು ವಾಡಿಕೆಯಂತೆ ಪೂಜಾರ್ಘ್ಯಪದಾಚೆ ಸರಿದರು !

* * *

ಮಹರ್ಷಿ ಯೋಗಸಮಾಧಿಯಲ್ಲಿಳಿದು ಬಾಹ್ಯಪ್ರಜ್ಞಾವಿಮುಖರಾದರು. ಅಂತರಂಗದ ಅವರ ದಿಗಂತದಲ್ಲಿ ಕಾಂತಿಪೂರ್ಣವೂ ಕೆಂಪುಮಿಶ್ರಿತಹಳದೀ ಬಣ್ಣದಿಂದ ಕೂಡಿದುದೂ ಆದ ದೇವತಾ ವಿಶೇಷವು ಪ್ರತ್ಯಕ್ಷವಾಯಿತು:

ದೇವಗುರು : "ಮಹರ್ಷೇ ! ನೀನೇ ತಿಳಿದ ಉಪಾಯಕ್ಕೆ ನನ್ನನ್ನು ದೇವಲೋಕದಿಂದ ಕರೆಯಬಹುದೇ ? ಸಪ್ತರ್ಷಿಮಂಡಲದಲ್ಲಿ ನೀನೇ

ಈಗ ನನ್ನ ಪ್ರತಿನಿಧಿಯಾಗಿರುತ್ತಾ, ದೇವಸಮಾನರಾದ ಆರ್ಯಾವರ್ತದ ದೊರೆಗಳಿಗೆ ಮಾರ್ಗದರ್ಶಿಯಾಗಿರುವೆಯಲ್ಲವೇ ?''

ಅಗಸ್ತ್ಯ "ಅದನ್ನು ನಾನರಿಯೇ, ಪ್ರಭುವೇ ! ನಿಮ್ಮ ಔದಾರ್ಯ ಪ್ರಸಿದ್ಧವಾದುದು. ಬುದ್ಧಿಶಕ್ತಿಯಲ್ಲಿ ತಮ್ಮನ್ನು ಮೀರಿಸಬಲ್ಲವರಾರು ? ನನಗೀಗ ನನ್ನ ಹಿರಿಯರ ಮಾರ್ಗದರ್ಶನವೂ ಇಲ್ಲ ! ತಾವೇ ದಾರಿತೋರ ಬೇಕು".

ದೇವಗುರು : " ಇಲ್ವಲನಿಗೆ ಹೀಗೊಂದು ತಂತ್ರವನ್ನು ಸೂಚಿಸು" ಎನ್ನುತ್ತಾ ಮಹರ್ಷಿಯ ಕಿವಿಯಲ್ಲಿ ಉಸುರುತ್ತಾನೆ. ದೇವತಾಸಾಮೀಪ್ಯ ದಿಂದ ಅಗಸ್ತ್ಯರ ಮೈಯಲ್ಲಿ ವಿದ್ಯುತ್ ಸಂಚಾರವಾದಂತೆ ಆಗುತ್ತದೆ. ದೇವವಾಣಿಯನ್ನು ಕಿವಿಯಲ್ಲಿ ಕೇಳಿ ರೋಮಹರ್ಷವಾಗುತ್ತದೆ ! ಉಪಾಯಬೋಧನೆಯಿಂದ ಲವಲವಿಕೆ ಏರ್ಪಡುತ್ತದೆ.

ಅಗಸ್ತ್ಯ : "ಹಾಗೇ ಆಗಲಿ, ಗುರುವೇ ! ಅಲ್ಲಿಯ ತನಕ ಲೋಪಾ ಮುದ್ರೆಯ ವಿವಾಹದ ಗತಿ ? ನನ್ನ ಬ್ರಹ್ಮಚರ್ಯದ ಗತಿ ? ನನ್ನ ತಂದೆಗೆ ತಿಳಿದಿದ್ದ ದೇವರಹಸ್ಯದ ಗತಿ ?"

ದೇವಗುರು ; (ಮತ್ತೆ ಸಮೀಪಿಸಿ, ಕಿವಿಯಲ್ಲಿ ಉಸುರಿದ್ದನ್ನು ಕೇಳಿ ಅಗಸ್ತ್ಯರು ಸಂತಸಪಡುತ್ತಾರೆ.) ಅಗಸ್ತ್ಯರು ಮತ್ತೆ ಇನ್ನೊಂದು ಋಕ್ಕಿನಿಂದ- **"ಸ ಆನೋ ಯೋನಿಂ ದದತು ಅತಿ ಸಶ್ಚತೋ ಅರಿಷ್ಟಾನ್"** –ಸ್ತುತಿಸಿ, ದೇವಗುರುವನ್ನು ಬೀಳ್ಕೊಡುತ್ತಾರೆ." "ಭಕ್ತಪ್ರಿಯನೂ, ದಾನಸಮರ್ಥನೂ ಆದ ಬೃಹಸ್ಪತಿಯು ನಮ್ಮ ಯಾಗದಲ್ಲಿ ಬಂದು, ನಮ್ಮ ಅಭಿಲಾಷೆಯನ್ನು ಪೂರೈಸಿ, ನಮ್ಮ ಉಪದ್ರವಗಳನ್ನು ಕಳೆದು, ಶತ್ರುಗಳ ಹಿಂಸೆಯಿಂದ ನಮ್ಮನ್ನು ರಕ್ಷಿಸಲಿ" ಎಂಬುದು ಈ ಮಂತ್ರದ ಅರ್ಥ.

ಅಗಸ್ತ್ಯರ ಏಕಾಂತಧ್ಯಾನ ಮುಗಿಯಿತು. ಆಚಮನ ಮಾಡಿ, ಆಸನ ವನ್ನು ಪ್ರೋಕ್ಷಿಸಿ, ದೊರೆಯನ್ನು ಕರೆಸಿ, "ನಾಳೆ ಸಭೆ ಸೇರಿಸಿ ಶುಕ್ರ ಪುತ್ರ ರನ್ನು ಬರಮಾಡಿ. ನಾನೇ ಉತ್ತರ ಹೇಳುತ್ತೇನೆ" ಎಂದು ಅಪ್ಪಣೆ ಮಾಡಿ ದರು.

* * *

ಸಭೆ ಸೇರಿತು. ದೊರೆಯ ಬಲಕ್ಕೆ ಶಾಂಖಾಯನರೂ ಎಡಕ್ಕೆ ಶಂಡ ಮತ್ತು ಅಮರ್ಕರೂ ಆಸೀನರಾಗಿದ್ದರು ಮಹಾದ್ವಾರದಲ್ಲಿ ಅಗಸ್ತ್ಯರು ಶಿಷ್ಯರೊಡನೆ ಕಾಣಿಸಿಕೊಂಡರು ! ದೊರೆ ಪರಿವಾರದೊಡನೆ, ಮಂತ್ರಿ ಪುರೋಹಿತರೊಡನೆ ಎದ್ದು ಅವರಿಗೆ ಪಾದತೊಳೆದು ಸಭೆಗೆ ಬರಮಾಡಿ ಕೊಂಡ. "ಇವನೇಕೆ, ಇಲ್ಲಿಗೆ ಈಗ ಬಂದ ?" ಎಂದು ಶುಕ್ರಪುತ್ರರಿಗೆ ಕಸಿವಿಸಿಯಾಯಿತು. ಅವರೂ ಅಗಸ್ತ್ಯರಿಗೆ ವಂದಿಸಿ ಕುಳಿತರು. ಸಭೆ ದೊರೆಯ ಮುಖವನ್ನೇ ನೋಡುತ್ತಿತ್ತು. ದೊರೆ ಹೇಳಿದ;

ದೊರೆ : "ಇಲ್ವಲನ ಸಂಬಂಧ ಬೆಳೆಸಲು ನಮಗೆ ಸಮ್ಮತವುಂಟು" (ಶುಕ್ರಪುತ್ರರೂ ಹಿಗ್ಗಿದರು !) "ಆದರೆ ನಮ್ಮ ಪುತ್ರಿಯದೇ ಒಂದು ನಿಬಂಧನೆಯು ಉಂಟು ! ತಂದೆಯೂ, ದೊರೆಯೂ ಆದ ನಾವು ಅದನ್ನು ಗೌರವಿಸಬೇಕಾದುದು ನಮ್ಮ ಕರ್ತವ್ಯ. ಅದರ ವಿವರವನ್ನು ನಮ್ಮ ಅತಿಥಿಯೂ, ಋಷಿಮಂಡಲದ ವರಿಷ್ಠರೂ, ನಮಗೆ ಪರಮಪೂಜ್ಯರೂ, ಆದ ಅಗಸ್ತ್ಯರು ಬಲ್ಲವರಾಗಿ, ಅವರೇ ಸಭೆಗೆ ವಿವರಿಸುತ್ತಾರೆ. ಶುಕ್ರ ಪುತ್ರರು ಆಲಿಸಿ, ತಮ್ಮ ಪ್ರಭುಗಳಿಗೆ ನಿವೇದಿಸಬೇಕು ಸಮ್ಮತವಾದರೆ, ಮುಂದಿನ ಪ್ರಸ್ತಾಪ."

ಅಗಸ್ತ್ಯ : "ಶುಕ್ರಪುತ್ರರೇ ! ನಿಮ್ಮ ದೊರೆಯನ್ನು ನಾವು ಚೆನ್ನಾಗಿ ಬಲ್ಲೆವು. ಒಂದುಕಾಲದಲ್ಲಿ ಅವರೂ ಆರ್ಯಸಂಸ್ಕಾರ ಸಂಪನ್ನರೇ ! ಆದರೆ

ವಿದರ್ಭರಾಜಕುಮಾರಿ ಈ ವಿಷಯದಲ್ಲಿ ಸಂಶಯ ಪಡುತ್ತಾಳೆ. ಅವಳಿಗೆ ತೃಪ್ತಿಯೂ ನಿಶ್ಶಂಕೆಯೂ ಆಗುವಂತೆ ಇಲ್ವಲ ಮಹಾರಾಜರು, ವಾತಾಪಿಯೊಡಗೂಡಿ ವೈದಿಕ ವ್ರತಾನುಷ್ಠಾನಗಳನ್ನು 'ಚ, ಚು' ಬಿಡದೆ ಎರಡು ವರ್ಷ ಕಾಲ ನಡೆಸುವಂತಾಗುವುದು ಒಳ್ಳೆಯದು. ಬ್ರಾಹ್ಮಣ ಭೋಜನ, ಯಾಗಾಚರಣೆ, ದೇವತಾರ್ಚನೆ, ಹವ್ಯಕವ್ಯಗಳನ್ನು ಬಿಡದೇ ಆಚರಿಸುವುದು, ಋಷಿಗಳಿಗೆ ಸಹಾಯ ಮಾಡುವುದು, ಬಡಬ್ರಾಹ್ಮಣರಿಗೆ ದಾನ ಧರ್ಮ ನಡೆಸುವುದು ಇವು ತಪ್ಪದೇ ಈ ಮುಂದಿನ ಎರಡು ವರ್ಷಗಳಲ್ಲಿ ನಡೆಯಬೇಕು. ಎರಡನೆಯದಾಗಿ ಇಲ್ವಲ ದೊರೆಯ ರಾಜ್ಯದ, ಅವರ ಆಶ್ರಿತರ ರಾಜ್ಯಗಳ ಯಾವುದೇ ಭಾಗದಲ್ಲಿ ಋಷಿಪೀಡೆ, ಬ್ರಾಹ್ಮಣಪೀಡೆ, ದೇವತಾಪೀಡೆಗಳು ನಡೆಯತಕ್ಕದ್ದಲ್ಲ, ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಇದು ಚೆನ್ನಾಗಿ ನಿರೂಪಿತವಾಗಬೇಕು. ಸ್ವಯಂ ನಾವೇ ಯಾವಾಗ ಬೇಕಾದರೂ ಬಂದು ಪರೀಕ್ಷಿಸುತ್ತೇವೆಂದು ಮಹಾರಾಜರಿಗೆ ತಿಳಿಸಿ. ಇದು ಅವರ ಕ್ಷೇಮಾರ್ಥವಾಗಿಯೇ ಹೊರತು ಈ ಪರೀಕ್ಷೆಯಿಂದ, ಈ ದಕ್ಷಿಣ ಪ್ರಯಾಣದಿಂದ ನಮಗೆ ಬೇರೇನೂ ಲಾಭವಿಲ್ಲ: ಇದಕ್ಕೆ ಒಪ್ಪಿಗೆ ಪಡೆದು ವಿದರ್ಭರಾಜರಿಗೆ ಬೇಗ ಸಮಾಚಾರ ತಂದು ಮುಟ್ಟಿಸಿದರೆ ಮುಂದಿನ ನಿಶ್ಚಯಕ್ಕೆ ಅನುಕೂಲವಾಗುತ್ತದೆ."

ಶಂಡಾಮರ್ಕರು ಒಬ್ಬರೊಬ್ಬರು ಮುಖ ನೋಡಿಕೊಂಡರು! "ಈ ಋಷಿ ಇಲ್ಲಿ ಬಂದು ಕೆಲಸವನ್ನು ಕೆಡಿಸಿದ !" ಎಂಬುದು ಅವರ ಪರಸ್ಪರ ನೋಟಗಳ ಭಾವವಾಗಿತ್ತೆಂಬುದನ್ನು ಸಭೆ ಸುಲಭವಾಗಿಯೇ ಅರಿಯಿತು! ಇಲ್ವಲ ಇದನ್ನೊಪ್ಪುವುದು ಅಸಾಧ್ಯವೆಂದೂ, ಪರ್ಯಾಯದಿಂದ ಅಗಸ್ತ್ಯರು "ಲೋಪಾಮುದ್ರೆ ವಾತಾಪಿಗೆ ದೊರೆಯಲಾರಳೆಂ"ಬುನ್ನು ಹೇಳಿದ ಬಗೆ ಇದೆಂಬುದನ್ನೂ ಅವರು ಒಡನೆಯೇ ಅರಿತುಕೊಂಡರು. ನಿಸ್ಸಹಾಯಕರೂ, ಅಲ್ಲಿಂದಲೇ ಏನೊಂದು ಉಪಾಯವನ್ನು ನಿರ್ಧರಿಸಲು

ಅಸಮರ್ಥರೂ ಆದ ಅವರು: "ಹಾಗೇ ಆಗಲಿ! ನಮ್ಮ ಪ್ರಭುಗಳಿಗೆ ತಿಳಿಸುತ್ತೇವೆ" ಎಂದು ಆಸನಗಳಿಂದ ಮೇಲೆದ್ದರು.

ದೊರೆಯ ಸನ್ನೆಯಿಂದ ಅರಮನೆಯ ಭಟರು ಶಂಡಾಮರ್ಕರಿಗೆ ರಾಜೋಚಿತ ಬಹುಮಾನಗಳನ್ನು ತಂದರು. ಶಾಂಬಾಯನರು ಅವನ್ನು ಅವರಿಗೆ ಗೌರವದಿಂದ ಸಮರ್ಪಿಸಿ, ಬೀಳ್ಕೊಂಡರು. ಶುಕ್ರಪುತ್ರರು ದಕ್ಷಿಣಾಪಥದ ದಾರಿಯನ್ನು ಹಿಡಿದು ಹೊರಟರು. ಹೊರಡುವ ಮುಂಚೆ ರಹಸ್ಯದಲ್ಲಿ ನಾಲ್ವರು ಗೂಢಚಾರರನ್ನು ಅಲ್ಲಿ ಬಿಟ್ಟು, "ಇಲ್ಲೇ ಒಂದೆರಡು ವಾರ ಇದ್ದು ಇಲ್ಲಿ ನಡೆಯುವುದನ್ನು ನಮಗೆ ಬೇಗ ಗೂಢವಾಗಿ ತಿಳಿಸಿರಿ" ಎಂದು ಅಪ್ಪಣೆ ಮಾಡಿ ಹೊರಟರು.

* * *

ಅಗಸ್ತ್ಯರು ಇನ್ನೂ ಕೆಲಕಾಲ ಅಲ್ಲೇ ನಿಂತರು. ಶಂಡಾಮರ್ಕರು ಹೊರಟ ಎರಡನೇ ರಾತ್ರಿ ಅವರಿಗೊಂದು ಕನಸಾಯಿತು. ಅದರಲ್ಲಿ ಅಗಸ್ತ್ಯರು ಒಂದು ಅಡವಿಯಲ್ಲಿ ಸಂಚರಿಸುತ್ತಿದ್ದಾರೆ. ಅಡವಿಯ ಅಂಚಿಗೆ ಒಂದೂರು. ಊರ ಹೊರವಳಯದಲ್ಲಿ ಒಂದು ಪಾಳು ಭಾವಿ! ಆ ಭಾವಿಯ ಹೊರಗೋಡೆ ಅಲ್ಲಲ್ಲಿ ಚೆನ್ನಾಗಿ ಒಡೆದು ಶಿಥಿಲವಾಗಿದೆ. ಅಂಚಿನಲ್ಲಿ ಸುತ್ತ ಹಾಳುಮೂಳು ಕಸಕಡ್ಡಿ ಗಿಡಗಂಟೆಗಳು ಬೆಳೆದು ಒಳಗೇನಿದೆಯೆಂಬುದೇ ತಿಳಿಯದಂತೆ ಭಯಂಕರವಾಗಿ ಕಾಣುತ್ತಿದೆ. ಅಗಸ್ತ್ಯರು ಹತ್ತಿರ ಹೋಗುತ್ತಿದ್ದಾರೆ. "ವಿಷ್ಣು! ವಿಷ್ಣು! ನನ್ನನ್ನು ಮೇಲೆತ್ತು; ನನ್ನನ್ನು ಈ ಪಾಳು ಭಾವಿಯಲ್ಲಿ ಬೀಳಗೊಡಬೇಡ! ನನಗೆ ಈ ದುರ್ಗತಿ ತಪ್ಪಿಸು" ಎಂದು ಭಾವಿಯ ಒಳಗಿಂದ ಧ್ವನಿಯೊಂದು ಕೇಳುತ್ತದೆ. ಅದು ಅವರ ಹಿರಿಯರದೇ ಧ್ವನಿ. (ವಿಷ್ಣು ಎಂಬುದು

ಕಿರಿಯ ಅಗಸ್ತ್ಯರ ರೂಢನಾಮವೆಂದು ಹಿಂದೆ ಹೇಳಿದೆ.) ಚಕಿತರಾದ ಅಗಸ್ತ್ಯರು ಭಾವಿಯೊಳಗೆ ಬಗ್ಗಿ ನೋಡುತ್ತಾರೆ. ಗಡ ಗಡ ಪಾತಾಳದಲ್ಲಿ ಬರೀ ಸರೀಸೃಪಗಳು: ಎಷ್ಟೋ ನೀರಿಲ್ಲ. ಒಳಗೆಲ್ಲ ಅಲ್ಲಲ್ಲಿ ಕಾಡು ಕಸದ ಗಿಡಗಳು ಭಾವಿಯ ಒಳಗೋಡೆಯೊಳಗಿಂದ ಸುತ್ತ ಬೆಳೆದಿವೆ. ಹಿರಿಯ ಅಗಸ್ತ್ಯರು ಒಂದು ಗಿಡಗಂಟೆಯ ಬೇರನ್ನು ಹಿಡಿದು ಕೆಳಗೆ ಬೀಳುವುದನ್ನು ತಪ್ಪಿಸಲೆಂಬಂತೆ ನೇತಾಡುತ್ತಿದ್ದಾರೆ! ದುರ್ಗಂಧಮಯವಾದ ಒಂದು ವಿಷದ ಗಾಳಿ ಒಳಗಿಂದ ಎದ್ದು ಅದು ಅವರ ದುಃಸ್ಥಿತಿಯನ್ನು ಮತ್ತಷ್ಟು ಅಸಹ್ಯವನ್ನಾಗಿಸುತ್ತದೆ. ಮೇಲೆ ಇಣುಕಿ ನೋಡಿದ ಅಗಸ್ತ್ಯರಿಗೆ ಮೈ ಬೆವರುತ್ತ, "ಬ್ರಹ್ಮರ್ಷಿಯೊಬ್ಬರಿಗೆ ಈ ದುರ್ಗತಿಯೋ! ಸ್ವಯಂ ತನ್ನ ತಂದೆಗೆ ಈ ದುರ್ಗತಿಯೋ!!" ಎಂದು ಕಳವಳವೂ, ವ್ಯಥೆಯೂ ಆಗುತ್ತದೆ. "ಅಪ್ಪಾ! ಅಪ್ಪಾ! ಇದೋ ನಿಮ್ಮ ವಿಷ್ಣು ಇಲ್ಲಿ ಬಂದಿದ್ದಾನೆ. ನಿಮಗೇಕೆ ಈ ಸ್ಥಿತಿಯಾಗಿದೆ? ನಹುಷನಂಥ ರಾಜರ್ಷಿಯನ್ನು, ಇಂದ್ರನನ್ನು, ಶಪಿಸಿದವರಿಗೆ, ದೇವತೆಗಳನ್ನು ಆಜ್ಞಾಧಾರಕರನ್ನಾಗಿ ಪಡೆದವರಿಗೆ, ಈ ಸ್ಥಿತಿಯಿಂದ ಪಾರಾಗಲು ಆಗಲಿಲ್ಲವೇ?" ಎನ್ನುತ್ತಾರೆ. ಆಮೇಲೆ ಮನಸ್ಸು ಹೇಳುತ್ತದೆ. "ಛೀ! ಇವರೀಗ ಮರ್ತ್ಯಲೋಕದಲ್ಲಿಲ್ಲ!!" ಇಲ್ಲಿಗೆ ಮತ್ತೇಕೆ, ಹೇಗೆ ಬಂದರು? ನಾನೇ ಉತ್ತಮ ರೀತಿಯಿಂದ ಸಂಸ್ಕಾರ ಮಾಡಿದೆನಲ್ಲ!!" ಎಂದು, ತಾವು ಕಂಡುದನ್ನು ತಾವೇ ಶಂಕಿಸುತ್ತಾರೆ. ಈ ಬಗ್ಗೆ ಹಿರಿಯರನ್ನೇ ಕೇಳಿಯೂ ಬಿಡುತ್ತಾರೆ. ಹಿರಿಯರು ಉತ್ತರಿಸುತ್ತಾರೆ. "ಹೌದು! ನೀನೇನೋ ಸಂಸ್ಕರಿಸಿದೆ! ಅಂದು ಸಪಿಂಡೀಕರಣದ ಪ್ರಸಂಗದಲ್ಲಿ ಪಿಂಡಗಳು ಒಂದುಗೂಡದೇ ಬಹುಕಾಲ ಹಾಗೇ ಉಳಿದ ಸಂನ್ನಿವೇಶವನ್ನು ನೆನಪಿಸಿಕೋ! ನೀನು ಮಾತುಕೊಟ್ಟಮೇಲೆಯೇ ನಾನು ಕೊಂಚ ಮೆಲೇರಿದೆ. ಈಗ ವರ್ಷವಾಗಿದೆ. ನೀನಿನ್ನೂ ಬ್ರಹ್ಮಚಾರಿಯಾಗಿಯೇ ಉಳಿದಿರುವೆ. ಅಗಸ್ತ್ಯಸಂತಾನ ಮುಂದುವರಿದ ಹೊರತು ನನಗೀ ದುರ್ಗತಿ ತಪ್ಪದು! ತಪ್ಪದು! ತಪ್ಪದು!" ಎನ್ನುತ್ತಾರೆ

ಅಗಸ್ತ್ಯರು ಬಗ್ಗಿ ನೋಡಿ ಸ್ತಂಭೀಭೂತರಾಗುತ್ತಾರೆ !! ಹಿರಿಯರ ಹಿರಿಯರು, ಅವರಿಗೂ ಹಿರಿಯರು, ಹೀಗೆ ಏಳು ತಲೆಮಾರಿನ ಹಿಂದಿನ ಪಿತೃಗಳೆಲ್ಲ ಅದೇ ಪಾಳುಭಾವಿಯಲ್ಲಿ ಒಬ್ಬರ ಕೆಳಗೆ ಒಬ್ಬರಂತೆ ಹಾಗೆಯೇ ಗಿಡಗಂಟೆ ಹಿಡಿದು ನೇತಾಡುತ್ತಲೇ ಮೇಲೆ ನೋಡಲು ಯತ್ನಿಸುವ ದೀನ ದೃಶ್ಯ ಅಗಸ್ತ್ಯರ ಎದೆಯನ್ನೇ ಒಡೆಸುತ್ತದೆ. "ಅಪ್ಪಾ ! ನಾನು ಗೃಹಸ್ಥಾಶ್ರಮವನ್ನು ಸ್ವೀಕರಿಸುತ್ತೇನೆ ! ನಾನು ಹಿಡಿದ ಮಹಾಕಾರ್ಯ ಮಾತ್ರ ಅದರಿಂದ ಕೆಡದಂತೆ ಹಿರಿಯರೆಲ್ಲ ನೀವು ಅನುಗ್ರಹಿಸಿ" ಎಂದು ಬೇಡುತ್ತಾರೆ. "ತಥಾಸ್ತು" ಎಂದು ಪಿತೃಗಳೆಲ್ಲ ಒಗ್ಗೂಡಿ ಹರಸಿದ್ದು ಕಾಡಿನಲ್ಲಿ ಭಾವಿಯ ಆಳದಿಂದ ರಣರಣಿಸುತ್ತದೆ. ಕನಸು ಮುಗಿದು ದಿಗ್ಭ್ರಾಂತರಾದ ಮಹರ್ಷಿ ಎದ್ದು ಕುಳಿತು, ಮೈ ಬೆವರಿ ಚಿಂತಾಮಗ್ನ ರಾಗುತ್ತಾರೆ.

* * *

ಇನ್ನೊಂದತ್ತ ವೈದರ್ಭ ದೊರೆಗೆ ಇನ್ನೊಂದು ಇಂಥದೇ ರೀತಿಯ ಕನಸು ಆಗುತ್ತದೆ. ರಾಜನ ಶಯ್ಯೆಯ ಬಳಿಯೇ ಬಂದು ನಿಂತ ಹಿರಿಯ ಅಗಸ್ತ್ಯರ ಕ್ರುದ್ಧಮುಖವನ್ನು ಕಂಡ ದೊರೆ ಬೆದರುತ್ತಾನೆ; "ಪ್ರಭೂ, ಅರ್ಧರಾತ್ರಿಯಲ್ಲಿ ಹೀಗೆ ಇಲ್ಲಿ ತಾವು ಬರಬಹುದೇ ? ಸ್ವಾಗತಕ್ಕೆ ನನಗೆ ಸರಿಯಾದ ಅವಕಾಶ ಕೊಡಬಾರದೇ ?" ಎನ್ನುತ್ತಾನೆ. ಹಿರಿಯರು : "ಮೂಢ ದೊರೆ ! ಬೆಳೆದ ಕನ್ಯೆ ಮನೆಯಲ್ಲಿರುವುದು ನಿನಗೆ ಚಿಂತೆಯಾಗದೆ ? ನಿನ್ನ ಮಗಳಿಗೊಂದು ದೇವ ರಹಸ್ಯ ಗೊತ್ತಿದೆ. ನಿನಗೂ ಈ ವೇಳೆಗೆ ಗೊತ್ತಿರಬಹುದು. ಅವಳು ಯಾರಿಗೆ ಸೇರಿದವಳೋ ಅಲ್ಲಿಗೆ ಅವಳನ್ನು ಒಪ್ಪಿಸು !"

ದೊರೆ : "ಪ್ರಭು ! ನಾನೂ ಬಲ್ಲೆ ! ಇವಳಿಗೆ ಸರಿಯಾದ ರಾಜಕುಮಾರ ಯಾರೂ ಈವರೆಗೆ ಮುಂದೆ ಬಂದಿಲ್ಲವೆಂದು ತಾವೂ ಬಲ್ಲಿರಿ. ನನ್ನ ತಪ್ಪೇನಿದೆ ?"

ಹಿರಿಯರು : "ಹಾಗಾದರೆ ನಿನಗಿನ್ನೂ ಆ ದೇವರಹಸ್ಯ ತಿಳಿದಿಲ್ಲವೇ? ಮೂಢ ! ಲೋಪಾಮುದ್ರೆಯನ್ನು ಕೈಹಿಡಿಯಬಲ್ಲ ಕ್ಷತ್ರಿಯ ಕುಮಾರ ಈ ವರೆಗೆ ಹುಟ್ಟಿಲ್ಲ ! ಅವಳೇನಿದ್ದರೂ ಬ್ರಾಹ್ಮಣನ ಸ್ವತ್ತಾಗುವ ವಳು."

ದೊರೆ ; "ಹಿರಿಯರು ಸೂಚಿಸಬೇಕು !"

ಹಿರಿಯರು : "ನಿನ್ನ ಮಗಳನ್ನೇ ಕೇಳು. ಅವಳಿಗೆ ಗೊತ್ತಿದೆ ! ನಾನು ದೈವಾಧೀನನಾದ ಹನ್ನೆರಡನೆಯ ದಿನ ಪಿಂಡ ಸಂಯೋಜನೆಯ ಕಾಲದಲ್ಲಿ ನಿನ್ನ ಪುತ್ರಿ ನನಗೆ ಉಪಕರಿಸಿದಳು. ಇನ್ನು ಅವಳೇ ನಿನ್ನೆಲ್ಲ ಸಂಶಯವನ್ನು ಪರಿಹರಿಸುತ್ತಾಳೆ. ಅವಳನ್ನೇ ಕೇಳಿ ಅರಿ ; ಕೇಳಿ ಅರಿ : ಕೇಳಿ, ಅರಿ. "

ಕನಸು ಮುಗಿಯಿತು ! ದೊರೆ ಎಚ್ಚತ್ತು ಕುತೂಹಲ ತಡೆಯದೆ ಕೂಡಲೇ ಪುತ್ರಿಯ ಅಂತಃಪುರಕ್ಕೆ ನಡೆದು ಬಾಗಿಲು ತಟ್ಟುತ್ತಾನೆ. ಲೋಪಾಮುದ್ರೆ ಇನ್ನೂ ನಿದ್ರಿಸದಿರುವುದು ಅವನಿಗೆ ಅಚ್ಚರಿತರುತ್ತದೆ.

ದೊರೆ : "ಮಗಳೇ ! ಅರ್ಧರಾತ್ರಿ ಮುಗಿಯುತ್ತಾ ಬಂದರೂ ಏಕಿನ್ನೂ ಎಚ್ಚರವಾಗಿರುವೆ ? ಏನಾದರೂ ಕೆಟ್ಟ ಕನಸಾಯಿತೆ ?"

ಲೋಪಾ : "ಅಪ್ಪಾಜಿ ! ನನ್ನ ಕನಸಿನಲ್ಲಿ ಹಿರಿಯ ಅಗಸ್ತ್ಯರು ಕಾಣಿಸಿಕೊಂಡು, ನನ್ನನ್ನು ಪ್ರೀತಿಯಿಂದ ಮೂರು ಸಲ, "ನನ್ನ ಮುದ್ದಿನ ಸೊಸೆಯೇ" ! ಎಂದು ಸಂಬೋಧಿಸಿ ಅದೃಶ್ಯರಾದರು"

ಎಂದವಳೇ ನಸುನಕ್ಕು ನಾಚಿ ನಿಲ್ಲುತ್ತಾಳೆ ! ದೊರೆ ಭ್ರಾಂತನಾಗಿ ಗೊಂಬೆಯಂತೆ ನಿಲ್ಲುತ್ತಾನೆ ; ದೊರೆ ಅಷು "ಹೇಗೆ ಸಾಧ್ಯ ಮಗಳೇ ! ನೀನು ಅವರ ಆಶೀರ್ವಾದದಿಂದ ಹುಟ್ಟಿದವಳು. ಒಂದು ರೀತಿಯಲ್ಲಿ ಅವರ ಮಗಳು ! ಮಗಳು, ಮಗನನ್ನೇ ಮದುವೆ ಯಾಗುವುದೇ?"

ಲೋಪಾ : "ಅಪ್ಪಾ ! ಲೋಕದ ಪ್ರಜೆಗಳೆಲ್ಲ ಮಹರ್ಷಿಗೆ ಮಕ್ಕಳ ಸ್ಥಾನದಲ್ಲಿರುವವರೇ ! ನೀನೂ ಸಹ ! ರಕ್ತಸಂಬಂಧಕ್ಕೆ ಕರ್ಮಧರ್ಮಸಂಯೋಗವುಂಟೆಂಬುದು ಶಾಸ್ತ್ರದೃಷ್ಟಿ. ಆತ್ಮವೆಂಬುದು ಕರ್ಮಬಂಧರಹಿತವಾದ ಅಪ್ರಾಕೃತತತ್ತ್ವ, ನೀವು ಇದನ್ನರಿಯದವರಲ್ಲ. ಪತ್ನಿ ಎಂಬುವಳು ಪತಿಯ ಅರ್ಧ ಆತ್ಮಾ ಎಂದು ವೇದ ಹೇಳುತ್ತದೆ. ಯಾರು ಯಾರಿಗೆ ಪತಿ, ಪತ್ನೀ ಎಂಬುದನ್ನು ಬ್ರಹ್ಮದೇವ ಪೂರ್ವದಲ್ಲೇ ನಿಶ್ಚಯಿಸಿಯೇ ಸೃಷ್ಟಿಮಾಡಿರುತ್ತಾನೆ. ನಾನು ಇನ್ನು ಹಿರಿಯ ಅಗಸ್ತ್ಯರ ಸೊಸೆಯಾಗುವ ದಿನ ಸಮೀಪಿಸಿತು" ಎಂದು ಲಜ್ಜೆಯಿಂದ ತಲೆಬಾಗಿ, ಸೂಚಿಸಿ, ಮುಗುಳ್ನಗುತ್ತಾಳೆ.

ದೊರೆ : "ಏನು ! ರಾಜಭೋಗದಲ್ಲಿ ಬೆಳೆದ ನಿನ್ನನ್ನು ಕಠಿಣವ್ರತಿಯಾದ ಒಬ್ಬ ಬ್ರಾಹ್ಮಣ-ತಾಪಸನಿಗೆ ಕನ್ಯಾದಾನ ಮಾಡುವುದೇ ? ನೀನು ತಪೋ ಭೂಮಿಯಲ್ಲಿ ಸುಖವಾಗಿರಬಲ್ಲೆಯಾ ?"

ಲೋಪಾ : "ಪ್ರಭು ! ಇದು ಬ್ರಾಹ್ಮಣನಿಂದೆಯಾದೀತು ! ಬ್ರಹ್ಮವಿತ್ತಾದ, ಬ್ರಹ್ಮನಿಷ್ಠನಾದ, ತಪಸ್ವಿಯನ್ನು ದಿನವೂ ಪೂಜಿಸಿ ಗೌರವಿಸಬೇಕೆಂದು ಶಾಸ್ತ್ರ ಹೇಳುತ್ತದೆಯಷ್ಟೆ ! ಕ್ಷತ್ರಿಯಾದಿಗಳೆಲ್ಲರೂ ಆ ಬ್ರಹ್ಮತತ್ತ್ವದೊಳಗಿಂದಲೇ ಉದಿಸಿ ಬಂದವರಲ್ಲವೆ ? ನನಗೆ ತಾಪಸ ಜೀವನವೇ ಇಷ್ಟವೆಂಬುದನ್ನು ತಾವು ಬಲ್ಲಿರಿ. ಹಿರಿಯರ ಆಶ್ರಮದಲ್ಲೇ ಬಹುದಿನ ಗುರುಕುಲವಾಸ ಮಾಡಿ ವೇದ ಶಾಸ್ತ್ರಗಳನ್ನು ಅಭ್ಯಸಿಸಿ ನನಗೆ

ಅದು ಕಠಿಣವೆಂದು ತೋರುವುದೂ ಇಲ್ಲ, ಅದು ಕೇವಲ ಶಿಷ್ಟನ ಜೀವನ ಮಾತ್ರ, ಅದರಲ್ಲೂ ಒಂದು ಸೊಗಸುಂಟು, ಮೇಲಾಗಿ ನಾನು ಯಾರಿಗೆ ಸೇರಿ ಎಲ್ಲಿ ಹೇಗೆ ಬಾಳಬೇಕೆಂಬುದರಲ್ಲಿ ದೇವರಹಸ್ಯವಿರುವುದರಿಂದ ಈ ಪರಾಮರ್ಶೆಯೂ ಇನ್ನು ಬೇಕಾಗಿರುವುದಿಲ್ಲ. ಮಾಡಿದಷ್ಟೂ ಅದೂ ದೇವಹೇಳನ (ನಿಂದೆ) ಆಗುತ್ತದೆ. ನಿಶ್ಚಿಂತರಾಗಿ ತಾವು ತಮ್ಮ ಕರ್ತವ್ಯವನ್ನು ಮುಗಿಸಿ ಕೃತಾರ್ಥರಾಗಿ."

*　　　*　　　*

ದೇವಗುರು ಬೃಹಸ್ಪತಿ ನೀಡಿದ್ದ ಸೂಚನೆಯನ್ನು ಅಗಸ್ತ್ಯರು ಕಾರ್ಯ ರೂಪಕ್ಕಿಳಿಸಲು ಉದ್ಯುಕ್ತರಾಗಿ, ಮರುದಿನ ಬೆಳಿಗ್ಗೆ ದೊರೆಯನ್ನು ಏಕಾಂತ ಗೃಹದಲ್ಲಿ ಸಂಧಿಸಿದರು. ಮುಂಚೆಯೇ ಅಲ್ಲಿಗೆ ಲೋಪಾಮುದ್ರೆ ಬಂದಿದ್ದುದನ್ನು ನೋಡಿ, ಅಗಸ್ತ್ಯರು "ದೇವತೆಗಳೂ ಪಿತೃಗಳೂ ತಮ್ಮ ಕೆಲಸವನ್ನು ಚೆನ್ನಾಗಿಯೇ ಮಾಡಿದ್ದಾರೆ!" ಎಂದು ತೃಪ್ತಭಾವದಿಂದ ತಮ್ಮೊಳಗೆ ಎಂದುಕೊಂಡರು. ದೊರೆ ಏನನ್ನೋ ಹೇಳಲು ಬಾಯೆತ್ತಿದ! ಮಾತು ಹೊರಬರಲಿಲ್ಲ! ಅಗಸ್ತ್ಯರು ಕೈಮೇಲೆತ್ತಿ ರಾಜನನ್ನು ಹರಸುವ ಭಾವದಲ್ಲಿ ತಮ್ಮ ಮನೋಗತವನ್ನು ಕಂಗಳಿಂದಲೇ ಸೂಚಿಸಿದರು!! ಲೋಪಾಮುದ್ರೆ ದೊರೆಗೆ ನಮಸ್ಕರಿಸಿ, ಅಗಸ್ತ್ಯರ ಬಳಿ ಬಂದು, ಒಮ್ಮೆ ಅವರನ್ನು ದಿಟ್ಟಿಸಿ ನೋಡಿದಳು; ಕೂಡಲೇ ತಲೆ ತಗ್ಗಿಸಿ ನಿಂತಳು; ಅಗಸ್ತ್ಯರು ಇದನ್ನೆಲ್ಲ ಅರ್ಥ ಮಾಡಿಕೊಂಡರು. ರಾಜಪುತ್ರಿ ತಾನು ಧನ್ಯಳಾದ ಮನೋಭಾವವನ್ನು ಆ ದೃಷ್ಟಿಯಲ್ಲಿ ಸೂಚಿಸಿದ್ದು, ನಿರ್ಮಲ ಆಕಾಶವನ್ನು ಕಂಡಂತೆ ಅಗಸ್ತ್ಯರಿಗೆ ಭಾಸವಾಗಿ, ಮನದ ದುಗುಡ ಕಳೆಯಿತು. ಮಾತನಾಡಿದರು.

ಅಗಸ್ತ್ಯ ; "ದೊರೆಯೇ ! ನಿನ್ನ ಪುತ್ರಿಯನ್ನು ನಾನು ವಿವಾಹ ವಾಗುತ್ತೇನೆ. ಇಲ್ಲೇ, ಈಗಲೇ ! ಏಕೆ, ಹೇಗೆ ಎಂದು ಚಿಂತಿಸಬೇಡ. ಇದರಲ್ಲೂ ದೇವರಹಸ್ಯವಿದೆ. ಈ ವಿವಾಹ ಈಗ ಗೌಪ್ಯವಾಗಿರ ಬೇಕಾದುದು ಅಗತ್ಯ. ವೈಭವ, ದಿಬ್ಬಣ, ಸಡಗರ, ಅಟ್ಟಹಾಸ ಒಂದೂ ಇಲ್ಲದೆ ಕೇವಲ ಎರಡು ವೈದಿಕ ಕ್ರಿಯೆಗಳಲ್ಲಿ ಇದು ಈಗ ಮುಗಿದು ಹೋಗುತ್ತದೆ !! ಮತ್ತೆ ಪ್ರಶ್ನೆ ಎತ್ತಬೇಡ. ಮುಂದೆ ಇನ್ನೊಂದು ಕಾಲದಲ್ಲಿ ಆ ವೈಭವದ ಉಳಿದ ಆಚರಣೆಗಳನ್ನೆಲ್ಲ ಆಚರಿಸೋಣ. ಇದು ದೇವಾಸುರ ಸಂಗ್ರಾಮ ಕಾಲ. ಈಗ ಹೋಮಾದಿಗಳೂ ಬೇಡ. ಬ್ರಾಹ್ಮಣನಿಗೆ ಬಲಗೈಯಲ್ಲೇ ಅಗ್ನಿಯುಂಟು. ಆ ಕೈಯಿಂದಲೇ ಇಕೋ ನಿನ್ನ ಪುತ್ರಿಯ ಕೈ ಹಿಡಿಯುತ್ತೇನೆ'' ಎಂದವರೇ ಲೋಪಾಮುದ್ರೆಯ ಬಲಗೈಯನ್ನು ತಮ್ಮ ಬಲಗೈಯಿಂದ ಹಿಡಿದರು. ಪಾಣಿಗ್ರಹಣವೈಭವ ಅಷ್ಟಕ್ಕೆ ಮುಗಿಯಿತು ! ಲೋಪಾಮುದ್ರೆಗೆ ಆಗ ಒಂದು ವಿದ್ಯುತ್ ಸ್ಪರ್ಶವಾದ ಅನುಭವವಾಗಿ, ಆಕೆಯ ಮುಖದಲ್ಲಿ ಹೊಸದಾದ ವರ್ಚಸ್ಸೊಂದು ಸೇರಿಕೊಂಡಿತು. ಪತಿಯ ಕರಸ್ಪರ್ಶ ಸುಖದ ಪ್ರಥಮಾನುಭೂತಿಯಿಂದ ಅವಳ ಮೈ ಪುಲಕಿತವಾಯಿತು. ಅಷ್ಟರಲ್ಲಿ ಮಹರ್ಷಿ ಎರಡನೆಯ ವೈದಿಕ ಕ್ರಿಯೆಯನ್ನಾರಂಭಿಸಿ, ಆಕೆ ಯನ್ನು ಕೈ ಹಿಡಿದು ಒಂದೊಂದೇ ಹೆಜ್ಜೆಯಂತೆ ಏಳು ಹೆಜ್ಜೆ ಕೂಡ ನಡೆಸುತ್ತಾ ಈ ಮಂತ್ರೋಚ್ಚಾರಣೆ ಮಾಡುತ್ತಾನೆ ;

೧) **ಏಕಮಿಷೇ ವಿಷ್ಣುಸ್ತ್ವಾನ್ವೇತು**

೨) **ದ್ವೇ ಊರ್ಜೇ** (ವಿಷ್ಣುಸ್ತ್ವಾನ್ವೇತು)

೩) **ತ್ರೀಣಿ ವ್ರತಾಯ** (ವಿಷ್ಣುಸ್ತ್ವಾನ್ವೇತು)

೪) **ಚತ್ವಾರಿ ಮಾಯೋ ಭವಾಯ** (ವಿಷ್ಣುಸ್ತ್ವಾನ್ವೇತು)

೫) **ಪಂಚ ಪಶುಭ್ಯಃ** (ವಿಷ್ಣುಸ್ತ್ವಾನ್ವೇತು)

೬) **ಷಡೃತುಭ್ಯಃ** (ವಿಷ್ಣುಸ್ತ್ವಾನ್ವೇತು)

೭) **ಸಪ್ತ ಸಪ್ತಭ್ಯೋ ಹೋತ್ರಾಭ್ಯೋ ವಿಷ್ಣುಸ್ತ್ವಾನ್ವೇತು।**

"ಸಖಾ ಸಪ್ತಪದಾ ಭವ" ಎಂಬ ಇನ್ನೂ ಏನೇನು ಮಂತ್ರಗಳನ್ನೂ ಮಹರ್ಷಿ ಉಚ್ಚರಿಸುತ್ತಾ ಪತ್ನಿಯ ಮುಖ ನೋಡುತ್ತಾನೆ ! ಅವಳಿಗೆ ಅದೆಲ್ಲ ಅರ್ಥವಾಯಿತು ಎಂಬ ಭಾವನೆ ಅವನಲ್ಲಿ ಮೂಡಿ. ತನ್ನ ಮುಂದಿನ ಮಹಾಕಾರ್ಯದಲ್ಲಿ ಅವಳು ಸಹಭಾಗಿಯಾದಾಳೆಂಬ ವಿಶ್ವಾಸ ಉದಿಸುತ್ತದೆ.

ಮೊದಲ ಹೆಜ್ಜೆಯಲ್ಲಿ."ಭಗವಂತನಾದ ವಿಷ್ಣುವು ನಿನ್ನನ್ನು ಅನುಸರಿಸಿ ಬರುತ್ತಾ ನಿನಗೂ (ನನಗೂ) ಅನ್ನಸಮೃದ್ಧಿಯನ್ನು ಕರುಣಿಸಲಿ'' "ಈ ಎರಡನೇ ಹೆಜ್ಜೆಯಲ್ಲಿ ಆ ವಿಷ್ಣುವು ಬಲವನ್ನು ವ್ರತ ಕರ್ಮಾನುಷ್ಠಾನ ಫಲವನ್ನಾಗಿ ಅನುಗ್ರಹಿಸಲಿ" "ಇಗೋ ಈ ಮೂರನೆಯ ಹೆಜ್ಜೆಯಲ್ಲಿ ಧರ್ಮ ಬುದ್ಧಿಯನ್ನೂ, ಈ ನಾಲ್ಕನೆಯದರಲ್ಲಿ ಸುಖವನ್ನೂ (ದಾಂಪತ್ಯಸುಖವನ್ನೂ. ಸಂತಾನ ಸುಖವನ್ನೂ) ಕರುಣಿಸಲಿ. ಈ ಐದನೆಯದರಲ್ಲಿ ಪಶುಸಮೃದ್ಧಿಯನ್ನೂ, ಆರನೆಯದರಲ್ಲಿ ಋತುಗಳೆಲ್ಲ ನಮಗೆ ಸುಖಕರವಾಗಿರುವಂತೆ,ಅವು ಅಡಚಣೆಯಿಲ್ಲದೆ ಮುಂದೆ ಸಾಗಿ ನಮ್ಮ ಆಯುಸ್ಸನ್ನು ಸಾರ್ಥಕಪಡಿಸುವಂತೆಯೂ.ಈ ಕೊನೆಯ ಏಳನೆಯ ಹೆಜ್ಜೆಯಲ್ಲಿ (ಹೋತಾ. ಪ್ರಶಾಸ್ತಾ. ಬ್ರಾಹ್ಮಣಾಚ್ಛಂಸೀ, ಪೋತಾ ನೇಷ್ಟಾ, ಅಚ್ಛಾವಾಕ, ಆಗ್ನೀಧ್ರರೆಂಬ) ಏಳುವಿಧ ಹೋತೃಗಳನ್ನು ಸೋಮಯಾಗಕ್ಕೆಂದು ನಮಗೆ ಅದೇ ಭಗವಾನ್ ವಿಷ್ಣುವು ಅನುಗ್ರಹಿಸಲಿ" ಎಂಬುದು ಈ ಮಂತ್ರಾರ್ಥ. ಇಷ್ಟಕ್ಕೆ ಸಪ್ತಪದೀ ವೈಭವ ಮುಗಿಯಿತು !

ಆಕಾಶದಲ್ಲಿ ಅತ್ರಿ, ಜಮದಗ್ನಿ, ಅಂಗೀರಸ, ಭಾರದ್ವಾಜ, ವಸಿಷ್ಠ, ಭೃಗುಗಳೆಂಬ ಉಳಿದ ಇನ್ನಾರು ಮಹರ್ಷಿಗಳು ದೊರೆಯ ಕಣ್ಣಿಗೂ,ನವ

ವಧೂವರರ ಕಂಗಳಿಗೂ ಕಾಣಿಸಿಕೊಂಡು ಹರಸುತ್ತಾರೆ ! ಪುಷ್ಪವೃಷ್ಟಿಯಾಗುತ್ತದೆ. ಈ ವಿಚಿತ್ರ ವಿವಾಹಕ್ಕೆ ದೇವತೆಗಳ ಮತ್ತು ಸಪ್ತರ್ಷಿಗಳ ಬೆಂಬಲ, ಆಶೀರ್ವಾದವುಂಟೆಂಬುದು ರಾಜನಿಗೆ ದೃಢವಾಗಿ, ಮಹರ್ಷಿಗೆ ನಮಸ್ಕರಿಸಲು ಬರುತ್ತಾನೆ. ಅಗಸ್ತ್ಯರು ಅವನನ್ನು ತಡೆದು. "ದೊರೆಯೇ, ನೀನೀಗ ನನಗೆ ವಂದ್ಯನಾದೆ" ಎನ್ನುತ್ತಾ, ನಮಿಸಿ, "ಇನ್ನು ನೀನು ನನಗೆ ಪಿತೃಸಮನಾದೆ. ನಿನ್ನ ಮಗಳು ನನ್ನ ಕೈ ಹಿಡಿದು ಸುಖವಾಗಿರುತ್ತಾಳೆ. ಸಂದೇಹ ಬೇಡ. ಇದರಲ್ಲಿ ಲೊಕಕಲ್ಯಾಣವೂ ಇದೆ... ಆದರೆ...." ಎನ್ನುತ್ತಾ, ನಿಟ್ಟಿಸಿ, ದೊರೆಯ ಮುಖವನ್ನು ನೋಡುತ್ತಾರೆ.

ದೊರೆಗೆ ಕೊಂಚ ಚಿಂತೆ ಉಂಟಾಯಿತು ! ಲೋಪಾಮುದ್ರೆಯೂ ಕೊಂಚ ಭೀತಳಾಗಿ ಪತಿಯ ಮುಖವನ್ನು ನೊಡುತ್ತಾಳೆ !

ಅಗಸ್ತ್ಯರು ; "ರಾಜ ! ನನ್ನ ಪಿತೃಗಳಿಗೆ ಮಾಡಿದ ವಾಗ್ದಾನದ ಒಂದುಭಾಗ ಈಗ ಪೂರ್ತಿ ಆಯಿತು. ಆದರೆ ರಾಜಕಾರ್ಯನಿಮಿತ್ತ ಈ ವಿವಾಹ, ರಹಸ್ಯವಾಗಿ, ಇನ್ನು ಮತ್ತೆ ನಾನು ಸೂಚಿಸುವ ತನಕ ಹಾಗೇ ಉಳಿಯಬೇಕು. ಇಲ್ವಲನಿಗೆ ತಿಳಿಯಬಾರದು !! ಎರಡನೆಯದಾಗಿ ನಾನು ಇಂದೇ ಈಗಲೇ ಆರ್ಯಾವರ್ತದ ಪ್ರದಕ್ಷಿಣೆಗಾಗಿ ಹೊರಡಲಿದ್ದೇನೆ. ನನ್ನ ಪತ್ನಿ ನಾನು ಹಿಂದಿರುಗುವ ತನಕ ನಿನ್ನಲ್ಲಿ ನಿಕ್ಷೇಪವಾಗಿರುತ್ತಾಳೆ ! "

ಲೋಪಾಮುದ್ರೆಯ ಕಂಗಳಲ್ಲಿ ನೀರ ಹನಿಗಳು ಪಟಪಟನೆ ಉದುರುತ್ತವೆ. ತಾವರೆಯೊಂದು ನಸುಬಾಗಿ ಕೊಳದ ನೀರಿನಲ್ಲಿ ಮಿಂದು, ತನ್ನ ಎಸಳುಗಳಿಂದ ಆ ನೀರಹನಿಗಳನ್ನು ಉದುರಿಸುತ್ತಾ ಬಾಗುವಂತೆ, ಆ ನೀಳ ಕಂಗಳಲ್ಲಿ ಕಣ್ಣೀರು ಉದುರಿ, ದೊರೆಯ ಕಂಗಳೂ ನೀರುಗೂಡುತ್ತವೆ ! ಅಗಸ್ತ್ಯರು ; " ಅಳುವುದಕ್ಕೆ ಇದು ಕಾಲವಲ್ಲ, ರಾಜ ! ಆರ್ಯಾವರ್ತಕ್ಕೆ ಈಗ ಆಪತ್ಕಾಲ ! ಮಾಹಿಷ್ಮತಿಯ ಅರಸ–ಸಹಸ್ರಾರ್ಜುನನಿಗೂ,

ಭೃಗುಕಚ್ಛದ ಜಮದಗ್ನಿಗಳಿಗೂ ವೈಮನಸ್ಯ ಏರ್ಪಟ್ಟಿದೆಯೆಂದು ವಾರ್ತೆ ಯನ್ನು ನನ್ನ ಗೂಢಚಾರರು ತಂದಿದ್ದಾರೆ. ದಕ್ಷಿಣದಲ್ಲಿ ಇಲ್ವಲ ಮತ್ತೇನು ಸಂಚು ನಡೆಸಿದ್ದಾನೋ ಕಾಣೆ. ಭಾರತವರ್ಷದಲ್ಲಿ ಎಲ್ಲೂ ಬ್ರಾಹ್ಮಣಪೀಡೆ, ಉತ್ಪಾಟನ (ನಿರ್ಮೂಲನ) ಅವ್ಯಾಹತವಾಗಿ ನಡೆಯುವುದು ಸಂಭವ. ಅಗಸ್ತ್ಯ ಸುಮ್ಮನೆ ಕೂಡುವಂತಿಲ್ಲ ! ಪತ್ನಿಯನ್ನು ಆಪತ್ತಿನ ಸ್ಥಳಗಳಿಗೆ ಕೊಂಡೊಯ್ಯುವುದೂ ಸಾಧ್ಯವಿಲ್ಲ. ”

ಲೋಪಾ ; “ಪ್ರಭು, ನೀವಿರುವಲ್ಲಿ ಆಪತ್ತೆಂಥದು ? ಈಗ ತಾನೆ ಏಳುಹೆಜ್ಜೆ ನಡೆಸಿ ಹರಸಿದವರಿಗೆ ಎಂಟನೆಯ, ಒಂಭತ್ತನೆಯ... ನೂರ ನೇಯ, ಸಾವಿರದ, ಹೆಜ್ಜೆಯ ನಡಗೆಯ ಭಾರವುಂಟೆ ? ನಿಮ್ಮ ಧರ್ಮ ಆಚರಣೆ, ಶ್ರದ್ಧೆಗಳಲ್ಲಿ ಭಾಗ ನನಗಿಲ್ಲವೇ ? ”

ಅಗಸ್ತ್ಯ : “ದೇವಿ ! ಖಂಡಿತ ಉಂಟು. ಒಂದೇ ನಿರ್ಬಂಧಕ್ಕಾಗಿ ಈಗ ಬೇಡ. ಇಲ್ವಲನಿಗೆ ನಾವು ಹೇಳಿಕಳುಹಿದ ಮಾತು – ನಿನ್ನ ಮತ್ತು ವಾತಾಪಿಯ ಪ್ರಸ್ತಾಪಕ್ಕೆ ಸಂಬಂದ ಪಟ್ಟದ್ದು – ಇನ್ನೂ ಜೀವಂತ ವಿದೆಯೆಂದು ಆ ಮಾಯಾವಿಗೆ ಖಾತ್ರಿಯಾಗಬೇಕು ! ಆ ನೆಪದಲ್ಲಾದರೂ ಅವನು ಆರ್ಯ ಮಾರ್ಗಕ್ಕೆ ಬರಲಿ ! ಅದಕ್ಕೆ ನಾವು ಲೋಕಾರೀತಿಯಾಗಿ ಅವಕಾಶವಿಟ್ಟಂತೆ ನಟಿಸಬೇಕು. ಇದು ಬೃಹಸ್ಪತಿ ನೀತಿ. ಈ ವೇಳೆ ನಮಗೂ ಉಪಯುಕ್ತವೇ. ಅವನು ಅದನ್ನು ದುರುಪಯೋಗ ಮಾಡಿ ಯಾನು ! ಅದು ಬೇರೆ ಮಾತು ! ಅದಕ್ಕೆ ಅಗಸ್ತ್ಯ ಬೇರೆ ಉಪಾಯ ಹುಡುಕಿ ಆಗಿದೆ. ಈ ವಿವಾಹ ಈ ಅರಮನೆಯಲ್ಲೂ ಗುಟ್ಟಾಗಿಯೇ ಇರಲಿ. ನಮ್ಮ ಮೂವರ ಹೊರತು ಬೇರಾರಿಗೂ ಇದು ತಿಳಿಯ ಬಾರದು. ನನ್ನ ಅನುಯಾಯಿಗಳಿಗೂ ನಹ ! ಇನ್ನೊಂದು ಮಾತು... ನಾನು ಹಿಂದಿರುಗುವವರೆಗೆ ನೀನು – ಲೋಪಾ ! – ವ್ರತಚರ್ಯೆ ಮಾಡುತ್ತಾ ನನ್ನ ಕ್ಷೇಮವನ್ನು ಸದಾ ಕೋರುತ್ತಿರಬೇಕು ! ಅರಮನೆ

ಯಲ್ಲಿದ್ದೂ ಆಶ್ರಮಸ್ಥಳಂತೆ, ಮಿತಾಹಾರಿಯಾಗಿರುತ್ತಾ, ನಿದ್ರೆಯಲ್ಲೂ ಮಿತಿಯಲ್ಲಿರುತ್ತಾ, ಸ್ಥಂಡಿಲಶಾಯಿಯಾಗಿ (ನೆಲದಮೇಲೆ ಮಲಗುತ್ತಾ) ವೇದಾರ್ಥಗಳ ಚಿಂತನೆಯನ್ನು ಸದಾ ಮಾಡುತ್ತಿರು. ನನ್ನ ಕುರುಹಾಗಿ ಒಂದು ಅಗ್ನಿಯನ್ನು ಇಲ್ಲಿ ಬಿಟ್ಟುಹೋಗುತ್ತೇವೆ. ನಾನೇ ಅದರಲ್ಲಿರು ತ್ತೇನೆಂದು ಭಾವಿಸಿ ಅದನ್ನು ಶ್ರದ್ಧೆಯಿಂದ ಪರಿಚರ್ಯೆ ಮಾಡುತ್ತಿರು. ನಿನಗೇನಾದರೂ ಸಂದೇಶ ಕಳುಹುವುದಿದ್ದರೆ ಆ ಅಗ್ನಿಯ ಮೂಲಕ ಅದನ್ನು ನಿನಗೆ, ನಾನೆಲ್ಲಿದ್ದರೂ, ತಲುಪಿಸುತ್ತೇನೆ ! ನೀನೂ ನನಗೆ ಆ ದೇವತೆಯ ಮೂಲಕ ಸಂದೇಶ ಕಳುಹಬಹುದು.... ಎಚ್ಚರಿಕೆ ಇರಲಿ.... ಪ್ರೇಮ ಸಂಭಾಷಣೆಗಾಗಿ ಈ ಅಗ್ನಿ ಇಲ್ಲ ! ಅಕಸ್ಮಾತ್ ಸಂಭಾವ್ಯವಾದ ಆಪತ್ಕಾಲದಲ್ಲಿ, ಲೋಕಕ್ಷೇಮ ವಾರ್ತೆಯನ್ನು ಈ ಅಗ್ನಿ ಖಂಡಿತ ವಹಿಸು ತ್ತಾನೆ." ಎಂದವರೇ, ಪತ್ನಿಯೊಡನೆ ಮೂರುಸಲ ಆ ಅಗ್ನಿಯನ್ನು ಪ್ರದಕ್ಷಿಣೆ ಮಾಡಿ, ಅಗಸ್ತ್ಯರು ಆ ಏಕಾಂತ ಗೃಹದಿಂದ ಹೊರಬಿದ್ದರು.

* * *

ಪ್ರಾತಃಸೂರ್ಯ ನಿಧಾನವಾಗಿ ಮೇಲೇರುತ್ತಿದ್ದ. ಮಹರ್ಷಿ ಮಾಧ್ಯಾಹ್ನಿಕ ಸ್ನಾನಕ್ಕೆ ಹೊರಡುತ್ತಾ ಬಿಡಾರದ ಬಾಗಿಲಲ್ಲಿದ್ದ ಶಿಷ್ಯ ಉಪಸ್ಥಿತಿಯನ್ನು ನೋಡಿ, ಹತ್ತಿರ ಕರೆದು, "ಇಂದು ಮಧ್ಯಾಹ್ನ ಭೋಜ ನಾನಂತರ, ಸೂರ್ಯ ಇಳಿಯಲಾರಂಭಿಸಿದೊಡನೆ ನಮ್ಮ ಶಿಷ್ಯ ಪರಿವಾರ ವೆಲ್ಲ ಉತ್ತರಕ್ಕೆ ಪ್ರಯಾಣ ಹೊರಡಲು ಸಜ್ಜಾಗಿರಲಿ. ಆಶ್ರಮದ ಉಗ್ರಾಣರಕ್ಷಕನಿಗೆ ಪಶುರಕ್ಷಕನಿಗೆ, ರಥಕಾರರ ಬಳಗದವರಿಗೆ, ಪಯಣದ ಉಸ್ತುವಾರಿಯ ಭಟರಿಗೆ, ಮುಂಗಡ ಪ್ರಯಾಣ ಸಿದ್ಧತೆಯ ಏರ್ಪಾಡಿನ ವರಿಗೆ ಇದನ್ನು ಕೂಡಲೇ ತಿಳಿಸು. ಅಶ್ವಾರೋಹಿಗಳೂ, ಅಶ್ವರಕ್ಷಕರೂ ಕುದುರೆಗಳನ್ನು ಸಿದ್ಧಪಡಿಸಿ, ಮುಂಚಿತವಾಗಿಯೇ ಉಜ್ಜೈನಿಯ ಮಾರ್ಗ

ವನ್ನು ಶೋಧಿಸುತ್ತಾ ಮುಂದೆ ಮುಂದೆ ನಡೆಯುತ್ತಿರಲಿ. ಸಾಯಂಕಾಲ ಸಂಧ್ಯೆಗೆ, ಅಗ್ನಿಹೋತ್ರಕ್ಕೆ ಅನುಕೂಲವಾದ ನದೀತೀರವನ್ನೂ, ರಾತ್ರಿ ಬಿಡಾರಕ್ಕೆ ಅನುಕೂಲವಾದ ಸ್ಥಳವನ್ನೂ ಅವರು ನಿಶ್ಚಯಪಡಿಸಲಿ. ಈಗೇ ಸ್ನಾನ ಮುಗಿಸಿ ಬರುತ್ತೇನೆ" ಎಂದು ಅಪ್ಪಣೆಯಿತ್ತರು.

ಅದರಂತೆ ಆ ಸಂಜೆ ಅಗಸ್ತ್ಯಪರಿವಾರವೆಲ್ಲ ಉಜ್ಜಯನಿಯ ದಾರಿಯಲ್ಲಿ ಪ್ರಯಾಣ ಹೊರಟಿತು

* * *

ಇಲ್ವಲನ ಗೂಢಚಾರರು ಆ ಬೆಳಿಗ್ಗೆ ಅಗಸ್ತ್ಯ, ಲೋಪಾಮುದ್ರೆ, ವಿದರ್ಭದೊರೆ ಈ ಮೂವರೂ ರಹಸ್ಯದಲ್ಲಿ ಏನೋ ಮಾತಾಡುತ್ತಿದ್ದು, ಒಟ್ಟಿಗೇ ಹೊರಬಂದುದನ್ನೂ, ಅಗಸ್ತ್ಯರ ದಂಡು ಉತ್ತರಕ್ಕೆ ಪ್ರಯಾಣ ಹೊರಟ ಸಮಾಚಾರವನ್ನು ಇಲ್ವಲನಿಗೆ ತಿಳಿಸಲು ಮಣಿಮತೀ ಪುರಿಯತ್ತ ಹೊರಟರು !

ಅಗಸ್ತ್ಯರು ಉಜ್ಜಯನಿಗೆ ತಲುಪಲು ಎರಡು ತಿಂಗಳು ಹಿಡಿದವು. ಈ ಮಧ್ಯದಲ್ಲಿ ಭೃಗುಕಚ್ಛದ ಜಮದಗ್ನಿಗಳ ಆಶ್ರಮದಲ್ಲಿ ಒಂದು ದೊಡ್ಡ ಕೋಲಾಹಲ ಆಗಿಹೋಗಿತ್ತು !!

# ೯ ಸಹಸ್ರಾರ್ಜುನನ ಪತನ

ಅಗಸ್ತ್ಯರ ಆ ಎರಡು ತಿಂಗಳ ಪಯಣಕಾಲದೊಳಗೆ ಬೇರೊಂದು ಕಡೆ ನಡೆದ ಘೋರಘಟನೆ ಇದು. ಮಾಹಿಷ್ಮತಿಯ ರಾಜ ಸಹಸ್ರಾರ್ಜುನ ವೃದ್ಧನಾಗಿ, ಧಾರ್ಮಿಕನಾಗಿ ಬಾಳಿ, ಹೆಸರು ಸಂಪಾದಿಸಿ ಆಗಿತ್ತು. ದತ್ತಾತ್ರೇಯರ ಉಪಾಸಕನಾಗಿ ಅವನು ಏಳು ವರಗಳನ್ನು ಕೇಳಿ ಅವರಿಂದ ಪಡೆದುಕೊಂಡಿದ್ದ. (೧) ತನಗೆ ಸಾವಿರ ತೋಳುಗಳು ಉಂಟಾಗಬೇಕು. (೨) ತಾನು ಎಂದೂ ಅಧರ್ಮವನ್ನು ಸೇವಿಸುವಂತಾಗಬಾರದು. (೩) ಸ್ವಧರ್ಮವನ್ನು ತಾನೆಂದೂ ಬಿಟ್ಟಿರಬಾರದು. (೪) ಯುದ್ಧದಲ್ಲಿ ಸಮಸ್ತ ಪೃಥಿವಿಯನ್ನೂ ಜಯಿಸಿ ತಾನು ಸಪ್ತದ್ವೀಪಾಧಿಪತಿ ಎನಿಸಬೇಕು. (೫) ಅದು ತನ್ನಿಂದ ಧರ್ಮರೀತಿಯಲ್ಲೇ ಪರಿಪಾಲಿತವಾಗಿರಬೇಕು. (೬) ಶತ್ರುಗಳಿಂದ ತಾನು ಸೋತಿರಬಾರದು. (೭) ಸಮಸ್ತಲೋಕದಲ್ಲೂ ಪ್ರಖ್ಯಾತ ಪುರುಷನೊಬ್ಬನಿಂದ ಮಾತ್ರ ತನಗೆ ಮರಣ ಆಗಬೇಕು — ಎಂಬುವೇ ಆ ಏಳು ವರಗಳು.

ಆದರೇನು ? ಎಂಭತ್ತೈದು (ಸಹಸ್ರ) ವರ್ಷ ಹೀಗೆ ಧರ್ಮದಿಂದಾಳಿ, ಭೂಮಿಯನ್ನೆಲ್ಲ ತನ್ನ ಪಾದದಡಿ ತಂದುಕೊಂಡು, ಹತ್ತು ಸಾವಿರ ಯಜ್ಞಗಳನ್ನು ಮಾಡಿ ಕೀರ್ತಿವಂತನಾದ ಈ ಅರ್ಜುನನಿಗೂ ಕೊನೆಗೆ ವಿನಾಶಕಾಲ ಬಂದಿತು ! ಕರ್ಮ, ಮರಣ, ಯಾರನ್ನೂ ಬಿಡುವುದಿಲ್ಲ, ಅಲ್ಲವೇ ?

“ಇಷ್ಟು ಪರಾಕ್ರಮಿಯೂ, ಧರ್ಮಜ್ಞನೂ, ದೈವಭಕ್ತನೂ ಆದ ತನಗೆ ಬ್ರಾಹ್ಮಣರ ಅನುಗ್ರಹವಿಕೆ ಇನ್ನು ಎಕೆಬೇಕು ? ಬರೀ ಯಾಗ ಯಜ್ಞ

ತಪಸ್ಸು ಎನ್ನುತ್ತಾ, ದೈಹಿಕ ದುಡಿಮೆಯಿಲ್ಲದೆ, ಇತರರ ದಾನದಿಂದ ಬದುಕುವ ಈ ಜನವರ್ಗದಿಂದ ಸಮಾಜಕ್ಕೆ, ತನಗೆ, ತನ್ನ ರಾಜ್ಯಕ್ಕೆ ಏನು ಪ್ರಯೋಜನ ?" ಎಂಬ ದೃಷ್ಟಿಯ ಹೊಸ ಬುದ್ಧಿಯೊಂದು ಅವನಲ್ಲಿ ಉದಿಸಿತು.

ಮಣಿಮತೀ ಪುರಿಯ ಇಲ್ವಲನಿಗೆ, ನರ್ಮದೆಯ ತೀರದಲ್ಲಿ ಉಂಟಾದ ಈ ದೃಷ್ಟಿಯಿಂದ ಪೋಷಣೆ ದೊರೆಯಿತು ! ಇವನು ದಕ್ಷಿಣ ದಲ್ಲೂ, ಅವನು ಉತ್ತರದಲ್ಲೂ ಹೀಗೆ ಬ್ರಾಹ್ಮಣ ನಿರ್ಮೂಲನೆಯನ್ನು ಮಾಡಿದರೆ ಹೊಸಬಗೆಯ ಸಮಾಜವೊಂದು ಇಡೀ ಭರತವರ್ಷದ ಉದ್ದಗಲಕ್ಕೂ ಉದಿಸಿ ಬರುವ ಕನಸನ್ನು ಇಬ್ಬರೂ ಕಂಡಿದ್ದರು. ಅವರವರ ರೀತಿಗಳು ಮಾತ್ರ ಬೇರೆಯಾಗಿದ್ದವು. ಇಲ್ವಲ ದಕ್ಷಿಣ ದಂಡ ಯಾತ್ರೆಗೆ ಕಾಲಕಾಯುತ್ತಿದ್ದರೆ, ಇತ್ತ ಸಹಸ್ರಾರ್ಜುನ ಉತ್ತರ ದಂಡ ಯಾತ್ರೆಗೆ ಹೊರಟೇಬಿಟ್ಟ ! ಪ್ರಖ್ಯಾತ ಋಷ್ಯಾಶ್ರಮಗಳು ಮೊದಲು ಅವನ ಗುರಿಯಾಗಿದ್ದವು. ಸಪ್ತದ್ವೀಪಾಧಿಪತಿಯಾಗಿದ್ದ ಅವನು ಇನ್ನಾವ ಕ್ಷತ್ರಿಯನನ್ನೂ ಗೆಲ್ಲುವುದೇನೂ ಉಳಿದಿರಲಿಲ್ಲವಲ್ಲ !!

ಭೃಗುಗಳ ಬಗೆಗೆ ವಿಚಿತ್ರಸಮಾಚಾರವೊಂದನ್ನು ಅವನು ಕೇಳಿದ್ದ ! ಅವರು ಹೊಸದೊಂದು ಕ್ಷತ್ರಿಯ ಪೀಳಿಗೆಯನ್ನು ಬೆಳೆಸುತ್ತಿರುವರೆಂದೂ, ಖಡ್ಗಧಾರಣ, ಪ್ರಯೋಗ, ಅಶ್ವಾರೋಹಣ, ಅಶ್ವರಕ್ಷಣೆ, ರಥನಿರ್ಮಾಣ, ಶಸ್ತ್ರಾಸ್ತ್ರಗಳ ತಯಾರಿ ಇವೆಲ್ಲಕ್ಕೆ ಆಶ್ರಮ ಪ್ರದೇಶ ಉಪಯೋಗಿಸಲ್ಪಡು ತ್ತಿದೆಯೆಂದೂ, ತಪೋಭೂಮಿಗಳು ಹೀಗೆ ಕ್ಷಾತ್ರಭೂಮಿಗಳಾಗುತ್ತಿವೆ ಯೆಂದೂ, ಅವನಿಗೆ ಮಾಹಿತಿಯಿತ್ತು.

ಸಹಸ್ರಾರ್ಜುನ ಚಿಂತಿಸಿದ ! ತನ್ನ ಕರ್ತವ್ಯವೇನು ? ಭೃಗುಕಚ್ಛದ ಮಹರ್ಷಿಗಳು ನಡೆಸುತ್ತಿರುವ ಈ ವ್ಯಾಪಾರ ವರ್ಣ ಸಂಕರಕ್ಕೆ ದಾರಿ

ಮಾಡಿಕೊಡುತ್ತಾ, ಧಾರ್ಮಿಕದೊರೆಯಾದ ತಾನು ಅದನ್ನು ಮೂಕನಾಗಿ ನೋಡುತ್ತಿರಬೇಕೆ ? ದತ್ತಾತ್ರೇಯರಲ್ಲಿ ತಾನು ಪಡೆದಿದ್ದ ವರಗಳಲ್ಲಿ ಮೂರು, ಧರ್ಮಪರಿಪಾಲನಕ್ಕೇ ಸಂಬಂಧಿಸಿದ್ದುವಷ್ಟೆ ! ಅಧರ್ಮವನ್ನಾಚರಿಸುವುದನ್ನು ತಾನು ನಿವಾರಿಸಬೇಕಾದುದೊಂದು, ಸ್ವಧರ್ಮವನ್ನೇ ತಾನು ಸೇವಿಸುತ್ತೇನೆಂಬುದು ಇನ್ನೊಂದು, ಪ್ರಜಾಪಾಲನೆಯು ಧರ್ಮದಿಂದಲೇ ಆಗಬೇಕೆಂಬುದು ಮತ್ತೊಂದು !! ಈ ವರಗಳಿಗೂ ಈಗ ಭೃಗುಗಳ ಬಗೆಗೆ ತಾನು ಮಾಡಬೇಕಾದುದಕ್ಕೂ, ತನಗೆ ಕರ್ತವ್ಯ ರೂಪದ, ಸಂಬಂಧವೇನೆಂದು ಸಹಸ್ರಾರ್ಜುನ ಬಹುವಾಗಿಯೇ ಚಿಂತಿಸಿದ !!

ತನ್ನ ಪೂರ್ವಜರ ಚರಿತ್ರೆಯನ್ನೂ ನೆನೆದ ! ನಹುಷನ ಮಕ್ಕಳಲ್ಲಿ ಯಯಾತಿಗೆ (ಶುಕ್ರಪುತ್ರಿ) ದೇವಯಾನಿಯಲ್ಲಿ ಜನಿಸಿದ ಯದು ತನಗೆ ಪೂರ್ವಪುರುಷ. ಅವನ ಮಗ ಸಹಸ್ರಜಿತ್ತನಿಗೆ ಶತಜಿತ್ ಎಂಬುವನು ಮಗನಾಗಿ, ಇವನ ಮಗನೇ ಹೈಹಯ. ಇವನಿಂದ ಐದನೇ ತಲೆಮಾರಿನವನೇ ಮಹಿಷ್ಮಾನ್. ಇವನೇ ಮಾಹಿಷ್ಮತಿಯ ಸ್ಥಾಪಕ. ಮುಂದೆ ಐದನೆಯ ತಲೆಮಾರಿನಲ್ಲಿ ಕೃತವೀರ್ಯನೂ, ಮುಂದೆ ಇವನ ಮಗನಾಗಿ ಕಾರ್ತವೀರ್ಯನಾದ ತಾನೂ ಹುಟ್ಟಿದ್ದನ್ನೆಲ್ಲ ಅರ್ಜುನ ನೆನೆದ. ಇಕ್ಷ್ವಾಕುವಂಶದ ದೊರೆ, ಬಾಹು ಎಂಬುವನನ್ನು ತನ್ನ ಪೂರ್ವಜ ಹೈಹಯ, ಸೋಲಿಸಿದ್ದು ಅವನು ತನ್ನ ಗರ್ಭಿಣೀ ಪತ್ನಿಯೊಡನೆ ಕಾಡಿಗೆ ಓಡಿ ಹೋದದ್ದು, ಅಲ್ಲಿ ಅವಳು ಏಳುವರ್ಷ ಕಾಲ ಗರ್ಭಿಣಿಯಾಗೇ ಇದ್ದದ್ದು, ಬಾಹು ಕಾಲವಶನಾದಮೇಲೆ. ಅವನ ಪತ್ನಿಯು ಸಹಗಮನ ಮಾಡಹೊರಟಾಗ ಭೃಗುಗಳ ಪೂರ್ವಜನಾದ ಔರ್ವನು ಅವಳನ್ನು ತಡದು ತನ್ನಾಶ್ರಮದಲ್ಲಿ ಆಶ್ರಯವಿತ್ತದ್ದು, “ನಿನ್ನ ಉದರದಲ್ಲಿ ಚಕ್ರವರ್ತೀ ಜನಿಸುತ್ತಾನೆ” ಎಂದು ಅವನು ಭವಿಷ್ಯಹೇಳಿದ್ದು, ರಾಣಿ ಮುಂದೆ ಮಗನನ್ನು ಹಡೆದು, ಅವನು ತನ್ನ ಸವತಿ ತಾಯಿ ಪ್ರಯೋಗಿಸಿದ್ದ ವಿಷ (ಗರ)ದ ಚಿಹ್ನೆಯೊಡ

ನೆಯೇ ಹುಟ್ಟಿದ್ದರಿಂದ **'ಸಗರ'** ಎನಿಸಿದ್ದು, ಅವನು ಔರ್ವನಿಂದ ಭಾರ್ಗವಸೃಷ್ಟಿಯಾದ ಆಗ್ನೇಯಾಸ್ತ್ರವನ್ನು ಕಲಿತದ್ದು, ಅದರಿಂದ ಅವನು ಮುಂದೆ ಹೈಹಯರನ್ನೆಲ್ಲ ಕೊಂದದ್ದು ಇದನ್ನೆಲ್ಲ ಸಹಸ್ರಾರ್ಜುನ ಚಿಂತಿಸಿದ ! ಅಂದೂ ಅದೇ ಕಥೆಯೇ !! ಈ ಭೃಗುಗಳಿಗೆ ಆಗ್ನೇಯಾಸ್ತ್ರ ಹೇಗೆ ದೊರೆಯಿತು ? ಅವರಿಗೇಕೆ ಅದು ಬೇಕಿತ್ತು ? ಅವರು ಸಗರನಿಗೆ ಅದನ್ನು ಉಪದೇಶಿಸಿಯೇ ಅಲ್ಲವೆ ತನ್ನ ಪೂರ್ವಜರು ಹತರಾದದ್ದು ?

ನೆನೆಯುತ್ತ, ಹಳೆಯ ವೈರದ ಕಥೆ, ಅರ್ಜುನನಲ್ಲಿ ರಾಜಸಭಾವವನ್ನು ಉಂಟುಮಾಡಿತ್ತು. ದಿನದಿನವೂ ದೊರೆ ಇದನ್ನು ನೆನೆದ. ಮನಸ್ಸು ಕುದಿಯಲಾರಂಭಿಸಿತ್ತು. ಕ್ರಮೇಣ ಅದಕ್ಕೊಂದು ಮಂಕು ಕವಿಯಿತು. ಭೃಗುಗಳ ಶಕ್ತಿಯನ್ನಾದರೂ ಅಡಗಿಸಬೇಕು ! ಅವರು ಕ್ಷಾತ್ರದತ್ತ ಧೃಢವಾಗಿ ಹೊರಳದಂತೆಯಾದರೂ ತಡೆಯ ಬೇಕು !!.... ಇಲ್ಲವಾದರೆ .... ಅವರನ್ನೇ .... ಮುಗಿಸಬೇಕು !!! ಬ್ರಾಹ್ಮಣ, ಅಗ್ನಿಯಂತೆ ! ಅದು ಕಿಡಿಯಾಗಿ ಉಳಿದರೂ ಕ್ಷತ್ರವನ್ನು ಸುಟ್ಟು ಬೂದಿ ಮಾಡುವುದೇ ಖಂಡಿತ. ಕಿಡಿಯನ್ನಾರಿಸಿದ ಹೊರತು ಕ್ಷತ್ರಕ್ಕೆ ಉಳಿಗಾಲವಿಲ್ಲ ! ಭಾರ್ಗವರ ಈ ಶಸ್ತ್ರಸಿದ್ಧತೆಗೇನರ್ಥ ? ಹಳೆಯ ವೈರವನ್ನು ಅವರು ಮರೆತಿಲ್ಲವಷ್ಟೆ ! ಭಾರ್ಗವರೇನು, ಉಳಿದ ಬ್ರಾಹ್ಮಣರೇನು ? ಎಲ್ಲ ಬ್ರಾಹ್ಮಣರೂ ಅಷ್ಟೆ ! ಸ್ವಾರ್ಥಿಗಳೇ !!! ಬಾಹು ಬಲದಿಂದ ಭೂಮಿಯನ್ನು ಗೆದ್ದು ಆಳುವವನು ಕ್ಷತ್ರಿಯನಾದರೆ, ಆ ಕ್ಷತ್ರಿಯನನ್ನೇ ಉಪಾಯಾಂತರಗಳಿಂದ ಗೆದ್ದು ಆಳುವವರು ಈ ಬ್ರಾಹ್ಮಣರು !! ಯುದ್ಧದಲ್ಲಿ ಸಾಯುವವನು, ಆತ್ಮಾರ್ಪಣೆ ಮಾಡುವವನು, ರಾಷ್ಟ್ರರಕ್ಷಕ ಈ ಕ್ಷತ್ರಿಯನಾದರೆ, ಅವನಿಗೆ ಸ್ವಯಂ ತಾನಾಳುವ ಭೂಮಿಯನ್ನು ರಕ್ಷಿಸುವ ಬುದ್ಧಿ ಇಲ್ಲವೆ ? ಶಕ್ತಿ ಇಲ್ಲವೆ? ಅವನಿಗೆ ಬ್ರಾಹ್ಮಣ್ಯದ ರಕ್ಷಣೆ ಅವಶ್ಯವೇ ? ಅಲ್ಲೊಬ್ಬ ಇಲ್ಲೊಬ್ಬ

ಬ್ರಾಹ್ಮಣ ತಪಸ್ವಿಯಾಗಿದ್ದಾನೆಂದರೂ ಎಲ್ಲ ಬ್ರಾಹ್ಮಣರನ್ನೂ, ನಿಃಸತ್ತ್ವರನ್ನು ಸಹ, ಕ್ಷತ್ರಿಯ ಗೌರವಿಸಬೇಕೇಕೇ ? ವಿಶೇಷ ಮರ್ಯಾದೆಗಳು ಅವರಿಗೇಕೆ ? ಈ ಶಸ್ತ್ರಾಸ್ತ್ರಸಂಗ್ರಹದ ಅವಕಾಶ ಅವರಿಗೇಕೆ ಬೇಕು ?

ಸಹಸ್ರಾರ್ಜುನನ ಈ ದಿಸೆಯ ಚಿಂತನೆ ಒಂದು ನಿರ್ಣಯ ಘಟ್ಟವನ್ನು ಮುಟ್ಟಿ, ದೊರೆ, ಭೃಗುಕಚ್ಛದತ್ತ ವಿಜಯಾತ್ರೆ ಹೊರಟ. ಅದು "ಮೃಗಯಾವಿಹಾರ" (ಬೇಟೆ) ಎಂಬ ಹೊರ ಹೊದಿಕೆಯನ್ನು ಅದಕ್ಕೆ ಹೊದ್ದಿಸಿ ಡಂಗೂರ ಸಾರಿಸಲಾಯಿತು.

ಆಗ ಭೃಗುಕಚ್ಛದಲ್ಲಿ ಆಶ್ರಮದ ಕುಲಪತಿಯಾಗಿದ್ದವರು ಜಮದಗ್ನಿ ಎಂಬ ಮಹಾ ತಪಸ್ವೀ. ಋಚೀಕನೆಂಬ ಭಾರ್ಗವನಿಗೆ ಗಾಧಿ ಎಂಬ ಅರಸುಪುತ್ರಿಯಾದ ಸತ್ಯವತೀ ಎಂಬುವಳಲ್ಲಿ ಜನಿಸಿದ ಮಹರ್ಷಿ ಅವನು. ಅವನು ತನ್ನ ಪತ್ನಿಗೂ, ಅವಳ ತಾಯಿಗೂ ಯಜ್ಞಪ್ರಸಾದವನ್ನಿತ್ತು, ತನಗೆ ಉತ್ತಮ ಬ್ರಾಹ್ಮಣಶಿಶುವೂ, ತನ್ನ ಮಾವನಿಗೆ ಉತ್ತಮ ಕ್ಷತ್ರಿಯ ಶಿಶುವೂ ಹುಟ್ಟುವಂತೆ ಅಭಿಮಂತ್ರಿಸಿ ಇತ್ತ ಆ ಚರುವಿಶೇಷಗಳನ್ನು ತಾಯಿಯೂ ಮಗಳೂ ಅಜ್ಞಾನದಿಂದ ಅದಲು ಬದಲು ಮಾಡಿಕೊಂಡಿದ್ದರ ಫಲವಾಗಿ, ಇತ್ತ ಕ್ಷತ್ರತತ್ತ್ವದ ಸಾಕಾರನಾಗಿ ಈ ಜಮದಗ್ನಿಯೂ, ಅತ್ತ ಬ್ರಹ್ಮತತ್ತ್ವದ ಸಾಕಾರನಾಗಿ ಪರಿವರ್ತನಾಗುವ ವಿಶ್ವಾಮಿತ್ರನೂ ಹುಟ್ಟಿದರು ! ಇದನ್ನೆಲ್ಲ ಸಹಸ್ರಾರ್ಜುನ ಬಲ್ಲ ! ಜಮದಗ್ನಿಯೇ ತನಗೆ ಮೃತ್ಯುವಾದಾನೆಂಬ ಭೀತಿ ಒಂದುಕ್ಷಣ ಅವನನ್ನು ಕಾಡಿತು! "ಜಮತ್" ಎಂದರೆ "ಪ್ರಜ್ವಲಿಸುವುದು". ಮೊದಲೇ ಅಗ್ನಿ ! ಅದರಮೇಲೆ "ಜಮತ್"! ಇದು ತನ್ನನ್ನೇ ಸುಟ್ಟು ನಾಯಿಸುವ ಅಗ್ನಿಯೋ ? ದೇವಲೋಕದಿಂದ ಭೂಮಿಗೆ ಮೊದಲು ಅಗ್ನಿಯನು ತಂದನೆಂಬ ಖ್ಯಾತಿಯ ಅಥರ್ವನೂ ಮೂಲದಲ್ಲಿ ಒಬ್ಬ ಭಾರ್ಗವನೇ!

ಸತ್ತವರನ್ನು ಬದುಕಿಸಬಲ್ಲ ಮೃತಸಂಜೀವನವನ್ನು ರಹಸ್ಯವಾಗಿ ಅಶ್ವಿನಿಗಳಿಂದ ಅರಿತ ದಧೀಚನೂ (ದಧ್ಯಂಚನೂ) ಒಬ್ಬ ಭಾರ್ಗವನೇ!! ಸಮಸ್ತರಿಗೂ ಮೂಲಪಿತೃಗಳೆನಿಸಿದ ದಶಗ್ವಾ, ನವಗ್ವಾಗಳೆನಿಸಿದವರೂ, ಆಂಗೀರಸರೂ ಎಲ್ಲರೂ ಭಾರ್ಗವರೇ ! ಅಸುರಗುರುವಾಗಿ, ಈಗ ದೇವತೆಗಳನ್ನೂ ಅವರ ಆರಾಧಕರಾದ ಕ್ಷತ್ರಿಯ ಅರಸರನ್ನೂ ಕಾಪಾಡುತ್ತಿರುವ ಉಶನಾಕಾವ್ಯನೆನಿಸಿದ ಶುಕ್ರಾಚಾರ್ಯನೂ ಒಬ್ಬ ಭಾರ್ಗವನೇ ! ಹಾಗೆ ನೋಡಿದರೆ, ಬೃಹಸ್ಪತಿಯೂ ಭಾರ್ಗವನೆ ! ಚ್ಯವನನೂ ಅಷ್ಟೇ ! ಶುಕ್ರಬೃಹಸ್ಪತಿಗಳ ಪೈಪೋಟಿಯಿಂದಲ್ಲವೇ ದೇವಾಸುರ ಯುದ್ಧ ನಡೆಯುತ್ತಿರುವುದು ? ಅಥವಾ ಈ ಭಾರ್ಗವದ್ವಯರ ಒಳಸಂಚು ಇದೇಕಾಗಿರಬಾರದು ?– ಜಗಳ ಮಾಡುವಂತೆ ನಟಿಸಿ, ದೇವತೆಗಳ ಕಡೆ ಅಷ್ಟು ಅರಸರನ್ನೂ, ಅಸುರರ ಕಡೆ ಅಷ್ಟು ಅರಸರನ್ನೂ ಎತ್ತಿಕಟ್ಟಿ "ತಮ್ಮ ಪೌರೋಹಿತ್ಯವಿಲ್ಲದ್ದರೆ ಇಬ್ಬರೂ ಸಾಯುತ್ತಾರೆ" ಎಂಬ ಭ್ರಮೆ ಹುಟ್ಟಿಸಿ, ತಮ್ಮ ಸ್ವಾರ್ಥಸಾಧಿಸಿಕೊಳ್ಳುತ್ತಿರುವ ಈ ಭಾರ್ಗವರು ಬ್ರಾಹ್ಮಣರಲ್ಲೇ ಅತಿಕುಟಿಲರು; ಅತಿಭಯಂಕರರು; ತಮಗೆ–ಭೂಲೋಕದ ಅರಸರಿಗೆ, ಅವರ ಚಕ್ರವರ್ತಿಯಾದ ತನಗೆ–ಪ್ರಥಮಶತ್ರುಗಳು ! ಇವರನ್ನು ತಣ್ಣಗಾಗಿಸಿದರೆ, ಉಳಿದ ಬ್ರಾಹ್ಮಣರ ನಿರ್ನಾಮ ಬಹಳ ಸುಲಭ ! ದತ್ತಾತ್ರೇಯರ ಕೊನೇ ವರವಾದ, ಅತಿ ಪ್ರಸಿದ್ಧ ಜಗತ್ ಪುರುಷನಿಂದ ತನ್ನ ಮರಣವೆಂಬುದನ್ನು ಆಗ ತಪ್ಪಿಸಲು ಬಂದೀತು !

ಇದೇ ಸಹಸ್ರಾರ್ಜುನನ ಚಿಂತನೆಯ ಧೋರಣೆ ಆಯಿತು ! ತಾನು ಸಮಸ್ತ ಕ್ಷತ್ರಿಯರ ಪ್ರತಿನಿಧಿಯೆಂದೂ, ಭಾರ್ಗವರು ಸಮಸ್ತಬ್ರಾಹ್ಮಣರ ಪ್ರತಿನಿಧಿಯೆಂದೂ ಭಾವಿಸಿಕೊಂಡು, ಈಗ ತಾನು ನಡೆಸುವ ಈ ವಿಜಯಯಾತ್ರೆಯು ಬ್ರಾಹ್ಮಣರ ಮೇಲಿನ ಕ್ಷತ್ರಿಯನ ಸರ್ವಾಧಿಕಾರದ ನಿರ್ಣಾಯಕ ವಿಜಯದ ಸ್ಮಾರಕವಾದೀತೆಂದು ಅವನು ಭ್ರಮಿಸಿದ.

ಈ "ವಿಜಯಯಾತ್ರೆಯ" ಸಮಾಚಾರವನ್ನು ಅವನು ತನ್ನ ಪುರೋಹಿತನಿಗೆ ತಿಳಿಸಲಿಲ್ಲ ! ಪುರೋಹಿತನೂ ಬ್ರಾಹ್ಮಣನೇ ಅಲ್ಲವೇ ? ಅವನನ್ನು ಈ ವಾರ್ತೆಯಿಂದ ಹೊರಗೇ ಇಡಬೇಕು. ಹಾಗೂ ತಾನೀಗ ಹೊರಡುತ್ತಿರುವುದು" ಬೇಟೆ"ಗಾಗಿ ಅಲ್ಲವೇ? ಯಾರ ಬೇಟೆಯಾದರೂ ಆಗಿರಲಿ !! ಅಲ್ಲಿ ಬ್ರಾಹ್ಮಣನಿಗೇನು ಕೆಲಸ ? ಎಂದು ಆತ್ಮವಂಚನೆ ಯಿಂದ ದೊರೆ ಹೊರಟ.

ಅರಮನೆಯ ಸುಮಂಗಲಿಯರು ಆರತಿ ಎತ್ತಿದರು. ಮೂರನೆಯ ಸುತ್ತಿನಲ್ಲಿ ಆರತಿ ಆರಿತು ! ತಟ್ಟೆಯು ಕೈಜಾರಿ ಕೆಳಗೆ ಬಿತ್ತು ! ರಾಣಿ ಯರು ದುಗುಡಗೊಂಡರು ! ಅರಸ ಅವರಿಗೆ ಸಮಾಧಾನ ಹೇಳಿದ. "ಬೇಟೆ ಯಲ್ಲಿ ಅಪಜಯದ ಪ್ರಶ್ನೆ ಎಲ್ಲಿ ? ಇದು ಹೇಗೂ ವಿಹಾರವಷ್ಟೆ ! ಮೂಢ ನಂಬಿಕೆಗಳನ್ನು ಸುಸಂಸ್ಕೃತ ರಾಣಿಯರು ನಂಬಬಾರದು '' ಎಂದು ಸಂತೈಸಿದ.

ಸಹಸ್ರಾರ್ಜುನ ದೊಡ್ಡ ಸೈನ್ಯದೊಡನೆಯೇ ಹೊರಟ ! ಅದನ್ನು ನೋಡಿದವರಾರಿಗೂ ಅದು ಬೇಟೆಗಾಗಿ ಹೊರಟದ್ದೆಂದು ತೋರಲಿಲ್ಲ !! ದೊರೆಯ ಉದ್ದೇಶ್ಯ ತಿಳಿಯದೇ ಅವನ ಹಿತಚಿಂತಕರು ಕಳವಳ ಗೊಂಡರು

ಭೃಗುಗಳ ಗೂಢಚಾರರು ಈ ದೊಡ್ಡ ಸೈನ್ಯದ ಪ್ರಮಾಣದ ಅಂದಂದಿನ ಪ್ರಗತಿಯನ್ನು ಭೃಗು ಕಚ್ಛಕ್ಕೆ ಅಂದಂದೇ ತಲುಪಿಸುವ ಅದ್ಭುತ ವ್ಯವಸ್ಥೆ ಮಾಡಿದ್ದರು ! ಅದು ಸಹಸ್ರಾರ್ಜುನನಿಗೆ ತಿಳಿಯಲಿಲ್ಲ ! ಅದು ದೈವ ಸಂಕಲ್ಪ !!

* * *

ಭಾರ್ಗವಾಶ್ರಮಕ್ಕೆ ಮೂರುದಿನದ ಪ್ರಯಾಣದ ದೂರದಲ್ಲಿ ಸಹಸ್ರಾರ್ಜುನ ಬೀಡುಬಿಟ್ಟ ವಾರ್ತೆ ಜಮದಗ್ನಿಗಳಿಗೆ ತಿಳಿಯಿತು.

ದಾರಿಯುದ್ದಕ್ಕೂ ನೂರಾರು ಆಶ್ರಮಗಳ ಲೂಟಿ. ಋಷಿಗಳ "ವಿಚಾರಣೆ", ತನಗೆ ಅವರೆಲ್ಲ ನಮಸ್ಕರಿಸುವಂತೆ ನಿರ್ಬಂಧ. ಕ್ಷತ್ರವೇ ಪರಮ ತತ್ತ್ವವೆಂಬ ಉದ್ಘೋಷಣೆ, ಋಷಿಗಳು, ತಪಸ್ಸು, ಯಾಗಾದಿ "ಶುಷ್ಕ, ಅರ್ಥಹೀನ ವ್ಯಾಪಾರಗಳನ್ನು ಬಿಟ್ಟು ಜನಸಾಮಾನ್ಯರಂತೆ ದುಡಿದು ತಿನ್ನಬೇಕೆಂಬ ಉಪದೇಶ, ಉಲ್ಲಂಘಿಸಿದವರ ಬಂಧನ, ಹಿಂಸೆ-ಈ ಬಗೆಯ ಪಗದಿಗಳು ಜಮದಗ್ನಿಗಳಿಗೆ ದಿನಂಪ್ರತಿ ಬರಲಾರಂಭಿಸಿದ್ದುವು, ಹದಿನೆಂಟು ವರ್ಷದ ವರಪುತ್ರ-ರಾಮ-ಕುದಿದು ಕ್ರುದ್ಧನಾದ ! ಗಂಡುಗೊಡಲಿ ಅವನಿಗೆ ಪ್ರಿಯವಾದ ಆಯುಧವಾಗಿ, ಅವನನ್ನು ಆಶ್ರಮದಲ್ಲಿ ಎಲ್ಲರೂ ಪರಶುರಾಮ ಎನ್ನುತ್ತಿದ್ದರು. ಶ್ರೀಮಹಾವಿಷ್ಣುವಿನ ಅಂಶವೇ ಅವನೆಂದೂ, ಸಾಕ್ಷಾತ್ ವಿಷ್ಣುವೇ ತನ್ನ ಶಾರ್ಙ್ಗವೆಂಬ ಬಿಲ್ಲನ್ನು ಅವನಿಗೆ ಕೊಟ್ಟನೆಂದೂ ಪ್ರತೀತಿ ಇತ್ತು. ಯಾವ ಕ್ಷತ್ರಿಯನಿಗೂ ಮೀರಿದ ಶಕ್ತಿ, ಪರಾಕ್ರಮ, ತೇಜಸ್ಸು, ಆಯುಧಗಳ ಕೈಚಳಕ, ಶಸ್ತ್ರಾಸ್ತ್ರ ವಿದ್ಯಾಸಂಗ್ರಹ, ಇವೆಲ್ಲ ಈ ರಾಮನಲ್ಲಿ ನೆಲೆಸಿ, ಜೊತೆಯವರು ಅವನೊಡನೆ ಮಾತಾಡಲು ಅಂಜುತ್ತಿದ್ದರು !

ಬರುತ್ತಿರುವ ದೊರೆಯ ಉದ್ದೇಶ್ಯ ಏನೆಂಬುದು ಜಮದಗ್ನಿಗೂ, ರಾಮನಿಗೂ ಚೆನ್ನಾಗಿ ಅರ್ಥವಾಗಿತ್ತು. ಕುಲಪತಿಯ ಆಶ್ರಮದ ಇತರ ಅಧ್ಯಾಪಕರೂ ಶಿಷ್ಯರೂ ಅದಕ್ಕೆ ಸಿದ್ಧವಾಗಿಯೇ ಇದ್ದರು !

"ರಾಮ ! ನನ್ನ ಕಾಲ ಮುಗಿಯಿತು ! ಹೊಸಯುಗಪ್ರವರ್ತನದ ಹೊಣೆಯನ್ನು ನಿನ್ನಮೇಲೆ ಕಾಲಪುರುಷ ಹೊರಿಸಿದಂತಿದೆ ! ಈ ಕ್ಷತ್ರಿಯರಿಗೆ ಶಾಶ್ವತಪಾಠ ಕಲಿಸು ! ಯಾವ ವಿದ್ಯೆಯೂ, ವಿದ್ಯೆಯೇ ಆದಾಗಿದ್ದರೆ, ಲೋಕೋಪಕಾರಕ್ಕಾಗಿಯೇ ವಿನಿಯೋಗವಾಗಬೇಕೇ ವಿನಾ ಸ್ವಾರ್ಥಕ್ಕಲ್ಲ ಎಂಬುದನ್ನು ನಿರೂಪಿಸು. ಆದರೆ ದುಡುಕಬೇಡ. ಕೈಲಾಸದಲ್ಲಿ ರುದ್ರದೇವ ನಿನಗೆ ಅನುಗ್ರಹಿಸಿದ ಸಕಲ ಶಸ್ತ್ರಾಸ್ತ್ರಗಳೂ

ಲೋಕಕಲ್ಯಾಣಕ್ಕಾಗಿಯೇ ಮೀಸಲಾಗಿರಲಿ” ಎಂದು ಜಮದಗ್ನಿ, ರಾಮನಿಗೆ ಕೊನೆಯದಾಗಿ ಉಪದೇಶಿಸಿ, ಮೌನವ್ರತ ತಾಳಿದರು.

* * *

ಸಹಸ್ರಾರ್ಜುನ ಆಶ್ರಮಕ್ಕೆ ಒಂದು ಹರಿದಾರಿದೂರದಲ್ಲಿ ಬಂದು ನಿಂತ. ಅದರ ಶಾಂತವೈಭವ ಒಂದು ಗಳಿಗೆ ಅವನನ್ನು ವಿಚಲಿತನನ್ನಾಗಿಸಿತು ! ಇಲ್ಲಿಯೇ ಕ್ಷತ್ರಿಯರ ತರಬೇತಿ ಕೇಂದ್ರವಿದೆ ಎಂದು ಕೇಳಿ ಬಂದಿದ್ದವನಿಗೆ ಆಶ್ಚರ್ಯವಾಯಿತು !!

ಬ್ರಾಹ್ಮಣಕುಮಾರರು ಕವಾಯಿತ್ತು, ಕುದುರೆಸವಾರಿ, ಅಸ್ತ್ರಪ್ರಯೋಗ, ಶಸ್ತ್ರಪ್ರಾವೀಣ್ಯ, ಅಸ್ತ್ರೋಪಾಸನೆ, ವ್ಯಾಯಾಮಾದಿಗಳಲ್ಲಿ ತೊಡಗಿರುವುದು ಕ್ರಮಶಃ ಕಂಡುಬಂದರೂ, ಅದೆಲ್ಲಕ್ಕೂ ಒಂದು ಬ್ರಾಹ್ಮಶಕ್ತಿಯ ಅಂಕುಶವಿರುವಂತೆಯೂ, ಯಾರೂ ಉದ್ವಿಗ್ನರಲ್ಲದಂತೆಯೂ ಇದ್ದ ಸಂನ್ನಿವೇಶ ಅರಸನ ಮನಃಸ್ಥಿತಿಗೆ ಪೂರ್ಣವಾಗಿ ವಿರುದ್ಧವೇ ಇತ್ತು ! ಇಲ್ಲಿ ತಾನುಮಾಡ ಬಂದಿರುವ ಬ್ರಾಹ್ಮಣಶಿಕ್ಷೆಯ ಕಾರ್ಯಕ್ರಮ ಸರಿಯೇ ? ಎಂದು ಒಂದೇ ಕ್ಷಣ ಒಂದು ಸಂದೇಹ ಎದ್ದರೂ, ಬಹುದಿನಗಳ ಆ ಬಗೆಯ ಸಂಕಲ್ಪ, ಮನಸ್ಸಂಸ್ಕಾರಗಳು ಅದನ್ನು ಅದುಮಿ ಹಾಳುಗೆಡಹಿದವು.

“ಈ ಜಮದಗ್ನಿಗೆ ನೈಜ ಬ್ರಾಹ್ಮಣ್ಯಸಿದ್ಧಿಯ ವ್ರತವೇ ಉದ್ದೇಶ್ಯವಾಗಿದ್ದರೆ, ಇಕ್ಷ್ವಾಕುವಂಶದ ದೊರೆ ರೇಣುವಿನ ಮಗಳು ರೇಣುಕೆಯೇ ಏಕೆ ಪತ್ನಿ ಆಗಿರಬೇಕು ? ಬ್ರಾಹ್ಮಣನಿಗೆ ಒಬ್ಬ ಬ್ರಾಹ್ಮಣ ಹುಡುಗಿ ದೊರೆಯಲಿಲ್ಲವೇ ?...... ಆಹಾ ! ಇದೆಲ್ಲ ಕಪಟವೆಂಬುದು ಇದರಿಂದಲೇ ಸಿದ್ಧವಾಗದೇ ! ರಾಜಕೀಯ ಉದ್ದೇಶ್ಯವಿಲ್ಲದೆ ಈ ಅಂತರ್ವರ್ಣ ವಿವಾಹ ಏಕೆ ? ಹೋಗಲಿ, ಒಬ್ಬ ವೈಶ್ಯಳನ್ನೋ, ಶೂದ್ರಳನ್ನೋ ಆದರೂ

ವಿವಾಹವಾಗಿದ್ದರೆ, ಸಂದೇಹವಿರಲಿಲ್ಲ! ಕ್ಷತ್ರಿಯನನ್ನು ಬಗ್ಗಿಸಲೆಂದೇ ಅಲ್ಲವೇ ಈ ಕ್ಷತ್ರಿಯಕನ್ಯಾವರಣ! ಅವಳನ್ನೂ ಏನೋ ನೆಪಮಾಡಿ ಈ ಜಮದಗ್ನಿ ಅವಳ ತಂದೆಯ್ಮೂ ಎದುರೇ ಮಗನ ಕೈಲಿ ಕೊಲ್ಲಿಸುತ್ತಾನೆಂದರೆ, ಇದರಲ್ಲಿ ರಾಜಕೀಯ ಉದ್ದೇಶ್ಯ ಸ್ಪಷ್ಟವಲ್ಲವೆ ? ಕ್ಷತ್ರಿಯನ ಹೊಟ್ಟೆಉರಿಸುವುದು, ಬ್ರಾಹ್ಮಣನಾದ ತಾನು ಅವನಿಗಿಂತ ಶ್ರೇಷ್ಠನೆಂದು ತೋರಿಸುವುದು— ಇದೇ ಈ ಉದ್ದೇಶ್ಯ! "ಸತ್ತ" ಆ ರೇಣುಕೆಯನ್ನೂ ಮತ್ತೆ ಬದುಕಿಸಿದ ನಾಟಕವಾಡಿ, "ಸಂ–ವದತೀ" (ಅಶರೀರವಾಣೀ) ಕ್ಷೇತ್ರದಲ್ಲಿ ಮಲಾಪಹಾ ನದೀ ತೀರದಲ್ಲಿ, ಒಂದು ಬೆಟ್ಟದ ದೊಡ್ಡ ಶಿಖರದ ಮೇಲೆ ಅವಳ "ಶಕ್ತಿ"ಯನ್ನು ನಿಲ್ಲಿಸುವ ಈ ಬ್ರಾಹ್ಮಣನ ಸಂಕೇತವೇನು ?...... ಓಹೋ! ತಿಳಿಯಿತು! ಮುಂದಿನ ಪೀಳಿಗೆಯ ಕ್ಷತ್ರಿಯರಿಗೆ ಬ್ರಾಹ್ಮಣನ ಅಸಾಧಾರಣ "ಶಕ್ತಿ"ಯನ್ನು ತಿಳಿಸಿ, ಶಾಶ್ವತವಾಗಿ ತೋರಿಸುವುದೇ ಈ "ಶಕ್ತಿಪ್ರತಿಷ್ಠಾಪನೆಯ" ಸಂಕೇತವಿರಬೇಕು. ಉತ್ತರಕ್ಕೂ ದಕ್ಷಿಣಕ್ಕೂ ಇದು ಭಾರ್ಗವರ ವಿಜಯಧ್ವಜವಾದೀತು! ಈ ಜಮದಗ್ನಿಯನ್ನೂ, ಭಾರ್ಗವರನ್ನೂ ಇನ್ನು ಬಲಿಯ ಬಿಡಬಾರದು!" —ಇದು ಕಾರ್ತವೀರ್ಯಾರ್ಜುನನ ದೃಢ ಚಿಂತನೆಯ ದಿಕ್ಕಾಗಿತ್ತು.

ಆಶ್ರಮ ಸಮೀಪಿಸಲು ಇನ್ನೊಂದು ದಿನ ಉಳಿದಿತ್ತು. ಸಹಸ್ರಾರ್ಜುನ ತನ್ನ ತಂತ್ರವನ್ನು ಕೊನೆಯದಾಗಿ ರೂಪಿಸಲು ಚಿಂತಿಸಿದ. "ಈ ಭಾರ್ಗವರಿಗೆ ಅಥರ್ವನೂ ಒಬ್ಬ ಮೂಲ ಪುರುಷ. ಅಥರ್ವನಿಗೆ ಆಭಿಚಾರಕ ಕೃತ್ಯಗಳು ವಶವಾಗಿದ್ದವೆಂದು ಕೇಳಿದ್ದೇವೆ. ಅವು ಯಾವುವೆಂಬುದು ನಮಗೆ ಪ್ರಸಿದ್ಧವಿಲ್ಲ. ಅಗ್ನಿಯನ್ನು ಸ್ವರ್ಗದಿಂದ ಭೂಲೋಕಕ್ಕೆ ತಂದವನೆಂಬ ಕಟ್ಟುಕಥೆಯ ಸತ್ಯವನ್ನು ಈಗ ಪರೀಕ್ಷಿಸುತ್ತೇನೆ. ಸೂರ್ಯನ ಪಥವಿಸ್ತರಣೆ ಇವನಿಂದ ಆಯಿತೆಂದು ವೇದದಲ್ಲಿ ಕಲ್ಪಿಸಿದವರೂ ಇವರೇ! ಎಂಥ ಮೋಸ ? ಇದು ಸಂಭವವೇ ? ವರುಣದೇವ ಈ ಭಾರ್ಗವನಿಗೆ ಒಂದು ಕಾಮಧೇನುವನ್ನು ಕೊಟ್ಟಿರುವನಂತೆ? ಅದೂ ನಿಜವೇ ? ಕೇಳಿ

ದ್ದನ್ನೆಲ್ಲ ಅದು ಕೊಡುವುದೆಂಬುದು ನಿಜವೇ? ನಿಜವಾಗಿದ್ದರೆ ಅದು ಅರಸನಾದ ತನ್ನಲ್ಲಿರಬೇಕೋ, ಬಡ, ಕುಟಿಲ ಬ್ರಾಹ್ಮಣನಲ್ಲಿ ಅದು ಇರಬೇಕೋ? ನಿರ್ಣಯಿಸುವವನು ತಾನೇ ಅಲ್ಲವೇ? ಇವರಲ್ಲಿ "ಮಧುವಿದ್ಯೆ" ಎಂಬುದೊಂದು ಇದೆಯಂತೆ? ಹೌದೇ? ಸತ್ತವರನ್ನು ಬದುಕಿಸುವುದೆಂಬ ಖ್ಯಾತಿಯು ಇದೂ ಮೋಸವೇ ಇರಬೇಕು! 'ಮಧು'ಎಂದರೆ ಹೆಂಡ. ಅದರ ಹೆಸರಿನ ವಾಮಾಚಾರ ಇದಾಗಿರಬೇಕು, ಮಾತ್ರ! ಒಳ್ಳೆಯದು. ಇದನ್ನೆಲ್ಲ ಈಗ ಪರೀಕ್ಷಿಸಿಯೇ ಬಿಡುವಾ" ಎಂದುಕೊಂಡು, ಆ ಕೊನೆಯ ಪ್ರಾತಃಕಾಲ ಸಹಸ್ರಾರ್ಜುನ ಹೊರಟು, ಮಧ್ಯಾಹ್ನಕ್ಕೆ ದಣಿದು ಆಶ್ರಮದ ಬಾಗಿಲಲ್ಲಿ ಕಾಣಿಸಿಕೊಂಡ. ಸೈನ್ಯದ ದೊಡ್ಡಭಾಗ, ಮೂರು ಹರಿದಾರಿದೂರದಲ್ಲೇ ಉಳಿದಿತ್ತು.

---

# ೧೦ ಸಹಸ್ರಾರ್ಜುನನ ವಧೆ

ಜಮದಗ್ನಿಗಳು ದರ್ಭಾಸೀನರಾಗಿ ಅಗ್ನ್ಯುಪಾಸನೆಯಲ್ಲಿ ತೊಡಗಿ! ದ್ದರು. ರಾಮನನ್ನು ಬೇಕೆಂದೇ ಸಮಿತ್ತು, ದರ್ಭೆ, ಪುಷ್ಪ, ತುಳಸೀದಳ ಗಳನ್ನು ತರಲು ಬೆಳಿಗ್ಗೆಯೇ ಕಳುಹಿದ್ದರು. ರಾಮನಿಗೆ ಸಹಸ್ರಾರ್ಜುನ ಬರುವ ವಿಷಯ ತಿಳಿದಿತ್ತು. ಈ ಆಪತ್ಕಾಲದಲ್ಲಿ ತಂದೆಯನ್ನು ಬಿಟ್ಟು ಹೊರಗೆ ಹೋಗಲು ಇಷ್ಟವಿಲ್ಲದಿದ್ದರೂ, ಮಹಾಪಿತೃಭಕ್ತನಾದ ರಾಮ, ಆಜ್ಞೆಯನ್ನು ಮೀರಲಾರದೇ, ಇಪ್ಪತ್ತು – ಇಪ್ಪತ್ತೈದು ತನ್ನ ಅನುಚರರೊಡನೆ ಅಡವಿಗೆ ನಡೆದಿದ್ದ. ಸೂರ್ಯ ನಡುನೆತ್ತಿಗೆ ಬಂದಿದ್ದರೂ ರಾಮ ಇನ್ನೂ ಆಶ್ರಮಕ್ಕೆ ಮರಳಿ ಬಂದಿರಲಿಲ್ಲ.

ಇತ್ತ ಆಶ್ರಮದ ಬಾಗಿಲಲ್ಲಿ ಸಹಸ್ರಾರ್ಜುನ ಕಾಣಿಸಿಕೊಂಡಿದ್ದ. ಜಮದಗ್ನಿಶಿಷ್ಯರು - ವತ್ಸ, ದಾರ್ಭಿ, ನಾಲಾಯನ, ವಾಗಾಯನ, ಅಮೃತ ಭಾಗಾರ್ತ, ಮೊಂಡೂಕೇಯಿ, ಸೌಥಮಗೌರಿ, ಚಾಣೂಕೇಯ, ಮೂಲಾಯನ, ಆರ್ಕಾಯಣ, ಕಾಹ್ಲಾಯನ ಮೊದಲಾದ ನೂರಾರು ಜನ ಅರ್ಜುನನನ್ನು ವೇದೋಕ್ತ ಮಂತ್ರಗಳಿಂದ, ಪೂರ್ಣಕುಂಭದೊಡನೆ ಸ್ವಾಗತಿಸಿದರು !

ಪೂರ್ವಸಿದ್ಧತೆಯಿರುವಂತೆ ಕಂಡ ಈ ದೃಶ್ಯದಿಂದ ಅರ್ಜುನ ಬೆಚ್ಚಿದ ! ಮಹರ್ಷಿಗೆ ತಾನು ಬರುತ್ತಿರುವುದು ತಿಳಿದಿದೆ ಎಂದು ಸ್ಪಷ್ಟ ವಾಗಿ, ಕೊಂಚ ಆತ್ಮಶೋಧಕ್ಕೆ ಇಳಿದು, ತನ್ನ ಮುಂದಿನ ಕಾರ್ಯದ ಬಗೆಗೆ ಹಿಂಜರಿದ.

ಅವನಿಗೂ, ಅವನ ನೂರಾರು ಆಪ್ತ ಅನುಚರರೂ, ಅಂಗರಕ್ಷಕರೂ, ಸೇನಾಪತಿ, ಮಂತ್ರಿ, ಅವರ ಸೇವಕರೂ ಸೇರಿಕೊಂಡು ಸಾವಿರಾರು ಜನರಿಗೆ, ಆಶ್ರಮದಲ್ಲಿ ಒಳ್ಳೆಯ ಬೀಡಾರ ಸಿದ್ಧವಾಗಿದ್ದನ್ನು ಕಂಡು ಮತ್ತೆ ಚಕಿತನಾದ !

"ಮಹರ್ಷಿಗಳನ್ನು ಮೊದಲು ಸಂದರ್ಶಿಸಬೇಕು" ಎಂದು ಚಪಡಪಡಿಸಿದ. ಹಿರಿಯ ಶಿಷ್ಯನೂ, ಆಶ್ರಮದ ಉಸ್ತುವಾರಿಯನ್ನು ಗಮನಿಸುವವನೂ ಆದ ಅಮೃತಭಾಗಾರ್ತ "ದೊರೆಯೇ, ಮೊದಲು ಆತಿಥ್ಯ ಸ್ವೀಕರಿಸೋಣವಾಗಲಿ. ಆಮೇಲೆ ವಿಶ್ರಾಂತಿ. ಮಧ್ಯಾಹ್ನದ ವೇಳೆಗೆ ಗುರುಗಳು ದರ್ಶನಕೊಡುತ್ತಾರೆ" ಎಂದು ಬಿನ್ನವಿಸಿದ. ರಾಜ 'ಅಸ್ತು' ಎಂದ

ಆತಿಥ್ಯ ಅದ್ಭುತವಾಗಿ ನಡೆಯಿತು ! ಕಾರ್ತವೀರ್ಯ ಈ ಮೊದಲು ಅರಮನೆಯಲ್ಲೂ ಉಂಡಿರದ ಬಗೆಬಗೆಯ ಭಕ್ಷ್ಯಭೋಜ್ಯಗಳು, ನಾನಾ ಬಗೆಯ ಪಾನೀಯಗಳು, ವನ್ಯಪ್ರಾಣಿಗಳ ಮಾಂಸಗಳು (ರಾಜಸನಾದ ರಾಜನಿಗಾಗಿ ಸಿದ್ಧಪಡಿಸಿದ ರಾಜಸಾಹಾರ !), ಇವು ದೊರೆಯನ್ನು ಸ್ತಂಭೀಭೂತನನ್ನಾಗಿಸಿದುವು. ಅವರ ಶಿಬಿರಗಳು ಅರಮನೆಯ ಭಾಗಗಳಾಗಿಯೇ ಕಂಡವು. ಉಂಡು ವಿಶ್ರಾಂತರಾಗುವ ವೇಳೆಗೆ ನಾನಾ ಅಪ್ಸರೆಯರ ನೃತ್ಯ, ಗಂಧರ್ವರ ಗಾನ, ವಾದ್ಯವಿಶೇಷಗಳ ಸಂಗೀತ, ದೊರೆಯ ಪರಿವಾರದವರೆಲ್ಲರ ಮನ ಸೂರೆಗೊಂಡಿತು !

ಕಾರ್ತವೀರ್ಯನಿಗೆ ಈಗ ಇದೆಲ್ಲ ತನ್ನ ಅಪಮಾನಕ್ಕಾಗಿಯೇ ಎರವಲು ತಂದು ನಡೆಸಿದ ಆತಿಥ್ಯ ! ಎನಿಸಿತು. ಬಳಿಯಿದ್ದ ಆಶ್ರಮದ ಶಿಷ್ಯ—ಚಾಣೂಕೇಯನ್ನು ಕೇಳಿದ; "ಅಯ್ಯಾ ! ಈ ಅತಿಥ್ಯ ನಡೆಸಲು ಆಹಾರ ಸಾಮಗ್ರಿಗಳನ್ನು ಎಷ್ಟು ವರ್ಷದಿಂದ ಕೂಡಿಹಾಕಿದ್ದಿರಿ ? ನಾವು ಬರು

ವುದು ನಿಮಗೆ ಮೊದಲೇ ಗೊತ್ತಿರುವಂತಿದೆಯಲ್ಲವೆ ? ಮಾಹಿತಿ ಕೊಟ್ಟವರಾರು ?"

ಆಶ್ರಮ ಶಿಷ್ಯ : "ದೊರೆಯೇ ! ಇವು ಕೂಡಿಹಾಕಿದ ದ್ರವ್ಯಗಳಿಂದ ನಡೆಸಿದ ಔತಣವಲ್ಲ ! ತಮ್ಮ ಬರವು ನಮಗೆ ತಿಳಿಯಲು ಋಷಿಗಳಿಗೆ ತಪಸ್ಸಿದೆ !"

ಅರ್ಜುನ ; "ನಮ್ಮ ಅರಮನೆಯಲ್ಲೂ ದೊರೆಯದ ಪದಾರ್ಥಗಳು ನಿಮಗೆ ದೊರೆತದ್ದು ಹೇಗೆ ?"

ಶಿಷ್ಯ ; "ಅರಮನೆಯಲ್ಲಿ ದೊರೆಯದವು ಬೇರೆಡೆ ಎಲ್ಲೂ ದೊರಕಬಾರದೆಂಬ ನಿಯಮವಿದೆಯೇ, ಅರಸರೇ ?"

ಅರ್ಜುನ : "ಹಾಗೆಂದರೇನು ?"

ಶಿಷ್ಯ : "ಅರಮನೆಯಲ್ಲಿ ನಿಮಗೆ ನೆಮ್ಮದಿ ಇಲ್ಲವೆನ್ನಿ! ಆಶ್ರಮದಲ್ಲಿ ಅದು ಸಮೃದ್ಧಿಯಾಗಿದ್ದರೆ ಆಶ್ಚರ್ಯವೇನು ?"

ಅರ್ಜುನ : "ಮೂಢ ಬ್ರಾಹ್ಮಣ ! ರಾಜನು ಭಗವಾನ್ ಇಂದ್ರ, ವರುಣ, ಯಮ, ಅಗ್ನಿ, ಕುಬೇರಾದಿ ದೇವತೆಗಳ ವಾಸಸ್ಥಾನವೆಂದೂ, ಸಾಕ್ಷಾತ್ ವಿಷ್ಣುವಿನ ಅಂಶವೇ ಅವನಲ್ಲಿ ಉಂಟೆಂದೂ, ಶಾಸ್ತ್ರಗಳೇ ಹೇಳುವಾಗ, ಅವನಿಗೂ ದೊರಕದ ವಸ್ತು ಬೇರೆಡೆ ಇರವುದೆಂದರೇನು ?"

ಶಿಷ್ಯ : "ನಿಮ್ಮ ಪ್ರಶ್ನೆಯ ಆಶಯ, ಇಂಗಿತ, ತಿಳಿಯಲಿಲ್ಲ ! ಪ್ರಭು !! ನಿಮಗೆ ದೊರಕದವು ಆಶ್ರಮದಲ್ಲಿದ್ದರೆ, ಇದು ದೇವತೆಗಳ ಪಕ್ಷಪಾತವೆಂದು ನಿಮ್ಮ ಭಾವನೆಯೇ ! ಅಥವಾ ಅವು ಹಾಗೆ ಅನ್ಯತ್ರ ದೊರೆಯಬಾರದೆಂಬುದೇ ನಿಮ್ಮ ಇಷ್ಟವೇ ? ಅಥವಾ ಆಶ್ರಮಗಳೂ ಆಶ್ರಮವಾಸಿಗಳೂ ನಿಮ್ಮ ಅಧೀನದಲ್ಲಿರಬೇಕೆಂಬುದು ನಿಮ್ಮ ಬಯಕೆಯೇ ? ಸ್ಪಷ್ಟವಾಗಿ ಬಾಯಿಬಿಟ್ಟುಹೇಳಿ !"

ಅರ್ಜುನ : "ಎಲೋ ಬ್ರಾಹ್ಮಣವಟುವೇ ! ಯಾರೊಡನೆ ಮಾತಾಡುತ್ತಿರುವೆಯೆಂಬ ಪ್ರಜ್ಞೆ ಇರಲಿ ! ಕೇಳಿದಷ್ಟಕ್ಕೆ ಉತ್ತರಿಸು. ಇಲ್ಲವಾದರೆ ನಿಮ್ಮ ಕುಲಪತಿಯನ್ನು ಇಲ್ಲಿ ಬರಮಾಡು ! ಸ್ವಯಂ ಚಕ್ರವರ್ತಿಯೇ ಇತ್ತ ಬಂದರೆ, ಇನ್ನೂ ಕಾಣಿಸಿಕೊಳ್ಳದಷ್ಟು ಸೊಕ್ಕೇ ಅವರಿಗೆ ?"

ಮಾಂಡೂಕೇಯನೆಂಬ ಇನ್ನೊಬ್ಬ ಶಿಷ್ಯ ಈಗ ಮುಂದೆ ಬಂದು ಉತ್ತರಿಸುತ್ತಾನೆ :

ಮಾಂಡೂಕೇಯ ; "ದೊರೆಯೇ ! ನೀವು ಕೇಳಿದ್ದಕ್ಕೆ ಉತ್ತರಿಸಿ ಆಗಿದೆ– ಕೂಡಿಹಾಕಿದ ದ್ರವ್ಯಗಳಿಂದ ನಿಮಗೆ ಆತಿಥ್ಯವಾಗಲಿಲ್ಲ, ಎಂದು. ವೃಥಾ ಕೋಪವೇಕೆ ? ನೀವು ನಮ್ಮ ಅತಿಥಿ ಹೌದು. ಆದರೆ ಆಶ್ರಮಕ್ಕೆ ಅದರದೇ ಗಾಂಭೀರ್ಯ, ಮರ್ಯಾದೆ, ಕಟ್ಟಳೆ ಇರುತ್ತದೆ. ಬರುವ ಅತಿಥಿ ತಾನಾಗಿಯೇ ಕುಲಪತಿಯ ಬಳಿ, ಸಮಯನೋಡಿ ಹೋಗಿ ನಮಸ್ಕರಿಸಿ ಬರಬೇಕು. ಬಾಗಿಲಲ್ಲಿ ಬಂದು ಅವರು ದರ್ಶನ ಕೊಡುವುದಿಲ್ಲ. ನಾವೆಲ್ಲ ಪದ್ಧತಿಯಂತೆಯೇ ಸ್ವಾಗತಿಸಿ ಗೌರವಿಸಿದ್ದೇವೆಯಲ್ಲವೆ ? ಆತಿಥ್ಯದಲ್ಲಿ ಲೋಪದೋಷವಿರಲಿಲ್ಲವಷ್ಟೇ ?" ಕಾರ್ತವೀರ್ಯನಿಗೆ ಬಾಯಿಕಟ್ಟಿತು ! ಅದಕ್ಕೂ ಕೋಪವೊಂದು ಉಕ್ಕಿತು !! ಮತ್ತೆ ಆರಂಭಿಸಿದ.

ರಾಜಾ : "ನನ್ನ ಕುತೂಹಲಕ್ಕಾಗಿ ಈ ಸಿದ್ಧತೆ ಹೇಗೆ ನಡೆಯಿತೆಂದು ಕೇಳಿದೆ. ಕೇಳಿದಷ್ಟಕ್ಕೆ ಉತ್ತರಿಸಿದೆ ಆ ವಟು ಏನೇನನ್ನೋ ಹೇಳುತ್ತಿದ್ದಾನೆ ! ರಾಜಾವಮಾನಕ್ಕೆ ನೀವು ಹಾತೊರೆಯುವಂತೆ ಇದು ಕಾಣದೇ ?

ಈಗ ದಾರ್ಭಿ ಮುಂದೆ ಬಂದು ಹೇಳುತ್ತಾನೆ ;

ದಾರ್ಭಿ : "ದೊರೆಯೇ ! ನಿಮ್ಮ ಕುತೂಹಲಗಳೂ ಎಷ್ಟೋ ಇರುತ್ತವೆ ! ಹೌದು ! ದೇವರಹಸ್ಯಗಳೂ ಎಷ್ಟೋ ಇರುತ್ತವೆ.

ಹೇಳಬಾರದವೂ ಉಂಟು. ಹೇಳಿದರೂ ತಿಳಿಯದವೂ ಉಂಟು. ಕೋಪಿಸ ಬಾರದು ! ಪ್ರಶ್ನಿಸುವವನಿಗೆ ತಿಳಿದುಕೊಳ್ಳುವ ಯೋಗ್ಯತೆಯೂ ಇರಬೇಕಾದುದು ಯುಕ್ತ. ಇಲ್ಲವಾದರೆ, ಪ್ರಶ್ನೆಗಳು ಮೇಲೆ ಮೇಲೆ ಬೆಳೆಯುತ್ತಾ ಯಾವ ಪುರುಷಾರ್ಥವನ್ನೂ ಅವು ಸಾಧಿಸಲಾರವು. 'ಆಕಾಶವು ಹೇಗೆ ನಿಂತಿದೆ ?' ಎನ್ನುವವರಿಗೆ 'ದೇವರ ಸಂಕಲ್ಪದಿಂದ' ಎಂದುತ್ತರಿಸಿದರೆ. 'ಸಂಕಲ್ಪವೆಂದರೇನು ?' ಎಂಬ ಪ್ರಶ್ನೆಯೂ, 'ಹಾಗೆಂದರೇನು ?' ಎಂಬುದಕ್ಕೆ, 'ಈಶ್ವರ ಸ್ವಭಾವ' ವಿವರಣೆಯೂ, ಹೀಗೆ ಮುಂದುವರಿದು, ಪ್ರಶ್ನಿಸುವವನು ಕೊನೆಯಲ್ಲಿ 'ನನಗೆ ದೇವರಲ್ಲಿ ನಂಬಿಕೆ ಇಲ್ಲ' ಎಂದು ಮುಗಿಸಿದರೆ ಆಗ ಪ್ರಶ್ನೋತ್ತರಗಳೆಲ್ಲ ವ್ಯರ್ಥವಾಗ ಲಾಗವೇ ? ಪ್ರಶ್ನೆ ಕೇಳುವವನಿಗೂ ದೃಢವಾದ ಸತ್ಯದ ಕೆಲವು ಗ್ರಹಿಕೆ ಗಳಿರಬೇಕಾದುದು ನ್ಯಾಯ."

ರಾಜಾ : (ಕೋಪವನ್ನು ಪ್ರಕಟಿಸಿ) "ಅಯ್ಯಾ ! ಮಹಾಬುದ್ಧಿ ಶಾಲಿಯೇ ! ನೀವು ಅನ್ನಸಂಗ್ರಹಮಾಡಿದುದು ಹೇಗೆಂಬುದು ದೇವರಹಸ್ಯವೋ ? ದೊರೆಯಾದವನಿಗೆ ಅನ್ನಸಂಗ್ರಹರೀತಿಯನ್ನು ಅರಿಯುವ ಯೋಗ್ಯತೆ ಇಲ್ಲವೆನ್ನುವೆಯೋ ? ಅರಣ್ಯವಾಸಿಗಳಾದ ಬಡತಾಪಸರಿಗೆ ತಿಳಿದ ಒಂದು ಈ ರೀತಿ. ನನಗೆ ತಿಳಿಯಲಾರದೆನ್ನು ವೆಯಾ ? ಇದೆಲ್ಲ ಬ್ರಾಹ್ಮಣರ ಕುಚೋದ್ಯವಲ್ಲವೇ ? ದೊರೆಯನ್ನು ಸಿಟ್ಟಿ ಗೆಬ್ಬಿಸುವುದರಿಂದ ಆಶ್ರಮಕ್ಕೆ ಒಳ್ಳೆಯದಾಗಲಾರದು ! ಎಚ್ಚರಿಕೆ !!"

ವತ್ಸನೆಂಬ ಶಿಷ್ಯ ಈಗ ಮುಂದೆ ಬರುತ್ತಾನೆ ;

ವತ್ಸ ; "ದೊರೆಗಳು ಸಿಟ್ಟಿಗೆದ್ದು ಬೆದರಿಕೆ ಹಾಕುವುದರಿಂದ ಏನೂ ಪ್ರಯೋಜನವಾಗಲಾರದು ! ಆಶ್ರಮವಾಸಿಗಳು ರಾಜಾಶ್ರಯದ ಓಲೆಕಾರರಲ್ಲ ! ಅನ್ನಸಂಗ್ರಹದಲ್ಲಿ ದೇವರಹಸ್ಯ ನಿಜವಾಗಿ ಉಂಟು. ಅಪಾತ್ರರಿಗೆ ಅರುಹುವ ವಿಷಯ ಅದಲ್ಲ ! ತಾಪಸರು ಬಡವರೆಂದು

ತೋರಿದರೂ, ತಪಸ್ಸು ಏನನ್ನೂ ಸೃಷ್ಟಿಸೀತು !! ಕ್ಷತ್ರಿಯನನ್ನೇ ಸೃಷ್ಟಿಸುವ ತಪಸ್ಸು ಏನನ್ನು ಸೃಷ್ಟಿಮಾಡದು ? ದೊರೆಗಳಿಗೆ ಸಿಟ್ಟಿಗೆ ಬೇರೆಯೇ ಕಾರಣವಿರಬೇಕು ? ಇಲ್ಲವಾದರೆ ನಿಮ್ಮ ರಾಜ್ಯದ ನಿಮ್ಮ ಎಲ್ಲ ಸೈನ್ಯವನ್ನೂ ಇಲ್ಲಿಗೆ ತಂದಿರುವಿರೇಕೆ ? ಮೂರು ಹರಿದಾರಿದೂರದಲ್ಲಿ ನಿಲ್ಲಿಸಿರುವಿರೇಕೆ ? ಆಶ್ರಮದ ನಿಯಮಗಳನ್ನು ಉಲ್ಲಂಘಿಸಿ, ಹೀಗೆ ಬೆದರಿಕೆಯ. ಅಗೌರವದ ಮಾತುಗಳನ್ನು ನಿಷ್ಕಾರಣವಾಗಿ ಆಡುತ್ತಿರುವಿರೇಕೆ ? ಕ್ಷತ್ರಿಯರು ಏನಿದ್ದರೂ ಇತರರಿಗೆ ಹಿರಿಯರು; ತಪಸ್ವಿಗಳಿಗಲ್ಲ ! ತಪಸ್ವಿಗಳ ರೀತಿ ನೀತಿಗಳ ಬಗ್ಗೆ ರಾಜ ಪ್ರಶ್ನಿಸಬಾರದು. ಅವರ ತಪಸ್ಸಿಲ್ಲದೆ ರಾಜ ರಾಜ್ಯವಾಳಲಾರ."

ರಾಜಾ : "ರಾಜನ ರಕ್ಷಣೆಯಿಲ್ಲದೆ ತಪಸ್ವಿಗಳೂ ನಿಶ್ಚಿಂತೆಯಿಂದ ತಪಸ್ಸುಮಾಡಲಾರರು ! ಎಲೋ ಮೂರ್ಖವಟುವೇ ? ಚೋಟುದ್ದದ ನೀವು ಒಬ್ಬ ಸಪ್ತದ್ವೀಪಾಧಿಪತಿಯಾದ ಚಕ್ರವರ್ತಿಗೆ ಹೀಗೆ ಮಾತಾಡುತ್ತಿದ್ದೀರೆಂದರೆ. ಇದೆಲ್ಲ ಪೂರ್ವಯೋಜಿತವಾದ ಅಪಮಾನದ ಸಂಚೇ ಇರಬೇಕಲ್ಲವೆ ?"

ಮಾಲಾಯನ ಮಾತನಾಡುತ್ತಾನೆ :

"ದೊರೆಯೇ, ನೀವು ಸಪ್ತದ್ವೀಪಾಧಿಪತಿಗಳು ಹೌದು; ಅದಕ್ಕೆ ಕಾರಣ ಎಂಟನೆಯ ದ್ವೀಪವೊಂದು ಇಲ್ಲವಾದುದರಿಂದ !! ಸಮಸ್ತಲೋಕಾಧಿಪತಿಯಾದ ಶ್ರೀಮಹಾವಿಷ್ಣುವು ಸರ್ವಮಾನ್ಯನಾಗಿರುವುದು ಅವನು ಪರಮಸಾತ್ತ್ವಿಕನಾದ ದೇವತಾಸಾರ್ವಭೌಮನಾದುದರಿಂದಲೇ ಹೊರತು, ಗರ್ವದಿಂದಲೂ ಕೇವಲ ಐಶ್ವರ್ಯದಿಂದಲೂ ಅಲ್ಲ, ಈ ಆಶ್ರಮದ ಮೂಲಪುರುಷರಾದ ಭೃಗುಗಳ ನಿರ್ಣಯ ಇದೇ. ಸರ್ವ ಋಷಿಗಳಿಗೂ ಇದು ಮಾನ್ಯವೂ ಆಗಿದೆ. ವಿಷ್ಣುವಿನ ಅಂಶಭೂತರೆಂದು ಹೇಳಿಕೊಳ್ಳುವ ನಿಮಗೆ ಈ ಸಾತ್ತ್ವಿಕಸ್ವಭಾವವೂ, ವಿನಯವೂ, ಆಶ್ರಮವಾಸಿಗಳ

ಬಗೆಗೆ ಗೌರವವೂ ಇಲ್ಲವಾದರೆ, ರಾಜ್ಯ, ಪದವಿಗಳು ಬಹುಕಾಲ ಉಳಿಯಲಾರವು !"

ದೊರೆ : "ದತ್ತಾತ್ರೇಯರ ವರಪ್ರಸಾದವಿರುವ ನನಗೆ ಈ ರೀತಿ ಬೆದರಿಸುವೆಯಾ ?"

ಮಾಲಾಯನ : "ವರಪ್ರಸಾದಗಳು ದೇಶಕಾಲಮಿತಿಯೊಳಗೆ ಇರುತ್ತವೆ. ಮಿತಿಮೀರಿದರೆ ವರಗಳು ಏನುಮಾಡುವುವು ? ಪ್ರಸಾದಕ್ಕೆ ಕಾಲ ತೀರಿದರೆ ವಿನಾಶ ಖಂಡಿತ, ಸಂನ್ನಿಹಿತ !"

ಕಾರ್ತವೀರ್ಯನಿಗೆ ಇನ್ನು ತಡೆಯಲಾಗಲಿಲ್ಲ ! "ಇವರನ್ನು ಬಂಧಿಸಿರಿ" ಎಂದಪ್ಪಣೆ ಮಾಡಿದೊಡದೆಯೇ ಅವನ ಭಟರು ಆಶ್ರಮವಾಸೀ ಶಿಷ್ಯರನ್ನೆಲ್ಲ ಬಂಧಿಸಿ, ಹೊಡೆಯಲಾರಂಭಿಸುತ್ತಾರೆ. ಸ್ತ್ರೀಯರು ಅಸಹಾಯಕರಾಗಿ ಕಣ್ಣೀರಿಟ್ಟು ಅಳುವ ದೃಶ್ಯ ದೊರೆಯ ಕಣ್ಣಿಗೇ ಬೀಳುತ್ತದೆ.

ಈ ಗಡಿಬಿಡಿಯಲ್ಲಿ ಜಮದಗ್ನಿಗಳು ಮೌನಮುರಿದು, ನಿಧಾನವಾಗಿ ನಡೆಯುತ್ತಾ ಸಹಸ್ರಾರ್ಜುನ ಇದ್ದೆಡೆಗೇ ಬರುತ್ತಾರೆ. ವೃದ್ಧ ಅಧ್ಯಾಪಕರು ಹಲವರು ಅವರ ಸುತ್ತ ಇರುತ್ತಾರೆ. ಆಶ್ರಮದ ಹೊಸ ಕ್ಷತ್ರಸಂತತಿಯ ಯೋಧರು ಖಡ್ಗಪಾಣಿಗಳಾಗಿ, ನಾನಾಶಸ್ತ್ರಧಾರಿಗಳಾಗಿ ದೊರೆಯ ಸೈನ್ಯವನ್ನು ಸುತ್ತುವರೆದು ನಿಂತು ಮಹರ್ಷಿಯ ಆಜ್ಞೆಯನ್ನು ಎದುರು ನೋಡುತ್ತಾ ನಿಲ್ಲುತ್ತಾರೆ !! ರಾಜನಿಗೆ ಅಚ್ಚರಿ ಆಗುತ್ತದೆ. ಕಪಟ ದಿಂದ ಜಮದಗ್ನಿಗಳ ಪಾದಗಳನ್ನು ಮುಟ್ಟಿ ನಮಸ್ಕರಿಸಲು ಮುಂದೆ ಬರುತ್ತಾನೆ.

ಜಮದಗ್ನಿ : "ರಾಜನ್ ! ಈ ಕಪಟವೆಲ್ಲ ಬೇಡ ! ನೀನು ಇಲ್ಲಿ ಏಕೆ ಬಂದೆಯೋ ಆ ಕೆಲಸವನ್ನಾರಂಭಿಸು. ನಾನು ಸಿದ್ಧನಿದ್ದೇನೆ."

ಸಹಸ್ರಾರ್ಜುನ ; "ನಾನು ಬಂದದ್ದು ತಮ್ಮ ಪಾದದರ್ಶನಕ್ಕಲ್ಲವೇ ?"

ಜಮದಗ್ನಿ ; "ದಾರಿಯುದ್ದಕ್ಕೂ ನೀನು ನಾನಾ ಋಷ್ಯಾಶ್ರಮಗಳನ್ನು ಲೂಟಿಮಾಡಿ, ಆಶ್ರಮಸ್ಥರನ್ನು ಹಿಂಸಿಸಿದ್ದು, ಈ ಪಾದದರ್ಶನಕ್ಕೆ ಪೂರ್ವಪೀಠಿಕೆಯೋ ?"

ಅರ್ಜುನ : (ಸಮಯ ಪ್ರಜ್ಞೆಯಿಂದ) ; "ದೊರೆಯನ್ನು ಗೌರವಿಸದೆ, ಚೋಟುದ್ದದ ಆಶ್ರಮವಟುಗಳು ಮನ ಬಂದಂತೆ ಮಾತಾಡುವುದು ಯಾವುದಕ್ಕೆ ಪೂರ್ವಪೀಠಿಕೆ ? ಗುರುಗಳೇ ? ನನ್ನನ್ನು ಜಗಳಕ್ಕೆಳೆಯುತ್ತಿರುವವರಾರು ?"

ಜಮದಗ್ನಿ : "ನೀನು ಯಾವ ಭಾವದಿಂದ ಇತ್ತ ಬಂದೆಯೋ ಅದರ ಫಲ ನಿನಗೆ ಸಿಗುತ್ತಿದೆ. ಹೇಳು ಆಶ್ರಮಗಳನ್ನು ಏಕೆ ಲೂಟಿ ಮಾಡಿದೆ ?"

ಅರ್ಜುನ : "ದೊರೆಯನ್ನು ಗೌರವಿಸದೇ ಇರುವವರಿಗೆ ಸಿಗಬೇಕಾದ ಫಲ ಅದು. ನೀವು ಅದನ್ನು ಲೂಟಿ ಎನ್ನುತ್ತಿರುವಿರಿ ! ತಪಸ್ವಿಗಳೂ ರಾಜನ ಆಳ್ವಿಕೆಗೆ ಒಳ ಪಟ್ಟವರಷ್ಟೇ ? ಶಿಕ್ಷೆ-ರಕ್ಷೆ ನನ್ನದಲ್ಲವೆ ? ಕೇಳಿದ್ದಕ್ಕೆ ಸರಿಯಾದ ಉತ್ತರ ಹೇಳದವರಿಗೂ ಶಿಕ್ಷೆ ಬೇಡವೆ ?"

ಜಮದಗ್ನಿ : "ಹಾಗೋ ! ಹಾಗಾದರೆ ನನ್ನನ್ನೂ ಬಂಧಿಸು !"

ಅರ್ಜುನ : "ಇದೆಂಥ ಮಾತು, ಗುರುಗಳೇ ! (ಭಟರಿಗೆ ಶಿಷ್ಯರ ಬಂಧನ ಬಿಡಿಸುವಂತೆ ಸನ್ನೆ ಮಾಡುತ್ತಾನೆ.) "ನಮಗಾದ ಔತಣಕ್ಕೆ ಸಾಮಗ್ರಿಗಳನ್ನು ಹೇಗೆ ಶೇಖರಿಸಿದಿರಿ ?" ಎಂದು ಕೇಳಿದ್ದೇ ತಪ್ಪೇ ?"

ಜಮದಗ್ನಿ ; "ಆಗಲಿ. ಆವರೆ ಉತ್ತರ ನಿನಗೆ ತಿಳಿಯಲಿಲ್ಲ. ಅಲ್ಲವೆ ? ನಾನೇ ಉತ್ತರಿಸುವೆ. ತಿಳಿಯುವುದೇ ನೋಡು. ಅದು ನಮ್ಮ ತಪೋಬಲ ರೂಪದ ಕಾಮಧೇನುವಿನ ಪ್ರಸಾದ. ಅದು ಏನನ್ನೂ ಸೃಷ್ಟಿಸಬಲ್ಲುದು. ಜಗದೀಶ್ವರನೂ ಸಹ ತಪಸ್ಸಿನಬಲದಿಂದಲೇ ಜಗತ್ತನ್ನು ಸೃಷ್ಟಿಸಿದನೆಂದು ಶ್ರುತಿ ಹೇಳುತ್ತದೆ. ಪೂರ್ವಸಿದ್ಧತೆ ಎಂಬುದೇ ಇಲ್ಲಿ ಅಧಿಕಪ್ರಸಂಗ ! **"ಕಿಗ್ಂ ಸ್ವಿತ್ ವನಂ ಕಿಮು ಸ ವೃಕ್ಷ ಆಸೀತ್ ?"** ಎಂದು ಶ್ರುತಿ ಕೇಳುವಾಗ ಜಗದೀಶ್ವರನನ್ನು ಬಡಗಿಗೆ ಹೋಲಿಸಿ, ಅವನು ಯಾವ ಕಾಡಿನ ಯಾವ ಮರದಿಂದ ಈ ಜಗತ್ತೆಂಬ ಆಟಿಕೆಯನ್ನು, ಸೃಷ್ಟಿಯನ್ನು ಮಾಡಿದನೆಂದು ಕೇಳಿದ ವೇದ ಪುರುಷ, "ಬ್ರಹ್ಮ ವನಂ ................" ಎನ್ನುತ್ತಾ, ಆ ಈಶ್ವರನನ್ನೇ ಮರವೆಂದೂ, ಕಾಡೆಂದೂ ವರ್ಣಿಸಿ, ಅವನನ್ನೇ ನಿಮಿತ್ತ ಕಾರಣ, ಉಪಾದಾನಕಾರಣವೆನ್ನುತ್ತದೆ ! ಏನು ತಿಳಿಯಿತು, ನಿನಗೆ ?"

ಅರ್ಜುನ : "ಈಶ್ವರನಷ್ಟು ಶಕ್ತಿ ನಿಮಗುಂಟೆಂಬ ಗರ್ವ ಇದರರ್ಥವೇ ?"

ಜಮದಗ್ನಿ : "ಇವೆಲ್ಲ ನಿನಗೇಕಯ್ಯಾ ! ನೀನು ಮಿತಿಮೀರಿ ಮಾತಾಡಿದರೆ, ನಾನೂ ಸಂಯಮ ಕಳೆದುಕೊಂಡು ಮಾತಾಡಬೇಕಾದ ನಿಯಮವಿಲ್ಲ. ನೀನು ಬಂದೆ. ಸ್ವಾಗತ ನಡೆಯಿತು ; ಆತಿಥ್ಯವೂ ಯಥೋಚಿತವಾಗಿ ಆಯಿತು ! ನಾವು ಹೇಗೆ ಆಹಾರ ಶೇಖರಿಸಿದೆವೆಂಬ ಕುತೂಹಲ ನಿನಗೇಕೆ ? ರಾಜ್ಯಕ್ಕೆ ನಡೆದು ರಾಜ್ಯಭಾರದ ಸ್ಥಿತಿಗತಿಯನ್ನು ನೋಡಬಾರದೇ ?"

ಅರ್ಜುನ : "ನನ್ನನ್ನು ಹೊರಗೆ ಹೋಗೆನ್ನುವ ಪರೋಕ್ಷ ಸೂಚನೆ ಇದಲ್ಲವೇ ? ತಪಸ್ವಿಗಳೇ ! ಇದು ಉದ್ದೇಶ್ಯಪೂರ್ವಕ ಅಗೌರವ ವಲ್ಲವೇ ?"

ಜಮದಗ್ನಿ : "ವ್ಯರ್ಥ ಕಾಲಹರಣದಲ್ಲಿ ನಮಗೆ ಇಷ್ಟವಿಲ್ಲ. ನಿನಗೆ ಅರಿಯಲು ಬಾರದ ವಿಷಯದಲ್ಲಿ ಪ್ರವೇಶ ಬೇಡ ಎಂದೆವು – ಅಷ್ಟೇ !"

ಅರ್ಜುನ : "ಹಾಗಲ್ಲ ! ಪೂರ್ವಸಿದ್ಧತೆ ಇಲ್ಲದೆ ಇಂಥ ಆತಿಥ್ಯ ಮಾಡುವ ಒಂದು ಶಕ್ತಿ ನಿಮಗಿರುವುದಾದರೆ, ಆ ಶಕ್ತಿ, ಅರಸಾದ ನನಗೆ ಅದು ಮತ್ತೆಷ್ಟು ಸಂಗ್ರಹಯೋಗ್ಯವಾಗಿರಬೇಡ ! ರಾಜ್ಯದ ದೃಷ್ಟಿಯಿಂದ ಅದರ ಸಂಪಾದನೆ ನನ್ನ ಹೊಣೆ ಆಗುವುದಿಲ್ಲವೇ ? ಈ ಕುತೂಹಲ ಹೇಗೆ ವ್ಯರ್ಥ ?"

ಜಮದಗ್ನಿ : (ನಸುನಕ್ಕು) "ಯಾರಿಗೆ ಯಾವ ಶಕ್ತಿ ಕೊಡಬೇಕೆಂಬುದು ಜಗದೀಶ್ವರನ ಇಚ್ಛೆ. ಆ ಇಚ್ಛೆಗೆ ಲೋಕಕಾರುಣ್ಯ, ಸಂರಕ್ಷಣದೀಕ್ಷೆಗಳು ಮಿತಿಯಾಗಿರುತ್ತವೆ. ಯಾವ ಪಶುಪಕ್ಷಿ ಪ್ರಾಣಿಗೂ, ಸ್ಥಾವರಗಳಿಗೂ ದೇವಾಸುರವರ್ಗದ ಜೀವಿಗಳಿಗೂ ಸಲ್ಲಬೇಕಾದುದಷ್ಟನ್ನೇ ಈಶ್ವರ ಕೊಡುತ್ತಾನೆ. ನನ್ನಂಥ ಆಶ್ರಮಸ್ಥನಿಗೆ ವರವಾದುದು ನಿನಗೆ ಶಾಪವಾಗಬಹುದು. ಆಲಕ್ಕೆ ಮಿಡಿಯನ್ನೂ, ಕುಂಬಳಬಳ್ಳಿಗೆ ಹಿಡಿಯಲಾರದ ಕಾಯನ್ನೂ ಕೊಟ್ಟು ಮೃಡ ದಡ್ಡನೇ ? ಕಥೆ ಕೇಳಿಲ್ಲವೇ ? ಆಲಕ್ಕೆ ಕುಂಬಳದಷ್ಟು ದೊಡ್ಡ ಹಣ್ಣಿದ್ದರೆ ನೆರಳಲ್ಲಿ ಮಲಗುವವರಿರುತ್ತಿದ್ದರೇ ? ಆ ನೆರಳೇ ವ್ಯರ್ಥವಾಗುತ್ತಿತ್ತಲ್ಲವೇ ? ಕುಂಬಳಬಳ್ಳಿಗೆ ನೆರಳುಂಟೇ ? ಹೇಳು."

ರಾಜಾ : "ನೀವು ಮಿಡಿಯೋ, ಕುಂಬಳವೋ ?"

ಜಮದಗ್ನಿ : "ಈ ಬಾಲಿಶಪ್ರಶ್ನೆಗೆ ನಾನು ಉತ್ತರಿಸಬೇಕಾದುದಿಲ್ಲ ?"

ರಾಜಾ : (ಕೋಪದಿಂದ) "ಎಲೋ ತಾಪಸಿ ! ನಿನ್ನ ಈ ಗುಟ್ಟನ್ನು ಹೇಳುವೆಯೋ ಇಲ್ಲವೋ ?"

ಜಮದಗ್ನಿ : "ಅದು ನನ್ನ ಕಾಮಧೇನುವೆಂದು ಆಗಲೇ ಹೇಳಿದೆನಲ್ಲ !"

ರಾಜಾ : "ಅದನ್ನು ನನಗೆ ಕೊಡು. ನಿನಗಿಂತ ಇಡೀ ರಾಷ್ಟ್ರಕ್ಕೆ ಅದು ಹೆಚ್ಚು ಅವಶ್ಯಕ."

ಜಮದಗ್ನಿ : "ಅದು ನನ್ನ ತಪಸ್ಸಿನ ಮೂರ್ತೀಭವಿಸಿದ ಗೋರೂಪ ! ನಾನು ಕೊಡಲೂ ಬಾರದು; ನೀನು ಸ್ವೀಕರಿಸಲೂ ಬಾರದು; ಅದು ಅಪ್ರಾಕೃತ ಶಕ್ತಿ."

ರಾಜಾ ; ಎಲೋ ! ಮೂರ್ಖ ತಪಸ್ವೀ ! ರಾಜನೇ ಹೇಳಿದರೂ ಪ್ರತಿಭಟಿಸುವೆಯಾ ?"

ಜಮದಗ್ನಿ ; "ನಾನು ಸತ್ಯವನ್ನೇ ಹೇಳಿದೆ. ಅದು ನಿನಗೆ ದಕ್ಕುವ, ವಶವಾಗುವ ಗೋವಲ್ಲ ! ನೀನದನ್ನು ಕಣ್ಣಿಂದಲೂ ಕಾಣಲಾರೆ ! ಮುಟ್ಟಲಾರೆ ! ಅದು ದೇವದತ್ತವಾದ ನನ್ನ ತಾಯಿ !"

ರಾಜಾ ; "ನೋಡುತ್ತಿರು" ಎಂದವನೇ, ಆಶ್ರಮದ ಗೋವುಗಳನ್ನೆಲ್ಲ ಹಿಡಿದು ತರುವಂತೆ ಭಟರಿಗೆ ಆಣತಿ ಇಡುತ್ತಾನೆ. ಒಂದೊಂದನ್ನೂ ಅವರು ಹಿಡಿದು ತರುತ್ತಾ ಬರುವ ದೃಶ್ಯ ಮಹರ್ಷಿಯ ಕಂಗಳಲ್ಲಿ ನೀರು ತರಿಸುತ್ತದೆ. ದೊರೆ ಒಂದೊಂದನ್ನೂ ಮುಂದೆ ನಿಲ್ಲಿಸಿ "ಹೇಳು, ನಿನ್ನ ಕಾಮಧೇನುವು ಇದೇಯೋ ?" ಎನ್ನುತ್ತಾ ಬರುತ್ತಾನೆ. ಮಹರ್ಷಿ ತಲೆಯಾಡಿಸಿ, "ಇವಾವುದೂ ಅಲ್ಲ, ನೀನದನ್ನು ಕಾಣಲಾರೆ" ಎಂದು ಚೀರುತ್ತಾನೆ. ಭಟರು ಜಮದಗ್ನಿಯನ್ನೂ ಬಂಧಿಸಿ ಒಂದು ಮರಕ್ಕೆ ಕಟ್ಟುತ್ತಾರೆ !! ಅರ್ಜುನನ ಅಪ್ಪಣೆಯಂತೆ, ಜಮದಗ್ನಿಯ ಬಾಯಿಬಿಡಿಸಲು, ಒಂದೊಂದಾಗಿ, ಅವನ ಒಂದೊಂದು ಗೋವೂ ಅವನೆದುರೇ ವಧಿಸಲ್ಪಡುತ್ತದೆ. "**ಮಾ ಗಾಂ ಅನಾಗಾಂ ಅದಿತಿಂ**

**ವಧಿಷ್ಟ**........" ("ರೋಗರಹಿತೆಯಾದ ಈ ಗೋಮಾತೆಯನ್ನು ಕೊಲ್ಲಬೇಡಿ") ಎಂದು ಮಹರ್ಷಿ ಮತ್ತೆಮತ್ತೆ ಚೀರುತ್ತಾನೆ.

ಒಂದೂ ಗೋವು ಉಳಿಯದಾದಾಗ, ಇನ್ನಷ್ಟು ಸಿಟ್ಟುಗೊಂಡು, ವಟುಗಳನ್ನೆಲ್ಲ ಭಟರು ಸಂಹರಿಸುತ್ತಾರೆ. ನಿಸ್ಸಹಾಯಕನಾದ ಜಮದಗ್ನಿ, ಬಾಯಿಬಿಡದೆ ಮೂರ್ಛಿತನಾದಾಗ ಸ್ವಯಂ ಸಹಸ್ರಾರ್ಜುನನೇ ಮಹರ್ಷಿಯನ್ನು ವಧಿಸಿ, ಸಿಟ್ಟು, ನಿರಾಶೆಗಳೊಡನೆ ಅಲ್ಲಿಂದ ಹೊರಡುತ್ತಾನೆ. !

* * *

ಸೂರ್ಯ ಮುಳುಗಲು ಒಂದೇ ಮುಹೂರ್ತ ಉಳಿದಿದ್ದಾಗ ಇದೆಲ್ಲ ನಡೆದು ಹೋಗಿತ್ತು ! ಸಹಸ್ರಾರ್ಜುನ ಆಶ್ರಮ ಧ್ವಂಸಮಾಡಿ ಹೊರಡುವುದಕ್ಕೂ, (ಪರಶು)ರಾಮ ಒಡನಾಡಿಗಳೊಡಗೂಡಿ ಬರುವುದಕ್ಕೂ ಸರಿಯಾಯಿತು ! ಆಶ್ರಮಸ್ತ್ರೀಯರ ಗೋಳಾಟ ಗಗನಮುಟ್ಟುತ್ತಿತ್ತು ! ರಾಮನ ಕಂಗಳಿಗೆ ಮೊದಲು ಕಂಡದ್ದು ತಂದೆಯ ತಲೆ ! ಆಶ್ರಮದ ಬಾಗಿಲಲ್ಲಿ ಅದನ್ನು ಬಿಸಾಡಲಾಗಿತ್ತು ! ಕ್ಷಣಮಾತ್ರದಲ್ಲಿ ರಾಮನಿಗೆ ನಡೆದುದೆಲ್ಲ ತಿಳಿಯಿತು ! ಗಂಡುಗೊಡಲಿಯನ್ನು ಬೀಸುತ್ತಾ ಏಕಾಏಕಿ ಅರ್ಜುನನ ಮೇಲೆರಗುತ್ತಾನೆ. ಅವನ ಅನುಚರರು ಮೂಕ ವಿಸ್ಮಿತರಾಗಿ ನೋಡುತ್ತಿರುವಂತೆಯೇ, ರಾಮನಿಗೂ ಅರ್ಜುನನಿಗೂ ಭಯಂಕರ ಯುದ್ಧವಾಗುತ್ತದೆ. ಆಶ್ರಮದ ಭಟರು ನಾನಾ ವಿಚಿತ್ರ ಶಸ್ತ್ರಾಸ್ತ್ರಗಳಿಂದ ಅರ್ಜುನನ ಸೈನ್ಯವನ್ನು ಧ್ವಂಸಮಾಡುತ್ತಾರೆ. ಅರ್ಜುನನ ಸಾವಿರ ತೋಳುಗಳೂ ಛಿನ್ನಭಿನ್ನವಾಗಿ ಕಡಿದು ಬಿದ್ದ ದೃಶ್ಯ ರಾಮನ ಪರಿವಾರದ ಸೈನ್ಯದ ಕಣ್ಣಿಗೆ ಭಾಸವಾಗುತ್ತದೆ. ಕೊನೆಯದಾಗಿ ರಾಮ ಅರ್ಜುನನ ಶಿರಸ್ಸನ್ನೂ ಕತ್ತರಿಸಿಹಾಕಿ:

"ಎಲೋ ದುಷ್ಟಕ್ಷತ್ರಿಯಪಿಂಡವೇ ? ಇನ್ನು ಈ ಭೂಮಿಯ ಸಮಸ್ತ ಕ್ಷತ್ರಿಯರನ್ನೂ ನಿರ್ನಾಮಮಾಡದಿದ್ದರೆ ನಾನು ರಾಮನಲ್ಲ ! ನನಗೆ ಸದ್ಗತಿಯಾಗದಿರಲಿ !! ನಾನು ವಿಷ್ಣುವೇ ಆಗಿದ್ದರೆ ಈ ಇಚ್ಛೆ ಕೈಗೂಡಲು ಯಾವ ಅಡ್ಡಿಯೂ ಇರದು" ಎನ್ನುತ್ತಾ ಸಮಸ್ತ ಕ್ಷತ್ರ ನಿರ್ಮೂಲನದ ಪ್ರತಿಜ್ಞೆ ಮಾಡುತ್ತಾನೆ. ಸ್ತ್ರೀಯರನ್ನು ಸಂತೈಸಿ, ಇತರ ಋಷ್ಯಾಶ್ರಮಗಳಿಗೆ ಅವರನ್ನು ರವಾನಿಸಿ ರಕ್ಷೆ ನೀಡುವ ಭಾರವನ್ನು ಆಶ್ರಮದ ಕ್ಷತ್ರದ ಹೊಸ ಪೀಳಿಗೆಯ ಬ್ರಾಹ್ಮಣರಿಗೆ ವಹಿಸಿ, ರಾಮ ಭೂಪ್ರದಕ್ಷಿಣೆಗೆ ಹೊರಟಿದ್ದಾನೆ. ಸ್ನೇಹಿತರು ಎಷ್ಟು ಹೇಳಿದರೂ ರಾಮನ ರೋಷ ಅಡಗುವುದಿಲ್ಲ:

"ತಾಯಿ ಸತ್ತಾಗ, ತಂದೆ ಸಂತೈಸಿದ ! ಈಗ ತಂದೆ ಸತ್ತಾಗ ನನ್ನನ್ನು ಸಂತೈಸುವವರಾರು ?" ಎಂದು ಗೋಳಿಡುತ್ತಾನೆ.

ಆಶ್ರಮದ ಗಿಡಮರಗಳೂ ದ್ರವ ಸುರಿಸಿ ಅನುಕಂಪ ತೋರಿಸುತ್ತ, ರಾಮನನ್ನು ಅನುಸರಿಸುವುದಾಗಿ ಹೇಳಿದ ಯಾವ ಸ್ನೇಹಿತನನ್ನೂ ರಾಮ ಕರೆದೊಯ್ಯುವುದಿಲ್ಲ. "ಅಸಹಾಯಶೂರನಲ್ಲವಾದರೆ ನಾನೇನು ವಿಷ್ಣು ವಾಗುವೆ ? ನಾನು ತೀರಿಸಬೇಕಾದ ಪಿತೃಋಣವನ್ನು ನೀವು ಹೇಗೆ ತೀರಿಸ ಬಲ್ಲಿರಿ ? ಭೂಮಿಯ ಕ್ಷತ್ರಿಯರ ರಕ್ತದಲ್ಲೇ ನನ್ನ ತಂದೆಗೆ ತರ್ಪಣ ಕೊಡುತ್ತೇನೆ. ಈ ಶ್ರಾದ್ಧವನ್ನು ಬೇಗ ಮುಗಿಸಬೇಕಾಗಿದೆ. ವಿರಾಮ ವೆಲ್ಲಿ ? ಮಿತ್ರರೇ ! ಇಂದಿನಿಂದ ನೀವಿಲ್ಲಿ ಹೊಸ ಕ್ಷತ್ರತತ್ತ್ವ ಬೀಜಗಳಾಗ ಬೇಕು. ನಾನು ಕೊಂದ ಅರಸರ ಪತ್ನಿಯರಲ್ಲಿ ಬೀಜಾವಾಪಮಾಡಿರಿ. ಮುಂದಿನ ಅರಸುಸಂತಾನವೆಲ್ಲ ಬ್ರಾಹ್ಮಣಮಯವಾಗಬೇಕು. ಜಗತ್ತೇ ಬ್ರಾಹ್ಮಣಮಯವಾಗಬೇಕು" ಎನ್ನುತ್ತಾ ಪರಶುರಾಮ ಇತರ ಕ್ಷತ್ರಿಯ ನಿರ್ಮೂಲನಕ್ಕೆ ಹೊರಟುಬಿಟ್ಟ.

* * *

ಅಗಸ್ತ್ಯರು ಉಜ್ಜಯಿನಿಗೆ ಬರುವಷ್ಟರಲ್ಲಿ ಇದೆಲ್ಲ ಘೋರ ಅನರ್ಥ ಆಗಿತ್ತು. ಭೃಗ್ವಾಶ್ರಮದ ಅನಾಥರು ನಾನಾ ದಿಕ್ಕುಗಳತ್ತ ಚದುರಿ ಈ ವಾರ್ತೆಯನ್ನು ಹಂಚುತ್ತಿದ್ದರು.

ಉತ್ತರಾಪಥದ. ಆರ್ಯಾವರ್ತದ, ಅರಸರನ್ನು ಹುರಿದುಂಬಿಸಿ, ಏಕೀಕರಿಸುವ ಅಗಸ್ತ್ಯರ ಸಂಕಲ್ಪಕ್ಕೆ ಹೀಗೆ ಅನಿರೀಕ್ಷಿತ ಕೊಡಲಿಯೇಟು ಬಿದ್ದು ಅಗಸ್ತ್ಯರು ಚಿಂತಾಮಗ್ನರಾದರು.

---

# ೧೧ ಅಗಸ್ತ್ಯರಿಗೆ ವಿಷ್ಣು ದರ್ಶನ

ಉಜ್ಜೈನಿಯ ದೊರೆ ವಿಶಾಲವರ್ಮ ಎಳೆ ವಯಸ್ಸಿನವನೇ ಆಗಿದ್ದು, ಅಗಸ್ತ್ಯರ ಶಿಷ್ಯನೂ ಆಗಿ, ಅವರ ಕಾರ್ಯಕ್ರಮಕ್ಕೆ ತುಂಬಾ ಉತ್ತೇಜನ ನೀಡುವವನಾಗಿದ್ದೂ ಮುಂದಡಿ ಇಡುವ ಮುಂಚೆಯೇ ಹೀಗೆ ಒಂದತ್ತ ಸಹಸ್ರಾರ್ಜುನನ ದುರ್ಮರಣವಾಗಿ ಅವನ ದುಸ್ಸಾಹಸದ ಫಲವಾಗಿ ಪರಶುರಾಮರು ಇಡೀ ಭರತಖಂಡದ ಕ್ಷತ್ರಿಯರನ್ನೆಲ್ಲ ಕೊಲ್ಲುವ ಪಣ ತೊಟ್ಟು ಹೊರಟಾಗಿತ್ತು ! ಈಗ ಅಗಸ್ತ್ಯರೇನು ಮಾಡಬೇಕು ? ಪರಶು ರಾಮರನ್ನು ಕಾಣುವುದೆಲ್ಲಿ ? ಭರತಖಂಡದ ದುಃಸ್ಥಿತಿಯನ್ನು ಅವರೊಡನೆ ಚರ್ಚಿಸುವುದೆಲ್ಲಿ ? ಸಪ್ತರ್ಷಿಗಳಲ್ಲಿ ಒಬ್ಬರು ಹೀಗೆ — ಜಮದಗ್ನಿಗಳು—ಹತರಾಗುವರೆಂದು ಯಾರು ಕಂಡಿದ್ದರು? ಉಳಿದವರು ಈಗೆಲ್ಲಿ ? ಒಬ್ಬೊಬ್ಬರು ಒಂದುಕಡೆ! ಕಶ್ಯಪರು ಕಾಶ್ಮೀರದಲ್ಲಿಯೂ, (ಆಗ ಅದು ಕಶ್ಯಪಮೇರ), ವಸಿಷ್ಠರು ಸರಯೂ ತೀರದಲ್ಲೂ, ಆಂಗೀರಸರು ಸಿಂಧೂ ತೀರದಲ್ಲೂ, ಅತ್ರಿಗಳು ಗಂಗಾ ತಟದಲ್ಲೂ, ಕಣ್ವರು ಕೃಷ್ಣಾ ತೀರದಲ್ಲೂ, ಕುತ್ಸರು ಸರಸ್ವತೀ ತಟದಲ್ಲೂ, ಗೌತಮರು ಹಿಮವತ್ ಪಾರ್ಶ್ವದಲ್ಲೂ ಇದ್ದರೆಂಬ ವದಂತಿ. ಕೆಲವು ವರ್ಷಗಳ ಹಿಂದೆಯಷ್ಟೆ ಅವರೆಲ್ಲ ಅಗಸ್ತ್ಯಾಶ್ರಮದಲ್ಲಿ ಸೇರಿದ್ದರೂ, ಹಾಗೆ ಮತ್ತೆ ಏಳೆಂಟು ವರ್ಷಗಳಿಗೊಮ್ಮೆ ಸೇರುವುದೇ ವಾಡಿಕೆಯಾಗಿತ್ತು, ಭೃಗುಕಚ್ಛದಲ್ಲಿ ನಡೆದ ಅನಾಹುತ ಇತರರಿಗೂ ತಿಳಿಯದೆಂದೇನಲ್ಲ! ಅಷ್ಟು ತಪಶ್ಶಕ್ತಿ ಅವರಿಗಿತ್ತು. ಅಗಸ್ತ್ಯರ ಗೂಢಚಾರರು ಎಲ್ಲಿಗಾದರೂ ಶೀಘ್ರವಾಗಿ ಸಮಾಚಾರ ತಲುಪಿಸ ಬಲ್ಲವರೂ ಆಗಿದ್ದರು. ಆದರೆ ಅಗಸ್ತ್ಯಭ್ರಾತಾ ಎನಿಸಿದ ಸೋಮಶ್ರವ ಈಗಿನ್ನೂ ತಮ್ಮ ಗೋದಾವರೀ ತೀರದಲ್ಲೇ ಆಶ್ರಮರಕ್ಷಣೆಗಾಗಿ ಇದ್ದು

ಟ್ಟಿದ್ದ ಅವಸು ಬಳಿಯಲ್ಲಿಲ್ಲದೆ ಆಗಸ್ತ್ಯರಿಗೆ ಕೈ ಮುರಿದಂತಿತ್ತು. ಅವನನ್ನು ಕರೆಸುವಂತೆಯೂ ಇರಲಿಲ್ಲಿ. ಈಗ ತಾವು ಉಜ್ಜೈನಿಯನ್ನು ಬಿಟ್ಟು ಮುಂದೆ ಎಲ್ಲಿಗೆ ಹೋಗುವುದು ? ಹೋದರೂ ಪ್ರಯೋಜನವೇನು ? ಪರಶುರಾಮರು ಕ್ಷತ್ರಿಯರನ್ನೆಲ್ಲ ಮುಗಿಸಿದರೆ, ತಮಗೆ ಉಳಿದ ಕೆಲಸವೇನು ?

ಅಗಸ್ತ್ಯರ ಮಾನುಷಪ್ರಜ್ಞೆಗೆ ಏನೂ ಎಟುಕಲಿಲ್ಲ, ವಿಶೇಷ ತಪಸ್ಸಿನಿಂದ ದೇವತಾ ವಿಶೇಷವನ್ನು ಪ್ರತ್ಯಕ್ಷ ಮಾಡಿಕೊಂಡು ಮುಂದಿನ ಕಾರ್ಯ ನಿಶ್ಚಯಿಸುವುದೊಂದೇ ಅವರಿಗೆ ಉಳಿಯಿತು.

ಅಂದಿನಿಂದ ನಲವತ್ತು ದಿನ ಕಾಲ ತಾವೊಂದು ವ್ರತದಲ್ಲಿರುವುದಾಗಿಯೂ, ಆಗ ಮೌನವೆಂದೂ, ದೊರೆ ಅವರ ಪರಿವಾರವನ್ನು ಚೆನ್ನಾಗಿ ರಕ್ಷಿಸಬೇಕೆಂದು ಆಜ್ಞೆ ಮಾಡಿ, ಆಗಸ್ತ್ಯರು ಅನ್ನಾಹಾರ ತೊರೆದು ಮಹಾಕಾಲಕಾಲೇಶ್ವರನ ಸಂನ್ನಿಧಿಯಲ್ಲಿ ಏಕಾಸನದಲ್ಲಿ ಧ್ಯಾನಾಸಕ್ತರಾಗಿ ಕುಳಿತರು.

**ತತ್ತದಿದಸ್ಯ ಪೌಂಸ್ಯಂ ಗೃಣೀಮಸೀನಸ್ಯ**
**ತ್ರಾತುರವೃಕಸ್ಯ ಮೀಢ್ಹುಷಃ ।**
**ಯಃ ಪಾರ್ಥಿವಾನಿ ತ್ರಿಭಿರಿದ್ವಿಗಾಮಭಿ**
**—ರುರುಕ್ರಮಿಷ್ಟೋರುಗಾಯಾಯ ಜೀವಸೇ ॥**

ಎಂಬ ಔಚಥ್ಯ ದೀರ್ಘತಮಸರ ಸೂಕ್ತದ ಮಂತ್ರವನ್ನು (ಈಗಿನ ಋಕ್ಸಂತೆ 1-155-4) ಅಗಸ್ತ್ಯರು ತಮ್ಮ ಧ್ಯಾನಗಮ್ಯ ಪರವಸ್ತುವಿನ ಉಪಾಸನೆಯ ಸಾಧನ ಮಂತ್ರವನ್ನಾಗಿ ಆರಿಸಿಕೊಂಡರು. "ವಿಶ್ವಕ್ಕೆ ಅಧಿಪತಿಯೂ, ನಮಗೆಲ್ಲ ರಕ್ಷಕನೂ, ನಮ್ಮನ್ನು ಹಿಂಸಿಸದವನೂ' ಮಹಾಸತ್ವಶಾಲಿಯೂ, ಯೌವನ ಭರಿತನೂ, ಪೃಥ್ವೀ ಮೊದಲಾದ ಮೂರು ಲೋಕಗಳನ್ನೂ ತನ್ನ ಮೂರು ಪಾದಗಳಿಂದ ಅಳೆದು, ಅದನ್ನೆಲ್ಲ ಸಂಚರಿಸಿ, ವಿಸ್ತರಿಸಿ ಯಾವನು ಆಕ್ರಮಿಸಿದನೋ, ಮತ್ತು ಈ ಕಾರಣ

ಕ್ಕಾಗಿ ಅನೇಕ ಮಹರ್ಷಿಗಳಿಂದ ಸ್ತೋತ್ರವಾಡಲ್ಪಟ್ಟನೋ, ಆ ವಿಷ್ಣುವಿನ ಗಂಡುತನದ (ಪೌರುಷ ದ್ಯೋತಕವಾದ) ಆ ದಿವ್ಯಪರಾಕ್ರಮಗಳನ್ನು ಕುರಿತು, ಲೋಕರಕ್ಷಣಾರ್ಥವಾಗಿ ಈಗ ಸ್ತುತಿಸುತ್ತೇವೆ" ಎಂಬುದು ಮಂತ್ರದ ದಿವ್ಯಾರ್ಥ

ಅಗಸ್ತ್ಯರ ಉಪಾಸನೆ ಇಪ್ಪತ್ತು ದಿನಗಳವರೆಗೆ ಒಂದೇ ಸಮನೆ ನಡೆಯಿತು. ಅವರ ಹೃದಯ ದಿಗಂತದಲ್ಲಿ ಮೊದಲು ಏನೂ ಗೋಚರವಾಗ ಲಿಲ್ಲ. ಯಾವ ಬದಲಾವಣೆಯೂ ಕಾಣಲಿಲ್ಲ. ಅವರ ಧ್ಯಾನದ ಕಣ್ಣು ದಿನೇ ದಿನೇ ಚುರುಕಾಗಿ, ಹೃದಯಾಕಾಶದ ಪೂರ್ವದಿಗಂತದಲ್ಲಿ ಆ ಧ್ಯಾನವಸ್ತು ವಿನ ಸ್ಫೂರ್ತಿಯನ್ನು ಎದುರು ನೋಡುತ್ತಾ ಸೂಕ್ಷ್ಮದಿಂದ, ಸೂಕ್ಷ್ಮತರವಾಗಿ, ಸೂಕ್ಷ್ಮತಮವಾಗಿ, ಹದವಾಗಿ ಕಾಯುತ್ತಾ ಇತ್ತು.

ಇಪ್ಪತ್ತೈದನೆಯ ದಿನ ಅವರ ಹೃದಯಾಕಾಶದ ಪೂರ್ವ ದಿಗ್ಭಾಗ ದಲ್ಲಿ ಒಂದು ಅಪೂರ್ವ ಅರುಣೋದಯವಾಯಿತು! ಆ ಮೋಹಕತೆಯನ್ನು ಅವರೆಂದೂ ಬಾಹ್ಯ ಅರುಣೋದಯದಲ್ಲಿ ಕಂಡಿರಲಿಲ್ಲ! ಅದು ಬರ ಬರುತ್ತಾ ಸಾಂದ್ರವಾಯಿತು. ಹಾಗೇ ಇನ್ನೂ ನಾಲ್ಕು ದಿನ ಕಳೆಯಿತು.

ನಲವತ್ತನೆಯ ದಿನ ಸಾಯಂ ಸಂಧ್ಯಾವೇಳೆ, ಅಗಸ್ತ್ಯರು ಏಕಾಸನ ದಲ್ಲೇ ಇರುತ್ತಾ, ಶರೀರದ ಎಲ್ಲ ಅನುಭವಗಳನ್ನು, ಉಸಿರಾಡುತ್ತಿರುವ ಪ್ರಜ್ಞೆಯನ್ನೂ ಮರೆತು, ಕೇವಲ ಆತ್ಮದ ಎತ್ತರದಲ್ಲಿ ಆ ಸರ್ವಭೂತಾಂತ ರಾತ್ಮನ ಇರುವಿಕೆಯನ್ನು ಅರಸುತ್ತಾ, ದೃಕ್‌ಪಥದಲ್ಲಿ ಅವನ ಆಗಮನವನ್ನೆದುರು ನೋಡುತ್ತಾ ಈಗ ಶ್ವಾಸೋಚ್ಛ್ವಾಸಗಳನ್ನು ನಿರೋಧಿಸುತ್ತಾ ಕುಳಿತರು.

ಅವರ ಉಪಾಸ್ಯಮೂರ್ತಿ ಆಗ ಗೋಚರವಾಗಿ, ಒಂದು ಅನಿರ್ವಚನೀಯವಾದ ಅಪ್ರಾಕೃತ ಯೌವನದ ಅನುಭವ, ಮಿಂಚಿನ

ವೇಗದಲ್ಲಿ ಅವರ ವ್ಯಕ್ತಿತ್ತ್ವದ ಪಂಚಕೋಶಗಳನ್ನೂ ವ್ಯಾಪಿಸಿತ್ತು. ದಿವ್ಯ ಪದ್ಮದಲ್ಲಿ ಆಸೀನನಾಗಿ, ಬಂಗಾರದ ಬೊಂಬೆಯಂತೆ ಥಳಥಳಿಸುವ ದಿವ್ಯ ಶರೀರವುಳ್ಳವನಾಗಿ, "ಆ ಪ್ರಣಖಾತ್ ಸ್ವರ್ಣ ಏವ" ಎಂದು ಶ್ರುತಿ ವರ್ಣಿಸುವಂತೆ. ಸುಂದರ ಪಂಕಜನೇತ್ರನಾಗಿ "ತಸ್ಯ ಯಥಾ ಕಪ್ಯಾಸಂ ಪುಂಡರೀಕಮಿವ ಅಕ್ಷಿಣೀ" ಎಂಬಂತೆ, ಆಗ ತಾನೇ ಸೂರ್ಯನ ಎಳೇ ಕಿರಣಗಳ ಬೆಳಕಿಗೆ ವಿಕಸಿತವಾದ ತಾವರೆಯು ಎಸಳಿನಂತೆ ನೀಳ ಕಂಗಳುಳ್ಳವನಾಗಿ, ಮಂದಸ್ಮಿತದೊಡನೆ, ಅವರ ಧ್ಯಾನಮೂರ್ತಿ ದರ್ಶನವಿತ್ತಿತ್ತು !! ಶಂಖಚಕ್ರಗದಾಪದ್ಮಗಳನ್ನು ಚತುರ್ಭುಜಗಳಲ್ಲೂ ಧರಿಸಿ, ಪೀತಾಂಬರಧರನಾದ ಆ ಭಕ್ತವತ್ಸಲನಿಗೆ ಅಗಸ್ತ್ಯರು ಸೂಕ್ಷ್ಮಶರೀರದಿಂದಲೇ ಸಾಷ್ಟಾಂಗ ಮಾಡಿ, ಪುಳಕಿತರಾಗಿ,ಅವನ ವದನಾರವಿಂದವನ್ನೇ ವೀಕ್ಷಿಸುತ್ತಾ ಭಗವಂತನ ವಾಣಿಯನ್ನೆದುರು ನೋಡುತ್ತಿರುತ್ತಾ, ಜನ್ಮಸಾರ್ಥಕ್ಯಭಾವವನ್ನು ಹೊಂದಿದರು.

ಆದರೂ ಆ ದಿವ್ಯಮೂರ್ತಿಯು ಅಗಸ್ತ್ಯರನ್ನು ಮಂದಸ್ಮಿತದಿಂದ ಸುಮ್ಮನೆ ನೋಡುತ್ತಿತ್ತೇ ವಿನಾ ಏನೂ ಹೇಳಲಿಲ್ಲ !

ಅಗಸ್ತ್ಯರು "ಆಸ್ಯ ಜಾನಂತೋ ನಾಮ ಚಿತ್ ವಿವಕ್ತನ" ಎಂಬ ಋಙ್ಮಂತ್ರಭಾಗವನ್ನು ನೆನೆದೊಡನೆಯೇ ಭಗವಂತನ ಸುತ್ತಲೂ ದಿವ್ಯ ಸೂರಿಗಳು ಆ ಹೃದಯಾಕಾಶ ದಿಗಂತದಲ್ಲಿ ಕಾಣಿಸಿಕೊಂಡು, ಭಗವಂತನನ್ನು ವಿವಿಧವಾಗಿ ಶ್ರಾವ್ಯವಾಗಿ ಅತ್ಯಪೂರ್ವವೇದಮಂತ್ರಗಳಿಂದ ಸ್ತುತಿಸಲಾರಂಭಿಸಿದರು. ಅಗಸ್ತ್ಯರ ಒಳಗಿವಿಗೆ ಗಡಚಿಕ್ಕುವ, ಕಂಠ ತುಂಬಿ, ಹೃದಯ ಶಿಥಿಲವಾಗೀ ಗದ್ಗದಧಾಗುವ ಅನುಭವ ಆಯಿತು.! "ಅನಂತಾ ವೈ ವೇದಾಃ" ಎಂದಾಗ. ಎಷ್ಟು ವೇದಮಂತ್ರಗಳು ನಷ್ಟವಾಗಿದ್ದುವೋ, ಆ ಪೈಕಿ ಈ ಮಂತ್ರಗಳು ಕೆಲವು ಇರಬಹುದೇ ! ಎಂದು ಅಗಸ್ತ್ಯರು ವಿಸ್ಮಿತರಾದರು !! ಅವರೆಂದೂ ಕೇಳದ ಆ ಮಂತ್ರಗಳ ಪರಿಣಾಮ

ಹಾಗಿತ್ತು. ಮತ್ತೇನೂ ಹೇಳತೋರದೆ "ಮಹಸ್ತೇ ವಿಷ್ಣೋ ಸುಮತಿಂ ಭಜಾಮಹೇ !" — "ಹೇ ಭಗರ್ವ ! ಸ್ವಾಮಿ, ವಿಷ್ಣುವೇ ! ನಿನ್ನ ಕೃಪೆಯನ್ನು ಎದುರು ನೋಡುತ್ತೇನೆ ! ನಿನ್ನ ಬಗೆಗಿನ ಆಳದ ಅನುಭವ, ಪ್ರೀತಿಯ ಅನುಭವ-ಇನ್ನಷ್ಟು-ನನಗಾಗಲಿ" ಎಂದು ಭಕ್ತಿಪೂರ್ವಕವಾಗಿ ಸ್ತುತಿಸಿದರು.

ಪ್ರೀತನಾದ ಭಗವಂತ, ಅಗಸ್ತ್ಯರ ಮಾನಸಾನುಭವದಲ್ಲಿ ಸಂಭಾಷಣೆ ಆರಂಭಿಸಿದ :

ವಿಷ್ಣು ; "ವತ್ಸ ! ಏಕೆ ಇಷ್ಟು ತೀವ್ರ ತಪಸ್ಸು ? ನನ್ನನ್ನು ಹೀಗೆಯೇ ಕಾಣಲು ಏಕೆ ಇಷ್ಟು ತವಕ? ನಿನ್ನ ಮಾನಸದಲ್ಲೇ ಸದಾ ವಾಸ ವಾಗಿರುವೆನಲ್ಲ !"

ಅಗಸ್ತ್ಯ ; "ಪ್ರಭು ! ನಿನ್ನನ್ನು ಬೇರೆ ಹೇಗೆ ಕಾಣಲಿ ? ಕೇವಲ ಹೃದ್ಗೋಚರನಾದರೆ ಸಾಕೆ ? ಈಗ ನನ್ನ ಕರ್ತವ್ಯವೇನು ? ನನ್ನ ಎಣಿಕೆ, ಪ್ರಜ್ಞೆ, ಚಿಂತನೆ ಎಲ್ಲ ಮುಗಿದಮೇಲೆ ನಿನ್ನನ್ನಲ್ಲದೆ ಬೇರಾರನ್ನು ನೆನೆಯಲಿ ? ರಕ್ಷಕ ಎಂದರೆ ನೀನೇ ಅಲ್ಲವೆ ?"

ಅಗಸ್ತ್ಯರ ಧ್ಯಾನಮೂರ್ತಿ ಇದ್ದಕ್ಕಿದ್ದಂತೆ ಪರಶುರಾಮರೂಪ ತಳೆಯಿತು ! ಅಗಸ್ತ್ಯರು ವಿಚಲಿತರಾಗದಿದ್ದರೂ, ಕಿಂಚಿತ್ ವಿಸ್ಮಿತರಾದರು!

ಅಗಸ್ತ್ಯ : "ತಿಳಿಯಿತು, ಪ್ರಭು ! ನೀನೀಗ ಈ ಭೂಮಂಡಲದಲ್ಲೇ ಪರಶುರಾಮರೂಪಿಯಾಗಿ ಅವತರಿಸಿರುವೆ. ಅದೀಗ ದೃಢವಾಯಿತು.!ನನ ಗೆ. ಆದರೆ ನಿನ್ನ ವೇಗಕ್ಕೆ ನಾನು ನಡೆಯಬಲ್ಲೆನೆ ? ಯಾವ ಅನ್ಯದೇವತೆಗೆ ತಾನೇ ಆ ಪಾದವಿಕ್ಷೇಪ ವೈಭವವುಂಟು ? ಈ ಅಗಸ್ತ್ಯನನ್ನು ನೀನು ಭೂಮಿಗೆ ಕಳುಹಿ ಉದ್ದೇಶಿಸಿದ ಕಾರ್ಯವನ್ನು ಅವನು ಈಗ ಹೇಗೆ ನಿರ್ವಹಿಸಿಯಾನು ? ನಾಟ್ಯಕಲಿಸಿ, ನೆಲವನ್ನೇ ನುಂಗಿ, 'ನಟನ ಮಾಡು'

ಎಂದಂತಿಲ್ಲವೆ. ನಿನ್ನ ಆಜ್ಞೆ ! ಒಂದೆಡೆ ನೀನು ಕ್ಷತ್ರಿಯರನ್ನೆಲ್ಲ ಸಂಹರಿಸುತ್ತಾ ಹೋದರೆ, ನಾನು ಯಾರನ್ನು ಸಂಘಟಿಸಲಿ ? ಋತ-ಧರ್ಮ-ಸತ್ಯಗಳ ಪ್ರತಿಷ್ಠಾಪನೆ, ರಕ್ಷಣೆ, ನಿನ್ನದೇ ಆಗಿರುವಾಗ, ನಿನ್ನ ಉಪಕರಣವಾದ ನಾನೇನು ಈಗ ಮಾಡಬೇಕು ? ನೀನೀ ರೌದ್ರರೂಪ ತಳೆಯುವುದೇ ?"

ವಿಷ್ಣು : "ಲಯವೂ ರಕ್ಷಣೆಯ ಒಂದು ರೂಪವೇ ಎಂದರಿಯೆಯಾ? ವತ್ಸ ? ಈಗ ದೌಷ್ಟ್ಯ, ಕ್ಷತ್ರಿಯರೂಪದಲ್ಲಿ ಕಾಣಿಸಿಕೊಂಡಿದೆ. ಅದು ಯುಗಧರ್ಮ ! ವರ್ಣಗಳೆಲ್ಲವೂ ತ್ರಿಗುಣಗಳನ್ನೇ ಆಧರಿಸಿವೆ. ಮಿತಿಯೊಳಗೆ ಇದ್ದರೆ ಅವು ಒಂದಕ್ಕೊಂದು ಪೂರಕ- ಒಂದನ್ನೊಂದು ಅಳಿಸುವ ಮಾರಕವಾದಾಗ ನಾನು ಯಾವ ವರ್ಣವನ್ನೂ ಉಳಿಸುವುದಿಲ್ಲ. ಇದಿನ್ನೂ ತ್ರೇತಾಯುಗ ! ದ್ವಾಪರದಲ್ಲೂ ಇನ್ನೂ ದುಷ್ಟಕ್ಷತ್ರವಿನಾಶದ ಕೆಲಸ ಬಾಕಿ ಇದೆ. ಅಲ್ಲೂ, ಕಲಿಯುಗದಲ್ಲೂ ನನ್ನ ವಿವಿಧ ರೌದ್ರರೂಪಗಳು ಅವಶ್ಯವೇ ಆಗುತ್ತವೆ. ರೈತನು ತಾನೇ ನೆಟ್ಟು ಬೆಳೆಸಿದ ಪೈರನ್ನು ಪಕ್ವವಾದಾಗ ಕೊಯ್ಯುವುದು ಒಂದು ಬಗೆಯ 'ಸಂಹಾರ'ವಾದರೆ, ಆ ಬೆಳೆಗೆ ಕಂಟಕಗಳಾದ ಕಸಕಡ್ಡಿ ಮುಳ್ಳುಗಿಡಗಳನ್ನು ಮೊದಲೇ ಕಿತ್ತೆಸೆಯುವುದು ಒಂದು ಬಗೆಯ 'ಸಂಹಾರ'ವಾಗುತ್ತದೆಯಲ್ಲವೇ ? ನನ್ನ ರುದ್ರರೂಪವನ್ನು ಯಾರೂ ತಿರಸ್ಕಾರ ರೂಪದಿಂದ ನೋಡದಿರಲಿ !"

ಅಗಸ್ತ್ಯ : "ಪ್ರಭೋ ! ಕ್ಷತ್ರವೇ ಅಳಿಸಿದರೆ ಬ್ರಾಹ್ಮಣ್ಯ ಉಳಿಯುವುದೆಂತು ? ಇವೆರಡೂ ಇಲ್ಲದೆ ಉತ್ತಮ ಸಮಾಜ ವ್ಯವಸ್ಥೆ ಹೇಗೆ ಸಾಧ್ಯ ? ನನ್ನ ಕರ್ತವ್ಯವೇನು ?"

ವಿಷ್ಣು : "ವತ್ಸ ! ಮಣ್ಣಿದ್ದರೆ, ಕುಂಬಾರ, ಗಡಿಗೆಯನ್ನೂ ಮಾಡಬಲ್ಲ !! ಕುಡಿಕೆಯನ್ನೂ ಮಾಡಬಲ್ಲ ! ಶ್ರಾದೆಯನ್ನೂ, ನಾನಾ ಆಕಾರಗಳನ್ನು ಮಾಡಬಲ್ಲ !! ತಿಳಿಯಿತೇ, ನೋಡು ? ತ್ರಿಗುಣಗಳ ಉತ್ಥಾನತಾರ

ತಪ್ಪಿನಿಂದ ವರ್ಣಭೇದ, ತಾರತಮ್ಯ ಉಂಟಾಗಿದೆ. ಅದು ನನ್ನ ನಿಯಮ. ನನ್ನಂಥ ಕ್ರಾಂತದರ್ಶಿ, ಕ್ರಾಂತಿಪುರುಷ, ಬ್ರಾಹ್ಮಣ್ಯದಿಂದಲೇ ಹೊಸಕ್ಷತ್ರ ಸಂತಾನವನ್ನು ಬೆಳೆಸಬಲ್ಲ! ಅವಶೇಷಕ್ಷಾತ್ರವನ್ನು ಬ್ರಾಹ್ಮಣ್ಯಕ್ಕೂ ಪರಿವರ್ತಿಸಬಲ್ಲ !! ಇಂದ್ರನಾಗಿ ನಾನು 'ಕುದುರೆ'ಯನ್ನು 'ಗೋ'ವಾಗಿ ಪರಿವರ್ತಿಸಿದ ವೃತ್ತಾಂತವನ್ನು ನೀನು ವೇದದಲ್ಲಿ ಅರಿತಿರುವೆಯಷ್ಟೆ ? ಅರ್ಥ ತಿಳಿಯಿತೆ ? ಕ್ಷತ್ರಿಯಸ್ತ್ರೀಯ ಹೊಟ್ಟೆಯಲ್ಲಿ ಬೆಳೆಯುವ ರಾಜ ಪಿಂಡವನ್ನು ದೇವತೆಗಳು ಬ್ರಾಹ್ಮಣನೆಂಬ ಹಗ್ಗದಿಂದ ಕಟ್ಟಿಹಾಕಿದರೆಂಬ ಐತಿಹ್ಯವನ್ನೂ ನೀನು ವೇದದಲ್ಲಿ ಬಲ್ಲೆಯಷ್ಟೆ! ಹಗ್ಗ ಕಿತ್ತುಹೋದ ಕ್ಷತ್ರವನ್ನು ಸರಿಮಾಡಲು ನಾನೇ ರಾಮನಾಗಿ ಬಂದಿದ್ದೇನೆ. ಪುನಃ ಸೃಷ್ಟವಾದ ಹೊಸ ಕ್ಷತ್ರವನ್ನು ಹಗ್ಗದೊಳಗೆ ಕಟ್ಟಲು ನಿನ್ನನ್ನು ಇಲ್ಲಿ ತಂದಿದ್ದೇನೆ. ನೀನೀಗ ಒಬ್ಬ ವ್ಯವಸಾಯಗಾರನಂತೆ! ಭರತ ಭೂಮಿ ಒಂದು ಗದ್ದೆಯಂತೆ! ಕ್ಷತ್ರ, ಬ್ರಹ್ಮಗಳ ಪೈರುಗಳು ಈಗ ನಿನ್ನ ಕೈಯ್ಯಲ್ಲಿವೆ. ಸರಿಯಾದಲ್ಲಿ ನೆಟ್ಟು ಬೆಳೆಸಿ, ರಾಷ್ಟ್ರವನ್ನು ರಕ್ಷಿಸು: ಇಕೋ ಈ ವಿಷಯಕ್ಕೆ ಅಪೌರುಷೇಯವಾಣಿಯನ್ನು ಕೇಳು" ಅಗಸ್ತ್ಯರ ಮಾನಸಕ್ಕೆ ಆ ಶ್ರುತಿ ಹೀಗೆ ಗೋಚರವಾಗುತ್ತದೆ.

**ಅಗಸ್ತ್ಯಃ ಖನಮಾನಃ ಖನಿತ್ರೈಃ**
**ಪ್ರಜಾಮಪತ್ಯಂ ಬಲಂ ಇಚ್ಛಮಾನಃ**
**ಉಭೌ ವರ್ಣೌ ಋಷಿರುಗ್ರಃ ಪುಪೋಷ**
**ಸತ್ಯಾ ದೇವೇಷು ಆಶಿಷೋ ಜಗಾಮ ॥**

( ಈಗಿನ ಋಕ್ಸಂಹಿತೆಯಲ್ಲಿ ಇದು 1-176-6 ಆಗಿದೆ.)

["ಅಗಸ್ತ್ಯನು ದೇಶದಲ್ಲಿ ಪ್ರಜೆಗಳನ್ನೂ ಸತ್ಸಂತಾನವನ್ನೂ ಇಷ್ಟಪಟ್ಟ ವನಾಗಿ, ಆ ಮೂಲಕ ರಾಷ್ಟ್ರಬಲವನ್ನು ವೃದ್ಧಿಪಡಿಸಲು ಬಯಸಿ, ಗುದ್ದಲಿಯಿಂದ ನೆಲವನ್ನು ರೈತನು ಅಗೆದು ಭೂಮಿಯನ್ನು

ಮತ್ತು ಸಸ್ಯಗಳನ್ನು ನಾಟಿ ಬೆಳೆಸುವಂತೆ, ಶತ್ರುಭಯಂಕರನೂ ಸಾಹಸಿಯೂ ಆಗಿರುತ್ತಾ ಈ ಬ್ರಾಹ್ಮಣಕ್ಷತ್ರಿಯವರ್ಣಗಳೆಂಬುವನ್ನು ಪರಿಪೋಷಿಸಿ ಬೆಳೆಸಿದನು. ಆದುದರಿಂದ ದೇವತೆಗಳ ದೃಢ ಆಶೀರ್ವಾದಕ್ಕೆ ಈ ಮಹರ್ಷಿಯು ಪಾತ್ರನಾದನು" ಎಂದರ್ಥ

ಅಗಸ್ತ್ಯ : "ಜಗತ್ಪ್ರಭೋ ! ಹೊಸವರ್ಣಗಳನ್ನು ನಾನು ಸೃಷ್ಟಿಸುವುದೆಂದರೇನು ? ಇದು ಸಂಕರವಾಗದೇ ?"

ವಿಷ್ಣು: "ಯಾವುದು ಸಂಕರ, ಅಲ್ಲ, ಎಂಬುದನ್ನು ನಿರ್ಣಯಿಸುವವನು, ನಾನೇ ಹೊರತು ನೀನಲ್ಲ !"

ಅಗಸ್ತ್ಯ: ಆಗಲಿ, ಪ್ರಭು ! ಒಂದು ವಿಷಯದಲ್ಲಿ ಮಾರ್ಗದರ್ಶನ ದೊರೆಯಿತು. ಈ ಭರತಭೂಮಿಯನ್ನು ಸಾಂಸ್ಕೃತಿಕ ಏಕೀಕರಣಕ್ಕೆ ತರುವ ಕೆಲಸ ನನ್ನದೆಂದು ನನ್ನ ತಂದೆ ಹೇಳುತ್ತಿದ್ದರು. ದಕ್ಷಿಣ ಭಾರತದಲ್ಲಿ ಋಷಿ ಸಂಸ್ಕೃತಿ ಬೆಳೆಯಲು ವಿಂಧ್ಯ ಅಡ್ಡವಾಗಿದ್ದಾನಲ್ಲ ? ಇಲ್ವಲ ಇದ್ದಾನಲ್ಲ ? ನಿಋುತರು ಇದ್ದಾರಲ್ಲ ?"

ವಿಷ್ಣು "ವತ್ಸ ! ಮುಂದಿನದನ್ನೆಲ್ಲ ನನ್ನನ್ನು ಕೇಳಬೇಡ. ಕಾಲ ಕಾಲಕ್ಕೆ ನಿನಗೆ ಸೂಚನೆ ಬರುತ್ತಿರುತ್ತದೆ. **ಎಷ್ಟು ಎತ್ತರದವನೂ ನಮಸ್ಕರಿಸುವಾಗ ಬಾಗಿಯೇ ತೀರುತ್ತಾನೆ !** ತಿಳಿಯಿತೇ ? ಈ ವಾಣಿಯನ್ನು ಉಪಾಸಿಸು. ಇಲ್ವಲ !! ಅವನು ನಿನಗೆಷ್ಟು ಮಾತ್ರ ? ಶಂಬರನ ಮಾಯಾ ವಿದ್ಯೆಗಳಿಗೆ ಪ್ರತಿಯಾಗಿ ಸಹಸ್ರಾರು ಮಾಯಾ ಪ್ರಯೋಗಗಳನ್ನು ನಿನಗೆ ನನ್ನ ಅಂಶಭೂತನಾದ ರುದ್ರದೇವ, ಮಹಾದೇವ ಶಂಕರನಾಗಿ ಉಪದೇಶಿಸುತ್ತಾನೆ. ನೀನು ನನ್ನನ್ನು ಈಗ ಕಾಣುತ್ತಿರುವುದು ಅವನದೇ ಕ್ಷೇತ್ರದಲ್ಲಿ ಎಂಬುದನ್ನು ಮರೆಯಬೇಡ ! ನಾನು ಅಂತರ್ಧಾನನಾದ ಮೇಲೆ ಅವನ ಅನುಗ್ರಹದಿಂದ ನೀನು ವಿಶೇಷ ಅಸ್ತ್ರ

ಶಸ್ತ್ರಗಳನ್ನು ಪಡೆದುಕೋ! ಮೈತ್ರಾವರುಣಿ ಎನಿಸಿ, ಮಿತ್ರಾವರುಣರ ಪ್ರಸಾದದಿಂದಲೇ ಜನಿಸಿರುವವನಿಗೆ ವರುಣಪಾಶವೂ ವಶವಾಗಿದೆ. ಯಾವಾಗ ಏನು ಅವಶ್ಯವೋ ಆ ವಿಷಯದ ಸರಿಯಾದ ಸ್ಫೂರ್ತಿ ನಿನಗೆ ಬರಲಿ. ಮಂಗಳಾನಿ ಭವನ್ತು."

ಭಗವಾನ್ ವಿಷ್ಣುವು ಅಂತರ್ಧಾನನಾಗಲು, ಅಗಸ್ತ್ಯರ ಹೃದಯಾಕಾಶದ ಅರುಣೋದಯದ ಹೊಂಬೆಳಕಿನ ಹಿನ್ನೆಲೆಯಲ್ಲಿ ರುದ್ರದೇವ ಕಾಣಿಸಿಕೊಳ್ಳುತ್ತಾನೆ.

ಅಗಸ್ತ್ಯ: "ಮಹಾದೇವ! ಲೋಕಕ್ಷೇಮಾರ್ಥವಾಗಿ ನನಗೆ ಈಗ ಅವಶ್ಯವಾದ ಎಲ್ಲ ಅಸ್ತ್ರಶಸ್ತ್ರಗಳನ್ನೂ ನೀನು ಅನುಗ್ರಹಿಸಬೇಕು! ನನ್ನ ಮೇಲೆ ಬಹುಭಾರವಾದ ಕಾರ್ಯವನ್ನು ದೇವತೆಗಳು ಹೊರಿಸಿದ್ದಾರೆ!"

ಶಂಕರ: "ನಾನದನ್ನು ಬಲ್ಲೆ! ಜಗತ್ತನ್ನೇ ಅಳಿಸುವ ಮಾಯಾಮೋಹಶಾಸ್ತ್ರಗಳನ್ನು ಇದಕ್ಕಾಗಿಯೇ ನಾನು ಶುಕ್ರ, ಶಂಬರ, ಇಲ್ವಲಾದಿಗಳ ಮೂಲಕ ಪ್ರಚುರಿಸುತ್ತಾ, ನಿನ್ನ ಕೆಲಸವನ್ನು ಸುಗಮಮಾಡಿದ್ದೇನೆ. ಅಲ್ಲವೆ? ಇನ್ನು ಇಕೋ ನನ್ನ ಅಸ್ತ್ರಶಸ್ತ್ರವಿದ್ಯೆಯನ್ನೆಲ್ಲ ನಿನಗಿತ್ತೆ" (ಎನ್ನುತ್ತಾ ತ್ರಿಶೂಲದಿಂದ ಅಗಸ್ತ್ಯರ ಬಲತೋಳಿನ ಮೇಲ್ಭಾಗವನ್ನು ಸ್ಪರ್ಶಿಸುತ್ತಾನೆ. ಅಗಸ್ತ್ಯರ ಹೆಗಲಲ್ಲಿ ವಿಷ್ಣುಧನುಸ್ಸೂ, ಬಲಗೈಯ್ಯಲ್ಲಿ ವೈಷ್ಣವಾಸ್ತ್ರವೂ ಕಾಣಿಸಿಕೊಳ್ಳುತ್ತವೆ. ಹೆಗಲಲ್ಲಿ ಅಕ್ಷಯ ಬತ್ತಳಿಕೆ ತೋರಿಕೊಳ್ಳುತ್ತದೆ. ಅಗಸ್ತ್ಯರ ಬಲ ಕಿವಿಯಲ್ಲಿ ಶಂಕರ, ಪಾಶುಪತ, ಮಾಹೇಶ, ರೌದ್ರ, ಬ್ರಹ್ಮಾಸ್ತ್ರಾದಿಗಳನ್ನು ಉಪದೇಶಿಸುತ್ತಾನೆ. ಭಸ್ಮವೊಂದನ್ನು ಕೊಟ್ಟು.)

"ಇದನ್ನು ಇನ್ನು ಮೇಲೆ ಉದ್ದಿಷ್ಟವಾದ ವಿದ್ಯೆಯ ಸಿದ್ಧಿಗಾಗಿ ಉಪಯೋಗಿಸು" ಎನ್ನುತ್ತಾನೆ.

ಅಗಸ್ತ್ಯ : "ಪ್ರಭು ! ಇನ್ನೊಂದು ವಿಷಯ, ದ್ರವಿಡ ದೇಶದಲ್ಲಿ ನಿನ್ನ ಭಕ್ತರು ಪುಷ್ಕಳವಾಗಿರುತ್ತಾರೆ. ಅವರು ನನ್ನನ್ನು ನಂಬುವಂತೆ ಅನುಗ್ರಹಿಸಬೇಕು. ಅವರ ಭಾಷೆಯಲ್ಲಿ ನನಗೆ ಸಿದ್ಧಿಯನ್ನು ನೀನು ಅನುಗ್ರಹಿಸಬೇಕು. ವಿಂಧ್ಯದ ದಕ್ಷಿಣದ ನದೀತಟಗಳೂ, ದುರ್ಗಗಳೂ, ಮಾರ್ಗಗಳೂ, ದಿವ್ಯಸ್ಥಾನಗಳೂ, ನನಗೆ ಸುಲಭವಾಗಿ ತಿಳಿಯುವಂತೆ ಅನುಗ್ರಹಿಸಬೇಕು."

ಶಂಕರ : "ಆಗಲಿ. ರುದ್ರ–ಅಗ್ನಿ ಸಮೀಕರಣದಿಂದ ನೀನದನ್ನು ಸಾಧಿಸುವೆ. ದ್ರವಿಡ ಭಾಷೆಗೆ ನೀನೇ ಪ್ರಥಮ ವ್ಯಾಕರಣವನ್ನು ಬರೆಯುವೆಯಂತೆ. ಆ ಖ್ಯಾತಿ ನಿನಗೇ ಬರಲಿ. ದಕ್ಷಿಣದ ದಾರಿಗಳನ್ನು, ದುರ್ಗಾದಿಗಳನ್ನು ಪೂಷಣ ನಿನಗೆ ತೋರಿಸುತ್ತಾನೆ. ನನ್ನ ಪ್ರಥಮಗಣಗಳೂ ಇಂದ್ರನ ಮರುದ್ಗಣ ದೇವತೆಗಳೂ ನಿನ್ನ ಹೊಸ ಕ್ಷತ್ರ ಸೈನ್ಯದಲ್ಲಿ ಅದೃಶ್ಯರಾಗಿ ಸೇರಿಕೊಳ್ಳುತ್ತಾರೆ. ನಿನ್ನ ಸೈನ್ಯ ಅಜೇಯವಾಗುತ್ತದೆ. ಚಿಂತೆ ಬಿಡು."

ಅಗಸ್ತ್ಯ : "ಕಳೆದುಹೋದ ವಿಷಯದಲ್ಲಿ ಒಂದು ಚಿಂತೆ ! ಕೇಳಲೇ ?

ಶಂಕರ : (ನಕ್ಕು) "ಓಹೋ ! ಜಮದಗ್ನಿಯ ವಿಷಯವೋ? ನಿನ್ನ ಬಾಯಿಂದಲೇ ಹೇಳು !"

ಅಗಸ್ತ್ಯ : "ಸಕಲ ರಾಕ್ಷೋಘ್ನ ಮಂತ್ರಗಳೂ ಸಿದ್ಧಿಸಿದ್ದ ಆ ಮಹರ್ಷಿ ಕಾರ್ತವೀರ್ಯನಿಗೆ ಹಾಗೆ ಬಲಿಪಶುವಿನಂತೆ ಸಿಕ್ಕಿ ಪ್ರಾಣತ್ಯಾಗಮಾಡುವುದೇ ? ಮಂತ್ರಸಿದ್ಧರಿಗೆ ಇದು ಅಪಖ್ಯಾತಿ ಅಲ್ಲವೇ ? ವಿಷ್ಣುವೇ ಪರಶುರಾಮನಾಗಿ, ಪುತ್ರನಾಗಿ, ಬಂದೂ ಅವರಿಗೆ ಈ ಗತಿಯೇ ?"

ಶಂಕರ : "ಇದು ದೇವರಹಸ್ಯ ! ದೊಡ್ಡ ಕೆಲಸಕ್ಕೆ ದೊಡ್ಡ ಬಲಿದಾನವೇ ಬೇಕಾಗುತ್ತದೆ. ಈಗ ಕ್ಷತ್ರಪ್ರಳಯದ ಕಾಲ. ಸಹಸ್ರಾರ್ಜುನನು ಸಾಮಾನ್ಯದವನಲ್ಲ ! ದೊಡ್ಡ ಕಲ್ಲನ್ನು ಮೊಟುವಾಗ ಹಾರೆಗೆ ಒತ್ತಾಗಿ ಬಲಿಷ್ಠವಾದ ಕಲ್ಲೇ ಬೇಕಾಗುತ್ತದೆಯಲ್ಲವೆ ? ಎರಡನೆಯದಾಗಿ ತ್ಯಾಗವ್ಯೇ ಜೀವನದ ಉಸಿರು. ಅದೇ ವೇದದ ಬೋಧೆ. ಜಮದಗ್ನಿ ಅಗ್ನಿಯಲ್ಲೇ ಪ್ರಾಣಾರ್ಪಣೆ ಮಾಡಿದ ಮಹಾನುಭಾವ ! ಅದು ದುರ್ಮರಣದಂತೆ ಪಾಮರರಿಗೆ ತೋರಬಹುದು. ಯುದ್ಧಭೂಮಿಯೇ ಯಜ್ಞಕ್ಷೇತ್ರವೆಂದಾಗ, ಅಲ್ಲಿ ಸತ್ತವರೆಲ್ಲ ಪ್ರಾಣಾರ್ಪಣೆಮಾಡಿಕೊಂಡವರೆಂಬುದು ವೈದಿಕ ದೃಷ್ಟಿಯಾದರೆ, ಅದೆಲ್ಲ ದುರ್ಮರಣದ ಮಸಣವೆಂಬುದು ಪಾಮರ ದೃಷ್ಟಿ. ನೀನೇಕೆ ತಲೆ ಕೆಡಿಸಿಕೊಳ್ಳಬೇಕು ?"

ಅಗಸ್ತ್ಯ : (ನಕ್ಕು, ಕಿಂಚಿತ್ ವಿನಯದಿಂದ) "ಪ್ರಭು ! ನಿನ್ನನ್ನೇ ಯಜ್ಞ ಧ್ವಂಸಿ ಎನ್ನುವರಲ್ಲ !"

ಶಂಕರ : "ಅಪೂರ್ಣವಾಗಿಯೂ, ಲೋಕನಾಶಕರೂಪದಲ್ಲಿಯೂ, ಸ್ವಾರ್ಥಪ್ರೇರಿತವಾಗಿಯೂ ನಡೆಸಲ್ಪಡುವ ಯಾವ ಯಜ್ಞವನ್ನೂ ನಾನು ಕೆಡಿಸಬೇಕೆಂಬುದು ನನ್ನ ಕರ್ತವ್ಯ. ನಾನು ಲಯದೇವತೆ ! ಆದರೆ ನನ್ನನ್ನು ಬಿಟ್ಟು ಯಾವ ವೈದಿಕನೂ ಯಾವ ಯಜ್ಞವನ್ನೂ ಪೂರ್ತಿ ಮಾಡುವಂತಿಲ್ಲ ! ಬಲ್ಲೆಯಲ್ಲವೆ ?"

ಅಗಸ್ತ್ಯ : "ದೃಢೀಕರಿಸಿಕೊಳ್ಳಲು, ಕೇಳುತ್ತಿರುವೆ, ದೇವ !"

ಶಂಕರ : "ಯಾಗ, ಯಜ್ಞಗಳ ಭೂಮಿಯಲ್ಲಿ, ಅರ್ಪಣೆ, ದಾನ, ದಕ್ಷಿಣೆ ಎಲ್ಲ ಮುಗಿದ ಮೇಲೆ ಉಳಿಯುವ ಪಶುಗಳೆಲ್ಲ ಯಾರಿಗೆ ಸೇರಬೇಕು, ಗೊತ್ತಿದೆಯಲ್ಲವೆ ?"

ಅಗಸ್ತ್ಯ : "ಆಂಗೀರಸರು ನಾಭಾನೇದಿಷ್ಠನಿಗೆ ಈ ರಹಸ್ಯ ಹೇಳಿ, ಲೋಕಕ್ಕೂ ನಮಗೂ ಉಪಕರಿಸಿದ್ದಾರೆ, ಪ್ರಭೂ ! ನೀನೇ ಪಶುಪತಿ !!

ನೀನೇ ಪಶುಪಾಲಕ !! ಯಜುರ್ಮಂತ್ರಗಳು ನಿನ್ನನು 'ಪಶೂನ್ ಪಾಹಿ' ಎಂದು ಪ್ರಾರ್ಥಿಸುವುದನ್ನು ನಾನರಿಯೆನೇ ?"

ಶಂಕರ : "ಅಂದಮೇಲೆ ಬೇರೊಂದಪಾರ್ಥದ ಯಜ್ಞವೈರಿಗಳ ಸಾಲಿನಲ್ಲಿ ನನ್ನನ್ನೂ ನನ್ನ ಭಕ್ತರನ್ನೂ ಸೇರಿಸಬೇಡ.''

ಅಗಸ್ತ್ಯ : "ಹಾಗೆ ಮಾಡುತ್ತಿರುವವನು ಇಲ್ವಲ ! ಅವನನ್ನು ಹೇಗೆ ಶಾಂತನನ್ನಾಗಿಸಲೆಂದೇ ಈ ರಹಸ್ಯಗಳನ್ನು ಕುರಿತು ನಿನ್ನಲ್ಲಿ ಅರಿಕೆ ಮಾಡಿಕೊಂಡಿದ್ದು."

ಶಂಕರ : "ವಾತಾಪಿ ಸತ್ತರೆ, ಇಲ್ವಲ ಸತ್ತಂತೆಯೇ ಎಂದು ತಿಳಿ. ಇನ್ನು ಇಲ್ಲಿ ಮಾತಾಡುತ್ತಾ ಕುಳ್ಳಿರಬೇಡ. ನಿನಗೆ ಬಹಳ ಕೆಲಸ ಕಾದಿದೆ. ನೆನೆಸಿದಾಗ ನಿನಗೆ ಕಾಣಿಸಿಕೊಳ್ಳುತ್ತೇನೆ. ಆಗಾಗ ಬೇಕಾದುದನ್ನು ಕೇಳುವೆಯಂತೆ. ವಿಷ್ಣುವು ನಿನಗೆ ಹೇಳಿದುದನ್ನು ಮೊದಲು ಕಾರ್ಯಗತ ಮಾಡು. ನನ್ನ ಪುತ್ರ, ಕುಮಾರನು ದಕ್ಷಿಣದ ನಿನ್ನ ವಿಜಯದಲ್ಲಿ ಬಹಳ ಸಹಕರಿಸುವನು. ನಿನ್ನ ಪತ್ನಿ ಲೋಪಾಮುದ್ರೆಗೆ ಅಲ್ಲಿ ತುಂಬಾ ಕೆಲಸ ವಿದೆ. ನಿನ್ನ ಪಿತೃಗಳಿಗೆ ಕೊಟ್ಟಮಾತೂ ಉಳಿದಿದೆ. ಬುದ್ಧಿಶಾಲಿಯಾಗಿ ಎಲ್ಲವನ್ನೂ ಸಮನ್ವಯಿಸಿ ಮಾಡು. ಶುಭಮಸ್ತು."

ಅಗಸ್ತ್ಯರು ಕಣ್ಣುತೆರೆದರು. ಮಹಾಕಾಲಕಾಲೇಶ್ವರನ ದೇವಾಲಯದ ಪೂರ್ವಪ್ರಾಕಾರಾದಾಚೆ ಪೂರ್ವ ದೂರದಿಗಂತದಲ್ಲಿ ಸೂರ್ಯೋದಯದ ಸೂಚನೆ ಕಾಣಬರುತ್ತಿತ್ತು.

* * *

ಮಹರ್ಷಿ ಧ್ಯಾನಸಿದ್ಧನಾಗಿ ಕಂದೆರೆದ ವಾರ್ತೆ ತಿಳಿದು ಉಜ್ಜೈನಿಯ ದೊರೆ ವಿಶಾಲವರ್ಮ ಮಂತ್ರಿಪುರೋಹಿತರೊಡನೆ ಬಂದು ಸಾಷ್ಟಾಂಗ

ವೆರಗಿ, ಸೊರಗಿದ್ದ ಆ ದೇಹಕ್ಕೆ ಕ್ಷೀರ ಸಮರ್ಪಣೆ, ಹಣ್ಣುಗಳ ಸಮರ್ಪಣೆ ಮಾಡುತ್ತಾನೆ. ಆ ವೇಳೆಗೆ ಬಹು ಸೊರಗಿದ್ದ ಮಹರ್ಷಿಯದೇಹ ಸುಧಾರಿಸಲು ಸುಮಾರು ಹದಿನೈದು ದಿನಗಳೇ ಹಿಡಿದವು. ಮೊದಲು ಹಾಲು, ಹಣ್ಣಿನರಸ, ಗಂಜಿ ಮುಂತಾದ ದ್ರವಾಹಾರಗಳಿಂದಾರಂಭಿಸಿ, ಮಹರ್ಷಿ ಚೇತರಿಸಿಕೊಂಡು, ಮೊದಲಿನ ಆರೋಗ್ಯಕ್ಕೆ ಬರಲು ಇನ್ನಷ್ಟು ದಿನಗಳಾದವು.

*　　　*　　　*

ಒಂದುದಿನ ಅಗಸ್ತ್ಯರು ವಿಶಾಲವರ್ಮನಿಗೆ ಉಪದೇಶ ಆರಂಭಿಸಿದರು:

ಅಗಸ್ತ್ಯ : "ದೊರೆಯೇ ! ಪರಶುರಾಮರು ಸಿಂಧು, ಸೌವೀರ, ಮದ್ರಕ, ಯೌವ್ವನಾಶ್ವ, ಭದ್ರಕ, ಕ್ಷುದ್ರಕ, ಗಾಂಧಾರ, ಮೊದಲಾದ ದೇಶಗಳನ್ನೂ, ಅತ್ತ ಕುರು, ಪಾಂಚಾಲ, ಕೋಸಲ, ಅಂಗ. ವಂಗ, ಕಳಿಂಗಾದಿ ದೇಶಗಳನ್ನೂ ಸುತ್ತಿಬರಲು ಪ್ರದಕ್ಷಿಣಕ್ರಮದಲ್ಲಿ ಕ್ಷತ್ರನಿರ್ಮೂಲನ ಯಾತ್ರೆಗೆ ಹೊರಟಾಗಿದೆ. ಉಜ್ಜೈನಿಗೆ ಅವರು ಬರುವುದು ತಡವಾಗುತ್ತದೆ. ಅಷ್ಟರೊಳಗೆ ಒಂದು ಏರ್ಪಾಟಾಗಬೇಕು. ಧರ್ಮಾತ್ಮರಾದ ಪರಶುರಾಮರು ದುಷ್ಟಕ್ಷತ್ರಿಯ ನಿರ್ಮೂಲನೆಗೆ ಹೊರಟಿದ್ದರೂ ಕೆಲವು ವ್ರತಗಳನ್ನಿಟ್ಟುಕೊಂಡಿದ್ದಾರೆ. (೧) ಹಸೆಮಣೆಯ ಮೇಲೆ ಕುಳಿತು ಹೆಂಡತಿಯ ಕೈ ಹಿಡಿಯುತ್ತಿರುವ ಮದುಮಗನನ್ನು ಅಲ್ಲಿಂದಲ್ಲೇ ಕೊಲ್ಲದೆ, ಬೇರೆ ಸಮಯ ನೋಡುವುದು ಒಂದು (೨) ನಗ್ನ ಸ್ತ್ರೀಯರ ಮಧ್ಯೆ ಅಡಗಿಕೊಂಡ ಕ್ಷತ್ರಿಯನನ್ನು ಅವರು ಮುಟ್ಟಲಾರರು – ಅವರ ಬ್ರಹ್ಮಚರ್ಯ – ಅದನ್ನು ತಡೆಯುತ್ತದೆ. ಈಗ ರಾಜಕುಮಾರನಾದ ನೀನು ಇವೆರಡರಲ್ಲಿ ಯಾವುದೊಂದನ್ನಾದರೂ ಅನುಸರಿಸಿದ ಹೊರತು ಉಳಿಯಲಾರೆ. ನೀನು ಉಳಿದ ಹೊರತು ನನ್ನ ಯೋಜನೆ

ಮಣ್ಣುಪಾಲಾಗುತ್ತದೆ. ಪರಶುರಾಮರ ಕೋಪ ಅಡಗುವ ತನಕ ಬೇರೆ ಏನು ದಾರಿ ? ಯಾವುದಕ್ಕೆ ಸಿದ್ಧನಿರುವೆ ?"

ವಿಶಾಲ : "ಗುರುವೇ ! ಇವೆರಡೂ ಹೇಡಿಯ ದಾರಿ. ಹಾಗೆ ಪ್ರಾಣ ಉಳಿಸಿಕೊಂಡರೆ ನಾನು ಮುಂದೆ ನಿಮಗೆಂತು ಉಪಯೋಗವಾಗುವೆ ?"

ಅಗಸ್ತ್ಯರು ಉತ್ತರ ಹೇಳದೆ ತುಂಬಾ ಚಿಂತಿಸಿ, ಮಹಾವಿಷ್ಣುವಿನ ಮಾತುಗಳನ್ನು ನೆನೆಸಿ, ಮತ್ತೆ ಆರಂಭಿಸುತ್ತಾರೆ.

ಅಗಸ್ತ್ಯ : "ಹಾಗಿದ್ದರೆ, ಪರಶುರಾಮರ ಕೊಡಲಿಗೆ ಸಿಕ್ಕು ನಿನ್ನ ವಂಶವನ್ನೇ ಬಲಿಕೊಡುವುದು ಒಂದು ದಾರಿ ! ಅದು ಕ್ಷತ್ರಿಯೋಚಿತವಿದ್ದರೂ, ನನ್ನ ಯೋಜನೆಗೆ ನಿರುಪಯುಕ್ತ. ಇಲ್ಲವಾದರೆ............"

ವಿಶಾಲ : "ಇಲ್ಲವಾದರೆ....... ಎಂದರೇನು, ಆಚಾರ್ಯ ? ಚಿಂತಿಸದೇ ಹೇಳಿ. ನಿಮ್ಮ ಆಜ್ಞಾಪಾಲನೆಗೆ ನಾನು ಸಿದ್ಧ."

ಅಗಸ್ತ್ಯ : "ನೀನಗಿನ್ನೂ ವಿವಾಹವೇ ಆಗಿಲ್ಲ ! ಹೇಗೆ ಹೇಳಲಿ ?"

ವಿಶಾಲ : "ಗುರುಗಳೇ ! ನಿಮ್ಮ ಮಾತು ಅರ್ಥವಾಗಲಿಲ್ಲ !! ಬಿಡಿಸಿ ಹೇಳಿ."

ಅಗಸ್ತ್ಯ : "ಪರ್ಯಾಯದಿಂದ ಹೇಳಲೇ ?.... ಬೇರೊಂದು ರಾಜ್ಯದಲ್ಲಿ ಹೀಗಾಗುವುದು ಶಕ್ಯ ; ಯುಕ್ತ; ವಿವಾಹಿತ ಅರಸನಿಗೆ ರಾಜ್ಯಕ್ಕೆ ವಾರಸುದಾರನಾದ ಪುತ್ರನೋ ಪುತ್ರರೋ ಇರುವರೆಂದು ಭಾವಿಸು. ಇತ್ತ ರಾಜವಂಶವೂ ಉಳಿಯ ಬೇಕು ! ಅತ್ತ ರಾಜನೂ, ರಾಜ ಪುತ್ರರೂ ಉಳಿಯ ಬೇಕೆಂದರೆ, ರಾಜಪುತ್ರರೂ ಕ್ಷಾತ್ರ ತೊರೆದು ಬ್ರಾಹ್ಮಣರಾಗಿ ಬಿಡುವುದು ಈ ಕಾರ್ಯಕ್ರಮದ ಒಂದಂಶ; ರಾಜ್ಯಕ್ಕೆ ಒಬ್ಬ ನಿರ್ವಾಹಕ

ಬೇಕಲ್ಲ ! ಅದಕ್ಕೆ ಪರಶುರಾಮರ ಕೋಪ ಅಡುಗುವ ತನಕ ಪುರೋಹಿತ ನನ್ನೋ, ಬೇರೊಬ್ಬ ದಕ್ಷ, ಸಮರ್ಥ ಬ್ರಾಹ್ಮಣನನ್ನೋ ನಿಯೋಜಿಸು ವುದು ಇನ್ನೊಂದಂಶ; ಅಥವಾ ರಾಜಪತ್ನಿಯಲ್ಲಿ ಬ್ರಾಹಣನಿಯೋಗದಿಂದ ಬೇರೊಂದು ಸಂತಾನವನ್ನು ಹುಟ್ಟಿಸಿ, ಅದಕ್ಕೆ ಪಟ್ಟಗಟ್ಟಿ, ರಾಜನು ಶಾಶ್ವತವಾಗಿ ವಾನಪ್ರಸ್ಥನಾಗಿಯೋ, ಶಾಶ್ವತವಾಗಿಯೋ ಬ್ರಾಹ್ಮಣ ನಾಗಿಯೋ ಬಿಡುವುದು, ಇನ್ನೊಂದು ಉಪಾಯ ....ಅವಿವಾಹಿತನಾದ ನಿನಗೆ ಏನನ್ನು ಹೇಗೆಂದು ಸೂಚಿಸಲಿ ?"

ವಿಶಾಲ "ಗುರುವರ್ಯ ! ಇದೆಲ್ಲ ವರ್ಣಸಂಕರವೆನಿಸದೆ ? ಹೀಗೆಲ್ಲ ಹಿಂದೆಂದಾದರೂ ಆದುದುಂಟೆ ?"

ಅಗಸ್ತ್ಯ : "ಯಾವುದು ಸಂಕರವೋ, ಅಲ್ಲವೋ, ಅದನ್ನು ಜಗದೀಶ್ವರನೇ ಮಾತ್ರ ನಿರ್ಣಯಿಸಬಲ್ಲ ! ಈಗ ನಡೆಯಬೇಕಾದ ಈ ಏರ್ಪಾಟುಗಳಲ್ಲಿ ದೇವರಹಸ್ಯವೊಂದಿದೆ. ನಾನು ದೇವರ ಆಜ್ಞಾಧಾರಕ ನಾಗಿದ್ದು ಅದನ್ನು ಬಾಯಿಬಿಟ್ಟು ಹೇಳುವಂತಿಲ್ಲ !! ಎರಡನೆಯದಾಗಿ. ಇದು ಆಪತ್ಕಾಲ ಬೇರೆ !! ವರ್ತಮಾನದಲ್ಲಿ ಆಗಬೇಕಾದುದಕ್ಕೆಲ್ಲ ಭೂತಕಾಲದ ಪರಂಪರೆಯ ಉದಾಹರಣೆಗಳು ಬೇಕೆಂದು ಹುಡುಕಿದರೆ ಹೇಗೆ ? ಈಗ ನೋಡು, ಪರಶುರಾಮರು ಸಕಲ ಕ್ಷತ್ರನಿರ್ಮೂಲನ ಬದ್ಧರಾದಂತೆ ಹಿಂದೆ ಯಾರಾದರೂ ಮಾಡಿದ್ದರೋ ? ಒಬ್ಬ ದುಷ್ಟ ಅರಸನ ತಪ್ಪಿಗೆ ಎಲ್ಲ ಅರಸರಿಗೂ ಮರಣದಂಡನೆ ವಿಧಿಸಿದ ಅವರ ರೀತಿಗೆ ಯಾವ ಇತಿಹಾಸದ ನಿದರ್ಶನವಿದೆ ? ಇದು ಅಭೂತಪೂರ್ವ ! ಇತಿಹಾಸ ಸೃಷ್ಟಿಯಾಗುವುದೇ ಹೀಗೆ. ನಡೆದದ್ದೇ ಮತ್ತೆ ಹಾಗೆ ನಡೆಯುತ್ತಿದ್ದರೆ ಪರಿಹಾರಗಳೂ ಆ ರೀತಿಯೇ ನಡೆಯುತ್ತ, ಇತಿಹಾಸವೇ ಮರಳುಗಾಡಾಗುತ್ತದೆ ! ಅದು ಈಶ್ವರನಿಗೆ ಆಗ ಲೀಲೆ ಆಗದು ! ಹೊಸ ಸಮಸ್ಯೆಗಳಿಗೆ, ಅವು ಏಳೇಳುತ್ತ, ಹೊಸ ಉತ್ತರಗಳು ಹುಟ್ಟು

ವುದೇ ಸಾರ್ಥಕವಾದ ಇತಿಹಾಸ. ಈಗೊಂದು ಅಂಥ ಪರಿಹಾರ ಸಿಗಬೇಕಾಗಿದೆ. ನಾನು ಸೂಚಿಸಿದ ಈ ಮೂರುನಾಲ್ಕು ದಾರಿಯಲ್ಲೇ ಅದು ಸಾಧ್ಯ."

ವಿಶಾಲ ; (ತುಂಬಾ ಯೋಚಿಸಿ.) "ಗುರುದೇವ ! ಈಗ ನೀವು ನನಗೆ ಬ್ರಾಹ್ಮಣನಾಗೆನ್ನುತ್ತೀರಾ ? 'ವಿವಾಹ ಮಾಡಿಕೊಂಡು, ಪತ್ನಿಗೆ ನಿಯೋಗ ಏರ್ಪಡಿಸು' ಎನ್ನುತ್ತೀರಾ ? ಪುರೋಹಿತನಿಗೆ ಪಟ್ಟಗಟ್ಟು ಎನ್ನುತ್ತೀರಾ? ಪರಶುರಾಮರೊಡನೆ ಹೋರಾಡಿ ಸಾಯಿ ಎನ್ನುತ್ತೀರಾ?"

ಅಗಸ್ತ್ಯ : "ಅದನ್ನು ನಿಶ್ಚಯಿಸಬೇಕಾದವನು ನೀನು ! ನಾನಲ್ಲ ! ನಾನು ಇರುವ ದಾರಿಗಳನ್ನು ನಿನ್ನೆದುರು ಪರ್ಯಾಯದಿಂದ ತೆರೆದಿಟ್ಟೆ. ಬುದ್ಧಿಶಾಲಿಯಾದ ನೀನು ಅವನ್ನು ಅರ್ಥಮಾಡಿಕೊಂಡೆ. ನನ್ನ ಕೆಲಸ ಜಗದೀಶ್ವರನ ಇಚ್ಛೆಯನ್ನು ಜಾರಿಗೊಳಿಸುವಲ್ಲಿ ಉಪಕರಣ ಆಗುವುದು ಮಾತ್ರ. ನೀನೂ ಅಂಥದೊಂದು ಉಪಕರಣ ಮಾತ್ರವೆ ಎಂಬುದನ್ನು ನೆನೆಸಿಕೊಂಡರೆ, ಸ್ವಾರ್ಥ ತೊರೆದರೆ, ಮುಂದಿನ ಕೆಲಸ ಸುಗಮ. ಅದರ ಬಗೆಗೆ ಸರಿಯಾದ ದೃಷ್ಟಿಯೊಂದು ಆಗ ಮಾತ್ರ ಹುಟ್ಟುತ್ತದೆ. ಬ್ರಾಹ್ಮಣನೆಂದರೆ ಯಾರು ? ಯೋಚಿಸು, ಬ್ರಹ್ಮಶಬ್ದವಾಚನಾದ ಭಗವಂತನೊಡನೆ ಸಂಬಂಧ ಹೊಂದಿದವರೆಲ್ಲ ಒಂದು ದೃಷ್ಟಿಯಲ್ಲಿ ಬ್ರಾಹ್ಮಣರೆ ! ಅಲ್ಲವೇ ? ಆಗ ಕ್ಷತ್ರಿಯ ಬ್ರಾಹ್ಮಣನಾದನೆಂದರೆ ಏನರ್ಥ ? ರಾಜ್ಯ ಪರಿಪಾಲನದ ನೇರ ರಾಜಕೀಯಸೂತ್ರವನ್ನು ಕೈಬಿಟ್ಟು ರಾಜ್ಯ ಪರಿಪಾಲನಕ್ಕೆ ಪೋಷಕವಾದ ಶಾಸ್ತ್ರ, ಶಸ್ತ್ರಜ್ಞಾನ ವಿತರಣೆಯಲ್ಲಿ, ಆ ಜ್ಞಾನಸಂಪಾದನೆಯಲ್ಲಿ ತೊಡಗುವುದು ಎಂದಷ್ಟೇ ಅರ್ಥ ! ಇದರಲ್ಲಿ ಆಕಾಶ ಕಳಚಿ ಬೀಳುವುದೆಂಬಂತೆ ಏನು ಅನರ್ಥ ಆಗುತ್ತದೆ? ಯೋಚಿಸು. ಸ್ವಾರ್ಥದೃಷ್ಟಿಯಲ್ಲಿ ನೋಡಿದರೆ ಅಧಿಕಾರ ಹೋಗುತ್ತದೆ. ನಿಃಸ್ವಾರ್ಥ ದೃಷ್ಟಿಯಲ್ಲಿ ನೋಡಿದರೆ ಅಧಿಕಾರ ಚಲಾಯಿಸುವವನಮೇಲೆ ಅಧಿಕಾರ

ಬರುತ್ತದೆ ! ಯಾವ ಅಧಿಕಾರವೂ ಇಲ್ಲದ ಯಾವ ವರ್ಣವೂ ಇಲ್ಲ ! ಅಧಿಕಾರ ಬದಲಾವಣೆಗೆ ಸಿದ್ಧವಿದ್ದವನು ಇತಿಹಾಸ ನಿರ್ಮಿಸಬಲ್ಲ; ಅಡ್ಡ ಬರುವುದು ಸ್ವಾರ್ಥ ಮಾತ್ರ !! ತಿಳಿಯಿತೇ ? ಅಗಸ್ತ್ಯ ಆ ಸ್ವಾರ್ಥ ನಿರ್ಮೂಲನೆಗೆಂದು ಈಗ ಭರತ ಭೂಮಿಯನ್ನು ಉಳುವ ರೈತನಂತೆ ಹುಟ್ಟಿಬಂದಿದ್ದಾನೆ, ಮಾತ್ರ. ಮಣ್ಣು ಹೆಂಟೆ, ಹೆಂಟೆಯಾಗಿಯೇ ಉಳಿದರೆ ಪೈರು ಬೆಳೆದೀತೆ ? ಹುಡಿಹುಡಿಯಾಗಿ ಅದು ಆಕಾರ, ಗಾತ್ರಗಳನ್ನು ಕಳೆದುಕೊಂಡು ನೀರಲ್ಲಿ ಕೆಸರಾದಾಗ ಮಾತ್ರ ಒಳ್ಳೆಯ ಬೆಳೆ ಸಾಧ್ಯ"

ವಿಶಾಲ : ಆ "ಕೆಸರಿನಲ್ಲಿ ಹೊಸ ಬ್ರಹ್ಮಕ್ಷತ್ರಿಯ ಸಸಿಗಳನ್ನು ನಾಟಿ ಬೆಳೆಸುವ ಕೆಲಸವನ್ನೂ ಜಗದೀಶ್ವರ ನಿಮಗೇ ಕೊಟ್ಟಿರುವಂತಿದೆ. ಗುರುವರ್ಯ ! ನಿಮ್ಮ ತಪಸ್ಸಿನ ಸಾಧನೆ ಈಗ ಅರ್ಥವಾಯಿತು. ಮಹರ್ಷಿ, ನಾನು ತ್ಯಾಗಕ್ಕೆಸಿದ್ಧ. ಈ ಮುಂದಿನ ಕಾರ್ಯದಲ್ಲಿ ಇನ್ನೂ ಒಂದು ದೈವ ಮರ್ಮ ಇರುವಂತಿದೆ, ಗುರುಗಳೇ !"........

ಅಗಸ್ತ್ಯ : "ನೋಡಿದೆಯಾ ! ನನಗೆ ಗೋಚರವಾದ ಹೊಸ ವೇದ ಮಂತ್ರವೊಂದರ ಅರ್ಥ, ನಿನಗೆ ನಾನು ಉಪದೇಶಿಸದೆಯೇ ಗೋಚರವಾಗಿ ಹೋಯಿತು" ಎನ್ನುತ್ತಾ "ಅಗಸ್ತ್ಯಃ ಖನಮಾನಃ ಖನಿತ್ರೈಃ..........." ಮಂತ್ರವನ್ನು ಅವನಿಗೆ ಉಪದೇಶಿಸುತ್ತಾರೆ. ಮುಂದುವರೆದು ಹೇಳು ತ್ತಾರೆ; "ಆ ಇನ್ನೊಂದು ದೈವ ಮರ್ಮವೇನು, ಹೇಳುವೆಯಾ ?"

ವಿಶಾಲ ; "ಉತ್ತಮ ಪ್ರಜಾಪಾಲನ ದೀಕ್ಷಿತನಾದ ದೊರೆಗೆ ಬ್ರಾಹ್ಮಣ್ಯವೂ ಬೇಕು, ಕ್ಷಾತ್ರವೂ ಬೇಕು; ಒಂದು ಜ್ಞಾನ ಪ್ರವಾಹ; ಇನ್ನೊಂದು ಕಾರ್ಯದಕ್ಷತೆಯ ಪ್ರವಾಹ. ಎರಡೂ ಒಬ್ಬನಲ್ಲೇ ಏಕೀ ಭವಿಸಿದರೆ ತಿಕ್ಕಾಟದ ಪ್ರಶ್ನೆಯೇ ಏಳುವದಿಲ್ಲ !! ಅದು ಬೇರೆಯಾಗಿಯೇ ಸಹಸ್ರಾರ್ಜುನನ ಬುದ್ಧಿಗೆ ಮಂಕುಹಿಡಿದು ಹತನಾದ; ಅಕಾರ್ಯಮಾಡಿ

ಹಾಳಾದ. ಅದು ಮುಂದೆ ಆಗಬಾರದೆಂದು ದೈವ ಪರಶುರಾಮರನ್ನು ಪ್ರಚೋದಿಸಿ, ತಮ್ಮ ಮೂಲಕ, ಈ ಪ್ರವಾಹ ಸಂಯೋಜನೆಗೆ ಎಳೆಸಿ ತೆಂದು ಕಾಣುತ್ತದೆ."

ಅಗಸ್ತ್ಯ ; "ಭೇಷ್ ! ಸಂಕರ ವಿಷಯದ ನಿನ್ನ ಪ್ರಶ್ನೆಗೆ ನೀನೇ ಎಷ್ಟು ಚೆನ್ನಾಗಿ ಉತ್ತರಿಸಿದೆ ? ನೋಡು."

ವಿಶಾಲ : "ಗುರುದೇವ ! ನಾನು ಬ್ರಾಹ್ಮಣನಾಗುವೆ. ರಾಜ್ಯ ವನ್ನು ಯಾರಿಗೆ ಕೊಡಲಿ ?"

ಅಗಸ್ತ್ಯ : "ನಿನ್ನ ಪುರೋಹಿತ – ಸುಹೋತ್ರ – ಅದನ್ನಾಳುವಂತೆ ಏರ್ಪಡಿಸುತ್ತೇನೆ. ನೀನು ಇನ್ನು ಅಗಸ್ತ್ಯ ಗೋತ್ರದವನಾಗುವೆ. ನಾಳೆ ನಿನಗೆ ಮತ್ತೆ ಉಪನಯನ ಮಾಡಿ, ಗೋತ್ರ ವಹಿಸುತ್ತೇನೆ...... ನಿನ್ನ ಕುತೂಹಲಕ್ಕಾಗಿ ಈ ಹೆಚ್ಚಿನ ಮಾತು ಹೇಳಲೇ ? ಹಿಂದೆ ಗೃತ್ಸಮದನೆಂಬ ಅರಸು – ಪುರೂರವರ ವಂಶದವನು – ಬ್ರಾಹ್ಮಣನಾಗಿ ಶೌನಕ ಗೋತ್ರ ನೇರಿದ ! ಅದೂ ಮೂಲದಲ್ಲಿ ಭೃಗುವಂಶದ ಕಳೆ. ಗರ್ಗನೂ ಮೊದಲು ಕ್ಷತ್ರಿಯನಾಗಿದ್ದವನೇ ! ರಥೀತರನು ಬ್ರಾಹ್ಮಣನಾದದ್ದೂ ಹಾಗೆಯೇ ! ಹೀಗೆ ಅಜಾಮೀಢ, ಮುದ್ಗಲ, ಭರ್ಮ್ಯಾಶ್ವ, ಮುಂತಾದ ವರನ್ನೂ ಹೆಸರಿಸಬಹುದು. ಮೂಲದಲ್ಲಿ ಕಣ್ವರು ಯಾರು ? ಹಾರೀತ ಗೋತ್ರದ ಪ್ರವರ ನೋಡು ! ಅಂಗೀರಸರೂ ಸರಿ ! ಅಂಬರೀಷ, ಯೌವ್ವನಾಶ್ವರು ಯಾರು ? ಅರಸರಲ್ಲವೆ ? ಆದುದರಿಂದಲೇ ಋಷಿ ಮೂಪವನ ಮೂಲ ನೋಡಬಾರದೆನ್ನುವರು. ಅವನೀಗ ಋಷಿ ಆದುದು ಮುಖ್ಯ. ಇದು ಹಾಗಿರಲಿ. ರಾಜ್ಯ ಬಿಟ್ಟು ನನ್ನ ಹಿಂದೆ ಬರುವ ನಿನ್ನ ತೀರ್ಮಾನವನ್ನು ಮತ್ತೊಮ್ಮೆ ಯೋಚಿಸು."

**ವಿಶಾಲ :** "ಯೋಚಿಸುವುದಕ್ಕೇನೂ ಉಳಿದಿಲ್ಲ. ಗುರುವರ್ಯ ! ನಾನು ಹೇಳಿದ್ದೇ ನಿಶ್ಚಯ !"

* * *

ವೃದ್ಧೆಯಾದ ರಾಜಮಾತೆಗೆ ಸಮಾಧಾನ ಹೇಳಿ, 'ವಿಶಾಲವರ್ಮ', ವಿಶಾಲ'ಶರ್ಮ'ನಾಗಿ, ಅಗಸ್ತ್ಯಗೋತ್ರ ಸೇರಿ, ಆಶ್ರಮದ ನಿಯಮಗಳಿಗೆ ಒಳಪಟ್ಟು, ಅಗಸ್ತ್ಯರನ್ನು ಹಿಂಬಾಲಿಸಿದ. ಸುಹೋತ್ರನನ್ನು ಚೆನ್ನಾಗಿ ಪರೀಕ್ಷಿಸಿ, ಅಧಿಕಾರಯೋಗ್ಯನೆಂದು ತೀರ್ಮಾನಿಸಿ, ಅಗಸ್ತ್ಯರು ಅವನಿಗೆ ಪಟ್ಟಗಟ್ಟಿ, ತಮ್ಮ ಶಿಷ್ಯರಲ್ಲಿ ಯಜ್ಞವಾಹನೆಂಬುವನನ್ನು ಅಲ್ಲಿ ಪುರೋಹಿತನನ್ನಾಗಿ ನಿಯಮಿಸಿ, ಒಂದು ತಿಂಗಳ ನಂತರ ಪೌರ್ಣಮಿಯ ದಿನದಂದು ಸಿಂಧುವೀರ ದೇಶಕ್ಕೆ ಪಯಣಿಸಿದರು !

* * *

ವಿದರ್ಭರಾಜನೂ, ಲೋಪಾಮುದ್ರೆಯೂ, ಅಗಸ್ತ್ಯರೂ ಏಕಾಂತ ಸಂಭಾಷಣೆಯಲ್ಲಿದ್ದು ಒಟ್ಟಿಗೇ ಹೊರಬಿದ್ದುದನ್ನು ಕೇಳಿದ ಇಲ್ವಲ, "ನಾನು ನಿರೀಕ್ಷಿಸಿದ್ದಂತೆಯೇ ಆಗಿದೆ !" ಎಂದುಕೊಂಡ ! ಅಗಸ್ತ್ಯರು ಉಜ್ಜೈನಿಗೆ ಪಯಣಿಸಿದುದನ್ನೂ, ಭೃಗುಕಚ್ಛದಲ್ಲಿ ಜಮದಗ್ನಿಯ ಕೊಲೆಯನ್ನೂ, ಅದರ ಪರಿಣಾಮವಾದ ಸಹಸ್ರಾರ್ಜುನನ ವಧೆಯನ್ನೂ ಕುರಿತು ಚಾರರು ವಾರ್ತೆ ತಂದರು ! ಇಲ್ವಲ ನಂಬದಾದರೂ ನಂಬಲೇ ಬೇಕಾದ ಸಮಾಚಾರ ಆದಾಗಿತ್ತು.

ಶುಕ್ರಾಚಾರ್ಯನೊಡನೆ ಬಹುದೀರ್ಘವಾಗಿ ಏಕಾಂತಾಲೋಚನೆಯಲ್ಲಿದ್ದು, ಇಲ್ವಲ ಇನ್ನೆರಡು ಯೋಜನೆಗಳನ್ನು ಒಡನೆಯೇ ಕೈಗೊಂಡ. ಅವನ ಒಂದು ರಹಸ್ಯ ಭಯೋತ್ಪಾದಕತಂಡ ಗೂಢವಾಗಿ ಅಗಸ್ತ್ಯಾಶ್ರಮದತ್ತ ನಡೆಯಿತು. ಇನ್ನೊಂದು ಪ್ರಬಲ ಸೈನ್ಯದ ತುಕಡಿ, ಉಜ್ಜೈನಿಯತ್ತ ಪಯಣಿಸಿತು !

---

## ೧೨ ಇಲ್ವಲನ ಸಂಚುಗಳು

ಸೋಮಶ್ರವನೆಂಬ ಅಗಸ್ತ್ಯಭ್ರಾತಾ ಈಗ ಕುಲಪತಿಯ ಸ್ಥಾನದಲ್ಲಿರುತ್ತಾ ಆಶ್ರಮದ ಸಕಲ ಜವಾಬ್ದಾರಿಯನ್ನೂ ಹೊತ್ತು. ಅದರ ರಕ್ಷಕನೂ ಸಂಚಾಲಕನೂ ಆಗಿದ್ದಾನೆ ! ಅಗಸ್ತ್ಯರು ಉತ್ತರ ಸಂಚಾರ ಹೊರಟ ಬಹುದಿನಗಳ ತನಕ ಆಶ್ರಮದಲ್ಲಿ ಏನೂ ಅತಿಶಯ ಕಾಣಿಸಲಿಲ್ಲ.

ಕ್ರಮೇಣ ಅತಿಶಯಗಳು ಕಾಣಿಸಿಕೊಳ್ಳಲಾರಂಭಿಸಿದವು. ಒಂದು ಪ್ರಾತಃಕಾಲ ಸೋಮಶ್ರವ ಅಗ್ನಿಕಾರ್ಯದಲ್ಲಿರುವಾಗ ಅಗ್ನಿದೇವನು ಭಯಂಕರವಾಗಿ ಕಿಡಿಗಾರಲಾರಂಭಿಸಿದ ! ಆಶ್ರಮದಲ್ಲಿ ರಾಕ್ಷಸ ಶಕ್ತಿಗಳ ಪ್ರವೇಶವಾಗಿರುವುದನ್ನು ಹಾಗೆ ಅರಿತು, ಪ್ರಿಯವ್ರತ ಮತ್ತು ಚಾಕ್ರಾಯಣರನ್ನು ಋಷಿ ಬರಮಾಡಿ, "ಸಮಾಚಾರವೇನು?" ಎನ್ನುತ್ತಾನೆ.

ಇಲ್ವಲನ ಕಡೆಯವರು ಇತ್ತ ಬಂದಿರುವ ಮಾಹಿತಿಯುಂಟೆಂದು ಅವರು ತಿಳಿಸುತ್ತಾರೆ. ಹಗಲೂ ರಾತ್ರಿ ಆಶ್ರಮದ ರಕ್ಷಣೆಯಲ್ಲಿ ಹೊಸ ಕ್ಷತ್ರಿಯ ಪಡೆಗಳನ್ನು ತೊಡಗಿಸುವಂತೆ ಆಜ್ಞಾಪಿಸಿ ಅಗಸ್ತ್ಯಸೋದರ ಆಶ್ರಮದ ದೈನಂದಿನ ಕಾರ್ಯಗಳನ್ನು ಗಮನಿಸುತ್ತಾನೆ.

ಇಲ್ವಲನ ಅನುಚರರು ಈ ಸಲ ಯಾರ ಕಣ್ಣಿಗೂ ಕಾಣುವಂತೆ ಬಾರದೆ, ಅದೃಶ್ಯರಾಗಿ ಬಂದಿದ್ದರೆಂದು ಕಾಣುತ್ತದೆ ! ಆಶ್ರಮಕ್ಕೆ ದೇವತೆಗಳ ರಕ್ಷೆ ಇದ್ದುದನ್ನು ಸ್ವಯಂ ಇಲ್ವಲನೇ ಕಂಡಿದ್ದನಷ್ಟೆ !! ಹೊರಗಿನ, ಸುತ್ತಿನ ಪ್ರತಿಯೊಂದು ಗಿಡ, ಮರ, ಬಂಡೆಗಳನ್ನು ಪರೀಕ್ಷಿಸಲಾಗಿತ್ತು.

ಆಶ್ರಮದ ರಕ್ಷಕರು ಆಶ್ರಮವನ್ನು ಎಲ್ಲೆಡೆಯೂ ಬಳಸಿದ್ದರು. ಗೋದಾವರಿಯ ಸ್ನಾನಘಟ್ಟದಲ್ಲಿ ಆಶ್ರಮ ಸ್ತ್ರೀಯರ ವಿಶೇಷ ರಕ್ಷಣೆಗಾಗಿ ವಟುಗಳು ಧನುರ್ಧರರಾಗಿ ಆಯ ಕಟ್ಟಿನ ಸ್ಥಳಗಳಲ್ಲಿ ಅಡಗಿ ಕುಳಿತಿರುತ್ತಿದ್ದರು.

ಆಶ್ರಮದಲ್ಲಿ ಈಗ ಬಹುವೃದ್ಧನಾದ ಆಚಾರ್ಯನೆಂದರೆ ಮಹರ್ಷಿ **ಸುಮೇಧಸರೆಂಬುವರು.** ಕೇವಲ ಮಿತಭಾಷಿಗಳಾಗಿದ್ದ ಈ ಮಹಾನುಭಾವರು ಯಾಜ್ಞಿಕ ಪ್ರಯೋಗಗಳನ್ನು – ಅರ್ಥ ಸಹಿತ, ವೇದಾಂಗಗಳ ಸಹಿತ, ಶಿಷ್ಯರಿಗೆ ಬೋಧಿಸುತ್ತಾ, ಶಾಂತಪ್ರಿಯರಾಗಿ ಏಕಾಂತದಲ್ಲಿರುತ್ತಿದ್ದರು. ಅಗಸ್ತ್ಯರು ಹೊರಸಂಚಾರಕ್ಕೆ ಹೊರಟ ಮೇಲೆ, ಸೋಮಶ್ರವನು ಕುಲಪತಿಯ ಸ್ಥಾನದಲ್ಲಿದ್ದರೂ, ವಯೋವೃದ್ಧರಾದ ಈ ಮಹಾನುಭಾವರನ್ನು ಪರೋಕ್ಷದಲ್ಲಿ ಎಲ್ಲರೂ ಆ ಸ್ಥಾನದಲ್ಲಿಯೇ ಗೌರವಿಸುತ್ತಿದ್ದರು. ಇವರ ಪತ್ನಿ **ಸುವರ್ಚಲಾ** ಎಲ್ಲರಿಗೂ ಪೂಜನೀಯಳಾದ ಆಶ್ರಮದ 'ಮಾತೆ' ಆಗಿದ್ದಳು. ಇವರ ಏಕಮೇವ ಪುತ್ರಿ–**ಮಾಲತೀ**– ತುಂಬಾ ಸ್ಫುರದ್ರೂಪಿಯೂ, ಚುರುಕು ಬುದ್ಧಿಯವಳೂ ಆಗಿ, ಅಗ್ನಿಶಿಖೆಯಂತೆ ತೇಜೋವೃತಳಾಗಿ ಆಶ್ರಮವನ್ನೇ ಬೆಳಗುವ ಅಗ್ನಿಜ್ವಾಲೆಯಂತಿದ್ದಳು. ಆಶ್ರಮವನ್ನು ಸ್ವಚ್ಛವಾಗಿಟ್ಟು, ಅಗಸ್ತ್ಯರ ಉಪಾಸನಾಸ್ಥಾನಗಳನ್ನೆಲ್ಲ ದಿನವೂ ಸಗಣಿಯಿಂದ ಶುದ್ಧಿಮಾಡಿ, ರಂಗವಲ್ಲಿ ಹಾಕಿ, ಅಲ್ಲಿಗೆ ಬೇಕಾದ ಪುಷ್ಪಗಳನ್ನೆಲ್ಲ ಸಂಗ್ರಹಿಸಿಡುವ ಜವಾಬ್ದಾರಿ ಇವಳದಾಗಿತ್ತು. ಇತರ ಋಷಿ ಕುಮಾರಿಯರು, ಪ್ರಿಯಂವದಾ. ಮೇಖಲಾ, ಆಗ್ನಾಯಿ, ಸುಪಿಪ್ಪಲಾ, ಕಾತ್ಯಾಯನೀ ಮೊದಲಾದವರು ಇವಳ ಓರಿಗೆಯವರಾಗಿದ್ದು ಅವಳಿಗೆ ಸಹಾಯಮಾಡುತ್ತಿದ್ದರು.

ಮಾಲತೀ, ಆಶ್ರಮದಲ್ಲಿ ಆಯುರ್ವೇದವನ್ನು ಚ್ಯವನಶಿಷ್ಯರಾದ ಪ್ರಾಚೀನಯೋಗ್ಯರೆಂಬ ಹಿರಿಯರಲ್ಲಿ ಕಲಿಯುತ್ತಿದ್ದಳು. ಚಾಕ್ರಾಯಣ

ನಿಂದ ಸೈನ್ಯತರಬೇತಿಯನ್ನೂ ಅವಳು ಪಡೆಯುತ್ತಿದ್ದಳು. ಆಶ್ರಮದ ಯುವಕ-ಯುವತಿಯರಿಗೆ ಅಶ್ವಾರೋಹಣ, ಖಡ್ಗವಿದ್ಯೆ, ಧನುರ್ವಿದ್ಯೆ ಮೊದಲಾದ ಸಾಮಾನ್ಯ ರಕ್ಷಣೆಯ ವಿದ್ಯೆಗಳು ಕಡ್ಡಾಯವಾಗಿದ್ದವು.

ಒಂದು ಬೆಳಿಗ್ಗೆ, ಆಶ್ರಮದಲ್ಲಿ ಪೂಜಾಸ್ಥಳಗಳನ್ನೆಲ್ಲ ಅಣಿಮಾಡಿ ಮಾಲತಿಯು ಆಚಾರ್ಯ ಪ್ರಾಚೀನಯೋಗ್ಯರ ಅಪ್ಪಣೆಯಂತೆ ಕೆಲವು ಆಯುರ್ವೇದ ಮೂಲಿಕೆಗಳನ್ನು ತಾನೇ ಅರಿತು, ಪರೀಕ್ಷಿಸಿ ತರಲು ತನ್ನ ಗೆಳತಿಯರೊಡನೆ ಗೋದಾವರೀ ತೀರದಲ್ಲಿ ಅರಸುತ್ತಾ ಹೊರಟಳು. ಆಶ್ರಮದ ಪರಿಸರ ಪರಿಧಿ-ಮುಗಿಯುತ್ತಾ ಬರಲು, ಅಲ್ಲಿ ಕಾವಲಿದ್ದ ಪ್ರಿಯವ್ರತನ ಅನುಚರರು, ಅವಳನ್ನು ಮುಂದೆ ಹೋಗದಂತೆ ಎಚ್ಚರಿಸಿದರು!

ಕಾವಲು ಶಿಷ್ಯ : "ಋಷಿಪುತ್ರಿ! ಇಲ್ಲೆಲ್ಲ ರಾಕ್ಷಸರು ಬಂದಿರುವ ವಾರ್ತೆಯುಂಟು! ಇನ್ನು ಬಹುದೂರ ನೀವು ಕುಮಾರಿಯರು ಹೋಗುವುದು ಅಪಾಯ. ವಾಪಸ್ಸು ಹೊರಡಿ!"

ಮಾಲತೀ : "ಗುರುಗಳ ಆಜ್ಞೆಯಂತೆ ಮೂಲಿಕೆಗಳನ್ನು ಅರಸಿ ಹೊರಟಿದ್ದೇವೆ. ಇದು ನಡುಹಗಲು. ಈಗ ಯಾವ ಅಪಾಯವೂ ಇರಲಾರದು. ಅಷ್ಟಕ್ಕೂ ನಿಮ್ಮ ಕಾವಲಿನ ಒಬ್ಬ ಋಷಿ ಕುಮಾರ ನಮ್ಮೊಡನೆ ಬಂದರೆ ಸಾಕಲ್ಲ! ಇನ್ನೊಂದೇ ಮೂಲಿಕೆ ಬೇಕಾಗಿದೆ. ನನ್ನ ಕಣ್ಣಿಗಂತೂ ಬೀಳಲಿಲ್ಲ! ಕೊಂಚವೇ ದೂರ ಹೋಗಿ ಬರುತ್ತೇನೆ."

ಕಾವಲು ಶಿಷ್ಯನಿಗೆ ಏನು ಹೇಳಲೂ ತೋರಲಿಲ್ಲ! ಕೊಂಚವೇ ದೂರದಲ್ಲಿ ಸ್ವಯಂ ಚಾಕ್ರಾಯಣನೇ ಗೋದಾವರೀ ತೀರದಲ್ಲಿ ಮಾಧ್ಯಾಹ್ನಿಕಕ್ಕೆ ನಿಂತಂತೆ ಕಾಣಿಸಿತು! ಅವನದೇ ಕುದುರೆಯನ್ನು ಅಲ್ಲಿ

ಒಂದು ಮರಕ್ಕೆ ಕಟ್ಟಿಹಾಕಿತ್ತು ! ಅವನ ಬಿಲ್ಲು ಬಾಣ ಬತ್ತಳಿಕೆಗಳನ್ನು ಕುದುರೆಯ ಪಾರ್ಶ್ವದಲ್ಲಿ ತೂಗುಹಾಕಿ ಬಿಗಿಯಲಾಗಿತ್ತು. ಶಿಷ್ಯ ಅವನನು ಕಂಡು ಹೆಸರು ಕರೆದು ಕೂಗಿದ ! ಚಾಕ್ರಾಯಣ ಇವರತ್ತ ನೋಡ "ಏನು?" ಎಂಬಂತೆ ಕೇಳುವವನಂತೆ ಸನ್ನೆ ಮಾಡಿದ. ಶಿಷ್ಯ ಕೂಗಿ ಹೇಳಿದ; "ಈ ಕನ್ಯೆಯರಿಗೆ ಇನ್ನೊಂದು ಮೂಲಿಕೆ ಬೇಕಿದೆಯಂತೆ. ಮುಂದೆ ಹೋಗಲು ಬಿಡಲೇ ?" "ಬಿಡು ನಾನಿದ್ದೇನೆ" ಎಂಬಂತೆ ಚಾಕ್ರಾಯಣ ಸನ್ನೆ ಮಾಡಲು, ಶಿಷ್ಯ ನಿಶ್ಚಿಂತೆಯಿಂದ ಬಿಟ್ಟ.

ಮುಂದೆ ನಡೆದ ಮಾಲತಿ, ನದೀದಡದಲ್ಲಿ ಮೂಲಿಕೆಗಳನ್ನರಸುತ್ತಾ ಪ್ರಿಯಂವದಾ, ಸುಪಿಪ್ಪಲಾ ಮೊದಲಾದವರಿಂದ ಅಗಲಿ, ಒಂದೇ ದಿಕ್ಕನ್ನು ಹಿಡಿದು ಕೊಂಚ ದೂರ ನಡೆದು ಸಖಿಯರು ಪರಸ್ಪರ ಕಣ್ಮರೆಯಾದರು ! ಕಾಲ ಮುಂದೆ ನಡೆಯುತ್ತಾ ಸೂರ್ಯ ಸುಡಲಾರಂಭಿಸಿದ್ದ.

ಮಾಲತಿಗೆ ದಣಿವು, ಬಾಯಾರಿಕೆ ಒಂದು ಕಡೆ ! ಔಷಧ ಮೂಲಿಕೆ ದೊರೆಯದ್ದೊಂದು ಕಡೆ ! ಕೊಂಚ ದಾರಿ ತಪ್ಪಿದಂತೆಯೂ ಅನಿಸಿತು. ಸಖಿಯರು ಎಲ್ಲಿ ಹೋದರೆಂದು ಹೆಸರು ಹಿಡಿದು ಕರೆದಳು. ಉತ್ತರವಿಲ್ಲ. ಆಗ ಕೇಳಿಸಿತು ಚಾಕ್ರಾಯಣನ ಕುದುರೆಯ ಗೊರಸುಗಳ ಸಪ್ಪಳ. ಹಿಂದಿರುಗಿ ನೋಡಿದಳು ! ಹೌದು, ಚಾಕ್ರಾಯಣನೇ ಬರುತ್ತಿದ್ದಾನೆ. ಚಾಕ್ರಾಯಣ ತುಂಬಾ ಸ್ಫುರದ್ರೂಪಿಯಾದ ಯುವ ಋಷಿ. ತೆಳುವಾದ, ನೀಳವಾದ, ಗೌರ ವರ್ಣದ ದೃಢಾಂಗ ಅವನು. ದಟ್ಟವಾಗಿ ಬೆಳೆದ ಗಡ್ಡ ಮೀಸೆಗಳು ಕಪ್ಪಾಗಿ ಅವನ ಮುಖವನ್ನಾವರಿಸಿ ಆ ಮುಖದ ಸಹಜ ಗೌರವರ್ಣಕ್ಕೆ ವಿಶಿಷ್ಟ ಶೋಭೆ ತಂದಿದ್ದವು. ತಲೆಯಮೇಲೆ ಎತ್ತಿ ಕಟ್ಟಿದ್ದ ಅವನ ಜಟೆ ಅವನನ್ನು ಪರಶಿವನಂತೆ ಕಾಣುವಂತೆ ಮಾಡಿತ್ತು. ಎಡಗೈಯಲ್ಲಿ ಕುದುರೆಯ ಲಗಾಮನ್ನು ಹಿಡಿದು. ತೋಳಿನಲ್ಲಿ ಬಿಲ್ಲು ಧರಿಸಿ, ಬಲಗೈಯಲ್ಲಿ ಬಾಣವನ್ನು ತಿರುವುತ್ತ ಅವನು ಮಾಲತಿಯ ಅಂಗರಕ್ಷಕನೆಂಬಂತೆ ಹಿಂಬಾಲಿಸಿದ್ದ

ಅವಳಿಗೆ ಎಷ್ಟೋ ಧೈರ್ಯ ತಂದಿತ್ತು. ಹಿಂದಿರುಗಿ ನೋಡಿದಳು ! ಹೌದು ! ಚಾಕ್ರಾಯಣನೇ !

ಚಾಕ್ರಾಯಣ : "ಋಷಿಕುಮಾರಿ ! ಸಾಕು, ಇನ್ನು ಮುಂದೆ ಹೋಗಬೇಡ. ಅಪಾಯ ಕಾದಿದೆ. ಆಶ್ರಮಕ್ಕೆ ನನ್ನೊಡನೆ ಹಿಂದಿರುಗು."

ಮಾಲತಿ : "ನನಗೆ ಬೇಕಾದ ಮೂಲಿಕೆ?"

ಚಾಕ್ರಾಯಣ ; "ಇಲ್ಲೇ ಇದೆ !"

ಮಾಲತಿ : "ಎಲ್ಲಿ ?"

ಚಾಕ್ರಾಯಣ : "ನಿನ್ನ ಪಾದದ ಬಳಿಯಲ್ಲಿಯೇ !"

ಮಾಲತಿ : (ಪಾದದಸುತ್ತ ನೋಡಿ, ಕಾಣದೇ) "ಇಲ್ಲವಲ್ಲ ! ಇಲ್ಲೆಲ್ಲೂ ಕಾಣುತ್ತಿಲ್ಲ !"

ಚಾಕ್ರಾಯಣ : "ಮೂಲಿಕೆಗಳು ನೆಲದಮೇಲೆಯೇ ಬೆಳೆಯ ಬೇಕೆಂಬ ನಿರ್ಬಂಧವೇನಿಲ್ಲ ! ಕುದುರೆಯ ಹೆಗಲೇರಿಯೂ ಅವು ಕುಳಿತಿರಬಹುದು !"

ಮಾಲತಿಗೆ ಅನುಮಾನ ಬರುತ್ತದೆ !ಆಶ್ರಮದ ಶಿಸ್ತಿಗೆ ಕಾರಣನಾದ ಚಾಕ್ರಾಯಣ ಹೀಗೆಂದೂ ಮಾತಾಡುವವನಲ್ಲ! ಇವನಾರು ? ಸಂದೇಹವೇ ಇಲ್ಲ ! ಇವನು ಚಾಕ್ರಾಯಣನೇ ! ಇವನಿಗೇನಾಗಿದೆ ? ಮಾಲತಿ ಯೌವ್ವನಭರಿತಳಾಗಿದ್ದರೂ, ಚಾಕ್ರಾಯಣ ಸುಂದರ ಪುರುಷನೂ, ಅವಳಿಗೆ ಕ್ಷತ್ರ ವಿದ್ಯಾಗುರುವೂ ಆಗಿದ್ದರೂ, ಈರ್ವರಲ್ಲೂ ಯಾವ ದೈಹಿಕ ಆಕರ್ಷಣೆಯೂ ಅವರಿಗೆ ಬೆಳೆದಿರಲಿಲ್ಲ ! ಅಗಸ್ತ್ಯರ ವರ್ಚಸ್ಸು ಆಶ್ರಮ ದಿಂದ ಕಾಮವನ್ನು ಹೊರಗಿಟ್ಟಿತ್ತು. ಅಗಸ್ತ್ಯರು ಹೊರಹೊರಟ

ಮೇಲೇನಾದರೂ ಚಾಕಾಯಣನಿಗೆ ಬುದ್ಧಿ ಭ್ರಮಣೆ ಆಯಿತೋ ........!
ಹೀಗೆ ಚಿಂತಿಸುತ್ತಾ, ಅವನನ್ನು ಮತ್ತೆ ನೋಡುತ್ತಾ ನಿಂತಳು.

ಚಾಕ್ರಾಯಣ : "ಕುಮಾರಿ ! ಈ ಸುಸಂಧಿಯನ್ನು ವ್ಯರ್ಥ ಮಾಡುವುದೇ ? ನಿನಗೂ ಮೂಲಿಕೆ ಬೇಕು ! ನನಗೂ ಒಂದು ಬೇಕು. ಈಶ್ವರ ಎರಡನ್ನೂ ಹತ್ತಿರವೇ ಇಟ್ಟಿರುವಾಗ ಉಪಯೋಗಿಸಿಕೊಳ್ಳದೆ, ರೋಗವನ್ನು ಬೆಳೆಯ ಬಿಡುವುದೇ ?"

ಮಾಲತಿಗೆ ಈಗ ಸ್ಪಷ್ಟವಾಯಿತು ! ಇವನು ಚಾಕ್ರಾಯಣನಲ್ಲ ! ಗಟ್ಟಿಯಾಗಿ ಚೀರಲು ಪ್ರಾರಂಭಿಸುತ್ತಾಳೆ ! ಅಷ್ಟರಲ್ಲಿ ಅಶ್ವಾರೋಹಿ ಯಾದ ಆ 'ಚಾಕ್ರಾಯಣ' ಅವಳನ್ನು ಕುದುರೆಯ ಮೇಲಕ್ಕೆ ಎಳೆದು ಕೊಂಡು ಮುನ್ನಡೆದು ನಾಗಾಲೋಟದಲ್ಲಿ ಕಾಡಿನಲ್ಲಿ ಮಾಯವಾಗಿ ಬಿಡುತ್ತಾನೆ !

ಬೇರೊಂದತ್ತ ಪ್ರಿಯಂವದೆ, ಮೇಖಲೆ, ಆಗ್ನಾಯಿ, ಸುಪಿಪ್ಪಲಾ, ಕಾತ್ಯಾಯನಿಯರಿಗೂ ಹೀಗೆ ಒಬ್ಬೊಬ್ಬ "ಚಾಕ್ರಾಯಣರು" ಕಾಣಿಸಿ ಕೊಂಡು ಅವರನ್ನೂ ಹಾಗೆಯೇ ಕುದುರೆಯಮೇಲೆ ಹಾರಿಸಿಕೊಂಡು ಅಡವಿಗೆ ಹೋಗಿ ಬಿಡುತ್ತಾರೆ !

ಎರಡು ದಿನ ಅವರ ಪತ್ತೆಯೇ ಸಿಗದೆ ಆಶ್ರಮದಲ್ಲಿ ಕಳವಳ, ಕೋಲಾಹಲ, ಏರ್ಪಡುತ್ತದೆ. ಸೋಮಶ್ರವನಿಗೆ ಅಗಾಧ ಚಿಂತೆ ಏರ್ಪಟ್ಟು, ಅಗಸ್ತ್ಯರಿಗೆ ಹೇಗೆ ಮುಖ ತೋರಿಸುವುದೆಂಬ ನಾಚಿಕೆ ಏರ್ಪಟ್ಟು, ಶಿಷ್ಯರಿಗೆ ಅವರನ್ನು ಎತ್ತಲೂ ಹುಡುಕಿ ತರುವಂತೆ ಕಟ್ಟಪ್ಪಣೆ ಮಾಡುತ್ತಾನೆ.

ಮರು ದಿನ ಸ್ನಾನಕ್ಕೆ ಹೊರಟ ಶಿಷ್ಯರಲ್ಲಿ ಮಿತ್ರಯಜ್ಞನಿಗೆ ದೂರದಲ್ಲಿ ಮೂಲಿಕೆ ಅರಸುತ್ತ ನೆಲನೋಡುತ್ತಿರುವ ಮಾಲತಿ ಕಾಣು ತ್ತಾಳೆ.

ದರ್ಭೆತರಲು ಹೊರಟ ಶರ್ಕರಾಕ್ಷನಿಗೆ ಪ್ರಿಯಂವದೆಯೂ, ಸಮಿತ್ತು ತರುವ ವೇಗಾಯನನಿಗೆ ಕಾತ್ಯಾಯನಿಯೂ, ವೈಶ್ವಾನರಿಗೆ ಸುಪ್ಪಿಪ್ಪಲೆಯೂ, ಬಿಂದುವಿಗೆ ಆಗ್ನಾಯಿಯೂ ಹೀಗೆ ಕಣ್ಮರೆಯಾದ ಋಷಿಕನ್ಯೆಯರು ಒಬ್ಬೊಬ್ಬರಾಗಿ ವಿಚಿತ್ರ ರೀತಿಗಳಲ್ಲಿ ಕಾಣುತ್ತಾರೆ ! ಎರಡು ದಿನ ಇವರೆಲ್ಲಿ ಹೋಗಿದ್ದರು ! ಆಗ್ರಹ ಪಡಿಸಿ ಅವರನ್ನು ಮತ್ತೆ ಕರೆತರಲು ಅವರು ಅವರನ್ನು ಬೆನ್ನಟ್ಟಿ ಹೊರಡುತ್ತಾರೆ ! ಕ್ರಮೇಣ ಅಡವಿಯಲ್ಲಿ ಮರೆಯಾತ್ತಾರೆ !!

ಆಶ್ರಮದ ಕಳವಳ ಹೆಚ್ಚಾಗುತ್ತದೆ ! ಆ ದಿನ ಋಷಿಕನ್ಯೆಯರು ಕಣ್ಮರೆ ! ಈದಿನ ಋಷಿ ಕುಮಾರರು ಕಣ್ಮರೆ !

ಚಾಕ್ರಾಯಣ ತಾನು ಆಶ್ರಮ ಬಿಟ್ಟು ಎಲ್ಲೂ ಹೋಗಿಲ್ಲವೆಂದು ಪ್ರಮಾಣ ಮಾಡಿ ಹೇಳುತ್ತಾನೆ. ನಾಲ್ಕನೆಯ ಸಾಯಂಸಂಧ್ಯಾ ಮುಗಿದ ನಂತರ, ಕತ್ತಲು ಆವರಿಸಿತ್ತು. ಸೋಮಶ್ರವನು ರಾತ್ರಿ ಆಶ್ರಮದ ರಕ್ಷಣೆಯ ಉಸ್ತುವಾರಿ ನೋಡಿ ಬರುತ್ತಿದ್ದಾಗ ಕಾಲಿಗೆ ಒಂದು ಕಡೆ ಏನೋ ಮೃದು ಪದಾರ್ಥವೊಂದರ ಸ್ಪರ್ಶವಾಗುತ್ತದೆ ! ಬಗ್ಗಿ ನೋಡಿದಾಗ ಏನೂ ಕಾಣಲಿಲ್ಲ ! ದೂರದ ಪಂಜಿನವನ್ನು ಕರೆಸಿ, ಪಂಜಿನ ಬೆಳಕಿನಲ್ಲಿ ನೋಡಿದಾಗ ಅದು ಮಾಲತಿಯ ನಗ್ನ ಶವ !! ಗುಹ್ಯ ಸ್ಥಾನವೆಲ್ಲ ರಕ್ತಮಯ !!! ಅಂಥದೇ ಮೃತ ಶರೀರಗಳು–ಆಗ್ನಾಯೀ, ಸುಪಿಪ್ಪಲಾ, ಕಾತ್ಯಾಯನೀ ಮೊದಲಾದ ಕಣ್ಮರೆಯಾದ ಕನ್ಯೆಯರವು–ಇನ್ನೂ ಅಲ್ಲಲ್ಲಿ ಬಿದ್ದಿರುವುದನ್ನು ಕಂಡು ಸೋಮಶ್ರವನ ಎದೆ ಒಡೆಯು ತ್ತದೆ !!

ಮರುದಿನ ಅದೇ ವೇಳೆಗೆ ಅರ್ಧಮರ್ಧ ತಿನ್ನಲ್ಪಟ್ಟ ಶರ್ಕರಾಕ್ಷ, ವೇಗಾಯನ, ವೈಶ್ವಾನರಿ, ಬಿಂದು ಮೊದಲಾದವರ ಶರೀರಗಳೂ ಕಾಣಬರುತ್ತವೆ ! ಇವು ಇಲ್ಲಿ ಹೇಗೆ ಬಂದವು ? ಇದೆಲ್ಲ ರಾಕ್ಷಸಮಾಯೆ ! ಇಲ್ವಲನ ಕಡೆಯವರು ಸೇಡು ತೀರಿಸಿಕೊಂಡರು !! ಉಳಿದವರನ್ನು ರಕ್ಷಿಸುವುದೆಂತು ? ಎನ್ನುತ್ತಾ ಸೋಮಶ್ರವ, ಚಾಕ್ರಾಯಣ ಮತ್ತು ಪ್ರಿಯವ್ರತರ ಹೆಸರನ್ನು ಗಟ್ಟಿಯಾಗಿ ಕರೆಯಲಾರಂಭಿಸುತ್ತಾನೆ.

ಕಲ್ಲಿನ ಸುರಿಮಳೆ ಆಶ್ರಮದಲ್ಲಿ ಆರಂಭವಾಗುತ್ತದೆ ! ಗಾಢಾಂಧಕಾರದಲ್ಲಿ ಯಾರು ಹಾಗೆ ಬೀಸುವರೆಂಬುದು ಕಾಣದೆ, ಋಷಿಸಂಘ ಕಂಗಾಲಾಗುತ್ತದೆ !

ದಿಢೀರನೆ ಆಶ್ರಮದಲ್ಲಿ ಬೆಂಕಿ ಕಾಣಿಸಿಕೊಂಡು ಪರ್ಣಶಾಲೆಗಳು ಒಂದೊಂದಾಗಿ ಉರಿಯಲಾರಂಭಿಸುತ್ತವೆ. ವೃದ್ಧ ತಾಪಸರೂ, ಸ್ತ್ರೀಯರೂ, ವಟುಗಳೂ ಚೀರುತ್ತಾ ಹೊರಬಂದು' ಕಲ್ಲಿನಮಳೆಗೆ ಅನೇಕರು ಹತರಾಗುತ್ತಾರೆ ! ಉಳಿದವರು ಓಡಲಾರಂಭಿಸುತ್ತಾರೆ ! ಬಹುದೂರ ಓಡಿದವರು ಮತ್ತೆ ಬರದೆ ಮಾಯವಾಗಿ ಬಿಡುತ್ತಾರೆ ! ಚಾಕ್ರಾಯಣ, ಸೋಮಶ್ರವ, ಪ್ರಿಯವ್ರತ, ಸುಮೇಧಸ ಮೊದಲಾದ ಆಶ್ರಮರಕ್ಷಕರು ಏನುಮಾಡುವುದೆಂದು ತೋರದೆ, ಅಗಸ್ತ್ಯರನ್ನು ನೆನೆಸಿ ಸ್ತುತಿಸುತ್ತಾರೆ. ವರುಣಸೂಕ್ತವನ್ನು ಜಪಿಸುತ್ತಾರೆ. ರಾಕ್ಷೋಘ್ನ ಮಂತ್ರಗಳನ್ನು ಪಠಿಸುತ್ತಾರೆ. ಏನೂ ಪ್ರಯೋಜನವಾಗುವುದಿಲ್ಲ.

ಸುಸಮೃದ್ಧವಾದ ಅಗಸ್ತ್ಯಾಶ್ರಮದಲ್ಲಿ ಒಂದೇ ಕೊರತೆ ಇದ್ದಿತು! ಮಾಯಾವಿದ್ಯೆ ! ಅದು ಇಲ್ವಲನಲ್ಲಿ ಸಮೃದ್ಧವಾಗಿತ್ತು ! ಶಂಬರಾಸುರನ ನೂರಾರು ಮಾಯೆಗಳನ್ನು ಅವನು ಶುಕ್ರನ ಮೂಲಕ ಕಲಿತಿದ್ದ !

ತನಗಾದ ಅಪಮಾನಕ್ಕೆ ಇಲ್ವಲ ಹೀಗೆ ಸೇಡು ತೀರಿಸಿಕೊಂಡಿದ್ದ !

* * *

ವಿದರ್ಭದ ದೊರೆಗೆ ಪರಶುರಾಮರ ಕ್ಷತ್ರನಿರ್ಮೂಲನ, ದಂಡ ಯಾತ್ರೆಯ ಸಮಾಚಾರ ತಿಳಿದು ಗಾಬರಿ ಆಗಿತ್ತು ! ಹೇಗೂ ತನಗೆ ಪುತ್ರಸಂತಾನವಿಲ್ಲ ! ಆದರೂ ರಾಜ್ಯಕ್ಕೆ ವಿಪತ್ತು ಬಾರದಂತೆ ಕಾಪಾಡುವುದು ಹೇಗೆ ? ಅಗಸ್ತ್ಯರೂ ಹತ್ತಿರದಲ್ಲಿಲ್ಲ ! ಉಜ್ಜಯಿನಿಯಿಂದ ಮುಂದೆ ಹೊರಟರೋ ? ಅಲ್ಲೇ ಇನ್ನೂ ಇರುವರೋ ? ಲೋಪಾ ಮುದ್ರೆಯೊಡನೆ ದೊರೆ ಏನು ಮಾತಾಡುವುದೆಂದು ಚಿಂತಿಸಿದ.

ಮರುದಿನ ಅರುಣೋದಯದಲ್ಲಿ ಲೋಪಾಮುದ್ರೆ, ಅಗಸ್ತ್ಯರು ಬಿಟ್ಟುಹೋಗಿದ್ದ ಅಗ್ನಿಯನ್ನು ಮೊದಲಿನಂತೆ ಪರಿಚರ್ಯೆಮಾಡಿ, ಉಪಾಸಿಸಿ, ಪತಿದೇವನನ್ನು ನೆನೆಸುತ್ತಾಳೆ. ಅಗ್ನಿಜ್ವಾಲೆಯಲ್ಲಿ ಅಗಸ್ತ್ಯರು ಕಾಣಿಸಿಕೊಳ್ಳುತ್ತಾರೆ !

ಅಗಸ್ತ್ಯ : “ದೇವಿ ! ನೀನು ನನ್ನನ್ನು ಕರೆದ ಕಾರಣವನ್ನು ಬಲ್ಲೆ. ಅತ್ತ ನಮ್ಮಾಶ್ರಮದಲ್ಲಿ ಅನಾಹುತಗಳು ನಡೆದಿವೆ. ಆಶ್ರಮ ಸುಟ್ಟು ಭಸ್ಮವಾಗಿದೆ. ಆಶ್ರಮದ ಕನ್ಯೆಯರನ್ನು ಮಾನಗೆಡಿಸಿ ಕೊಲ್ಲಲಾಗಿದೆ. ಆಶ್ರಮದ ಯುವಕರನ್ನು ಮಾಯೆಯಿಂದ ಕೊಲ್ಲಲಾಗಿದೆ. ಅಲ್ಲಿ ದಿಗ್ದರ್ಶನ ಮಾಡುವವರು ಬೇರೆ ಯಾರೂ ಇಲ್ಲವಾಗಿದೆ. ಸೋಮಶ್ರವನಿಗೆ ಈ ಮಾಯಾವಿದ್ಯೆಗಳನ್ನು ಎದುರಿಸುವುದು ಗೊತ್ತಿಲ್ಲ. ನನಗೆ ಶಂಕರ ಮಹಾದೇವ ಪ್ರತ್ಯಕ್ಷನಾಗಿ ಒಂದು ಭಸ್ಮವನ್ನು ಅನುಗ್ರಹಿಸಿದ್ದಾನೆ. ಪ್ರತಿಮಾಯಾವಿದ್ಯೆಗಳನ್ನು ಸಂಕಲ್ಪಿಸಿ ಅದರಿಂದ ನಿಗ್ರಹಿಸಬರುತ್ತದೆ.

ಅದು ಈಗ ಆಶ್ರಮಕ್ಕೆ ಬಲು ಅವಶ್ಯಕ. ಅದನ್ನು ನನ್ನ ಶಿಷ್ಯನೊಬ್ಬನ ಮೂಲಕ ಕಳುಹಲು ಏರ್ಪಡಿಸುತ್ತೇನೆ."

ಲೋಪಾ : (ದಿಗ್ಭ್ರಾಂತಳಾಗಿ) "ಪ್ರಭು ! ನಿಮ್ಮ ಸಮಾಚಾರವೇ ಇಲ್ಲ ! ತಾವು ಸೌಖ್ಯವಷ್ಟೆ ? ಈಗ ನಾನು ಏನು ಮಾಡಬೇಕು ? ನನ್ನ ತಂದೆಯ ಕರ್ತವ್ಯ ಏನು ? ಪರಶುರಾಮರು ನಡೆಸುತ್ತಿರುವ ಈ ಅವಾಂತರವೇನು ? ತಾವು ಈಗ ಎಲ್ಲಿರುವಿರಿ ? ಆ ಭಸ್ಮ ನನಗೆ ಎಲ್ಲಿ ತಲುಪುತ್ತದೆ ? ನಾನು ತಮ್ಮ ಹಳೆಯ ಆಶ್ರಮವಾಸಿಗಳನ್ನು ಎಲ್ಲಿ ಭೇಟಿಯಾಗುವುದು ಶಕ್ಯ ?"

ಅಗಸ್ತ್ಯ ; "ನಾನೀಗ ಸಿಂಧುದೇಶದ ಮಾರ್ಗದಲ್ಲಿದ್ದೇನೆ ; ಪರಶುರಾಮರು ಮಾಡುತ್ತಿರುವುದೂ ಲೋಕ ಕಲ್ಯಾಣಕಾರ್ಯವೇ ! ನನ್ನ ಯೋಜನೆಯನ್ನು ನಾನೀಗ ಪರಿಷ್ಕರಿಸಿ ತಿದ್ದಿಕೊಳ್ಳಬೇಕಾಯಿತು. ಉಜ್ಜೈನಿಯ ದೊರೆ ಈಗ ಬ್ರಾಹ್ಮಣನಾಗಿದ್ದಾನೆ. ಅಲ್ಲಿಯ ಪುರೋಹಿತನೇ ಈಗ ದೊರೆ. ಆರ್ಯಾವರ್ತದ ದೊರೆಗಳ ಉಳಿವಿಗೆ ಇದೂ ಒಂದು ಮಾರ್ಗ—ಈ ಬ್ರಾಹ್ಮಣ್ಯದೀಕ್ಷೆ. ಅದು ಹಾಗಿರಲಿ. ಇಲ್ವಲನ ಸೈನ್ಯ ಉಜ್ಜೈನಿಯತ್ತ ಹೊರಟು ಮೊದಲು ವಿದರ್ಭದ ಮೇಲೆ ಎರಗಲಿದೆ ! ಎಚ್ಚರಿಕೆ !! ಆ ಸೈನ್ಯ ಬರುವಷ್ಟರಲ್ಲಿ ನೀನು ತಪತೀ ನದೀ ತೀರದ ದಾಲ್ಭ್ಯಾಶ್ರಮಕ್ಕೆ ವೇಷಾಂತರದಿಂದ ಬಾ. ನಿನ್ನ ತಂದೆಯೂ ನೀನೂ ಅಲ್ಲಿ ಕೊಂಚಕಾಲ ವಿಶ್ರಮಿಸಿಕೊಳ್ಳಿ. ರಾಜ್ಯದ ಉಸ್ತುವಾರಿಯನ್ನು ಸದ್ಯಕ್ಕೆ ನಿಮ್ಮ ಪುರೋಹಿತ ನೋಡಿಕೊಳ್ಳುತ್ತಿರಲಿ. ನಮ್ಮ ಆಶ್ರಮದ ಯೋಧರೂ, ಅನಾಥರೂ, ವೃದ್ಧರೂ, ತಪಸ್ವಿಗಳೂ ಆ ದಾಲ್ಭ್ಯಾಶ್ರಮಕ್ಕೆ ಈಗ ಹೊರಟಿದ್ದಾರೆ. ಇಲ್ವಲನ ಸೈನ್ಯ ವಿದರ್ಭಕ್ಕೆ ತಲುಪುವ ವೇಳೆಗೆ ನಮ್ಮ ಆಶ್ರಮದ ಸೈನ್ಯವೂ, ಇತರ ಆಶ್ರಮಗಳ ಅಷ್ಟಿಷ್ಟು ಹೊಸ ಸೈನ್ಯಗಳೂ ವಿದರ್ಭದ ರಕ್ಷಣೆಗೆ ಬರುತ್ತವೆ. ದಾಲ್ಭ್ಯಾಶ್ರಮದಲ್ಲಿ ನಿನ್ನ

ಪೂರ್ವಪರಿಚಯದ ನಮ್ಮ ಆಶ್ರಮದ ಸಹಚಾರಿಯೊಬ್ಬ ಆ ದಿವ್ಯಭಸ್ಮದ ಭರಣಿಯನ್ನು ನಿನ್ನ ಕೈಗೀಯುತ್ತಾನೆ. "ಅಗ್ನೇಃ ಪುರೀಷಮಸಿ... ...." ಮಂತ್ರೋಚ್ಚಾರಣೆಯಿಂದ, ದಿನದಿನದ ನಿನ್ನ ಅಗ್ನಿಹೋತ್ರದ ಭಸ್ಮವನ್ನೂ, ನನ್ನ ಕುರುಹಿನ ಅಗ್ನಿಯ ಅವಶೇಷಗಳನ್ನೂ ಅದರಲ್ಲಿ ಕೂಡಿಸುತ್ತಾ ಆ ಭಸ್ಮವನ್ನು ಬೆಳೆಸು. ಅಸುರರ ಮಾಯೆಯನ್ನು ಯಾವ ರೂಪದಲ್ಲಿ ಕಂಡರೂ ಇದನ್ನು ಅಭಿಮಂತ್ರಿಸಿ ಪ್ರತಿಯಾಗಿ ಪ್ರಯೋಗಮಾಡುವಂತೆ ಸೋಮಶ್ರವನಿಗೆ ತಿಳಿಸು. ನಾನು ನಿನಗೆ ಕಂಡೆನೆಂಬುದನ್ನೂ, ಹೀಗೆಲ್ಲ ಹೇಳಿದೆನೆಂದೂ ಯಾರಿಗೂ ಹೇಳಬೇಡ."

ಲೋಪಾ : "ಆಜ್ಞೆ, ಪ್ರಭು !"

ಅಗಸ್ತ್ಯರು ಅದೃಶ್ಯರಾದರು ! ಲೋಪಾಮುದ್ರೆ ಪತಿಯ ಆಜ್ಞಾ ಧಾರಕಳಾಗಿ ಮುಂದಿನ ಕಾರ್ಯಕ್ಕೆ ಸಿದ್ಧಳಾದಳು. ದೊರೆಗೆ ತನ್ನ ನಿಶ್ಚಯವನ್ನು ಹೇಳಿದಳು. ದೊರೆಯ ಹೆಚ್ಚಿನ ಪ್ರಶ್ನೆಗಳಿಗೆ "ಮುಂದೆ ಉತ್ತರಿಸುತ್ತೇನೆ" ಎಂತಿಷ್ಟೇ ಹೇಳಿದಳು. ಮಗಳ ದಿವ್ಯಜ್ಞಾನ ಸಂಪನ್ನತೆ ಯನ್ನು ಅರಿತಿದ್ದ ದೊರೆ ಮರುಪ್ರಶ್ನಿಸಲಿಲ್ಲ.

*　　*　　*

ಕುಂಡಿನಪುರದಿಂದ ವಿದರ್ಭರಾಜನೂ, ಲೋಪಾಮುದ್ರೆಯೂ ಕುದುರೆಯನ್ನೇರಿ ತಪತೀ ತೀರದ ದಾಲ್ಭ್ಯಾಶ್ರಮಕ್ಕೆ ಬಂದರು. ಐದು ದಿನದ ಪಯಣ. ದಾಲ್ಭ್ಯರು ಇದನ್ನು ನಿರೀಕ್ಷಿಸಿರಲಿಲ್ಲ ! ಲೋಪಾಮುದ್ರೆ ರಾಜಪುತ್ರನ ವೇಷ ಕಳಚಿ, ಋಷಿಪಾದಗಳಿಗೆ ವಂದಿಸಿ, ಆಶ್ರಯ ಬೇಡಿ, "ಇದು ಅಗಸ್ತ್ಯರ ಸೂಚನೆ" ಎಂದಿಷ್ಟೇ ಹೇಳಿದಳು "ಅಗಸ್ತ್ಯ" ಎಂದೊಡನೆಯೇ ದಾಲ್ಭ್ಯರು ಎರಡನೆಯ ಮಾತನ್ನೇ ಆಡದೆ ಅತಿಥಿಗಳ ಬಿಡಾರಕ್ಕೆ ಏರ್ಪಡಿಸಲು ಶಿಷ್ಯರಿಗೆ ಹೇಳಿದರು.

ಅತ್ತ ಪಂಚವಟೀ (ಅಗಸ್ತ್ಯಾಶ್ರಮ)ದಿಂದ, ನಿರಾಶ್ರಿತರ ಮೊದಲ ತಂಡ ಅಲ್ಲಿಗೆ ಬಂದು ಸೇರಲು ಮತ್ತೊಂದು ವಾರವಾಯಿತು. ಆಶ್ರಮಕ್ಕೆ ಆಪತ್ತು ಬಂದಾಗ ಸಮೀಪದ ಇನ್ನೊಂದು ಆಶ್ರಮದಲ್ಲಿ ಆಶ್ರಯ ಪಡೆಯುವಂತೆ ಅಗಸ್ತ್ಯರು ಹೇಳಿಯೇ ಇದ್ದರು. ಅದು ರೂಢಿಯೂ ಇದ್ದಿತು. ಮೊದಲು ಬಂದವರು ಹಲವು ಅಶ್ವಾರೋಹಿಗಳು, ಅವರೊಡನೆ ಹಲವು ಅಶಕ್ತರು, ವೃದ್ಧತಾಪಸರು, ವೃದ್ಧಸ್ತ್ರೀಯರು. ಆಮೇಲೆ ಎತ್ತಿನಗಾಡಿಗಳಲ್ಲಿ ಆಶ್ರಮದ ಇತರರೂ ತಂಡತಂಡವಾಗಿ ಬರಲಾರಂಭಿಸಿದರು. ಆಶ್ರಮದ ಗೋವುಗಳು, ಜಿಂಕೆಗಳು, ನವಿಲುಗಳು, ಇತರ ಸಾಕುಪ್ರಾಣಿಗಳನ್ನೂ ಯಥಾಯೋಗ್ಯವಾಗಿ ಕರೆತರಲಾಗಿತ್ತು. ಆಶ್ರಮದ ಯೋಧರು ಸವಾರರಾಗಿ, ಬೆಂಗಾವಲಾಗಿ ಹಂಚಿಕೊಂಡು ಈ ನಿರಾಶ್ರಿತರನ್ನು ರಕ್ಷಿಸುತ್ತಾ ಬಂದರು. ಮಾರ್ಗಮಧ್ಯದಲ್ಲಿ ಅಲ್ಲಲ್ಲಿ ಭಿಲ್ಲರು, ಗೊಂಡರು, ಕಿರಾತರೊಡನೆ ಸಣ್ಣಪುಟ್ಟ ಘರ್ಷಣೆಗಳಾದರೂ ಹೆಚ್ಚಿನ ಘಾಸಿಯಾಗದೆ ಇವರು ಆಶ್ರಮಕ್ಕೆ ತಲುಪಿದ್ದು ಪ್ರಯಾಸವಾಯಿತು.

ಅಗಸ್ತ್ಯರ ಜೊತೆಗೆ ಉಜ್ಜಯಿನಿಗೆ ಹೊರಟಿದ್ದ ತಂಡದ ಮಹಾ ಸಾಹಸೀ ಯುವಕನಾದ ಯಜ್ಞದತ್ತನ ಕೈಲಿ ಅಗಸ್ತ್ಯರು ಆ ದಿವ್ಯಭಸ್ಮದ ಕೊಂಚ ಭಾಗವನ್ನು ಭರಣಿಯಲ್ಲಿಟ್ಟು ಕೊಟ್ಟು ವೇಗವಾದ ಕುದುರೆಯನ್ನೂ ಕೊಡಿಸಿ – "ಈಗಿಂದಿಗಲೇ ನೀನು ಆಗ್ನೇಯ ದಿಕ್ಕಿನತ್ತ ಹೊರಡು. ದಾರಿಯಲ್ಲಿ ಇತರ ಆಶ್ರಮಗಳಲ್ಲಿನ ಕುದುರೆಗಳನ್ನು ಉಪಯೋಗಿಸಿ. ಅಲ್ಲಲ್ಲಿ ಹಿಂದಿನವನ್ನು ಬಿಟ್ಟು, ಮುಂದಿನವನ್ನೇರುತ್ತಾ, ನೀನು ಮಾತ್ರ ವಿಶ್ರಾಂತನಾಗದೇ ದಾಲ್ಭ್ಯಾಶ್ರಮಕ್ಕೆ ಬೇಗ ಸೇರು. ಅಲ್ಲಿ ವಿದರ್ಭರಾಜಕುಮಾರಿ ಲೋಪಮುದ್ರೆ ಬಂದಿರುತ್ತಾಳೆ. ಅವಳ ಕೈಗೇ ಈ ಭರಣಿಯನ್ನೀಯಬೇಕು. ಅವಳನ್ನು ನೋಡಿರುವೆ. ಸಂಶಯವಾದರೆ ಒಂದು ಅಗ್ನಿಸೂಕ್ತವನ್ನು ಹೇಳಲಾರಂಭಿಸು. ನೀನು ಬೇರೆ ಬೇರೆ

ಸೂಕ್ತಗಳನ್ನು ಹೇಳಿದರೂ, ಅವಳು ಒಂದೇ ವಾಕ್ಯದಲ್ಲಿ ಉತ್ತರಿಸಿಯಾಳು **ಅಗ್ನೇಃ ಪುರೀಷಮಸಿ** – ಎಂದು ! ಅದರ ಮರ್ಮ ಅವಳಿಗೆ ಗೊತ್ತು. ಹಾಗೆ ಹೇಳುವವಳ ಕೈಗೆ ಮಾತ್ರ ಈ ಭರಣಿಯನ್ನು ಕೊಡು" ಎಂದು ಅಣತಿಯಿತ್ತು ಕಳುಹಿದ್ದರು.

ಅಗಸ್ತ್ಯಾಶ್ರಮದ ನಿರಾಶ್ರಿತರು ದಾಲ್ಭ್ಯಾಶ್ರಮಕ್ಕೆ ಬಂದ ಹತ್ತು ದಿನಗಳ ನಂತರ ಯಜ್ಞದತ್ತ ಅಲ್ಲಿ ಬಂದು ಸೇರಿದ. ಅಗಸ್ತ್ಯಾಶ್ರಮದ ಇತರ ಶಿಷ್ಯರು ಅವನನ್ನು ಗುರುತಿಸಿ ''ಏನು ವಿಶೇಷ ?" ಎಂದು ಕೇಳಿದರು. ಸೋಮಶ್ರವನೂ ಇವನನ್ನು ಕರೆಸಿ "ಇಷ್ಟು ಅವಸರದಲ್ಲಿ ಬಂದ ಸಮಾಚಾರವೇನು ?" ಎಂದು ಪ್ರಶ್ನಿಸಿದ. "ಏನಿಲ್ಲ ! ಆಶ್ರಮಕ್ಕೆ ಏನೋ ತೊಂದರೆ ಆಯಿತೆಂದು ಗುರುಗಳಿಗೆ ಸ್ವಪ್ನದೃಷ್ಟಾಂತ ವಾಗಿ ನನ್ನನ್ನು ಅರಿತು ಬರಲು ಬೇಗ ಕಳುಹಿದರು." ಎಂದಿಷ್ಟೇ ಯಜ್ಞದತ್ತ ಹೇಳಿದ. ಲೋಪಾಮುದ್ರೆಯ ವಿಷಯ ಹೇಳಲಿಲ್ಲ ! ಅಗಸ್ತ್ಯರ ವಿವಾಹ ಯಾರಿಗೂ ಗೊತ್ತಿರಲಿಲ್ಲ. ಆದುದರಿಂದ,ವಿದರ್ಭ ದೊಯೂ ರಾಜಕುವರಿಯೂ ಆಕಸ್ಮಿಕವಾಗಿಯೇ ಅಲ್ಲಿಗೆ ಆಶ್ರಯಾರ್ಥಿಗಳಾಗಿ ಬಂದ ರೆಂದೇ ಎಲ್ಲರೂ ಭಾವಿಸಿದ್ದರು.

* * *

ಯಜ್ಞದತ್ತ ಚೆನ್ನಾಗಿ ಸುಧಾರಿಸಿಕೊಂಡ. ಸಂಜೆ ಲೋಪಾಮುದ್ರೆ ಯನ್ನು ಆಶ್ರಮದಲ್ಲಿ ಹುಡುಕಲಾರಂಭಿಸಿದ. ಅವಳು ಒಂದು ವೃಕ್ಷ ಡಡಿಯಲ್ಲಿ ಸಾಯಂ ಸಂಧ್ಯೆ ಮುಗಿಸಿ, ಸಾಯಂಕಾಲದ ಅಗ್ನಿಹೋತ್ರಕ್ಕೆ ಕುಳಿತಿದ್ದಳು. ನಾಲ್ಕಾರು ಆಶ್ರಮಸ್ತ್ರೀಯರೂ ಹತ್ತಿರದಲ್ಲಿದ್ದರು. ಏಕಾಂತವಾಗಿ ಮಾತಾಡಲು ಅವಕಾಶವಿರಲಿಲ್ಲ. ಯಜ್ಞದತ್ತ ಪರೀಕ್ಷಾ ರ್ಥವಾಗಿ ಒಂದು ಅಗ್ನಿಸೂಕ್ತವನ್ನು ತನ್ನಷ್ಟಕ್ಕೆ ತಾನೇ ಉಚ್ಚರಿಸುವ ವನಂತೆ,ಲೋಪಾಮುದ್ರೆಯ ಕಿವಿಯಲ್ಲಿ ಬೀಳುವಂತೆ ಹೀಗೆ ಆರಂಭಿಸಿದ.

**" ಯೋ ನೋ ಅಗ್ನಿಃ ಪಿತರೋ ಹೃತ್ಸ್ವನ್ತರಮರ್ತ್ಯೋ**
**ಮರ್ತ್ಯಾಗ್‌ಂ ಆವಿವೇಶ । ತಮಾತ್ಮನ್ ಪರಿಗೃಹ್ಣೀಮಹೇ**
**ವಯಂ........"**

(ಈಗಿನ ತೈತ್ತಿರೀಯಸಂಹಿತೆಯಲ್ಲಿ ಇದು ೫-೭-೯-೧.) "ಎಲೈ ಪಿತೃಗಳೇ ! ಯಾವ ಸಾವಿಲ್ಲದ ಅಗ್ನಿದೇವನು ಮರ್ತ್ಯರಾದ (ಮರಣ ಶೀಲರಾದ) ನಮ್ಮ ಹೃದಯಗುಹೆಗಳನ್ನು ಹೊಕ್ಕು, ನಮ್ಮ ಆತ್ಮನಾಗಿರು ವನೋ ಅವನನ್ನು ನಾವು ನಮ್ಮಲ್ಲಿಯೇ ವಾಸಿಸುವಂತೆ, ಪರಿಗ್ರಹಿಸು ವಂತಾಗಲಿ; ಅವನು ನಮ್ಮನ್ನು ಬಿಟ್ಟು ದೂರ ಹೋಗದಿರಲಿ" ಎಂಬುದು ಮಂತ್ರಾರ್ಥ.

ಇದನ್ನು ಯಜ್ಞದತ್ತ ಉಚ್ಚರಿಸುತ್ತಿರುವಂತೆಯೇ ಲೋಪಾಮುದ್ರೆ ಅವನತ್ತ ತಿರುಗಿ "ಯಾರಯ್ಯ ನೀನು ? ಈ ಮಂತ್ರವು ಸಾಯಂ ಅಗ್ನಿಹೋತ್ರಕ್ಕೆ ವಿನಿಯೋಗವಾಗಿ ಹೇಳಲ್ಪಟ್ಟಿಲ್ಲ. ಹೋಗಾಚೆ. "**ಅಗ್ನೇಃ ಭಸ್ಮಾಸ್ಯಗ್ನೇಃ ಪುರೀಷಮಸಿ**" ಎನ್ನುತ್ತಾ ತನ್ನ ಮುಂದಿನ ಕೆಲಸವನ್ನು ಗಮನಿಸಲಾರಂಭಿಸಿದಳು. (ಇದೂ ತೈ. ಸಂಹಿತೆಯ ೧-೨-೧೨ ರಲ್ಲೂ ಇತರ ಕಡೆಗಳಲ್ಲೂ ಬರುವ ಮಂತ್ರ.) ಯಜ್ಞದತ್ತನಿಗೆ ಇವಳೇ ಲೋಪಾಮುದ್ರೆಯೆಂಬ ಅನುಮಾನ ಹೆಚ್ಚಾಯಿತು ! ಹಿಂದೆ ನೋಡಿದ್ದವನಾದರೂ, ಮಾಯೆಯ ವಶವಾಗಿ ಆ ಭರಣಿಯನ್ನು ಮತ್ತೊಬ್ಬರ ಕೈಗೀಯ ಬಾರದೆಂದು ಅಗಸ್ತ್ಯರು ಒತ್ತಿ ಒತ್ತಿ ಹೇಳಿದ್ದರು. ಅಗ್ನಿಯಲ್ಲಿ ವಿನಿಯೋಗವಾಗುವ ಗುಗ್ಗುಳ, ಮೊದಲಾದ ಸುಗಂಧಿ ದ್ರವ್ಯಗಳನ್ನು ಕುರಿತು ಅಗ್ನಿಷ್ಟೋಮಯಾಗದಲ್ಲಿ, ಉತ್ತರವೇದಿ ಪ್ರಕರಣದಲ್ಲಿ ಹೇಳುವ ಯಾಜುಷ ಮಂತ್ರವಿದು. "ಎಲೈ ದ್ರವ್ಯವೇ, ನೀನು ಅಗ್ನಿಯನ್ನು ಉದ್ದೀಪನಮಾಡುವ ಸಾಧನವಾಗಿರುವೆ. ಅಗ್ನಿ ಯನ್ನು ಪೂರ್ಣಮಾಡಿ ತೃಪ್ತಿಪಡಿಸುವ ಸಾಧನವಾಗಿರುವೆ." ಎಂಬುದು

ಆದರರ್ಥ. "ಭಸ್ಮ" ಎಂಬ ಶಬ್ದಕ್ಕೆ "ಬೂದಿ" ಎಂಬುದು ಈಗ ರೂಢಿಯಲ್ಲಿ ಬಂದಿರುವ ಅರ್ಥ. ಮೂಲಾರ್ಥ ಅದಲ್ಲ. "ಭಸ್" ಧಾತುವಿಗೆ 'ಭರ್ತ್ಸನ' – "(ಶತ್ರುಗಳನ್ನು) ಧಿಕ್ಕರಿಸಿ ಓಡಿಸುವುದು" ಎಂದೂ, "ಬೆಳಗುವುದು–ದೀಪ್ತಿ" ಎಂದೂ ಅರ್ಥವುಂಟು. ಪುರೀಷವೆಂದರೆ "ಶರೀರದ ಮಲ" ಎಂಬುದು ಈಗಿನ ರೂಢಿಯ ಅರ್ಥ. ಮೂಲಾರ್ಥದಲ್ಲಿ "ಪೂರಣ, ಪ್ರೀಣನ" ಎಂಬುದು ಅರ್ಥ. ಅಂದರೆ "ಎಲೈ ಸುಗಂಧಿದ್ರವ್ಯವೇ ! ಅಗ್ನಿಯನ್ನು ಬೆಳಗುವಂತೆ ಮಾಡು; ಶತ್ರುಗಳನ್ನು ಓಡಿಸು; ಅಗ್ನಿಯ ಇಷ್ಟವನ್ನು ಪೂರ್ತಿಮಾಡು" ಎಂದರ್ಥವಾಗುತ್ತದೆ. ಹೊರಗಿನ ಅರ್ಥದಲ್ಲೂ ಯಜ್ಞದತ್ತ, ತನ್ನ ಕೈಯಲ್ಲಿನ ಭರಣಿಯ ಭಸ್ಮವನ್ನು ಕುರಿತು "ಭಸ್ಮವೇ ! ನೀನು ಅಗ್ನಿದೇವನ ಶೇಷವಾದ ಬೂದಿಯಾಗಿರುವೆ; ಅಗ್ನಿಯ ಅವಶಿಷ್ಟವಾದ ದ್ರವ್ಯವಾಗಿರುವೆ" ಎಂದೇ ಸೂಚಿಸಿದಂತಾಯಿತು !

* * *

ಮರುದಿನ ಪ್ರಾತಃಕಾಲದಲ್ಲೂ ಮತ್ತೆ ಯಜ್ಞದತ್ತ ಲೋಪಾಮುದ್ರೆಯ ಪೂಜಾಸ್ಥಾನದಲ್ಲಿ ಕಾಣಿಸಿಕೊಂಡು:

**"ಆಯುರ್ದಾ ಅಗ್ನೇ ಹವಿಷೋ ಜುಷಾಣೋ**
**ಘೃತಪ್ರತೀಕೋ ಘೃತಯೋನಿರೇಧಿ ।**
**ಘೃತಂ ಪೀತ್ವಾ ಮಧು ಚಾರು ಗವ್ಯಂ**
**ಪಿತೇವ ಪುತ್ರಂ ಅಭಿರಕ್ಷತಾದಿಮಂ "** ಎಂದಾರಂಭಿಸಿದನು.

(ಸೋಮಯಾಗದ ಅವಭೃಥಸ್ನಾನಪ್ರಕರಣದಲ್ಲಿ ಬರುವ ಈ ಮಂತ್ರ, ಈಗ ತೈತ್ತಿರೀಯ ಸಂಹಿತೆಯ 3 - 3 - 8 ರಲ್ಲಿ ಬರುತ್ತದೆ.

ಉಪನಯನಾದಿ ಪ್ರಕರಣಗಳಲ್ಲೂ ಉಪಯೋಗಿಸಲ್ಪಡುತ್ತಿದೆ.)
ಇದರರ್ಥ : ಎಲೈ ಅಗ್ನಿದೇವನೇ ! ನೀನು ಆಯುಸ್ಸನ್ನು ಕೊಡುವವನು; ಹವಿಸ್ಸನ್ನು ಕುಡಿಯುತ್ತಾ ಸಂತೋಷಪಡುವವನು; ನಿನ್ನ ಜನನವೇ ತುಪ್ಪದಲ್ಲಿ ; (ಅಥವಾ ದಿವ್ಯಜ್ಞಾನದಲ್ಲಿ !) ನೀನು ಆ ತುಪ್ಪದ (ಜ್ಞಾನದ) ಸಾಕಾರನೇ, ಪ್ರತೀಕವೇ, ಆಗಿರುವೆ. ಈಗ ನಾನು ಕೊಡುತ್ತಿರುವ ಈ ತುಪ್ಪವನ್ನು (ಅಥವಾ ಜ್ಞಾನಗರ್ಭವಾದ ಸ್ತುತಿಯನ್ನು) ಪಾನಮಾಡಿ, – ಅದು ಒಳ್ಳೆಯ ಗೋವಿನ ಮೂಲದ ದ್ರವ್ಯವಾಗಿರುವುದರಿಂದ–ತಂದೆಯು ಮಗನನ್ನು ರಕ್ಷಿಸುವಂತೆ, ಈ ಯಜಮಾನನನ್ನು–ಅಥವಾ ವಟುವನ್ನು (ಅಥವಾ ಈ ಸ್ತುತಿಮಾಡುವವನನ್ನು) ಎಲ್ಲ ಬಗೆಯಿಂದಲೂ ರಕ್ಷಿಸು."

ಲೋಪಾಮುದ್ರೆ ತಲೆ ಎತ್ತಿ, "ಯಾರಯ್ಯಾ ! ನೀನು ! ಅಗ್ನಿಮಿತ್ರನಂತೆ, ಬರೀ ಅಗ್ನಿಸೂಕ್ತಗಳನ್ನೇ ಪಠಿಸುವೆ ? ನಿನ್ನ ಇಷ್ಟಾರ್ಥವೇನೋ ತಿಳಿಯಲಿಲ್ಲ ! ನನಗಂತೂ ಈ ಯಜ್ಞಪುರುಷನ ಪ್ರಸಾದ ರೂಪದ ಈ ಭಸ್ಮವೇ ಸಾಕು" ಎನ್ನುತ್ತಾ,

**ಅಗ್ನೇಃ ಪುರೀಷಮಸಿ ದೇವಯಾನೀ ತಾಂ ತ್ವಾ**
**ವಿಶ್ವೇ ಅಭಿಗೃಣನ್ತು ದೇವಾಃ ॥** (ತೈ.ಸಂ.4-3-4)

ಎಂಬ, ಮತ್ತೆ ಭಸ್ಮಪ್ರಶಂಸೆಯ ಮಂತ್ರಭಾಗವನ್ನು ಉಚ್ಚರಿಸುತ್ತಾಳೆ.

ಯಜ್ಞದತ್ತನಿಗೆ ಇನ್ನು ಸಂಶಯ ಉಳಿಯಲಿಲ್ಲ ! "ಅಮ್ಮಾ ! ಈ ಭಸ್ಮವು ಹೇಗೆ ನಿಮಗೆ ಪ್ರಿಯತಮವೂ ಪೂಜ್ಯವೂ, 'ದೇವಯಾನೀ' (ಅಂದರೆ ದೇವತೆಗಳಿಗೆ ದಾರಿತೋರುವುದೂ) ಆಗಿರುವುದೋ ಹಾಗೆ, ನೀವೂ ನಮಗೆ ಮಾರ್ಗದರ್ಶಕರೇ ಆಗಿರುವಿರಿ ! ಇಕೋ, ಈ ದಿವ್ಯ ವಸ್ತು ನಿಮಗೇ ಸೇರಬೇಕಾದ್ದು" ಎನ್ನುತ್ತಾ ಎಡ ಬಲ ನೋಡಿ,

ಸೊಂಟದಲ್ಲಿ ಬಚ್ಚಿಟ್ಟುಕೊಂಡಿದ್ದ ಆ ಭಸ್ಮದ ಭರಣಿಯನ್ನು ರಹಸ್ಯವಾಗಿ ಲೋಪಾಮುದ್ರೆಯ ಕೈಗಳಿಗೀಯುತ್ತಾನೆ !

* * *

ಆ ಸಂಜೆ ಸೋಮಶ್ರವನನ್ನು ಏಕಾಂತದಲ್ಲಿ ಲೋಪಾಮುದ್ರೆ ಸಂಧಿಸುತ್ತಾಳೆ. ಲೋಪಾ : "ಹಿರಿಯರೇ ! ಅಗಸ್ತ್ಯಾಶ್ರಮ ಮಾಯೆಯಿಂದ ಅಸುರರಿಂದ ಹಾಳಾಯಿತಂತಲ್ಲ ! ಅದಕ್ಕೆ, ಪ್ರತಿಮಾಯಾವಿದ್ಯೆಗಳನ್ನು ಕುಲಪತಿಗಳು ತಮಗೆ ಉಪದೇಶಿಸಿರಲಿಲ್ಲವೆಂದು ತೋರುತ್ತದೆ !!"

ಸೋಮಶ್ರವನು ಚಕಿತನಾಗಿ, "ಆರ್ಯೆ ! ಯಾರು ನಿಮಗೆ ಹಾಗೆ ಹೇಳಿದರು ?"

ಲೋಪಾ : "ಯಾರು ಹೇಳಿದರೆಂಬುದು ಮುಖ್ಯವಲ್ಲ ! ನಿಮಗೆ ಆ ಪ್ರತಿಮಾಯೆಗಳು ಗೊತ್ತಿರುವುದು ಅವಶ್ಯ. ಒಬ್ಬ ಯೋಗೀಶ್ವರರು ನಿಮಗೂ ನಮಗೂ ಪೂಜ್ಯರಾದವರು - ಈ ಅಭಿಮಂತ್ರಿತ ಭಸ್ಮವನ್ನು ಕಳುಹಿಸಿರುವರು. ಇನ್ನು ರಕ್ಷೆಯ ಚಿಂತ ಇರಲಾರದು. ಸ್ವೀಕರಿಸಿ." ಎನ್ನುತ್ತಾ ಭರಣಿಯನ್ನು ಅವನ ಕೈಗಿತ್ತು;" "ಅಸುರರ ಮಾಯಾ ಪ್ರಯೋಗ ಯಾವುದಕ್ಕೂ ಇದರಲ್ಲಿ ಪ್ರತಿಮಾಯಾ ಶಕ್ತಿಯುಂಟು" ಎಂದು ಎಚ್ಚರಿಸಿ, ನಸು ಬಾಗಿ ನಮಸ್ಕರಿಸಿ ಹೊರಡುತ್ತಾಳೆ. ಅದು ಅವಳಲ್ಲಿ ಹೇಗೆ ಬಂದಿತೆಂದು ಕೇಳುವ ಕುತೂಹಲವಾದರೂ ಸೋಮಶ್ರವ "ಇದರಲ್ಲಿ ಅಗಸ್ತ್ಯರ ಕೈವಾಡವೂ, ದೇವರಹಸ್ಯವೂ ಇರಬೇಕು" ಎಂದುಕೊಂಡು, ಏನೂ ಉತ್ತರಿಸದೆ, ಆಶ್ರಮಕ್ಕೆ ಹೋಗಿ, ಭದ್ರವಾಗಿ ಅದನ್ನು ಸಂರಕ್ಷಿಸುತ್ತಾನೆ.

* * *

ಅಗಸ್ತ್ಯಾಶ್ರಮವನ್ನು ಧ್ವಂಸಮಾಡಿದ ಇಲ್ವಲನ ಕಡೆಯ ಮಾಯಾವಿಗಳು ಕೆಲವು ದಿನ ಅಡವಿಯಲ್ಲೇ ಅಡಗಿಕೊಂಡು, ಆಮೇಲೆ ಆಶ್ರಮಸ್ಥರು ಏನು ಮಾಡುತ್ತಿರುವರೆಂದು ನೋಡಲು, ರಾತ್ರಿ ಒಂದು ದಿನ ಬಂದರು. ಅದು ನಿರ್ಜನವಾಗಿದ್ದುದನ್ನು ಕಂಡು ಹಾಗಿದ್ದರೆ ಉಳಿದವರು ಸಮೀಪದ ಬೇರೊಂದು ಆಶ್ರಮಕ್ಕೆ ಹೋಗಿರಬೇಕೆಂದೂಹಿಸಿ, ದಾಲ್ಭ್ಯಾಶ್ರಮಕ್ಕೆ. ಅಪ್ರಸಿದ್ಧವಾದ ದಾರಿಗಳಲ್ಲಿ ವೇಷಾಂತರದಿಂದ ಬಂದು ಸೇರಿದರು.

ಇದನ್ನು ನಿರೀಕ್ಷಿಸಿದ್ದ ಸೋಮಶ್ರವ, ದಿವ್ಯಭಸ್ಮವನ್ನು ಆಶ್ರಮದ ನಾಲ್ಕೂ ನಿಟ್ಟಿನಲ್ಲಿ ಪ್ರಯೋಗಿಸಿ, "ಅಗ್ನಿದೇವ ! ಮಾಯಾವಿಗಳು ನನ್ನ ಕಣ್ಣಿಗೆ ಬೀಳುವಂತೆ ಮಾಡು" ಎಂದು ಪ್ರಾರ್ಥಿಸಿದ ! ಭಸ್ಮ ಕೆಲಸ ಮಾಡಲಾರಂಭಿಸಿತು !

ಸ್ತ್ರೀಯರ ರಕ್ಷಣೆಯ ಪಡೆಯಲ್ಲಿ. ಅವರು ಸ್ನಾನಕ್ಕೆ ಬರುವಾಗ. ಕಾವಲಾಗಿರಬೇಕಾದ ಋಷಿಸೈನಿಕರ ಪೈಕಿ ಇಬ್ಬರು ಇಲ್ವಲನ ಅನುಯಾಯಿಗಳು ಮಾಯಾವೇಷಧರರಾಗಿದ್ದುದೂ, ದಾಲ್ಭ್ಯರ ಅಂಗರಕ್ಷಕರ ಪಡೆಯಲ್ಲಿ ಮೂವರು ಸೇರಿಕೊಂಡುದೂ, ಚಾಕ್ರಾಯಣನ ಸೈನ್ಯ ತರಬೇತಿ ವಿಭಾಗದಲ್ಲಿ ಹತ್ತು ಜನರೂ,ಆಶ್ರಮದ ಸುತ್ತಿನ ರಕ್ಷಣೆಯ ಆಯಕಟ್ಟಿನ ಜಾಗೆಗಳಲ್ಲಿ ಅಡಗಿದ್ದ ಐವತ್ತು ಮಾಯಾವಿಗಳೂ, ಹೀಗೆ ನೂರಾರು ಮಾಯಾ ಯೋಧರನ್ನು ಅಗ್ನಿದೇವ ತೋರಿಸಿ ಕೊಟ್ಟ. ಮಾಯಾವಿಗಳು ನಿಜವಾದ ಆಶ್ರಮಸ್ಥರಂತೆಯೇ ವೇಷ ಭೂಷಣ ಧರಿಸಿ, ಅವರದೇ ಧ್ವನಿಗಳಲ್ಲಿ ಮಾತಾಡುತ್ತಾ, ಆಶ್ರಮಸ್ಥರಾದ ಅವರವರು ಹೊರಗಿರುವಾಗ ತಾವು ಒಳಗಿರುತ್ತಾ, ಅವರು ಒಳಗಿದ್ದರೆ ತಾವು ಹೊರಗಿರುತ್ತಾ ವಿಳ್ಳಷ್ಟೂ ಅನುಮಾನಾಸ್ಪದವಿಲ್ಲದಂತೆ ನಡೆದುಕೊಳ್ಳಲಾರಂಭಿಸಿದ್ದರು ! ದಿವ್ಯಭಸ್ಮ. ಅಂಜನದಂತೆ ಕೆಲಸಮಾಡಿ, ಅದನ್ನು ಹೊರಗೆಡಹಿತು !

ಚಾಕ್ರಾಯಣನ ಭಟರು ಅವರನ್ನೆಲ್ಲ ಹಿಡಿದು ಪ್ರತ್ಯೇಕವಾಗಿ ಪರೀಕ್ಷಿಸಿ, ಮಾಯಾ ಸಾಧನಗಳನ್ನು ವಶಪಡಿಸಿಕೊಂಡು, ಕೈಕಾಲು ಕಟ್ಟಿ ತಂದು ಸೋಮಶ್ರವನ ಮುಂದೆ ಕೆಡಹಿದರು.

ವಧಸ್ಥಾನಕ್ಕೆ ಒಯ್ಯಲ್ಪಡುವ ಹಂದಿಗಳಂತೆ ಸಿಕ್ಕುಬಿದ್ದ ಅವರು ಸಾಯಲು ಸಿದ್ಧರಿದ್ದರೇ ವಿನಾ ಏನೂ ಮಾತಾಡಲು ಸಿದ್ಧರಿರಲಿಲ್ಲ. ಮಾತಾಡಿದ್ದರೂ ಉಪಯುಕ್ತವಿರಲಿಲ್ಲ.

ಖಾಲಿಮಾಡಿದ ಒಂದು ಹಳೆಯ ಪರ್ಣಶಾಲೆಯೊಳಗೆ ಅವರನ್ನೆಲ್ಲ ಬಿಟ್ಟು. ಅದಕ್ಕೆ ಬೆಂಕಿ ಹಚ್ಚಲಾಯಿತು ! ಸ್ತ್ರೀಯರೂ, ದಾಲ್ಭ್ಯರೂ ಇದಕ್ಕೆ ಸಮ್ಮತಿಯೀಯಲಿಲ್ಲವಾದರೂ ಅಗಸ್ತ್ಯಸೋದರ "ಇದು ವೇದೋಕ್ತ ಪ್ರಕ್ರಿಯೆ" ಎನ್ನುತ್ತಾ ಈ ಮಂತ್ರವನ್ನು ಪಠಿಸಿದ.

**ನಿರ್ಜೀವಂ ನಿರ್ವೀರಂ ಕೃತ್ವಾ ವಿಷ್ಕಂಧಂ**
**ತಸ್ಮೈ ಹೀಯತಾಂ ಯೋಽಸ್ಮಾನ್ ದ್ವೇಷ್ಟಿ ।**
**ಶರೀರಂ ಯಜ್ಞಶಮಲಂ ಕುಸೀದಂ ತಸ್ಮೈ**
**ಸೀದತು ಯೋಽಸ್ಮಾನ್ ದ್ವೇಷ್ಟಿ । ಯಜ್ಞ**
**ಯಜ್ಞಸ್ಯ ಯತ್ತೇಜಸ್ತೇನ ಸಂಕ್ರಾಮ ಮಾಮಭಿ ॥**

"ಯಾವನು ನಮ್ಮನ್ನು ದ್ವೇಷಿಸುತ್ತಾನೋ, ಅವನ ಶರೀರದಲ್ಲಿ ಯಜ್ಞಾಂಗ ಭೂತರಾದ ಯಾವ ದೇವತೆಗಳೂ ವಾಸಮಾಡದೇ ಹೋಗಲಿ! ಅವರ ಪುತ್ರ ಭೃತ್ಯಾದಿಗಳೆಲ್ಲರೂ ಸಂತತಿಯಿಲ್ಲದೆ ಸಾಯಲಿ ! ಅವರ ಶರೀರಗಳ ಯಾವ ಭಾಗಗಳೂ ಗುರುತೇ ಸಿಗದಂತಾಗಲಿ; ವಿರೂಪ ಹೊಂದಲಿ. ಯಜ್ಞದ ದೋಷವೆಲ್ಲ ಇವನನ್ನು ಆವರಿಸಲಿ. ಅವನ ಹಣಕಾಸೆಲ್ಲವೂ ಯಜ್ಞಕ್ಕೆ ವಿನಿಯೋಗವಾಗದೆ ಹಾಳಾಗಲಿ. ಅವನಿಗೆ ಯಜ್ಞದ ಆಸೆಯಿಲ್ಲದೆ, ಕೇವಲ ವಣಿಜನಂತೆ ಅವನು ಆಗಲಿ."

ಅಶ್ವಮೇಧ ಪ್ರಸಂಗದಲ್ಲಿ ಆಸುರೀಶಕ್ತಿಗಳ ದಮನಕ್ಕಾಗಿ ಉಪಯೋಗಿಸಲ್ಪಡುವ ಈ ಮಂತ್ರವು (ಈಗಿನ ಕೃಷ್ಣಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ ಇದು ೭-೩-೧೨) ಇಲ್ಲಿ ಸಮಯೋಚಿತವೆಂದು ಅಗಸ್ತ್ಯಸೋದರ ಆಶ್ರಮದ ಹಿರಿಯರಿಗೆ ಆಗ ಚೆನ್ನಾಗಿಯೇ ಪ್ರತಿಪಾದಿಸಿದ. ಅಶ್ವಮೇಧವೆಂದರೆ ರಾಷ್ಟ್ರಕಟ್ಟುವ ಯಜ್ಞ! ಈಗ ಅಗಸ್ತ್ಯರು ಹೊರಟಿರುವುದೂ ಅದಕ್ಕಾಗಿಯೇ! ಇಲ್ಲಿ ಆ ಯಜ್ಞದ ಒಂದು ಅಂಗವಾಗಿ ದುಷ್ಟಶಕ್ತಿಗಳ ದಮನ ಆಗುವುದು ಯುಕ್ತ. ಮಂತ್ರದ ವಿಶಾಲಾರ್ಥವನ್ನು ಹೀಗೆ ಅನುಷ್ಠಿಸಿ ಆಯಿತು-ಎಂಬುದು ಅವನ ಪ್ರತಿಪಾದನೆಯ ಸರಣಿಯಾಗಿತ್ತು.

* * *

ಮಾಲತೀ ಮೊದಲಾದ ಆಶ್ರಮ ಕನ್ಯೆಯರ ಕೊಲೆ, ಮಾನಭಂಗಗಳ ಸೇಡನ್ನು ಅಗಸ್ತ್ಯಾಶ್ರಮ ಹೀಗೆ ತೀರಿಸಿಕೊಂಡಿತಾದರೂ, ಮುಂದಿನ ಅಪಾರ ಕೆಲಸ ಅದರ ಮುಂದೆ ಉಳಿದೇ ಇತ್ತು.

ಲೋಪಾಮುದ್ರೆ ಅಗಸ್ತ್ಯ ಸೋದರನಿಗೆಂದಳು. "ನಮ್ಮ ವಿದರ್ಭಕ್ಕೆ ಈಗ ಪುರೋಹಿತರನ್ನೇ ನಿಯಮಿಸಿ ಬಂದಿದ್ದೇವೆ. ಇಲ್ವಲನ ಸೈನ್ಯ ಉಜ್ಜೈನಿಗೆ ಹೊರಟಮಾರ್ಗದಲ್ಲಿ ಅತ್ತ ಧಾಳಿ ಮಾಡುವ ಸಂಭವವಿದೆ. ಉಳಿದ ಆಶ್ರಮಗಳ ಹೊಸಕ್ಷತ್ರ ಪಡೆಗಳೂ ಅಲ್ಲಿ ಕೂಡಿಕೊಳ್ಳುವುವೆಂದು ಕುಲಪತಿಗಳು ನನಗೆ ಸ್ವಪ್ನದಲ್ಲಿ ದೃಷ್ಟಾಂತವಿತ್ತಿದ್ದಾರೆ. ಚಾಕ್ರಾಯಣನನ್ನಾದರೂ ನಮ್ಮ ಕೊಂಚಪಡೆಯೊಡನೆ ಅತ್ತ ಕಳುಹಬಹುದೇ?"

ಸೋಮಶ್ರವನಿಗೆ ಲೋಪಾಮುದ್ರೆ ಇತ್ತಿದ್ದ ಭಸ್ಮದ ಭರಣಿಯ ಅದ್ಭುತ ಕೆಲಸದಿಂದ ಅವಳ ಸ್ವಪ್ನ ದೃಷ್ಟಾಂತದಲ್ಲಿ ವಿಶ್ವಾಸ ಹುಟ್ಟಿತು.

ಅಗಸ್ತ್ಯರ ರೀತಿನೀತಿಗಳನ್ನು ಅವನು ಚೆನ್ನಾಗಿ ಬಲ್ಲನಷ್ಟೆ ! ಆದುದರಿಂದ ಸೂಚನೆಯನ್ನು ಮನ್ನಿಸಿ, ದಾಲ್ಭ್ಯಾಶ್ರಮಕ್ಕೆ ಪ್ರಿಯವ್ರತನನ್ನೂ ಇತರರನ್ನೂ ರಕ್ಷಕರನ್ನಾಗಿ ನಿಯಮಿಸಿ ತಾನು ಒಂದು ಸೈನ್ಯ ಭಾಗ ದೊಡನೆ ಅತ್ತ—ವಿದರ್ಭದ ಕಡೆ ಪಯಣಿಸಿದ. ದಾರಿಯಲ್ಲಿ ಭೃಗು, ಅಂಗಿರಸ, ಕಣ್ವ, ಅತ್ರಿ, ಭಾರದ್ವಾಜಾಶ್ರಮಗಳ ಮತ್ತು ಶಾಖಾಶ್ರಮಗಳ ಬೇರೆ ಬೇರೆ ತುಕಡಿಗಳೂ ಸೇರಿಕೊಂಡು, ಕೆಲವೇ ದಿನಗಳಲ್ಲಿ ಈ ಪ್ರವಾಹ ವಿದರ್ಭವನ್ನು ಸಮೀಪಿಸಿತು. ಆದರೇನು ? ಇಲ್ವಲನ ಪಡೆ ಆ ವೇಳೆಗಾಗಲೇ ವಿದರ್ಭದ ಕೋಟೆಯನ್ನು ಬಲವಾಗಿ ಸುತ್ತುವರೆದು ಮುತ್ತಿಗೆ ಹಾಕಿತ್ತು! ಒಳಗಿಂದ ಪುರೋಹಿತ ಬಲವಾಗಿ ಪ್ರತಿರೋಧ ಒಡ್ಡಿದ್ದ !!

—

# ೧೩ ವಿದರ್ಭದ ವಿಜಯ !

ಇಲ್ವಲನ ಸೈನಿಕರು ವಿದರ್ಭಕ್ಕೆ ಮುತ್ತಿಗೆ ಹಾಕಿ ಹತ್ತು ಹನ್ನೆರಡು ದಿನಗಳಾಗಿರಬೇಕು. ಆದರೇನು ! ಕೋಟೆ ಬಲಿಷ್ಠವಾಗಿತ್ತು, ಧನಧಾನ್ಯ ಸಮೃದ್ಧವಾಗಿತ್ತು; ಸುಸಜ್ಜಿತ ಸೈನ್ಯನಾಯಕರು ಅದನ್ನು ಬಗೆ ಬಗೆಯಿಂದ ರಕ್ಷಿಸುತ್ತಿದ್ದರು.

ಆದರೂ ಸ್ವಯಂ ರಾಜನೇ ಊರಲ್ಲಿಲ್ಲವೆಂಬುದೂ, ಇದಕ್ಕಾಗಿಯೇ ಪ್ರಾಯಃ ಊರು ಬಿಟ್ಟು ಬೇರೊಂದತ್ತ ಹೋಗಿರಬೇಕೆಂಬಂದೂ ಊರ ಜನರ ಕೆಲವರ್ಗಗಳಲ್ಲಿ ಒಂದು ಬಗೆಯ ತಲ್ಲಣವನ್ನೇ ಉಂಟು ಮಾಡಿತ್ತು. ಏನಾದರೂ ಬ್ರಾಹ್ಮಣನ ಉಸ್ತುವಾರಿ ! ರಾಜನೀತಿಯನ್ನೂ, ಆಡಳಿತ ಅನುಭವವನ್ನೂ ಅರಿಯದ ಅವನು ಎಷ್ಟು ದಿನ ಈ ಕೋಟೆ ಯನ್ನು ರಕ್ಷಿಸಿಯಾನು ? ನೋಡಿಯೇ ಬಿಡೋಣ ! ಎಂಬ ಛಲ ಇಲ್ವಲನ ಸೈನಿಕರಿಗಿತ್ತು. ಒಳಗಿನ ಜನ ಕೊಂಚ ಧೈರ್ಯ ಕಳೆದುಕೊಂಡಂತೆ ಇದ್ದದ್ದು ಇಲ್ವಲನ ಕಡೆಯವರಿಗೆ ಹೆಚ್ಚಿನ ಉತ್ಸಾಹ, ಧೈರ್ಯಗಳನ್ನು ತಂದುಕೊಟ್ಟು ಅವರು ಕೋಟೆಯನ್ನು ಪ್ರವೇಶಿಸುವ ಎಲ್ಲ ಉಪಾಯ ಗಳನ್ನೂ ಪರಿಶೀಲಿಸುತ್ತಿದ್ದರು.

ಅಷ್ಟರಲ್ಲಿ ಹೊರಗಿನಿಂದ ಈ ಅಗಸ್ತ್ಯ ಸೈನ್ಯ ಎತ್ತಣಿಂದಲೂ ಬಂದು ಅವರನ್ನು ಸುತ್ತುವರೆದುದು ಅವರಿಗೆ ಅನಿರೀಕ್ಷಿತವಾದ ಆಘಾತವಾಗಿತ್ತು! ಒಳಗಿನವರಿಗೆ ಅದು ತಿಳಿಯುವ ಮೊದಲೇ ಏನಾದರೊಂದು ಉಪಾಯ ದಿಂದ ಕೋಟೆಯನ್ನು ಸುಟ್ಟಾದರೂ ಒಳಗೆ ಪ್ರವೇಶಿಸಿ, ಊರನ್ನು ಧ್ವಂಸಮಾಡಬೇಕು ! ಇಲ್ಲವಾದರೆ ಉಪಾಯದಿಂದ ಅವರನ್ನೂ ವಂಚಿಸಿ,

ಇತ್ತ ತಮ್ಮನ್ನು ಸುತ್ತುವರೆದ ಅಗಸ್ತ್ಯ ಸೈನ್ಯವನ್ನೂ ವಂಚಿಸಿ, ಕಣ್ಣು ತಪ್ಪಿಸಿ ಪಾರಾಗಬೇಕು !! ಇಲ್ಲವಾದರೆ ಸರ್ವನಾಶ ಖಂಡಿತ ! —ಇದು ಇಲ್ವಲನ ಸೈನ್ಯಾಧಿಪತಿ ವಿಪ್ರಚಿತ್ತಿಗೆ ಚೆನ್ನಾಗಿ ತಿಳಿಯಿತು ! ಒಂದು ಉಪಾಯ ಮಾಡಿದ. ಅಂಬಿಗೆ, ಒಂದು ಪತ್ರಬರೆದು ಕಟ್ಟಿ—ತಾಳೆ ಪತ್ರದ ತುಕಡಿಯಲ್ಲಿ— “ನಾವು ಮುಂತ್ತಿಗೆ ಖಾಲಿಮಾಡಿ ಹೋಗುತ್ತಿದ್ದೇವೆ. ನಾವು ಕೆಲವು ಬ್ರಾಹ್ಮಣೋತ್ತಮರನ್ನು ನಿಮಗೆ ಕಾಣಿಕೆಯಾಗಿ ಅರ್ಪಿಸುತ್ತಿದ್ದೇವೆ. ಅವರಲ್ಲಿ ನಮ್ಮ ಅಪೂರ್ವವಾದ ಕೆಲವು ವಿದ್ಯೆಗಳು--ಶುಕ್ರಾಚಾರ್ಯರಿಗೆ ಮಾತ್ರ ಈ ವರೆಗೆ ತಿಳಿದವು— ಮೃತಸಂಜೀವನೀ, ಅದೃಶ್ಯವಿದ್ಯೆ ಇತ್ಯಾದಿ— ಇದೆ. ಅವರನ್ನು ಮಾತ್ರ ನೀವು ಒಳಗೆ ಕರೆದುಕೊಳ್ಳುವ ಕೃಪೆ ಮಾಡಿ. ಮಿತ್ರಭಾವವನ್ನು ತೋರಿದರೆ ಸಾಕು. ನಮ್ಮ ಮಹಾರಾಜರಿಗೆ ನಿಮ್ಮ ಮೇಲೆ ವೈರವಿಲ್ಲ. ನಮ್ಮ ವೈರಿ ಈಗಾಗಲೇ ಊರು ಬಿಟ್ಟು ಹೋಗಿದ್ದಾನೆ. ಅವನ ಪುತ್ರಿಯೂ ಸಹ. ಇಲ್ವಲಮಹಾರಾಜರೂ ವೈದಿಕ ಸಂಸ್ಕೃತಿಯ ಪ್ರೇಮಿಗಳೇ ! ಅವರೇ ಬರೆದ ಅಪೂರ್ವ ಮಹಾಕಾವ್ಯ ವನ್ನೂ — ಅಮೃತಮಂಥನ ಕುರಿತದ್ದನ್ನು — ಈ ಬ್ರಾಹ್ಮಣರು ನಿಮ್ಮಲ್ಲಿಗೆ ತರುತ್ತಿದ್ದಾರೆ ! ಅವರನ್ನು ಮಾತ್ರ ಒಳಗೆ ಬಿಟ್ಟು. ಈ ಘರ್ಷಣೆಗೆ ಉಭಯತರೂ ಇನ್ನು ವಿದಾಯ ಹಾಕೋಣ” ಎಂದು ಬರೆದು. ಪತ್ರವನ್ನು ಬಾಣಕ್ಕೆ ಕಟ್ಟಿ ಕೋಟೆಯೋಳಗೆ ಹೋಗಿ ಬೀಳುವಂತೆ ಪ್ರಯೋಗಮಾಡಿ ಆಯಿತು. ಅದನ್ನು ಇತ್ತ ಅಗಸ್ತ್ಯಸೇನಾನಿ ಚಾಕ್ರಾಯಣ ನೋಡಿದ. ಸೋಮಶ್ರವರಿಗೆಂದ; “ಗುರುವೇ ! ಏನೋ ಮೋಸ ನಡೆದಿದೆ !! ಆ ಬಾಣದೊಡನೆ ಒಂದು ಓಲೆಯೂ ಕೋಟೆಯೊಳಗೆ ಹೋಗಿ ಬಿದ್ದಂತಿದೆ ! ಏನು ಮೋಸದ ಸೂಚನೆಯೋ ತಿಳಿಯಲಿಲ್ಲ ! ಒಳಗಿನ ಬ್ರಾಹ್ಮಣದೊರೆ ಕಪಟವವರಿಯದ ಪುರೋಹಿತ !! ಈ ಅನರ್ಥವನ್ನು ಹೇಗಾದರೂ ತಡೆಯಬೇಕು !!”

ಸೋಮಶ್ರವ ಕೂಡಲೇ ಇನ್ನೊಂದು ಓಲೆಯನ್ನು ಬರೆಸಿ, ಅದನ್ನು ಚಾಕ್ರಾಯಣನ ಕೈಗಿತ್ತು, ಭಸ್ಮಪೂಸಿ, ಕೋಟೆಯೊಳಗೆ ಹೆಚ್ಚಿನ ವೇಗದಿಂದ ಬಿಡುವಂತೆ ಹೇಳಿದ. ಅದರಲ್ಲಿ; "ಬ್ರಾಹ್ಮಣ ದೊರೆಯೇ ! ಅಗಸ್ತ್ಯ ಸೈನ್ಯ, ಅತ್ರಿ, ಕಣ್ವ, ಭೃಗು ಮೊದಲಾದ ಆಶ್ರಮಗಳ ಹೊಸ ಕ್ಷತ್ರಿಯ ಪಡೆಯೊಡಗೂಡಿ, ಕುಂಡಿನಪುರದ ರಕ್ಷಣೆಗೆ ಬಂದು ನಿಂತು, ಇಲ್ವಲನ ಸೈನ್ಯವನ್ನು ಸುತ್ತುವರೆದಿದೆ ! ವಿಪ್ರಚಿತ್ತಿ ಈಗ ನಿಮಗೆ ಕಳುಹಿರುವ ಓಲೆ ಕಪಟದಿಂದಿರಬೇಕು. ಅದರ ಒಕ್ಕಣೆಯನ್ನು ನಂಬಬೇಡಿ. ಕೋಟೆಯ ಬಾಗಿಲನ್ನು ಈಗ ಎಂತೂ ತೆರೆಯಬೇಡಿ ! ತೆರೆಯಲು ನಾವು ಸಂದರ್ಭ ಸೂಚಿಸುತ್ತೇವೆ – ಇನ್ನೊಂದು ಪೋಲೆಯನ್ನು ಹೀಗೇ ಕಳುಹಿ. ಆವರೆಗೆ, ಕೋಟೆಗೆ ಬೆನ್ನು ತೋರಿಸುತ್ತಾ ಇಲ್ವಲನ ಸೈನ್ಯ ನಮ್ಮನ್ನು ಎದುರಿಸುತ್ತಾ ನಿಲ್ಲುತ್ತದೆ. ಅದರ ಶಕ್ತಿಯನ್ನು ನಾವು ಮುರಿದು ಬಗ್ಗಿಸಿದಮೇಲೆ ಒಳಗಿನಿಂದ ನಿಮ್ಮ ಸೈನ್ಯದ ಶೇಷಭಾಗವನ್ನು ಮುಗಿಸಲಿ. ಸಮಯ ಎದುರು ನೋಡಿ" ಎಂದು ಬರೆಸಿ, 'ಚಾಕ್ರಾಯಣ' ಎಂದು ಅಂಕಿತ ಹಾಕಿತು.

ಕೋಟೆಯೊಳಗೆ ಮೊದಲು ಅಂಬಿನೊಡನೆ ಬಿದ್ದ ಪತ್ರವನ್ನು ಸೈನಿಕರು ಪುರೋಹಿತ ದೊರೆಯ ಬಳಿ ಒಯ್ದು ಮುಟ್ಟಿಸಿದ್ದರು. ಆಗ ಮಂತ್ರಿಯಾಗಿದ್ದ ಅಗಸ್ತ್ಯ ಶಿಷ್ಯ, ಕ್ಷಣದೊಳಗೇ ಅದು ಕಪಟ ಪತ್ರವೆಂಬುದನ್ನರಿತು, ಅದರರ್ಥವನ್ನು ದೊರೆಗೆ ವಿವರಿಸುತ್ತಿರುವಲ್ಲಿಯೇ ಈ ಎರಡನೆಯ ಓಲೆಯೂ ತಲುಪಿ, ಸಂದೇಹ ನೀಗಿತು ! ಕೋಟೆ ತೆರೆಯಲಿಲ್ಲ !!

ಇಲ್ವಲನ ಕಡೆಯವರಿಗೆ ತಮ್ಮ ಮಾಯೆ ಏಕೆ ಫಲಕೊಡಲಿಲ್ಲವೆಂಬುದು ತಿಳಿಯಲಿಲ್ಲ ! ನಾಲ್ಕಾರು ತಮ್ಮ ಕಡೆಯ ಅಸುರರಿಗೆ ವಿಪ್ರಚಿತ್ತಿ ಬ್ರಾಹ್ಮಣ ವೇಷ ಹಾಕಲು ಎಷ್ಟು ಯತ್ನಿಸಿಯೂ ಅದರ ನಿಜ

ಸ್ವರೂಪವನ್ನು ಮುಚ್ಚುವುದಾಗಲಿಲ್ಲ ! ಇಲ್ವಲನ ಮಾಯೆ ವ್ಯರ್ಥ ವಾದುದು ಇದೇ ಮೊದಲು ! ಏನೂ ತೋರದೆ, ಏನು ಮಾಡಲೂ ತಿಳಿ ಯದೇ ವಿಪ್ರಚಿತ್ತಿ ನಾಲ್ಕಾರು ಮುಖ್ಯ ಅನುಚರರೊಡನೆ ಏಕಾಂತವಾಗಿ ಶಿಬಿರದಲ್ಲಿ ಆಲೋಚಿಸಲಾರಂಭಿಸಿದ.

ಅತ್ತ ಅಗಸ್ತ್ಯ ಸೈನ್ಯ ಯುದ್ಧವನ್ನು ಪ್ರಾರಂಭಿಸಿತ್ತು. ಇಲ್ವಲನ ಸೈನ್ಯದ ಆಹಾರ ದಾಸ್ತಾನಿಗೆ ಬೆಂಕಿ ಬಿತ್ತೆಂಬ ಸಮಾಚಾರ ಕೇಳಿ ವಿಪ್ರಚಿತ್ತಿ ಬೆಚ್ಚಿದ ! ಶಿಬಿರಗಳಿಗೂ ಕ್ರಮವಾಗಿ ಅಗ್ನಿಯ ಬಿಸಿ ತಾಗಿ ಉರಿದು ಬೂದಿಯಾಗಲಾರಂಭಿಸಿದವು ! ಇತ್ತ ಸೂರ್ಯಾಸ್ತಮಾನವೂ ಆಯಿತು. ಕತ್ತಲಲ್ಲಿ ಇಲ್ವಲನ ಸೈನಿಕರು ಪಂಜುಗಳನ್ನು ಸಿದ್ಧಮಾಡಲಾರಂಭಿಸಿದರು. ಅಷ್ಟರಲ್ಲಿ ಕೋಟೆಯ ಬಾಗಿಲು ದಿಢೀರನೆ ನಾಲ್ಕೂಕಡೆ ತೆರೆಯಲ್ಪಟ್ಟು, ವಿದರ್ಭದ ಸೈನಿಕರು ಹೆಚ್ಚಿನ ವೀರಾವೇಶದಿಂದ ವಿಪ್ರಚಿತ್ತಿಯ ಸೈನ್ಯ ವನ್ನು ಬಾಣಗಳಿಂದ, ಶಲ್ಯ, ಭುಸುಂಟಿ. ಮುದ್ಗರಾದಿ ಆಯುಧಗಳಿಂದ ಜರ್ಝರಿತರನ್ನಾಗಿಸಲು ಹೊರಟರು. ಇಲ್ವಲನ ಸೈನ್ಯ ಇದನ್ನೆದುರು ನೋಡಿರಲಿಲ್ಲ. ರಾತ್ರಿಯುದ್ಧಕ್ಕೆ ಆರ್ಯಾವರ್ತದ ಸೈನ್ಯ ಪ್ರವರ್ತಿಸದು ಎಂಬ ಅವರ ನಿರೀಕ್ಷೆ ಹುಸಿಯಾದುದೊಂದು ಕಡೆ; ಸೈನಿಕರು ಸಜ್ಜಾಗದೇ ವಿಶ್ರಾಂತಿಯ ಸನ್ನಾಹದಲ್ಲಿದ್ದುದು ಇನ್ನೊಂದು ಕಡೆ ! ಕುದುರೆಗಳನ್ನು ಯಾರೂ ಏರದೆ ಅವು ಹಾಗೇ ಶಿಬಿರಗಳಾಚೆ ನಿಂತಿದ್ದು ಅಗಸ್ತ್ಯರ ಸೈನ್ಯದ ಕಣ್ಣಿಗೆಬಿದ್ದಿತು. "ಕುದುರೆಗಳನ್ನು ಉಪಾಯದಿಂದ ಹಿಡಿದರೆ ನಮಗೆ ಉಪ ಯೋಗವಾಗುತ್ತದೆ. ಯಾರೂ ಅತ್ತ ಬಾಣಗಳನ್ನು ಶಲ್ಯಗಳನ್ನು ಬಿಡಬೇಡಿ" ಎಂದು ಚಾಕ್ರಾಯಣ ತನ್ನ ಸೈನಿಕರಿಗೆ ಆಜ್ಞೆಮಾಡಿದ. "ನಮ್ಮ ದೃಷ್ಟಿ ಯೆಲ್ಲ ಇಲ್ವಲನ ಸೈನ್ಯದ ಮೇಲೆಯೇ ಇರಲಿ" ಎಂದೂ ಆಣತಿ ಇತ್ತ.

ಕೋಟೆಯೊಳಗಿಂದ ಮರುದ್ಗಣಗಳಂತೆ, ಮರುಳ್ಗಣಗಳಂತೆ ಮೇಲೇರಿ ಎರಗಿ ಬರುತ್ತಿದ್ದ ಸೈನ್ಯವನ್ನು ಕಂಡು ಇಲ್ವಲನ ಅಸಿದ್ಧ ಸೈನ್ಯ ಓಡಲು

ತೊಡಗಿತ್ತು ! ಅತ್ತ ಆಗಸ್ತ್ಯ ಸೈನ್ಯ ಕಾದಿರುವುದೆಂದು ತಿಳಿದೂ ಓಡಿತು ! ಹಲವರು ಋಷಿ ಸೈನ್ಯದ ಕಾಲಿಗೆ ಬಿದ್ದರು ! ಯಾರನ್ನೂ ಚಾಕ್ರಾಯಣನ ಸೈನ್ಯ ಉಳಿಸಲಿಲ್ಲ ! ಕೋಟೆಯ ಸುತ್ತ ರಕ್ತ ಪ್ರವಾಹವೇ ಹರಿಯಿತು- ಆಸುರೀ ರಕ್ತದ ಆ ಪರಿಷೇಚನದಿಂದ ಸುತ್ತುವರೆಯಲ್ಪಟ್ಟ ಕೋಟೆ ರಾತ್ರಿ ಭಯಂಕರವಾಗಿ, ಕಾಲನ ತೆರೆದ ಬಾಯಂತೆ, ನಾಲಗೆ ಹೊರಚಾಚಿದಂತೆ. ಕಾಣುತ್ತಿತ್ತು. ಬೆಳಗಾಗುವುದರಲ್ಲಿ ಇಲ್ವಲನ ಎಲ್ಲ ಸೈನ್ಯವೂ ಹತವಾಗಿ ಬಿದ್ದು, ಅವರ ಅಶ್ವಪಡೆ, ಆಯುಧಾಗಾರ, ಇಲ್ವಲನ ಬೊಕ್ಕಸ-ಸೈನ್ಯದ ಖರ್ಚಿಗೆಂದು ಕಳುಹಿದ್ದ ಬಂಗಾರದ ಮೊಹರುಗಳು ಎಲ್ಲ ಅಗಸ್ತ್ಯ ಸೈನ್ಯದ ವಶವಾದವು.

ಇಲ್ವಲನಿಗೆ ಇದು ಮೊದಲ ಅಪಜಯ ! ಶುಕ್ರನ ಮಾಯೆ ಈಗ ವ್ಯರ್ಥವಾದುದೂ ಮೊದಲೇ ! ಇದನ್ನು ಭೇದಿಸಿದ ಬೇರಾವುದೋ ಶಕ್ತಿ ಅಗಸ್ತ್ಯರಿಗೆ ವಶವಾಗಿರಬೇಕೆಂಬುದನ್ನು ಶುಕ್ರನೂ ಇಲ್ವಲನೂ ತಿಳಿದರು. ಆದರೆ ಅದು ಏನಿರಬಹುದೆಂದು ಅವರಿಗೆ ತಿಳಿಯಲಿಲ್ಲ.

ಕಾಡಿನ ಪುಳಿಂದರು, ಕಿರಾತರು, ಗೊಂಡರು, ಭಿಲ್ಲರು ಭಯದಿಂದ ಅಡಗಿ ಕುಳಿತು ಅಗಸ್ತ್ಯ ಸೈನ್ಯ ತಮ್ಮನ್ನೇನು ಮಾಡುವುದೋ ! ಎಂದು ಭಯಭೀತರಾಗಿದ್ದುದನ್ನು ಚಾಕ್ರಾಯಣನ ಅನುಚರರು ಪತ್ತೆ ಮಾಡಿದರು.

ಚಾಕ್ರಾಯಣ ಅವರ ಮುಖಂಡರನ್ನು ಕರೆಸಿ, "ನೀವು ಇನ್ನು ನಮ್ಮ ಸೈನ್ಯಕ್ಕೇ ಸೇರಿ, ನಮಗೇ ವಶವಾಗುವುದಾದರೆ ಬದುಕುತ್ತೀರಿ ! ಇಲ್ಲವಾದರೆ ಕಾಡನ್ನೇ ಸುಟ್ಟು ನಿಮ್ಮನ್ನೆಲ್ಲ ಭಸ್ಮ ಮಾಡುತ್ತೇವೆ" ಎಂದು ಅವರವರ ಭಾಷೆಯಲ್ಲೇ ಹೇಳಿದ. ಅವರ ನಿಷ್ಠೆಯನ್ನೂ ಪರೀಕ್ಷಿಸು ವುದಾಗಿಯೂ, ಅದಕ್ಕೆ ಉದಾಹರಣೆಯಾಗಿ, ಭಿಲ್ಲ ಮುಖಂಡನು

ಚಾಕ್ರಾಯಣನ ಒಂದು ಓಲೆಯನ್ನು ಮಣಿಮತೀಪುರಿಯ ಅರಸನಿಗೆ ತಲುಪಿಸಿ ಬರಬೇಕೆಂದೂ, ವಾಪಸ್ಸು ಬರದಿದ್ದರೆ ಎಲ್ಲರಿಗೂ ಶಿಕ್ಷೆಯಾಗು ವುದೆಂದೂ ಹೇಳಿ ಓಲೆ ಬರೆದು ಕಳುಹಿದ್ದ. ಭೀತನಾದ ಭಿಲ್ಲಮುಖಂಡ ತನ್ನ ಭೃತ್ಯನೊಬ್ಬನ ಕೈಲಿ ಅದನ್ನು ಕೂಡಲೇ ಇಲ್ವಲನಿಗೆ ರವಾನಿಸಿದ.

* * *

ಅಗಸ್ತ್ಯಾಶ್ರಮದ ವಾಸಿಗಳು ದಾಲ್ಭ್ಯಾಶ್ರಮಕ್ಕೆ ಸುರಕ್ಷಿತವಾಗಿ ತಲುಪಿದ್ದನ್ನೂ, ಅಲ್ಲಿಂದ ಚಾಕ್ರಾಯಣನ ಪಡೆ ಸೋಮಶ್ರವನೊಡನೆ ವಿದರ್ಭಕ್ಕೆ ಹಾಯ್ದುದನ್ನೂ, ವಿದರ್ಭಕ್ಕೆ ಇತರ ಆಶ್ರಮಗಳ ಸೈನ್ಯಗಳು ಕೂಡಿಕೊಂಡುದನ್ನೂ, ಮೊದಲೇ ಅಲ್ಲಿ ಮುತ್ತಿಗೆ ಹಾಕಿದ್ದ ಇಲ್ವಲನ ಸೈನ್ಯ, ರಕ್ತದ ಕೋಡಿಯಲ್ಲಿ ಹರಿದು ವಿನಾಶವಾದುದನ್ನೂ, ಅಗಸ್ತ್ಯರು ಅಗ್ನಿದೇವನ ಮೂಲಕ ತಿಳಿದು ಹರ್ಷಿಸಿದರು.

ಸಿಂಧುದೇಶದ ಅರಸ, ವೀರಸೇನ, ಮಹರ್ಷಿಯನ್ನು ಸ್ವಾಗತ ಮಾಡಿ ಅರಮನೆಗೆ ಕರೆದೊಯ್ದ. ಅಗಸ್ತ್ಯರು ಆರ್ಯಾವರ್ತದಲ್ಲಿ ನಡೆಯು ತ್ತಿರುವ ಕೋಲಾಹಲವನ್ನೆಲ್ಲ ವಿವರಿಸಿ, ಪರಶುರಾಮರ ಕೊಡಲಿಯಿಂದ ತಪ್ಪಲು ಇದ್ದ ಮಾರ್ಗಗಳನ್ನು ಸೂಚಿಸಿದರು. ಆರ್ಯಾವರ್ತ ಒಗ್ಗೂ ಡುವ ಅವಶ್ಯಕತೆಯನ್ನೂ, ಇಲ್ವಲನ ದೇಶದ್ರೋಹವನ್ನೂ ವಿವರಿಸಿ. ಈಗ ತಮ್ಮೊಡನೆ ದೃಢವಾಗಿ ಅರಸ ನಿಲ್ಲಬೇಕಾದ ಅವಶ್ಯಕತೆಯನ್ನು ಅವ ನಿಗೆ ಮನದಟ್ಟು ಮಾಡಿಕೊಟ್ಟರು.

ವೀರಸೇನ ಗಮನವಾಗಿ ಕೇಳಿದ! ಆದರೆ ಬ್ರಾಹ್ಮಣನಾಗಲು ಒಪ್ಪಲಿಲ್ಲ; ತನ್ನ ಪತ್ನಿಗೆ ಬ್ರಾಹ್ಮಣನಿಯೋಗವನ್ನೇರ್ಪಡಿಸುವುದು

ಕ್ಷತ್ರಿಯರಿಗೇ ಅಪಮಾನವೆಂದ. ಅಗಸ್ತ್ಯರು ಹೇಳಿದ ಸಾಂಸ್ಕೃತಿಕ ಏಕೀಕರಣ ಅವಶ್ಯವೆಂದೊಪ್ಪಿದರೂ, ಇಲ್ವಲನ ಭಯ ದೇಶಕ್ಕಿರುವುದನ್ನು ಒಪ್ಪಿದರೂ, ಗೌರವವಾದ ಬೇರೆ ಮಾರ್ಗವಿದೆಯೇ? ಎಂದು ಪದೇ ಪದೇ ಪ್ರಶ್ನಿಸಿದ. ಅಗಸ್ತ್ಯರು ಹೇಳಿದರು: "ದೊರೆಯೇ! ಬ್ರಾಹ್ಮಣನಾಗುವುದು ಅಪಮಾನದ ವಿಷಯವಲ್ಲ! ಅದಕ್ಕಾಗಿ ತಪಸ್ಸು ಮಾಡಿ ಸಾಧಿಸಬೇಕಾದ ಕಾಲ ಬರುವುದು. ಮುಂದೆ ಅದು ಸಾಧ್ಯವಾಗದೆಯೂ ಹೋಗಬಹುದು. ಈಗ ನಿನಗೆ ಅದು ನಿನ್ನ ಮನೆಯ ಬಾಗಿಲಿಗೇ ಬಂದಿದೆ. ಬ್ರಾಹ್ಮಣನಿಯೋಗ ರೀತಿ. ಆಪತ್ಕಾಲೀನ ಮರ್ಯಾದೆ. ಇದು ಶಾಸ್ತ್ರಮರ್ಯಾದೆಯೊಳಗೇ ಬರುತ್ತದೆ. ಮೂರನೆಯದಾಗಿ ಇಲ್ವಲನ ಭಯವನ್ನು ಆರ್ಯಾವರ್ತದ ಅರಸರು ಬಹುವಾಗಿ, ಗಂಭೀರವಾಗಿ ಪರಿಗಣಿಸಿದಂತಿಲ್ಲ! ದೂರದೃಷ್ಟಿಯ ಅರಸರು ಈಗಿಲ್ಲ! ಈಗಿರುವವರು ಕಾರ್ತವೀರ್ಯನ ದಾರಿಯನ್ನೇ ಹಿಡಿದರೆ, ಸಾವು ಖಂಡಿತ. ಇಲ್ಲವಾದರೆ ಪರಶುರಾಮರು ಸುಮ್ಮನೆ ಬಿಡಲಾರರು! ನೀನು ಯಾವ ದಾರಿಯನ್ನಾಶ್ರಯಿಸಿರುವೆ?"

ವೀರಸೇನ: "ಗುರುಗಳೇ! ಪರಶುರಾಮರೊಡನೆ ಹೋರಾಡಿಯೇ ಸಾಯುವೆ!! ಅದೇ ಗೌರವಮಾರ್ಗ!"

ಅಗಸ್ತ್ಯ: "ನೀನೇನೋ ಸಾಯುವೆ? ಸಿಂಧುಪ್ರಾಂತದಗತಿ? ರಾಷ್ಟ್ರದಗತಿ? ಇಲ್ವಲನೊಡನೆ ಮುಂದೆ ಹೋರಾಡುವವರಾರು? ಭವಿಷ್ಯತ್ತಿಗೆ ಏನೂ ಕೊಡದೆ ಸತ್ತರೆ ಏನು ಲಾಭ?"

"ವೀರಸೇನ; "ನನಗೆ ಅದರ ಚಿಂತೆ ಇಲ್ಲ! ನನ್ನ ಗೌರವ ನನ್ನದು!"
ಅಗಸ್ತ್ಯ; "ಸಾವಿನಲ್ಲೂ ಸಾರ್ಥಕವಿಲ್ಲದ ನಿನ್ನಂಥಹ ಭ್ರಷ್ಟರನ್ನು ನಾಡು ಸಹಿಸದು; ಸಾಯಿ; ಸಾಯಿ; ನಿನ್ನನ್ನಾರು ಉಳಿಸಿಯಾರು?"

ಎನ್ನುತ್ತಾ, ಪಂಚನದಪ್ರಾಂತದ ಅರಸಿನ ಬಳಿ ಪರಿವಾರಸಮೇತ ನಡೆದರು.

* * *

ಕಾಲ ಉರುಳಿತು. ಹದಿನೇಳು ವರ್ಷಗಳು ಕಳೆದು ಹೋದವು ! ಪರಶುರಾಮರು ಆ ವೇಳೆಗೆ ಇಪ್ಪತ್ತೊಂದಾವರ್ತಿ ಭೂಪ್ರದಕ್ಷಿಣೆ ಮಾಡಿ ಅನೇಕ ಪ್ರಖ್ಯಾತ ಅರಸರನ್ನು ಕೊಂದುಹಾಕಿದ್ದರು. ಅಗಸ್ತ್ಯರು ಆರ್ಯಾವರ್ತವನ್ನೆಲ್ಲ ಸುತ್ತಿ, ಅರಸರನ್ನು ಎಚ್ಚರಿಸಿ, ಅನೇಕರನ್ನು ಬ್ರಾಹ್ಮಣರನ್ನಾಗಿಸಿದ್ದು ಒಂದುಕಡೆಯಾದರೆ, ಪರಶುರಾಮರೊಡನೆ ಕಾದಿ ಸತ್ತ ಅರಸರ ಸಂಖ್ಯೆಯೇ ಬಹಳವಾಯಿತು. ಇಕ್ಷ್ವಾಕುಕುಲದ ಅರಸನೊಬ್ಬ ಬೆತ್ತಲೆಯ ಸ್ತ್ರೀಯರ ನಡುವೆ ಬಚ್ಚಿಟ್ಟುಕೊಂಡು ಪ್ರಾಣ ಉಳಿಸಿಕೊಂಡು "ನಾರೀಕವಚ"ನೆಂಬ ಅಪಹಾಸ್ಯದ ಅನ್ವರ್ಥಹೆಸರನ್ನೂ ಸಂಪಾದಿಸಿದ್ದ! ಅವನೂ ಅವನ ಸಂತಾನದವರೂ ಬಹುದಿನ ಬಾಳಿಬದುಕದೇ, ಅಜನೂ ಆಡಳಿತಮುಗಿಸಿ, ದಶರಥ ಪಟ್ಟಕ್ಕೆ ಬಂದಿದ್ದ ! ಅವನು ಅನುಸರಿಸಿದ ಮಾರ್ಗ – ಪರಶುರಾಮರ ಕೊಡಲಿಯಿಂದ ತಪ್ಪಿಸಿಕೊಳ್ಳಲು – ಅವರು ಬಂದ ವಾರ್ತೆ ತಿಳಿದೊಡನೆಯೇ ಮದುಮಗನಾಗಿ, ಕಂಕಣ ಧರಿಸಿ, ಹಸೆಯ ಮಣೆಯ ಮೇಲೆ ಕುಳಿತು ಯಾವಳದೋ ಕೈ ಹಿಡಿಯುವುದು ! ಬೇಕೆಂದೇ ಇವನು ಆಟ ಹೂಡುತ್ತಿರುವುದಾಗಿ ಗ್ರಹಿಸಿದ ಪರಶುರಾಮರು ಉಳಿದ ಪ್ರಾಂತಗಳಲ್ಲಿ ಹತ್ತಿಪ್ಪತ್ತು ಸಲ ಸುತ್ತಿದ್ದರೆ, ಅಯೋಧ್ಯೆಯನ್ನೇ ಸುಮಾರು ಮುನ್ನೂರ ಐವತ್ತು ಸಲ ಭೇಟಿಯಾಗಿ ನಿರಾಶರಾಗಿದ್ದರು ! ಆ ಕ್ರಮದಲ್ಲಿ ದಶರಥನಿಗೆ ಅಷ್ಟೊಂದು ರಾಣಿಯರೂ ಆಗಿಹೋಗಿದ್ದರು ! (ಇದು ಶ್ರೀ ರಾಮಾಯಣದಲ್ಲಿ ಉಕ್ತವಾಗಿದೆ.)

ಅಂಗ, ವಂಗ, ಕಳಿಂಗ, ಪುಂಡ್ರ, ಕಾಮರೂಪ, ಆಂಧ್ರಗಳ ಅರಸರೆಲ್ಲ ಸತ್ತು ಆ ಪ್ರಾಂತಗಳೆಲ್ಲ ಪರಶುರಾಮರ ವಶವಾಗಿ ಅದನ್ನವರು

ಕಾಶ್ಯಪನೆಂಬ ಬ್ರಾಹ್ಮಣನಿಗೆ ದಾನ ಕೊಟ್ಟಿದ್ದರು ! ಚಂದ್ರವಂಶದ ಅರಸರು ನಿಯೋಗಕ್ಕೆ ಒಪ್ಪಿ ಬ್ರಾಹ್ಮಣಸಂತಾನಕ್ಕೆ ಪಟ್ಟಗಟ್ಟಿದ್ದು ಪರಶುರಾಮರು ಸಂತೋಷದಿಂದ ಅವರನ್ನು ಬಿಟ್ಟರು. ಭದ್ರಕ, ಮದ್ರ, ಗಾಂಧಾರ,ಶೂದ್ರಕ, ಕಾಶ್ಯಪಮೇರಾದಿ ಪ್ರಾಂತಗಳಲ್ಲಿ ಅರಸರು ಅಗಸ್ತ್ಯರ ಶಿಷ್ಯರಾದ ಬ್ರಾಹ್ಮಣರಾಗಿ. ರಾಜ್ಯವನ್ನು ಪುರೋಹಿತರು ಆಳತೊಡಗಿದರು. ಇವರೆಲ್ಲರನ್ನೂ ಕಶ್ಯಪಗೋತ್ರದ ಆ ಬ್ರಾಹ್ಮಣನಿಗೇ ಅಧೀನರನ್ನಾಗಿಸಿ ಪರಶುರಾಮರು. ಕುರುಕ್ಷೇತ್ರಕ್ಕೆ ಹೋಗಿ, ತಾವು ಆಗಾಗ ಸಂಗ್ರಹಿಸಿದ್ದ, ತಮ್ಮ ಕೈಯ್ಯಲ್ಲಿ ಸತ್ತಿದ್ದ ಅರಸರ ರಕ್ತದಲ್ಲಿ ಜಮದಗ್ನಿಗಳಿಗೆ ತರ್ಪಣಬಿಟ್ಟು, ಶ್ರಾದ್ಧವನ್ನು ಪೂರ್ಣವಾಗಿ ಆಚರಿಸಿ, ತಾವು ದಾನಕೊಟ್ಟ ಭೂಮಿಯಲ್ಲಿ ಇನ್ನು ವಾಸಿಸುವುದಕ್ಕೂ ಇಷ್ಟ ಪಡದೆ, ವಿಂಧ್ಯದ ದಕ್ಷಿಣಕ್ಕೆ ವಾಸಸ್ಥಾನವುಂಟೋ ? ಹೇಗೆ ? ಎಂದು ಪರೀಕ್ಷಿಸಲು ಬರುತ್ತಾ ಅಲ್ಲಲ್ಲಿ ಋಷ್ಯಾಶ್ರಮಗಳಲ್ಲಿ ಸ್ವಾಗತ ಸ್ವೀಕರಿಸುತ್ತಾ, ಹಾಗೇ ದಾಲ್ಭ್ಯಾಶ್ರಮಕ್ಕೆ ಬಂದು ತಂಗಿ, ಅಲ್ಲಿ ಇಲ್ವಲನ ಚರಿತ್ರೆಯನ್ನೂ, ಅಗಸ್ತ್ಯಾಶ್ರಮ ಹಾಳಾದುದನ್ನೂ, ಅಗಸ್ತ್ಯರು ಸಂಚಾರದಲ್ಲಿರುವುದನ್ನೂ. ಅವರ ಉದ್ದೇಶ್ಯವನ್ನೂ ಅರಿತು ಮತ್ತೆ ಚಿಂತಾಕ್ರಾಂತರಾದರು.

ವಿದರ್ಭದ ರಕ್ಷಣೆಗೆ ಹದಿನೈದು ವರ್ಷಗಳ ಹಿಂದೆ ಹೋಗಿದ್ದ ಸೋಮಶ್ರವಸೂ ಈಗ ದಾಲ್ಭ್ಯಾಶ್ರಮಕ್ಕೇ ಬಂದಿದ್ದ. ಚಾಕ್ರಾಯಣ ಮಾತ್ರ ವಿದರ್ಭದಲ್ಲೇ ಉಳಿದಿದ್ದ ! ಈಗ ಲೋಪಾಮುದ್ರೆ ಸುಮಾರು ಮೂವ್ವತ್ತನಾಲ್ಕೋ ಐದೋ ವಯಸ್ಸಿನ ಗೃಹಿಣಿ ! ರಹಸ್ಯವಿವಾಹ ಆಗಿಯೂ ಗಂಡನನ್ನು ಮತ್ತೆ ಕಾಣದೇ ಹದಿನೇಳು ವರ್ಷ ಆಗಿದ್ದವಳು ! ಅಗಸ್ತ್ಯರು ಎತ್ತ ಹೋದರೋ ? ಸುಮಾರು ನಾಲ್ವತ್ತೈದು ವರ್ಷ ವಯಸ್ಸಿನ ಆ ತಪಸ್ವೀ ಎಲ್ಲಿ ಅಲೆಯುತ್ತಿದ್ದಾರೋ ? ಆರ್ಯಾವರ್ತವನ್ನು ಒಗ್ಗೂಡಿಸುವ ಕೆಲಸ ಎಷ್ಟರಮಟ್ಟಿಗೆ ಆಗಿತ್ತೋ ? ಲೋಪಾ

ಮುದ್ರೆಯು ಮುಖದಲ್ಲಿ ಚಿಂತೆ ಗಾಢವಾಗಿ ಕಾಣಬರುತ್ತಿತ್ತು. ವಿದರ್ಭರಾಜ ವೃದ್ಧನಾಗಿ ಶೀರ ಅಶಕ್ತನಾಗಿದ್ದ. ಕ್ಷಾತ್ರ ತೊರೆದು ಬ್ರಾಹ್ಮಣಾಶ್ರಿತನಾಗಿದ್ದ ಅವನ ಮತ್ತು ಅಂಥವರ ವಿಷಯದಲ್ಲಿ ಪರಶುರಾಮರಿಗೆ ಕನಿಕರವೇ ಉಂಟಾಗಿತ್ತು.

* * *

ಅಗಸ್ತ್ಯರು ದಾಲ್ಭ್ಯಾಶ್ರಮಕ್ಕೆ ಬರುತ್ತಿದ್ದಾರೆಂದೂ, ಅವರ ಆರ್ಯಾವರ್ತಯಾತ್ರೆ ಮುಗಿಯಿತೆಂದೂ ಚಾರರು ಸಮಾಚಾರ ತಂದರು ! ಎಂಥ ಸುವಾರ್ತೆ !! ಅಶ್ರಮ ಆ ದಿವ್ಯಸ್ವಾಗತಕ್ಕೆ ಅಣಿಯಾಯಿತು ! ಸುತ್ತಮುತ್ತಲ ಆಶ್ರಮಗಳಿಂದ ಸಾವಿರಾರು ಋಷಿಮುನಿಗಳು ಸೇರಿದರು ! ಸಪ್ತರ್ಷಿಮಂಡಲ ಪುನಃ ಅಲ್ಲಿ ಕೂಡಿತ್ತು ! ಸ್ವಯಂ ಪರಶುರಾಮರೂ ಆಗ ಅಲ್ಲಿದ್ದರು ! ಸಪ್ತರ್ಷಿಗಳಲ್ಲಿ ಅತ್ರಿಗಳು ಬಹಳ ವಯಸ್ಸಾಗಿ ಹಣ್ಣಾಗಿದ್ದು, ಅವರ ಪತ್ನಿ ಅನಸೂಯಾದೇವಿಯೊಡನೆ ಅಲ್ಲಿಗೆ ಬಂದಿದ್ದರು. ಭೃಗುಗಳ ಪೈಕಿ ಹೊಸ ಪೀಳಿಗೆಯವರು ಆಗ ಸಪ್ತರ್ಷಿಮಂಡಲದ ಸ್ಥಾನಕ್ಕೆ ಬಂದಿದ್ದರು. ಕುತ್ಸರು ಅರವತ್ತು ದಾಟಿದ್ದರು. ಭರದ್ವಾಜರು ಎಪ್ಪತ್ತರ ಪ್ರಾಯದಲ್ಲಿದ್ದರು. ವಸಿಷ್ಠ ಪರಂಪರೆಯಲ್ಲಿ ಸುಯಜ್ಞ ವಸಿಷ್ಠರು ತಂದೆಯವರ ಪರವಾಗಿ ಬಂದಿದ್ದು ಹಿರಿಯ ವಷಿಷ್ಠರು ಅಯೋಧ್ಯೆಯಲ್ಲೇ ಉಳಿದಿದ್ದರು. ಹಿರಿಯ ಗೌತಮರು ಸಭೆಗೆ ಬಂದಿದ್ದು ( ಅಹಲ್ಯೆಯೊಡಗೂಡಿ ), ಆ ವಂಶದ ಕಿರಿಯರಾದ ಶತಾನಂದರು ಜನಕರಾಜನ ಅಸ್ಥಾನ ಪುರೋಹಿತರಾಗಿದ್ದರು. ಕಾಶ್ಯಪರು ಪುತ್ರನನ್ನು ಕಳುಹಿದ್ದರು. ಅಂಗೀರಸರಲ್ಲೂ ಹೊಸಬರು ಸಪ್ತರ್ಷಿಮಂಡಲಕ್ಕೆ ನೇಮಕವಾಗಿದ್ದರು.

ಪರಶುರಾಮರು ದಿಗ್ವಿಜಯಮಾಡುತ್ತಾ, ಪ್ರಾಂತ ಪ್ರಾಂತಗಳಲ್ಲಿ ಸಹಸ್ರಾರು ಬ್ರಾಹ್ಮಣಯುವಕರು ಅವರನ್ನು ಹಿಂಬಾಲಿಸಿ, ಅವರಿಂದಲೇ

ಶಸ್ತ್ರದೀಕ್ಷೆ ಪಡೆದು, ಹೊಸದಾದ ಪರಶುರಾಮಪಡೆಯೊಂದು ಸೃಷ್ಟ ವಾಗಿತ್ತು ! (ಈ ಸೈನ್ಯ ಮುಂದೆ ಅಗಸ್ತ್ಯ ಸೈನ್ಯದೊಡನೆ ಸೇರಿಕೊಂಡು, ಇಲ್ವಲನೊಡನೆ ಸೆಣಸಾಟಕ್ಕೆ ತುಂಬಾ ಉಪಯುಕ್ತವಾಯಿತು !)

ಪರಶುರಾಮರು ಮಾತ್ರ ಬ್ರಾಹ್ಮಣನ ಯಾವ ಕರ್ತವ್ಯ ಕರ್ಮ ವನ್ನೂ ಬಿಟ್ಟಿರಲಿಲ್ಲ. ಗೌಡ ದೇಶದಿಂದಲೂ ಮಗಧದಿಂದಲೂ ಹವ್ಯಕರ ದೊಡ್ಡ ಬ್ರಾಹ್ಮಣತಂಡವೇ ಅವರನ್ನು ಹಿಂಬಾಲಿಸಿ. ಅವರ ಬ್ರಾಹ್ಮಣ್ಯ ತೇಜಸ್ಸಿನ ಸುರಕ್ಷಿತನಿಧಿಯಂತೆ, ಅವರ ತಪಃಶಕ್ತಿಯ ಸಾಕಾರ ರೂಪವಾಗಿ ಸದಾ ಸುತ್ತುವರೆದಿತ್ತು.

ದಾಲ್ಭ್ಯಾಶ್ರಮದಲ್ಲಿ ಹೀಗೆ ಭೂಮಂಡಲದ ಸಮಸ್ತ ಬ್ರಾಹ್ಮಣ್ಯವೂ ಸೇರಿದ್ದಾಗ, ಆ ವರೆಗೆ ಅಗಸ್ತ್ಯಾಶ್ರಮದ ಕುಲಪತಿಗಳೇ ಬರದಿದ್ದುದ್ದು ದೊಡ್ಡ ಕೊರತೆಯಾಗಿತ್ತು !

ಲೋಪಾಮುದ್ರೆಗೆ ಅಗ್ನಿಮುಖೇನ ,ಆಗಾಗ ಅಗಸ್ತ್ಯದರ್ಶನವೂ ಅವರೊಡನೆ ಸಂಭಾಷಣೆಯೂ, ನಡೆದಿದ್ದರೂ. ಆಕೆಯ ವಿವಾಹಾ ನಂತರದ ಆ ಪ್ರಾರಂಭಿಕ ಯೌವ್ವನದ ದಿನಗಳು ಯಾವುದೊಂದು ನವ ವಿವಾಹಿತೆಯ ನಿರೀಕ್ಷಿತ ರೀತಿಯಲ್ಲೂ ಕಳೆಯದೇ, ಬರೀ ತ್ಯಾಗದಲ್ಲೇ ಈ ಮಹಾಮಹಿಮಳು ದಿನಗಳನ್ನು ಕಳೆಯುವಂತಾಯಿತು ! ಇದರ ಅರಿವು ಅಗಸ್ತ್ಯರಿಗೂ ಇದ್ದರೂ, ಕಾರ್ಯಭಾರ, ಕರ್ತವ್ಯದ ಹೊಣೆ ಅವ ರನ್ನು ನಿಸ್ಸಹಾಯಕರನ್ನಾಗಿಸಿತ್ತು.

ಅವರು ಹದಿನೇಳು ವರ್ಷಗಳಿಗೂ ಹಿಂದೆ ಕಳುಹಿದ್ದ ಭಸ್ಮ ಇಲ್ವಲ ನನ್ನು ಮುಂದಿನ ದುಸ್ಸಾಹಸಗಳಿಗೆ ಕೈ ಹಾಕದಂತೆ ಮಾಡಿದ್ದರೂ, ಪಳ ಗಿದ್ದ ರಾಜಕಾರಣಿಯಾದ ಅವನು ಕಾಲಕಾಯುತ್ತ, ಅಗಸ್ತ್ಯ ನಿರ್ನಾಮದ ಮೂಲಕ ಸಮಸ್ತಬ್ರಾಹ್ಮಣ್ಯದ ವಿನಾಶಕ್ಕೂ ಕಾಲ ಕಾಯುತ್ತಿದ್ದ ! ತನ್ನ ಬ್ರಾಹ್ಮಣ್ಯದ ನಾಟಕವನ್ನು ಚೆನ್ನಾಗಿಯೇ ಮಾಡುತ್ತಿದ್ದ. ಯಜ್ಞಗಳೇನು,

ಯಾಗಗಳೇನು, ಪಿತೃಶ್ರಾದ್ಧ, ಮಾತೃಶ್ರಾದ್ಧಗಳ ವೈಭವಗಳೇನು, ದಾನ ಧರ್ಮಗಳೇನು, ಚೈತ್ಯಪೂಜೆ, ಮುಂತಾದ ಎಲ್ಲ ಪವಿತ್ರಕಾರ್ಯಗಳಲ್ಲೂ ಅವನನ್ನು ಯಾರೂ ಮೀರಿಸಲಾರರೆಂಬ ಬಿರುದನ್ನು ಅವನು ಪಡೆದಾಗಿತ್ತು. ಅಗಸ್ತ್ಯರನ್ನು ನಂಬಿಸಲು ಇನ್ನೇನು ಬಾಕಿ ಉಳಿದಿತ್ತು ?

ದ್ರಮಿಡದೇಶದ ಶಿವಗುರುಗಳೊಂದಿಗೂ ಇಲ್ವಲ ಮೈತ್ರಿ ಬೆಳೆಸಿದ್ದ. ಆ ದೇಶದ ಶಿವಾಲಯಗಳಿಗೆ ಅಪಾರ ದತ್ತಿಗಳನ್ನೂ ಕೊಟ್ಟಿದ್ದ. ಕಾಪಾಲಿಕರು, ಕಾಲಭೈರವರು, ಮಾತೃಪೂಜೆಯು, ನರಬಲಿ ಕೊಡುವ ಪದ್ಧತಿಯ ವಿಚಿತ್ರ ಪೂಜಾರಿಗಳು, ಸರ್ಪಪೂಜಕರು, ಮಾಂತ್ರಿಕರು, ಜ್ಯೋತಿಷಿಗಳು, ಸಿದ್ಧೌಷಧ ಪ್ರಯೋಗಿಗಳು, ನಗ್ನರು, ಪಾಷಂಡ ತಾಪಸಿಗಳು, ಮುಂಡರು, ಪಾತರಶನರೂ ಎಲ್ಲರನ್ನೂ ಅವನು ಬಗೆ ಬಗೆಯಲ್ಲಿ ಒಲಿಸಿಕೊಳ್ಳಲಾರಂಭಿಸಿದ್ದ ! ವೈಖಾನಸರು ಮಾತ್ರ ಅವನ ಬಲೆಗೆ ಬಿದ್ದಿರಲಿಲ್ಲ ! ಬೀಳದ ಇನ್ನೊಂದು ಬಗೆಯ ಉಪಾಸಕರೆಂದರೆ ವಾಲಖಿಲ್ಯರು ! ಇವರೀರ್ವರ ತಂಡದವರೂ ಬಹು ಕಷ್ಟಪಟ್ಟು ವಿಂಧ್ಯವನ್ನು ಹೇಗೋ ದಾಟಿ ಬಂದು ಪ್ರಾಚೀನ ವೈಷ್ಣವಾಲಯಗಳಲ್ಲಿ ಬೆಟ್ಟಗಳ ಮೇಲೆಯೂ, ದ್ವೀಪಗಳಲ್ಲಿಯೂ, ಅರಣ್ಯಮಧ್ಯದಲ್ಲಿಯೂ ಅಲ್ಲಲ್ಲಿ ನೆಲೆಸಿ, ಯಾರ ಕಣ್ಣಿಗೂ ವಿಶೇಷವಾಗಿ ಬೀಳದೆ ತಂತಮ್ಮ ಉಪಾಸನೆಗಳನ್ನು ಮಾಡಿಕೊಂಡಿದ್ದರು. ಇವರ ಹೊರತು ಇಲ್ವಲ ಇತರರಿಗೆ ಪ್ರಿಯನಾಗುತ್ತಿದ್ದ.

ಇದೇಕೆಂಬುದನ್ನು ಅರಿಯಬಲ್ಲವರಾದ ಒಬ್ಬರೇ ಅಗಸ್ತ್ಯರು ಆವರೆಗೆ ಉತ್ತರ ಭಾರತ ಯಾತ್ರೆಯಲ್ಲಿದ್ದು, ದಾಲ್ಭ್ಯಾಶ್ರಮಕ್ಕೆ ಆಗ ಬರುತ್ತಿದ್ದ ಸಂತಸವನ್ನು ಋಷಿಗಳೆಲ್ಲ ಹಂಚಿಕೊಂಡದ್ದು ಸರಿ !

ಇಲ್ವಲನೂ ಅಲ್ಲಿಗೆ ಪ್ರತಿನಿಧಿಗಳನ್ನು ಕಳುಹಿ ಅಗಸ್ತ್ಯರ ಸ್ವಾಗತಕ್ಕೆ ಕಾದಿದ್ದುದು ಇಡೀ ಬ್ರಾಹ್ಮಣ ಸಮೂಹಕ್ಕೆ ಅಚ್ಚರಿ ತಂದಿತ್ತು !!

———

## ೧೫ ಅಗಸ್ತ್ಯಾಗಮನ, ಪರಶುರಾಮರೊಡನೆ ಭೇಟಿ !

ಕುಳ್ಳ, ಸ್ಥೂಲಕಾಯದ, ಸ್ವರದ್ರೂಪೀ, ಬ್ರಾಹ್ಮಣ ಆಕಾರವೊಂದು ದಾಲ್ಭ್ಯಾಶ್ರಮದ ದ್ವಾರಕ್ಕೆ ಕೊಂಚದೂರದಲ್ಲಿ ಕಾಣಿಸಿತು. ಕಾಂತಿಯುಕ್ತವಾದ ಆ ವ್ಯಕ್ತಿಯ ಮುಖದಲ್ಲಿನ ಆ ಎರಡು ನೇತ್ರಗಳು ನಕ್ಷತ್ರಗಳಂತ ಮಿನುಗುತ್ತಿದ್ದವು. ಅಲ್ಲಲ್ಲಿ ಒಂದು ನರೆಗೂದಲು ಮಿಶ್ರಿತವಾದ ಆ ಕಪ್ಪು ಜಡೆಯು ಪರ್ವತದಂತೆ ವ್ಯಕ್ತಿಯ ತಲೆಯ ಮೇಲೆ ಕಂಗೊಳಿಸುತ್ತಿತ್ತು. ಸಾಂದ್ರವಾಗಿ ಬೆಳೆದ ಗಡ್ಡ ಮೀಸೆಗಳು ಗಾಳಿಗೆ ಕೊಂಚ ಅಲುಗುತ್ತಾ, ವ್ಯಕ್ತಿಯ ನಡಗೆಗೆ ಒಂದು ವಿಚಿತ್ರ ಶೋಭೆ ತಂದಿದ್ದವು. ಮೈಬಣ್ಣವು ಎದ್ದು ಕಾಣುತ್ತಿರಲಿಲ್ಲ ! ಏಕೆಂದರೆ ಮೈಗೆಲ್ಲ ಯಜ್ಞಶೇಷವಾದ ಭಸ್ಮವನ್ನು ಬಳಿದುಕೊಳ್ಳಲಾಗಿತ್ತು. ಹಣೆಯಲ್ಲಿ ಮಾತ್ರ ಬಿದಿರಿನ ಎಲೆಯ ಆಕೃತಿಯಲ್ಲಿ ತುಳಸೀ ಮೃತ್ತಿಕೆಯಿಂದ ಊರ್ಧ್ವ ಪುಂಡ್ರವನ್ನು ಎಳೆಯಲಾಗಿತ್ತು. ತೋಳುಗಳಲ್ಲೂ ಇತರ ಕಡೆಗಳಲ್ಲೂ ಎಳೆದಿದ್ದ ಅದೇ ರೀತಿಯ ಪುಂಡ್ರಗಳು ವೇಗ ನಡಗೆಯ ಪರಿಣಾಮವಾದ ಬೆವರಿನಿಂದ ಮಲಿನವಾಗಿದ್ದವು.

ಇವರೇ ಜಗತ್ತನ್ನು ನಡುಗಿಸುವ ತಪೋಬಲವುಳ್ಳ ಅಗಸ್ತ್ಯರೆಂದು ಅಲ್ಲಿ ನೆರೆದಿದ್ದ ಋಷಿಸ್ತೋಮ ಗುರುತು ಹಚ್ಚುವ ಮುಂಚೆ, ಅಗಸ್ತ್ಯರ ಮುಂದುಗಡೆ ಐವತ್ತು ಅರವತ್ತು ತಾಪಸ ಕ್ಷತ್ರಿಯರು ಅಶ್ವಾರೋಹಿಗಳಾಗಿ ಆಶ್ರಮವನ್ನು ಸಮೀಪಿಸಿದ್ದರು. ಎಲ್ಲರೂ ಸೊಂಟದಿಂದ ಮೇಲಕ್ಕೆ ಎದೆಯನ್ನು ವಾಘ್ರಾಜಿನದಿಂದ ಉಪವೀತಾಕೃತಿಯಲ್ಲಿ, ಕವಚ

ವನ್ನಾಗಿ ಬಿಗಿದು ಕೊಂಡಿದ್ದರು. ಹೆಗಲಲ್ಲಿ ಬಿಲ್ಲು, ಬತ್ತಳಿಕೆಗಳನ್ನು ಧರಿಸಿದ್ದು, ಕುದುರೆಗಳ ಮೇಲೇರಿ ಕುಳಿತಿದ್ದ ರೀತಿಯಿಂದಲೇ ಅವರು ಯಾವ ಶತ್ರುವಿನ ಎದೆಗಳನ್ನೂ ನಡುಗಿಸಬಲ್ಲವರಾಗಿದ್ದರೆಂದು ತೋರುತ್ತಿತ್ತು. ಮಹಾಗಂಭೀರವಾದ ಆ ನಡಗೆಯ ಕುದುರೆಗಳ ಮೈಗಳು ಮಿನುಗುತ್ತಿದ್ದು, ದಷ್ಟಪುಷ್ಟವಾಗಿದ್ದು, ನೋಡುವವರಿಗೆ, ಹಿಂದೆ ಯಾವನೋ ರಾಜಾಧಿರಾಜ ಬರುತ್ತಿದ್ದಾನೆಂಬ ಭಾವನೆಯನ್ನು ಮೂಡಿಸುತ್ತಿದ್ದವು. ಒಬ್ಬ ತಪಸ್ವಿಗೆ ಈ ಸೈನ್ಯವೇಕೆ ? ಎಂದು ಪಾಮರರು ವಿಸ್ಮಯ ಪಡುವಂತೆ, ಅಷ್ಟು ಸರಳವಾದ ಆ ತಪಸ್ವಿಯ ಕಮಂಡಲಗಳನ್ನು (ಕೈಕಾಲು ತೊಳೆಯುವುದಕ್ಕೊಂದು, ಆಚಮನ ಕ್ಕೊಂದು) ಶಿಷ್ಯರಿಬ್ಬರು ಹೆಗಲ ಮೇಲೆ ಧರಿಸಿ, ಓಡಾಡುತ್ತಾ, ಅವರ ಹಿಂದೆ ಬರುತ್ತಿದ್ದರು. ಮಹರ್ಷಿಯ ಹಿಂದೆ ಬರುತ್ತಿದ್ದ ಸಾವಿರ ಸಾವಿರ ಶಿಷ್ಯರು ವೇದ ಮಂತ್ರಗಳನ್ನು ಪಠಿಸುತ್ತಾ, ಆ ಸ್ವರ ಗಗನ ವನ್ನು ಭೇದಿಸುತ್ತಿತ್ತು. ಅವರಲ್ಲಿ ಮೊದಲಿನ ಅರ್ಧ ಭಾಗದ ಒಂದು ಗೋಷ್ಠಿಯವರು ಒಂದು ವಾಕ್ಯವನ್ನು ಪಠಿಸಿದರೆ, ಎರಡನೇಯ ಅರ್ಧ ಭಾಗದವರು ಮುಂದಿನ ಇನ್ನೊಂದು ವಾಕ್ಯವನ್ನು ಹೀಗೆ ಪಠಿಸುತ್ತಾ, ಒಬ್ಬರಿಗೊಬ್ಬರು ಸ್ಪರ್ಧಿಸುತ್ತಾ, ದಾರಿಯ ಆಯಾಸವೇ ತಿಳಿಯದಂತೆ, ನೂರಾರು ಮೈಲಿಗಳನ್ನೂ ನಡೆದು ಬರುತ್ತಾ, ಆಯಾಸ ಗೆದ್ದ ಧೀಮಂತ ವೈದಿಕರು. ಆಶ್ರಮ ಸಮೀಪವಾಗುತ್ತಲೂ ಪಾಠ ಕರು ಸ್ವರ ಎತ್ತರಿಸಿ ಸೂರ್ಯನ ಕಿವಿಗೆ ಬೀಳುವಂತೆ ಹೀಗೆ ವಾಕ್ಯೋಚಾರ ಮಾಡುತ್ತಿದ್ದರು.

ಒಂದು ಗೋಷ್ಠಿ : **ದೇವಾಸುರಾಸ್ಸಂಯತ್ತಾ ಆಸನ್ ।**

ಎರಡನೆಯದು : **ಸೋಽಗ್ನಿ ರಬ್ರವೀತ್ ।**

**ಮೊದಲಾದ್ದು : ಮಾಮಗ್ರೇ ಜಯತ ।**

**ಎರಡನೇದು : ಮಯಾ ಮುಖೇನಾಸುರಾನ್ ಜೇಷ್ಯಥೇತಿ ।**

— ಹೀಗೆ ಪಠನ ನಡೆದಿತ್ತು. (ಈ ಮಂತ್ರಗಳು ಈಗಿನ ತೈತ್ತಿರೀಯ ಬ್ರಾಹ್ಮಣದ ೧–೬–೨ ರಲ್ಲಿ ಬರುತ್ತವೆ. ಆಗ ವೇದವಿಭಾಗ ಹೀಗಿರಲಿಲ್ಲ.) ಮಂತ್ರಗಳು ಪಂಚಹವಿಸ್ಸುಗಳೆಂಬ ಪ್ರಕರಣಕ್ಕೆ ಸಂಬಂಧಿಸಿದ್ದು ಒಂದು ಕಥೆಯನ್ನು ಹೇಳುತ್ತಿದ್ದವು. "ಒಮ್ಮೆ ದೇವತೆಗಳೂ ಅಸುರರೂ ಯುದ್ಧಮಾಡಲಾರಂಭಿಸಿದ್ದರು. ಆಗ ಅಗ್ನಿಯು ದೇವತೆಗಳಿಗೆಂದ. 'ನನ್ನನ್ನು ಕುರಿತು ಮೊದಲು ಯಾಗಮಾಡಿ. ನನ್ನನ್ನು ಮುಖವನ್ನಾಗಿ ಹೊಂದಿ ನೀವು ಜಯಿಸುವಿರಿ'–ಎಂದು. 'ನನಗಾಗಿ ಎರಡನೆಯ ಯಾಗ ಮಾಡಿರಿ.ನಾನು ದೊರೆಯಾಗಿದ್ದರೆ ನೀವು ಜಯಿಸುವಿರಿ'– ಎಂದ ಸವಿತಾ. ಸೂರ್ಯನು ಆಗ ಹೇಳಿದ. 'ನನಗಾಗಿ ಮೂರನೆಯದೊಂದು ಯಾಗ ನಡೆಸಿರಿ. ನಾನು ನಿಮ್ಮನ್ನು ಪುನಃ ಹಡೆದು ಜಯತಂದು ಕೊಡು ತರುತ್ತೇನೆ' ಎಂದು. ಸರಸ್ವತಿಯು ಆಗ ಹೇಳಿದಳು. 'ನನಗಾಗಿ ನಾಲ್ಕನೆಯದೊಂದು ಯಾಗ ನಡೆಸಿರಿ. ನಿಮಗೆ ಸುಧೃಢವಾದ ಇಂದ್ರಿಯಗಳನ್ನು ನಾನು ಅನುಗ್ರಹಿಸಿ ಧರಿಸುತ್ತೇನೆ' ಎಂದು. 'ನನಗಾಗಿ ಐದನೆಯ ಯಾಗವೊಂದನ್ನು ಮಾಡಿರಿ. ನಾನು ನಿಮಗೆ ಪ್ರತಿಷ್ಠೆಯನ್ನು ನಿಂತಲ್ಲೇ ನಿಂತು ಹೋರಾಡುವ, ಮತ್ತು ಪಲಾಯನ ಮಾಡದಂತಹ ನಿಲುವನ್ನು –ಕೊಡುತ್ತೇನೆ' ಎಂದು ಪೂಷಣದೇವತೆಯು ಹೇಳಿದ. ಹಾಗೇ ಮಾಡಿ ಅಗ್ನಿಯನ್ನು ಮುಖವನ್ನಾಗಿಯೂ, ಸೋಮನನ್ನು ರಾಜನನ್ನಾಗಿಯೂ, ಮಾಡಿಕೊಂಡು, ಸವಿತೃವಿನಿಂದ ಪುನಃಪ್ರಸೂತಿ ಪಡೆದು, ಸರಸ್ವತಿಯಿಂದ ದೃಢಾಂಗರಾಗಿ, ಪೂಷಣನಿಂದ ಪ್ರತಿಷ್ಠೆ ಹೊಂದಿ ಯುದ್ಧಮಾಡಿ ದೇವತೆಗಳು ಅಸುರರನ್ನು ಜಯಿಸಿದರು" ಎಂಬುದೇ ಆ ಕಥೆ. ಆಶ್ರಮದ ಮಹಾದ್ವಾರ ಸಮೀಪಿಸಿಯೂ ಅನುವಾಕಮುಗಿಯಲಿಲ್ಲವಾದುದರಿಂದ, ಮುಗಿಯುವವರೆಗೂ ಅಲ್ಲೇ ನಿಂತು ಪಠಿಸಿದರು. ಇದು ವೈದಿಕರ ರೀತಿ.

ಆಶ್ರಮದ್ವಾರದಲ್ಲಿ ದಾಲ್ಭ್ಯರೇ ಶಿಷ್ಯಸಮೇತ ಬಂದು ನಿಂತಿದ್ದರು. ದೊಡ್ಡ ಋಷಿಗೋಷ್ಠಿ ಸ್ವಾಗತ ಮಾಡಲು ನಿಂತಿತ್ತು.

ಅಗಸ್ತ್ಯರು ಹತ್ತಿರ ಬರುತ್ತಾ ಅಶ್ವಾರೋಹಿಗಳು ಎರಡೂ ಕಡೆಗೆ ಶಿಸ್ತಿನಿಂದ ಸರಿದು ಸ್ವಾಗತಮಾಡುವವರಿಗೂ, ಮಾಡಿಸಿಕೊಳ್ಳುವವರಿಗೂ. ನಡುವೆ ಬಾರದೆ, ನಿಂತರು. ದಾಲ್ಭ್ಯಾಶ್ರಮದ ಅಶ್ವಪಡೆಯ ನಾಯಕ ನಾದ ವ್ಯಾಘ್ರಪಾದನೆಂಬ ಹೆಸರಿನ ಮಹರ್ಷಿ ಅವರನ್ನು ಅನ್ಯತ್ರ ಸ್ವಾಗತಿಸಿ ವಿಶ್ರಾಂತಿಗಾಗಿ ಒಳಗೆ ಬೇರೊಂದು ದ್ವಾರದಿಂದ ಕರೆದೊಯ್ದ.

ಆಶ್ರಮದ್ವಾರದಲ್ಲಿ ಅಗಸ್ತ್ಯರಿಗೆ ಆಶ್ಚರ್ಯ ಕಾದಿತ್ತು ! ಪರಶು ರಾಮರೂ ಅಲ್ಲಿ ನಿಂತದ್ದು ! ಮುವ್ವತ್ತೋ ಮುವ್ವತ್ತೆರಡೋ ವಯಸ್ಸಿರಬಹುದಾದ ಆ ತೇಜೋಮೂರ್ತಿ, ತೇಜಃಪೂರ್ಣವಾಗಿ ನಿಂತು, ಮಂದಸ್ಮಿತದಿಂದ ಮಹರ್ಷಿಯನ್ನು ನೋಡುತ್ತಾ, ಆಶ್ರಮ ದ್ವಾರಕ್ಕೆ ಅವರು ಬರುವುದನ್ನು ಕಾಯುತ್ತಿದ್ದು, ಅವರು ಬಂದೊಡನೆಯೇ ನಮಸ್ಕರಿಸಿತು. ವಯೋಧಿಕರಾದ ಅಗಸ್ತ್ಯರು ಅದನ್ನು ನಿರಾಕರಿಸುವಂತೆಯೂ ಒಪ್ಪಿಕೊಳ್ಳುವಂತೆಯೂ ಇರದೆ "ಹಾ, ಹಾ, ಹಾ" ! ಎನ್ನುತ್ತಾ ಅದನ್ನು ತಡೆಯಲು ಯತ್ನಿಸಿದ್ದರು. ಮುಂದಿನ ಸಂಭಾಷಣೆ ಹೀಗೆ ನಡೆದಿತ್ತು !

ಅಗಸ್ತ್ಯ : "ರಾಮ ! ಇದೇನು ಅಕಾರ್ಯ ಮಾಡುವೆ ? ನೀನು ನನ್ನ ಉಪಾಸ್ಯ ದೇವತೆಯ ಅವತಾರ ! ಉಪಾಸ್ಯನು ಉಪಾಸಕನಿಗೇ ನಮಸ್ಕರಿಸುವುದೇ ?"

ರಾಮ : "ನಾನು ಯಾವ ಅವತಾರವೋ, ಆ ವಿಚಾರ ಈಗೇಕೆ ? ಅವತಾರವೆಂದೇ ಇಟ್ಟುಕೊಳ್ಳಿ. ಅದಕ್ಕೂ ಒಂದು ಮರ್ಯಾದೆ ಉಂಟಲ್ಲ!

ಅದರಲ್ಲಿ ನೀವೇ ಉಪಾಸ್ಯರು, ನಾನೇ ಉಪಾಸಕ ! ಆಗ ನಮಸ್ಕರಿಸಿದರೆ ತಪ್ಪೇನು ?''

ಅಗಸ್ತ್ಯ ; "ನಾನೊಂದು ಕಾರ್ಯ ಉದ್ದೇಶಿಸಿದ್ದೆ ! ನೀನು ನನ್ನ ಲೆಕ್ಕಾಚಾರವನ್ನೆಲ್ಲಾ ತಲೆ ಕೆಳಗು ಮಾಡಿ ಆರ್ಯಾವರ್ತವನ್ನೆಲ್ಲ ಸುತ್ತಿಬರುವಂತೆ ಮಾಡಿಬಿಟ್ಟೆ ! ಕಡೆಗೂ ಭೇಟಿಯೂ ಸಿಗದೆ, ಈಗ ಎಲ್ಲ ಮುಗಿದ ಮೇಲೆ ಇಲ್ಲಾದರೂ ಭೇಟಿ ಆಯಿತಲ್ಲ !"

ರಾಮ : "ಮಹರ್ಷಿ ! ನಾನೇ ನೀವಾಗಿದ್ದರೆ, ನಮ್ಮ ತಂದೆ ಹಾಗೆ ಸಾಯುತ್ತಿದ್ದರೆ ? ನಿಮ್ಮ ಲೆಕ್ಕಾಚಾರವನ್ನು ತಲೆಕೆಳಗುಮಾಡಿದವನು ನಾನಲ್ಲ ! ಸಹಸ್ರಾರ್ಜುನ !! ಅಂತೂ ನೀವೂ ಆರ್ಯಾವರ್ತ ಪರ್ಯಟನಕ್ಕೆ ಹೇಗೂ ಹೊರಟಿದ್ದಿರಿ ! ನಾನು ಮೊದಲು, ನೀವು ಆಮೇಲೆ ಮಾಡಿದಂತಾಯ್ತು ? ಏನು ಮುಳುಗಿ ಹೋಯಿತು ?"

ಅಗಸ್ತ್ಯ : "ಭರತಭೂಮಿಯನ್ನು ಸಾಂಸ್ಕೃತಿಕವಾಗಿ ಏಕೀಕರಿಸುವುದು ನನಗೆ ದೈವವಿಹಿತವಾದ ಕರ್ತವ್ಯವಾಗಿತ್ತು. ಅದಕ್ಕೆ ಎಡರು ತೊಡರುಗಳನ್ನು ನಾನು ದಕ್ಷಿಣದಲ್ಲಿ ನಿರೀಕ್ಷಿಸಿದ್ದೆನೇ ವಿನಾ ಉತ್ತರದಲ್ಲಲ್ಲ !"

ರಾಮ ; "ಹಾಗಾದರೆ ಭೃಗುಕಚ್ಛದಲ್ಲಿ ಆದ ಅನಾಹುತಕ್ಕೆ ನಾನು ಹೊಣೆ ಎನ್ನುವಿರಾ ?''

ಅಗಸ್ತ್ಯ : "ನಾನು ಹಾಗೆ ಹೇಳಲಿಲ್ಲ, ರಾಮ ! ಕಾರ್ತವೀರ್ಯನೂ ಆ ಎಡರು ತೊಡರುಗಳಲ್ಲಿ ಒಂದಾಗಿದ್ದಾನೆಂದು ನಾನು ಎಣಿಸಿರಲಿಲ್ಲ ! ಅಲ್ಲೇ ನನ್ನ ಲೆಕ್ಕ ತಪ್ಪಿದ್ದು !! ನೀನು ಆ ಮುಳ್ಳನ್ನು ಮಾತ್ರವಲ್ಲದೆ, ಅದನನ್ನುಮೋದಿಸುವವರನ್ನೂ ತರಿದು ತುಂಡಿಕ್ಕಿ ಒಂದು ರೀತಿಯಿಂದ ನನ್ನ ಕಾರ್ಯದ ಕಂಟಕವನ್ನು ಉತ್ತರದಲ್ಲೂ ಕಿತ್ತೊಗೆದೆ ! ಆದರೆ

ದಕ್ಷಿಣದಲ್ಲಿನ ಆಸುರೀಶಕ್ತಿಗಳ ವಿರುದ್ಧ ಹೋರಾಡಲು ಸರಿಯಾದ ಅಧಿಕಾರಿಗಳನ್ನು ಉತ್ತರದಲ್ಲಿ ಹುಡುಕಲು ನನಗೆ ಶ್ರಮವಾದುದಲ್ಲದೆ, ಕಾಲವೂ ಹಿಡಿಯಿತು ! ಅಷ್ಟೇ ! ಹದಿನೇಳು ವರ್ಷಕಾಲ ರಾಜ ಕಾರಣದಲ್ಲಿ ಎಷ್ಟೊಂದು ದೀರ್ಘಕಾಲವೆಂಬುದನ್ನು ಚಿಂತಿಸು."

ರಾಮ ; "ಪ್ರಭು ! ಇತಿಹಾಸದ ಪುಟಗಳಲ್ಲಿ ಹದಿನೇಳುವರ್ಷ ದೊಡ್ಡದೇನಲ್ಲ ! ಮೇಲಾಗಿ ನಿಮ್ಮ ಯಜ್ಞಭೂಮಿಯನ್ನು ನಾನು ಚೆನ್ನಾಗಿ ಉತ್ತು ಹಸನು ಮಾಡಿಕೊಡಲಿಲ್ಲವೇ ?"

ಅಗಸ್ತ್ಯ : "ಅದು ಸರಿ ! ಆದರೆ ಅಲ್ಲಿ ಹೊಸ ಬೆಳೆಯನ್ನೇ ನಾನು ಬಿತ್ತಿ, ಫಲಕ್ಕಾಗಿ ಕಾಯುವಂತಾಯ್ತು."

ರಾಮ ; "ಅದು ದೈವೇಚ್ಛೆ. ಆದರೆ, ಇದರಲ್ಲಿ ಯಾರ ಗಂಟೂ ಹೋಗಲಿಲ್ಲವಲ್ಲ ? ನಿಮಗೂ ನಮಗೂ ಸ್ವಾರ್ಥವೇನಿಲ್ಲ, ಅಲ್ಲವೇ ?"

ಸ್ವಾರ್ಥದ ಮಾತು ಎದ್ದೊಡನೆಯೇ ಅಗಸ್ತ್ಯರ ಮನದಲ್ಲಿ ತಾವು ತಮ್ಮ ಪಿತೃಗಳಿಗೆ ಕೊಟ್ಟಿದ್ದ ವಾಗ್ದಾನದ ನೆನಪಾಯಿತು . ಅವರ ಕಂಗಳು ಆಕಸ್ಮಿಕವಾಗೆಂಬಂತೆ, ಅಲ್ಲೆಲ್ಲಾದರೂ ಲೋಪಾಮುದ್ರೆ ಇರುವಳೋ ಎಂಬುದನ್ನು ಹುಡುಕಲಾರಂಭಿಸಿದವು.

ದೂರದಲ್ಲಿ ಋಷಿಪತ್ನಿಯರ, ಋಷಿಕನ್ಯೆಯರ ಸಾಲಿನಲ್ಲಿ, ಮೊದ ದಲ್ಲೇ ನಿಂತಿದ್ದ ಪತ್ನಿಯನ್ನು ಅಗಸ್ತ್ಯರು ಕಂಡು, ಅವರ ದೃಷ್ಟಿ ಒಂದೇ ಕ್ಷಣ ಅವಳ ದೃಷ್ಟಿಯಲ್ಲಿ ನೆಟ್ಟವು !

"ನನ್ನನ್ನು ಇಷ್ಟು ದೀರ್ಘಕಾಲ ಬಿಟ್ಟಗಲಿ, ನೀವೂ ಎಷ್ಟು ನೊಂದಿರಿ ? ನನ್ನನ್ನೂ ಎಷ್ಟು ನೋಯಿಸಿದಿರಿ ?" ಎಂಬಂತೆ ಆಕೆಯ ಕಂಗಳಲ್ಲಿ ಆಕ್ಷೇಪ, ಆಕ್ರೋಶ, ಸಲುಗೆ, ಉಕ್ಕಿಬಂದ ಪ್ರೇಮ, ಲಜ್ಜೆಗಳ

ಸಂಮಿಶ್ರಭಾವದಲ್ಲಿ ತುಸು ಅವರನ್ನು ನಿಟ್ಟಿಸಿ, ದೃಷ್ಟಿಯನ್ನು ಬೇರೆ ಕಡೆ ಹೊರಳಿಸಿದವು ! ಎಷ್ಟು ತಡೆದರೂ ಅಶ್ರುಗಳು ಉಕ್ಕಿ ಬರಲಾರಂಭಿಸಿದ್ದವು. ಸಮಚಿತ್ತರೂ, ಮಹಾಕಾರ್ಯಧುರಂಧರರೂ ಶತ್ರುಭಯಂಕರರೂ ಆಗಿದ್ದ ಅಗಸ್ತ್ಯರ ಕಂಗಳೂ ನೀಗರೊಡೆದವು. ಉಳಿದವರಿಗೆ ಅದು ತಿಳಿಯದಂತೆ ಏನಾದರೂ ಉಪಾಯಹೂಡಬೇಕೆಂಬಷ್ಟರಲ್ಲಿ ದಾಲ್ಭ್ಯರೇ ಮಾತೆತ್ತಿದ್ದರು.

ದಾಲ್ಭ್ಯ : "ರಾಮ ! ನೀನೇನ್ನೋ ಮುಂಚೆಯೇ ಆಶ್ರಮಕ್ಕೆ ಬಂದು ವಿಶ್ರಾಂತನಾಗಿರುವೆ. ಅಗಸ್ತ್ಯರೂ ಅವರ ಪರಿವಾರವೂ ಇನ್ನೂ ಪಾದಪ್ರಕ್ಷಾಳನ ಮಾಡುವ ಮುಂಚೆಯೇ, ಅವರಿಗಿನ್ನೂ ಹೊಟ್ಟೆ ಹಸಿಯುತ್ತಾ, ನೀವು ಅವತಾರ, ಲೋಕ ಕಲ್ಯಾಣ, ಪರ್ಯಟನ ವಿಷಯಗಳನ್ನು ಇಲ್ಲೇ ಬಾಗಿಲಲ್ಲಿ ಚರ್ಚಿಸುತ್ತಾ ನಿಂತಿರಿ, ಸೂರ್ಯಾಸ್ತವೂ ಆಗಿಬಿಡುತ್ತದೆ. ! ಸಾವಿರಾರು ಹಸಿದ ಋಷಿಗಳನ್ನು ನಾನು ಹೀಗೇ ಇಲ್ಲಿ ನಿಲ್ಲಿಸಲೇ ?"

ಎನ್ನುತ್ತಾ ಆಶ್ರಮಸ್ತ್ರೀಯರ ಮುಖ ನೋಡಿದರು ! ಸಂಜ್ಞೆ ತಿಳಿದ ಅವರು ಒಬ್ಬೊಬ್ಬರಾಗಿ, ತಲೆಯ ಮೇಲೆ ಥಳಥಳನೆ ಬೆಳಗುತ್ತಾ ಹೊತ್ತ ಪಾತ್ರೆಗಳ ತೀರ್ಥದಿಂದ ಮಹರ್ಷಿಯ ಮತ್ತು ಅವನ ಅನುಚರರ ಪಾದಗಳನ್ನು ತೊಳೆಯಲಾರಂಭಿಸಿದರು. ವಿಧಿ, ಆಗಸ್ತ್ಯರ ಪಾದ ತೊಳೆಯಲು ಲೋಪಾಮುದ್ರೆಯನ್ನೇ ಮುಂದೆ ತಳ್ಳಿತ್ತು !

ಹದಿನೇಳು ವರ್ಷಗಳ ಹಿಂದೆ ಒಂದು ಕ್ಷಣ, ಸಪ್ತಪದಿಯ ಸಂದರ್ಭದಲ್ಲಿ, ಮಹರ್ಷಿಯ ಕೈಹಿಡಿದ ಆ ವಿದ್ಯುದನುಭವವನ್ನು ನೆನೆದು, ಈಗ ಅದೇ ಮಹರ್ಷಿಯ ಪಾದಗಳನ್ನು ಸ್ಪರ್ಶಿಸಿ, ಪಾದುಕೆಗಳನ್ನು ಕಳಚಿ, ಆ ಪಾದಗಳಿಗೆ ನೀರೆರೆದು ಬಗೆಬಗೆಯಿಂದ ಲೋಪಾಮುದ್ರೆ ಸೇವೆ

ಮಾಡಿದಳು. ಅವಳಿರೆದುದು ಆಗ ನೀರಾಗಲಿಲ್ಲ ! ತನ್ನ ಹೃದಯದಲ್ಲಿ ತಂಗಿದ್ದ, ಅವ್ಯಕ್ತ ಪ್ರೇಮ ಘನವನ್ನು ಆಗ ಪ್ರವಾಹ ರೂಪದಲ್ಲಿ ಮಹರ್ಷಿಯ ಪಾದದಲ್ಲಿ ಹರಿಯಬಿಟ್ಟಳು ! ಕಣ್ಣೀರೂ ಅದಕ್ಕೆ ಕೂಡಿ, ತಲೆ ಎತ್ತದೆ, ಯಾರ ಅಡತಡೆಯೂ ಇಲ್ಲದೆ ಲೋಪಾಮುದ್ರೆ, ಧಾರಾಕಾರವಾಗಿ ಅದನ್ನು ಸುರಿಸಿ, ಹೃದಯದ ದುಗುಡವನ್ನು ಕಡಿಮೆ ಮಾಡಿಕೊಂಡಳು ! "ನನಗೂ ಈ ವೇಳೆಗೆ ಒಬ್ಬ ಪುತ್ರನಿದ್ದರೆ, ಅವನಿಗೆ ಹತ್ತೋ ಹನ್ನೆರಡೋ ಹದಿನೈದೋ ವಯಸ್ಸಾಗಿದ್ದರೆ ! ತಂದೆಯನ್ನು ಅವನೀಗ ಹೇಗೆ ಸ್ವಾಗತಿಸುತ್ತಿದ್ದ !! ವಿಧಿ ತನಗೆ ಆ ಭಾಗ್ಯ ಈವರೆಗೆ ಕೊಡಲಿಲ್ಲ ! ಇನ್ನಾದರೂ ಕೊಡುವುದೋ ಇಲ್ಲವೋ ! ಆ ಪುತ್ರ ಈಗ ಇಲ್ಲೇ ಇದ್ದಿದ್ದರೆ ? ತಂದೆಯನ್ನು ಹೋಲುತ್ತಿದ್ದನೋ ? ತಾಯಿಯನ್ನೋ ?...." ಹೀಗೆ ವಿಚಾರ ತರಂಗವೊಂದೆದ್ದು, ಲೋಪಾಮುದ್ರೆ ಪತಿಯ ಪಾದಗಳನ್ನು ನೀರಿನಿಂದ ತೊಳೆದು, ವಸ್ತ್ರದಿಂದೊರೆಸಿ, ಮತ್ತೆ ಒರೆಸಿ, ಹೀಗೆ ಅನೇಕಸಲ ಮಾಡುತ್ತಾ ಹುಡುಗಾಟಿಕೆ ಎಂಬಂತೆ ಅನ್ಯ ಮನಸ್ಕಳಾಗಿಯೇ ಉಳಿದವಳು, ಉಳಿದ ಸ್ತ್ರೀಯರೆಲ್ಲ ತಂತಮ್ಮ ಕರ್ತವ್ಯ ಮುಗಿಸಿ ನಿಂತುದನ್ನು ಕಂಡು ಲಜ್ಜೆಯಿಂದ ತಾನೂ ತಲೆ ಎತ್ತಿ ನಿಂತಳು.

ಅಗಸ್ತ್ಯ : "ಭದ್ರೆ ! ನೀನು ಹೀಗೆಯೇ ಒರೆಸುತ್ತಾ ತೊಳೆಯುತ್ತಾ ಪ್ರಾಯಃ ನನ್ನ ಪಾದಗಳೇ ಸವೆದು ಹೋಗುತ್ತವೆ ಎಂದು ಕಾಣುತ್ತದೆ !"

ಲೋಪಾ : "ಪ್ರಭೂ ! ಆ ಪಾದಗಳು ಸವೆಯಲು ಮತ್ತೊಂದು ಭೂಪ್ರದಕ್ಷಿಣೆ ಮಾಡಿದರಾಯಿತು ! ಪರಶುರಾಮರು ಇಲ್ಲೇ ಇರುವರು ! ಈವರೆಗೆ ಅವರ ಹಿಂದೆ ಹೊರಟವರು, ಈಗ ಇಬ್ಬರೂ ಕೂಡಿ ಮತ್ತೊಮ್ಮೆ ಹೊರಟರಾಯಿತು ! ಇಬ್ಬರಿಗೂ ಸಂಸಾರವಿಲ್ಲ !"

ಅಗಸ್ತ್ಯರಿಗೆ ಅರುಳು ಕಿವಿಚಿತು । ಏನೂ ಹೇಳುವಂತಿರಲಿಲ್ಲ !

ಪರಶುರಾಮ : "ಸೋದರಿ ! ನಮಗೆ ಸಂಸಾರವಿಲ್ಲ ಎನ್ನುವಿಯಾ ? ಇಲ್ಲಿ ನೇರಿರುವ ನೀವೆಲ್ಲ ಯಾರು ? ನಮಗೇನಾಗ ಬೇಕು ?''

ಲೋಪಾ ; "ಅಣ್ಣ, ಭೋಜನವಾಗಲಿ ! ಯಾರಿಗೆ ಯಾರು ಏನಾಗಬೇಕೆಂಬುದನ್ನು ಹೇಳುತ್ತೇನೆ'' ಎಂದವಳೇ, ಆಶ್ರಮದೊಳಕ್ಕೆ ನಡೆದಳು.

"ಯಾರವಳು ? ಇಷ್ಟು ದಿಟ್ಟ ಮಾತಿನ, ಈ ಚತುರೆ ಯಾರು ?" ಎಂದು ಅಗಸ್ತ್ಯ ಪರಿವಾರದ ಅನೇಕರೂ, ದಾಲ್ಭ್ಯಾಶ್ರಮಕ್ಕೆ ಬೇರೆಡೆ ಯಿಂದ ಬಂದಿದ್ದವರೂ ಒಬ್ಬೊಬ್ಬರೂ ಇನ್ನೊಬ್ಬರನ್ನು ಕೇಳ ಲಾರಂಭಿಸಿದರು !

"ವಿದರ್ಭರಾಜ ಪುತ್ರಿಯಂತೆ ! ಹಿರಿಯ ಅಗಸ್ತ್ಯರ ವರಪ್ರಸಾದ ದಿಂದ ಜನಿಸಿದವಳಂತೆ ! ವಿದರ್ಭಕ್ಕೆ ಆಪತ್ತು ಬಂದಾಗ ತಂದೆಯೂ ಮಗಳೂ ಈ ಆಶ್ರಮದಲ್ಲಿ ಆಶ್ರಯ ಪಡೆದಿರುವರಂತೆ" ಎಂಬ ಉತ್ತರ ಕೇಳಿ ಬಂತು !

''ಕ್ಷತ್ರಿಯ ರಮಣಿ ! ಮಾತಿನಲ್ಲೂ ಗಟ್ಟಿ ! ತಪಸ್ಸಿನಲ್ಲೂ ಗಟ್ಟಿ; ಎಂಥ ಚೆಲುವೆ !! ಅರಸು ಕುಮಾರಿಯಾದರೂ ಗರ್ವವಿಲ್ಲದೆ ತಾಪಸ ಜೀವನಕ್ಕೆ ಸುಲಭವಾಗಿ ಅಂಟಿಕೊಂಡವಳು !" ಎಂದು ಎಲ್ಲರೂ ಏಕ ಮುಖವಾಗಿ ಕೊಂಡಾಡಲಾರಂಭಿಸಿದರು.

ಋಷಿಗಳು ತಮತಮಗೆ ನಿಯತವಾದ ಬಿಡಾರಗಳಿಗೆ ತೆರಳಿದರು. ಆಶ್ರಮದ ವಿಶಾಲ ತೋಪಿನಲ್ಲಿ ಎಲ್ಲರಿಗೂ ಅದ್ಭುತ ಸಂತರ್ಪಣೆ ಯಾಯಿತು. ದಣಿದಿದ್ದ ಯಾತ್ರಿಕರು ವಿಶ್ರಾಂತರೂ ಆದರು. ಸೂರ್ಯ-

ಮುಳುಗುತ್ತಿದ್ದ. ತಾಪಸರು ಸಾಯಂ ಸಂಧ್ಯೆ ಸಾಯಂ ಅಗ್ನಿಹೋತ್ರಕ್ಕೆ ಅಣಿಯಾದರು.

* * *

ಅಗಸ್ತ್ಯರ ಸಾಯಂ ಅಗ್ನಿಹೋತ್ರದ ಸಿದ್ಧತೆಯನ್ನು ಲೋಪಾಮುದ್ರೆಯೇ ಚೆನ್ನಾಗಿ ಮಾಡಿಟ್ಟಳು. ಅದು ಚೆನ್ನಾಗಿಯೇ ನಡೆಯಿತು. ಉಳಿದ ಮಹರ್ಷಿಗಳೂ ಅಗ್ನಿಹೋತ್ರಾದಿಗಳನ್ನು ಮುಗಿಸಿ, ಅಲ್ಲಲ್ಲಿ ಆಶ್ರಮದ ಮರಗಳ ಅಡಿಯಲ್ಲಿ ವಿಶ್ರಾಂತಿ ಪಡೆಯುತ್ತಾ ರಾತ್ರಿ ಮುಂದೆ ಸಾಗಿತ್ತು. ಬೇಸಿಗೆ ಕಾಲವಾಗಿದ್ದು ಧಗೆಯಿಂದ ಆಶ್ರಮಸ್ಥರೆಲ್ಲ ತುಂಬಾ ಬಳಲಿದ್ದರು.

ಅಗಸ್ತ್ಯರು ಏಕಾಂತವಾಗಿ ಆಶ್ರಮದೊಳಗಡೆಯೇ ವಿಶ್ರಾಂತರಾಗಿದ್ದರು. ಪರಶುರಾಮರು ಅವರೊಡನೆ ಸಂಭಾಷಣೆಗೆ ಆಗ ಬಂದರು. ಮಂದವಾದ ಪಂಜಿನ ಬೆಳಕಿನಲ್ಲಿ ಇಬ್ಬರು ಮಹಾಪುರುಷರು ಏಕಾಂತ ಸಂಭಾಷಣೆಯಲ್ಲಿ ತೊಡಗುವ ಮುನ್ನ. ಅಗಸ್ತ್ಯರು ಮರ್ಮ ತಿಳಿದು ಆಪ್ತ ಶಿಷ್ಯನಾದ ಶಾರ್ಙ್ಗರವನನ್ನು ಆಶ್ರಮದ ದ್ವಾರದಲ್ಲಿ ನಿಯಮಿಸಿ, "ಮಾತು ಮುಗಿಯುವವರೆಗೂ ಯಾರನ್ನೂ ಒಳಗೆ ಬಿಡಬೇಡ" ಎಂದಪ್ಪಣೆ ಮಾಡಿ, ದರ್ಭಾಸನ (ಅದೇ: ಆಗ ಹಾಸಿಗೆ) ದ ಮೇಲೆ ಕುಳಿತರು. ಅವರ ಸಮೀಪದಲ್ಲಿ ಇನ್ನೊಂದು ದರ್ಭಾಸನದಲ್ಲಿ ಆಸೀನರಾಗಿ ಪರಶುರಾಮರು ಮಾತನ್ನು ಹೀಗೆ ಆರಂಭಿಸಿದರು.

ಪರಶುರಾಮ : "ಮಹರ್ಷಿಯೇ ! ನಿಮ್ಮ ಉತ್ತರ ಭಾರತ ಯಾತ್ರೆಯ ಅಂತರಂಗವೇನು ? ಅದೇನೋ ಸಾಂಸ್ಕೃತಿಕ ಏಕೀಕರಣ ಎಂದಿರಲ್ಲ? ಹೇಗೆ ? ಅದೇನು ? "

ಅಗಸ್ತ್ಯ: ‘‘ಅವತಾರಿಗೆ ನಾನು ಹೇಳಬೇಕೆ ? ನನ್ನ ಧ್ಯಾನದಲ್ಲಿ ಅಂದು ಕಾಣಿಸಿಕೊಂಡವರಾರು ?”

ರಾಮ : “ಯಾರಾದರಾಗಲಿ ! ನೀವು ಹೇಳುವುದನ್ನು ಹೇಳಿ”.

ಅಗಸ್ತ್ಯ: ‘‘ಯಾರಿಗಾದರಾಗಲಿ, ಎನ್ನುವುದಾದರೆ ನಾನು ಹೇಳಬೇಕಾದ ಪ್ರಮೇಯವಿಲ್ಲ ! ನನ್ನ ಧ್ಯಾನಮೂರ್ತಿಯೇ ನೀವು ರೂಪಾಂತರವಾಗಿದ್ದರೆ ಹೇಳುವ ಅವಶ್ಯವಿಲ್ಲ !”

ರಾಮ ; “ಹಾಗೇ ಆಗಲಿ ! ನಾನು ಅವತಾರಿಯೆಂದೇ ತಿಳಿಯಿರಿ ! ಅಂದು ನೀವು ಇನ್ನೂ ಏನೇನೋ ಹೇಳುವುದಿದ್ದಿರಿ, ವೇಳೆ ಇರಲಿಲ್ಲ. ಸಂದರ್ಭವೂ ಬೇರೆ ಇತ್ತು. ಈಗ ಹೇಳಿ; ಇದೆಲ್ಲ ಮುಂದಿನ ಇತಿಹಾಸವಾಗುತ್ತದೆ. ನಾನೂ ನೀವೂ ಹೃದಯದಲ್ಲೇ ಮಾತಾಡಿಕೊಂಡರೆ ಇತಿಹಾಸದ ಅವತಾರವಾಗುವುದು ಹೇಗೆ ? ”

ಅಗಸ್ತ್ಯ : “ಪ್ರಭು ! ಇದೀಗ ಒಪ್ಪತಕ್ಕ ಮಾತಾಯಿತು ! ನೀವು ಸಹಸ್ರಾರ್ಜುನನನ್ನು ಮುಗಿಸಿದ್ದರೆ ಸಾಕಾಗಿತ್ತಲ್ಲ ! ಉತ್ತರದ, ಆರ್ಯಾವರ್ತದ ಇತರ ಅರಸರನ್ನೇಕೆ ಮುಗಿಸಿದಿರಿ ? ಅವತಾರಿಯ ಹೃದಯವನ್ನರಿಯಬಹುದೇ ? ”

ರಾಮ : “ಉಪಾಸಕನಿಗೆ ಉಪಾಸ್ಯನ ಹೃದಯ ತಿಳಿದಿದ್ದರೆ, ಹೇಳುವುದು ಬೇಡ ! ತಿಳಿಯದಿದ್ದರೆ ಹೇಳಿ ಪ್ರಯೋಜನವಿಲ್ಲ ! ’’

ಅಗಸ್ತ್ಯ : ‘‘ನಮ್ಮ ವಾದವನ್ನು ನಮಗೇ ತಿರುಗಿಸಿ, ಸರಸಸಲ್ಲಾಪ ಮಾಡುವ ಕಾಲ ಇದಲ್ಲ ! ಭಾರ್ಗವ ರಾಮ !!”

ರಾಮ : ‘‘ಆರ್ಯಾವರ್ತದ ಎಲ್ಲ ಅರಸರನ್ನೂ ನಾನು ಮುಗಿಸದಂತೆ,ಅವರನ್ನು ಬ್ರಾಹ್ಮಣರನ್ನಾಗಿಸಿದವರು ಯಾರು ? ಇದೆಲ್ಲ ಏತ

ಕ್ಕಾಗಿ ಸಿದ್ಧತೆ ? ನಿಯೋಗದಲ್ಲಿ ಹುಟ್ಟಿದ ಕ್ಷಾತ್ರ – ಬ್ರಾಹ್ಮ ಮಿಶ್ರ ಸಂತಾನಕ್ಕೆ ಪಟ್ಟಗಟ್ಟಿದವರಾರು ? ಇದು ಯಾತರ ಸಲುವಾಗಿ ನಡೆದದ್ದು ? ಲೋಕಕ್ಕೆ ಇದು ತಿಳಿಯಿತೋ, ಬಿಟ್ಟಿತೋ ? ಮಧ್ಯಾಹ್ನ ನಾನು ಹೇಳಿದ್ದು ನೆನಪಿದೆಯೇ ? ನಾನು ಭೂಮಿಯನ್ನು ಉತ್ತೆ ! ನೀವು ಬ್ರಹ್ಮಕ್ಷತ್ರದ ಹೊಸ ಪೈರುಗಳನ್ನು ನೆಟ್ಟಿರಿ. ಈ ವಿಷಯಕವಾದ ಹೊಸಮಂತ್ರವನ್ನು ನಿಮ್ಮ ಶಿಷ್ಯರು ಪಠಿಸಿದ್ದನ್ನು ನಾನು ಕೇಳಿ, ನನ್ನ ಅರ್ಥೈಕೆ ಸರಿಯಾಯಿತೆಂದು ನನ್ನನ್ನೇ ಸಮರ್ಥಿಸಿಕೊಂಡೆ.''

ಅಗಸ್ತ್ಯ: "ಭರತ ಭೂಮಿಯೆಂದರೆ ಬರೀ ಆರ್ಯಾವರ್ತವಲ್ಲವಲ್ಲ?"

ರಾಮ : "ಓಹೋ ! ಇದೆಲ್ಲಾ ಅನಾರ್ಯಾವರ್ತವನ್ನೂ ಆರ್ಯಾವರ್ತವನ್ನಾಗಿಸುವ ಹವಣಿಕೆಯೋ ? "

ಅಗಸ್ತ್ಯ : "**ವಿಶ್ವಂ ಆರ್ಯಂ ಕೃಣುವ** ಎಂಬ ಅಪೌರುಷೇಯ ವಾಣಿಯನ್ನು ಹಿರಿಯರು ನಮಗೆ ದಯಪಾಲಿಸಿದರು. ವಿಶ್ವವೆಂದರೆ ದಕ್ಷಿಣ ಭಾರತವೂ ಆಗಬಹುದು, ದ್ವೀಪಾಂತರಗಳೂ ಆಗಬಹುದು. ಈಗ ಭೂಮಿಯ ಮೇಲೆ ತೇಲದ ಭೂಭಾಗಗಳೂ ಆಗಬಹುದು.''

ರಾಮ : "ಮುಂದಿನವರು 'ಅಗಸ್ತ್ಯರಿಗೇಕೆ ಈ ಸಾಂಸ್ಕೃತಿಕ ಪರಿವರ್ತನೆಯ ಗೀಳು ? ' ಎಂದರೋ ? 'ಆರ್ಯವೋ, ಅನಾರ್ಯವೋ ಅವರವರು ಇರುವಂತೆ ಬಿಡಬಾರದೇಕೆ ? ' ಎಂದರೋ ? 'ಇದೆಲ್ಲ ಬ್ರಾಹ್ಮಣಶಾಹಿಯ ಸ್ಥಾಪನೆಯ ಸ್ವಾರ್ಥಯತ್ನ' ಎಂದರೋ ?"

ಅಗಸ್ತ್ಯ : "(ಹುಬ್ಬುಗಳನ್ನು ಗಂಟಿಕ್ಕಿ)" ಹಾಗಾದರೆ, 'ಅವತಾರಿಗೆ ಸಹಸ್ರಾರ್ಜುನನನ್ನು ಕೊಂದು ಏನು ಲಾಭ ? ಅವನ ದಾರಿಗೆ ಅವನನ್ನು ಬಿಟ್ಟಿದ್ದರೆ ಆಗಿತ್ತಲ್ಲವೇ ?' ' ಇದೂ ಬ್ರಾಹ್ಮಣಶಾಹಿ ! ' ಎಂಬುವವರಿಗೆ

ಅವತಾರಿ ಏನನ್ನುತ್ತರಿಸಬೇಕು ? ಪರಹಿಂಸಾರಹಿತವಾದ, ಸಮಷ್ಟಿ ಜೀವನಕ್ಕೆ ಭಂಗತಾರದ, ಕಂಟಕವಲ್ಲದ, ಯಾವುದೇ ವೈಯ್ಯಕ್ತಿಕ ಜೀವನ ಶ್ರದ್ಧೆ, ರೀತಿ, ನೀತಿ, ನಿಯಮಗಳನ್ನು ಎಲ್ಲರೂ ಗೌರವಿಸಬೇಕಾದುದೇ ಸಾರ್ವಕಾಲಿಕ ಧರ್ಮ ! ಆಗ ಅದೆಲ್ಲ ಆರ್ಯಧರ್ಮವೇ ಆಗಿರುತ್ತದೆ, ಜನ ಅದನ್ನು ತಿಳಿಯಲಿ, ಬಿಡಲಿ ! "ಪರಹಿಂಸೆಯೇ ನಮ್ಮ ಧರ್ಮ"- ಎನ್ನುವ ಅನಾರ್ಯಶ್ರದ್ಧೆಗೆ ಅಂಕುಶ ಹಾಕಬೇಕಾದುದೇ ಆರ್ಯಧರ್ಮ ! ಪರಹಿಂಸೆಯ ಆಧಾರದ ಮೇಲೆಯೇ ಒಂದು ಸಾಂಮ್ರಾಜ್ಯ ತಲೆ ಎತ್ತುವು ದಾದರೆ, ಅದನ್ನು ತೊಡೆಯಬೇಕಾದುದು ಆರ್ಯರೆಂಬುವರೆಲ್ಲರ ಧರ್ಮ. ನಿಮ್ಮ ತಂದೆಗಳ ಆಶ್ರಮದಲ್ಲಿ ಸಹಸ್ರಾರ್ಜುನ ಕೊಂದದ್ದು ಕೇವಲ ಗೋವುಗಳನ್ನೋ, ಒಂದು ಜೀವನರೀತಿಯನ್ನೊ ? ಬರೀ ಜಮದಗ್ನಿ ಗಳನ್ನೋ? ಒಂದು ಜೀವನ ಮೌಲ್ಯ ಶ್ರೇಣಿಯನ್ನೋ? ನಿಮ್ಮ ಸಮಸ್ಯೆ ನಮ್ಮ ಸಮಸ್ಯೆ ಒಂದೇ ಆಗಿಲ್ಲವೇ ? ಪ್ರಭೂ, ನಿಮ್ಮ ಯಾತ್ರೆ ಮುಗಿಯ ಬಾರದು ! ನೀವಿನ್ನು ನಮ್ಮ ಕೈಗೂಡಿಸಿ ದಕ್ಷಿಣದತ್ತ ಬರುವುದಿದೆ !"

ರಾಮ : "ನಮಗೆ ದಣಿವಾಗಿದೆ. ದಕ್ಷಿಣದಂಡಯಾತ್ರೆ ನಿಮ್ಮದೇ ಹೊಣೆ. ನಮ್ಮ ತಪಃಶ್ಶಕ್ತಿ ನಿಮ್ಮ ಬೆನ್ನಿಗಿದೆ. ನಮ್ಮ ಭೃಗುಗಳ ಸೈನ್ಯ ನಿಮಗೀಗ ದೊರೆತಿದೆ. ಉತ್ತರದ ನಮ್ಮ ಯಾತ್ರೆಯ ಫಲವಾಗಿ ಅಲ್ಲಿನ ಅರಸೊತ್ತಿಗೆಗಳೆಲ್ಲ ನಿಮ್ಮ ಆಜ್ಞಾಧಾರಕವಾಗಿವೆ. ಅಲ್ಲಿ ಈಗ ಏನೂ ಕೆಲಸ ಉಳಿದಿಲ್ಲ. ನಿಮ್ಮ ದಕ್ಷಿಣಯಾತ್ರೆ ಬೇಗ ಅರಂಭವಾಗಲಿ. ನೋಡಿ ಸಂತೋಷ ಪಡುವುದು ನಮ್ಮ ಭಾಗ್ಯವಾಗಲಿ."

ಅಗಸ್ತ್ಯ : "ಹಾಗಲ್ಲ ! ಅದು ಸುಲಭವೂ ಅಲ್ಲ. ದಕ್ಷಿಣದಲ್ಲಿ ಈಗ ಇಲ್ವಲ ಪ್ರಬಲ. ಅವನು ಅಸುರ. ಶಂಬರನ ಮಾಯಾ ವಿದ್ಯೆಗಳನ್ನೆಲ್ಲ ಅವನು ಬಳುವಳಿಯಾಗಿ ಪಡೆದಿದ್ದಾನೆ. ಶುಕ್ರನೇ ಸ್ವಯಂ ಅವನಿಗೆ

ಮಾರ್ಗದರ್ಶಿಯಾಗಿದ್ದಾನೆ. ಅವನ ಸೋದರ, ವಾತಾಪಿ, ಅವನಿಗಿಂತ ಚುರುಕಾದ ಮಾಯಾವೀ ! ಅವನಿಗೆ ಲೋಪಾಮುದ್ರೆ ಪತ್ನಿಯಾಗ ಬೇಕಂತೆ !! ವಿದರ್ಭರಾಜನಿಗೆ ಹಾಗೆ ಪತ್ರ ಬರೆಸಿ ಕಳುಹಿದ್ದ. 'ಮೊದಲು ನಿನ್ನ ಬ್ರಾಹ್ಮಣ್ಯಾಭಿಮಾನ ಪ್ರಕಟವಾಗಿ ದೃಢವಾಗಲಿ' ಎಂದುತ್ತರ ಬರೆಸಿದೆವು !

ರಾಮ : "ಆ ಲೋಪಾಮುದ್ರೆ ಈಗ ಬೇರಾರದ್ದೋ ಪತ್ನಿ ಯಾಗಿರುವಳಂತೆ !" (ನಗುತ್ತಾನೆ !)

ಅಗಸ್ತ್ಯ ; "ನಕ್ಕು ! ದೇವರೇ ಬಲ್ಲ ! ಅವತಾರೀ ಬಲ್ಲವ ರಾಗಿದ್ದರೆ, ಕೆಲಸ ಆಗುತನಕ ಬಾಯಿ ಬಿಡಬಾರದೆಂದು ಉಪಾಸಕನ ಬಿನ್ನಹ. !"

ರಾಮ : "ಆಗಲಿ ! ಮುಂದೇನು ?"

ಅಗಸ್ತ್ಯ : "ಮುಂದೆ, ನಾವು ಉತ್ತರಯಾತ್ರೆಯಲ್ಲಿರುವಾಗ ಇಲ್ವಲ ಅಗಸ್ತ್ಯಾಶ್ರಮವನ್ನು ಸುಟ್ಟು ಬೂದಿ ಮಾಡಿಸಿದ ! ಆಶ್ರಮಕನ್ಯೆಯರ ಮಾನಾಪಹಾರ, ಪ್ರಾಣಾಪಹಾರ, ಋಷಿ ಪುತ್ರರ ಕೊಲೆ ಇವೆಲ್ಲ ನಡೆದವು. ದಾಲ್ಭ್ಯಾಶ್ರಮದ ಅವನ ಮುತ್ತಿಗೆ ವಿಫಲವಾಗಿ ಮಾಯಾವಿಗಳು ಕೊಲ್ಲಲ್ಪಟ್ಟರು. ವಿದರ್ಭಕ್ಕೆ ಅವನಿಟ್ಟ ದಂಡಯಾತ್ರೆ ಅವನಿಗೇ ತಿರುಗು ಬಾಣವಾಗಿ, ಅವರ ಸೈನ್ಯವೆಲ್ಲ ಧೂಳೀಪಟವಾಯ್ತು. ಅದು ಉಜ್ಜೈನಿ ಯತ್ತ ಹೋಗಲೇ ಇಲ್ಲ. ಇಲ್ವಲ ಹತಾಶನಾಗಿ ಈಗ ಉತ್ತರಭಾರತದ ದಂಡಯಾತ್ರೆಯ ವಿಷಯವನ್ನು ತಾತ್ಕಾಲಿಕವಾಗಿ ಕೈ ಬಿಟ್ಟಿದ್ದಾನೆ. ಅವನಿಗೆ ಅಗಸ್ತ್ಯನ ಪ್ರಾಣ ಬೇಕು ! ಅವನನ್ನು ಮುಗಿಸಿದರೆ ಮುಂದೆ ಎಲ್ಲವೂ ಸುಗಮ !"

ರಾಮ : "ಅವನನ್ನು ಹೇಗೆ ಮುಗಿಸಿಯಾನು ?"

ಅಗಸ್ತ್ಯ ; "ಬ್ರಾಹ್ಮಣ್ಯದ ನಾಟಕವಾಡುವುದು ! ನಟಿಸಿ, ಬ್ರಾಹ್ಮಣರನ್ನು ನಂಬಿಸುವುದು ! ಭೋಜನಕ್ಕೆ ಆಹ್ವಾನಿಸಿ ದಿನಂಪ್ರತಿ, ಅನೇಕರನ್ನು ಉಪಾಯವಾಗಿ ಕೊಲ್ಲಿಸುವುದು ! ಅಗಸ್ತ್ಯನಿಗಾಗಿ ಸರದಿ ಕಾಯುವುದು. ಇದು ಒಂದು ದಾರಿ. ಇದಕ್ಕೆ ಸೇರಿಕೊಳ್ಳುವ ಇನ್ನೊಂದು ದಾರಿ ಎಂದರೆ ದಕ್ಷಿಣದವರನ್ನು ಉತ್ತರದವರ ವಿರುದ್ಧ ಎತ್ತಿ ಕಟ್ಟುವುದು ! ದ್ರಮಿಡದೊರೆಯನ್ನೂ, ಅಲ್ಲಿನ ಶಿವ ಗುರುವನ್ನೂ ಈಗಾಗಲೇ ಇತ್ತ ಆವನು ಹುರಿದುಂಬಿಸಿ, ತಲೆಕೆಡಿಸುತ್ತಿದ್ದಾನೆ. ನಾಗಪೂಜಕರು, ಚೈತ್ಯಪೂಜಕರು, ಕಾಪಾಲಿಗಳು, ಕಾಲಭೈರವರು, ಮಾತೃಪೂಜಕರನ್ನು ಹೆದರಿಸುತ್ತಿದ್ದಾನೆ 'ನಿಮ್ಮ ಶ್ರದ್ಧೆಗಳು ಇನ್ನು ಉಳಿಯಲಾರವು ! ನನ್ನನ್ನು ನಂಬಿದರೆ ಮಾತ್ರ ನಿಮಗೆ ಉಳಿಗಾಲ ! ಇಲ್ಲವಾದರೆ ನೀವು ಸಾಯುವಿರಿ. ನಿಮ್ಮ ಸಂತಾನ ಎಂದೆಂದೂ ಪರಕೀಯ ಗುಲಾಮಗಿರಿಯಲ್ಲಿ ಬಂಧಿತವಾಗುವುದು' – ಎಂದು. ಇದಕ್ಕೆ ದಕ್ಷಿಣದ ಸಂದರ್ಭವೆಲ್ಲ ಅವನಿಗೇ ಅನುಕೂಲವಾಗಿದೆ ! ಅದು ನಮ್ಮ ದೌರ್ಭಾಗ್ಯ !"

ರಾಮ ; " ಹೇಗೆ ?"

ಅಗಸ್ತ್ಯ : "ಈ ವಿಂಧ್ಯಪರ್ವತವನ್ನೇ ನೋಡಿ ! ಪೂರ್ವ ಪಶ್ಚಿಮಕ್ಕೆ ಹಬ್ಬಿದ ಈ ಶ್ರೇಣಿ, ಉತ್ತರ, ದಕ್ಷಿಣ ಭಾರತದ ಮಧ್ಯೆ ದೊಡ್ಡ ಗೋಡೆಯನ್ನೇ ಹಾಕಿದಂತಿದೆ. 'ವಿಂಧ್ಯ' ಎಂದರೆ 'ಒಡೆಯುವವನು' (ವಿಧ್ ಧಾತುವಿನಿಂದ), ಎಂಬುದನ್ನು ನೀವೂ ಬಲ್ಲಿರಿ! ಅವನು ದೇಶವನ್ನೂ ಒಡೆದ, ಸಂಸ್ಕೃತಿಯನ್ನೂ ಒಡೆದ, ಶ್ರದ್ಧೆಯನ್ನೂ ಒಡೆದ, ಜನ ಜನಾಂಗಗಳಲ್ಲಿ ಪರಸ್ಪರ ವಿಶ್ವಾಸವನ್ನೂ ಒಡೆದ ! ನಮಗುರಿಗೆ ಸವಾಲಾಗಿ ಹೋದ ! ಸಾಲದುದಕ್ಕೆ ದಿನೇದಿನೇ ಬೆಳೆಯುತ್ತಾ, ಎತ್ತರಕ್ಕೇರುತ್ತಾ, ಹಿಮಾಲಯವನ್ನು ಮೀರಿಸಲು ಪೈಪೋಟಿ ಹೂಡಿದ್ದಾನೆ. ಹಿಮವಂತನಾದರೆ ಅನೇಕ ಋಷಿ, ಮುನಿ, ಸಿದ್ಧ,

ಯೋಗಿಗಳಿಗೆ ಆಶ್ರಯಕೊಟ್ಟು, ಜೀವನಾಧಾರವಾದ ನದಿಗಳಿಗೆ ಉಗಮವಾಗಿ, ಉತ್ತರದ ಶತ್ರುಗಳನ್ನು ತಡೆಯುತ್ತಾ, ಭರತವರ್ಷದ ಶಾಶ್ವತ ರಕ್ಷಕನಾಗಿದ್ದಾನೆ. ಸಾಕ್ಷಾತ್ ಶಂಕರನ, ಕುಬೇರನ, ಇತರ ದೇವತೆಗಳ ವಾಸಸ್ಥಾನವಾಗಿದ್ದಾನೆ. ಈ ವಿಂಧ್ಯ, ತನ್ನ ಅಡವಿಗಳಲ್ಲಿ, ಕಳ್ಳಕಾಕರಿಗೆ, ದರೋಡೆಕೋರರಿಗೆ, ವಾಮಾಚಾರಿಗಳಿಗೆ, ನರಬಲಿ ಕೊಡುವವರಿಗೆ ಆಶ್ರಯಕೊಟ್ಟು ದೇಶವನ್ನೇ ಒಡೆದು ನಮಗೆ ಅಡ್ಡಿಯಾಗಿದ್ದಾನೆ! ಅವನನ್ನೇನು ಮಾಡಬೇಕು.?"

ರಾಮ ; "ಅವನನ್ನು ಮಲಗಿಸಿದರಾಯಿತು ! ಅಷ್ಟು ತಪಃಶಕ್ತಿ ನಿಮ್ಮಲ್ಲಿಲ್ಲವೇ, ಮಹರ್ಷೇ !"

ಅಗಸ್ತ್ಯರು ಚಕಿತರಾಗುತ್ತಾರೆ ! ಮುಖದಲ್ಲಿ ಮಿಂಚೊಂದು ಮಿಂಚುತ್ತದೆ !! ಪರುಶುರಾಮರು ತಾವು ಹೇಳಿದ್ದು ಹುಡುಗಾಟಿಕೆಯಲ್ಲವೆಂಬಂತೆ ಗಂಭೀರ ಮುಖಮುದ್ರೆಯಿಂದ ಅಗಸ್ತ್ಯರನ್ನು ನಿಟ್ಟಿಸಿ ನೋಡುತ್ತಾರೆ ! ಮತ್ತಷ್ಟು ಹತ್ತಿರ ಬಂದು ಆಪ್ತವಾಗಿ ಸಮಾಲೋಚಿಸುತ್ತಾರೆ. ಸೂರ್ಯೋದಯಕ್ಕೆ ಒಂದೇ ಗಳಿಗೆ ಉಳಿಯಿತು !

* * *

ಚಾಕ್ರಾಯಣ, ಭಿಲ್ಲರ ಮುಖಂಡರನ್ನು ಇಲ್ವಲನ ಬಳಿ ಕಳುಹಿದ್ದನಷ್ಟೇ ! ಅವನು ಕೊಟ್ಟಿದ್ದ ಓಲೆಯಲ್ಲಿ "**ಅತ್ರಿಣಾ ತ್ವಾ ಕ್ರಿಮೇ ಹನ್ಮಿ, ಕಣ್ವೇನ ಜಮದಗ್ನಿನಾ**" ಎಂದು ಬರೆದಿತ್ತು ! ("ಎಲೈ ಹುಳುವೇ ! ನಿನ್ನನ್ನು ಅತ್ರಿಯ ಹೆಸರು ಹೇಳಿ ಕೊಲ್ಲುತ್ತೇನೆ, ಕಣ್ವರ, ಜಮದಗ್ನಿಗಳ ಹೆಸರಿನಲ್ಲಿ ಕೊಲ್ಲುತ್ತೇನೆ." ಎಂಬುದು ಇದರರ್ಥ ! ಈ ಮಂತ್ರಭಾಗ

ಈಗಿನ ತೈತ್ತಿರೀಯಾರಣ್ಯಕದ ೪-೩೬-೧ ರಲ್ಲಿ ಏರಿ ಕುಳಿತಿದೆ.) ಅರ್ಥ ತಿಳಿದ ಇಲ್ವಲ, ಏನೂ ತಿಳಿಯದವನಂತೆ ನಟಿಸಿ, ಆ ಭಿಲ್ಲಮುಖಂಡನನ್ನು ಸತ್ಕರಿಸಿ, ನಡೆದುದನ್ನು ತಿಳಿದು, ಆಗಾಗ ಸಮಾಚಾರವನ್ನು ಬಂದು ತಿಳಿಸುತ್ತಿರಬೇಕೆಂದು ನಿಯಮಿಸಿ ಕಳುಹುತ್ತಾನೆ. ಉತ್ತರವನ್ನೇನೂ ಕಳುಹಲಿಲ್ಲ !

ಪರಶುರಾಮರೂ ಅಗಸ್ತ್ಯರೂ ಭೇಟಿಯಾಗುವ ವೇಳೆಗೆ ಆ ಭಿಲ್ಲ ಬಂದು ರಹಸ್ಯದಲ್ಲಿ ಚಾಕ್ರಾಯಣನನ್ನು ಕಂಡು ನಡೆದುದನ್ನೆಲ್ಲ ತಿಳಿಸಿದ. ಸಂತುಷ್ಟನಾದ ಅವನು ಅವನನ್ನು ಗೌರವಿಸಿ, ಭಿಲ್ಲರ ಒಂದು ಪಡೆಯನ್ನೇ ಅಂದಿನಿಂದ ಸಜ್ಜುಗೊಳಿಸಲಾರಂಭಿಸುತ್ತಾನೆ.

* * *

ಇಲ್ವಲ ಕಳುಹಿದ್ದ ಕೆಲವು ಬ್ರಾಹ್ಮಣರು ಅಗಸ್ತ್ಯರ ಸ್ವಾಗತಕ್ಕೆ ಬಂದದ್ದು ಆಶ್ರಮದ ಎಲ್ಲರಿಗೂ ಆಶ್ಚರ್ಯವಾಯಿತು ! ನಾಲ್ಕಾರು ದಿನ ಅವರಿಗೂ ಉಳಿದವರೊಡನೆ ಆತಿಥ್ಯವೂ ನಡೆಯಿತು. ಚಾಕ್ರಾಯಣ ಅವರಮೇಲೆ ಒಂದು ಕಣ್ಣಿಟ್ಟೇ ಇದ್ದ !

ಒಂದು ದಿನ ಸ್ವಯಂ ಅಗಸ್ತ್ಯರೇ ಅವರನ್ನು ಕರೆಸಿ ಯೋಗಕ್ಷೇಮ ವಿಚಾರಿಸಲಾರಂಭಿಸಿದರು. !!

---

## ೧೫ ವಿಂಧ್ಯನ ನಮನ !
## ಕರಾವಳಿಯ ಉತ್ಥಾನ !!

ಇಲ್ವಲನ ಕಡೆಯ ಬ್ರಾಹ್ಮಣಗು ನಿಜವಾದ ಬ್ರಾಹ್ಮಣರೋ ? ಹೇಗೆಂಬುದನ್ನು ಅಗಸ್ತ್ಯರು ಚೆನ್ನಾಗಿ ಪರೀಕ್ಷಿಸಿದರು. ಗೋತ್ರಸೂತ್ರ ಗಳನ್ನು ಸರಿಯಾಗಿ ಉಚ್ಚರಿಸಿದುದಲ್ಲದೆ, ವೇದಾಭ್ಯಾಸ, ವೈದಿಕಾಚರಣೆ ಗಳಲ್ಲೂ ಅವರು ನೈಜವಾಗಿಯೇ ಕಂಡು ಬಂದು, ಅಗಸ್ತ್ಯರಿಗೆ ಇದು ಒಗಟೇ ಆಯಿತು ! "ಬ್ರಾಹ್ಮಣದ್ವೇಷಿಯೊಬ್ಬನನ್ನು ಬ್ರಾಹ್ಮಣರು ಹೀಗೆ ಓಲೈಸುವರೇಕೆ !" ಎಂಬುದಕ್ಕೆ ಸರಿಯಾದ ಉತ್ತರ ಸಿಗಲಿಲ್ಲ.

"ಈಗ ಇಲ್ಲಿ ನೀವು ಬಂದುದೇನು ?" ಎಂದು ನೇರವಾಗಿಯೇ ಕೇಳಿದರು. ಅವರು ಉತ್ತರಿಸಿದ್ದು ಹೀಗೆ :

ಬ್ರಾಹ್ಮಣರು : "ಇಲ್ವಲಮಹಾರಾಜರಿಗೆ ನೀವು ಅವರನ್ನು ನಂಬುತ್ತಿಲ್ಲವೆಂಬುದೇ ನಿಜವಾದ ಅಸಮಾಧಾನ, ದುಃಖಗಳಿಗೆ ಕಾರಣ ! ಹದಿನೇಳು ವರ್ಷಗಳ ಕೆಳಗೆ ಅವರು ತಮ್ಮ ತಮ್ಮಂದಿರು ವಾತಾಪಿಗೆ ವಿದರ್ಭರಾಜಕುಮಾರಿಯನ್ನು ತಂದುಕೊಳ್ಳಲು ಬಯಸಿದರು ! ಆಗ ರಾಜಪುತ್ರಿ ಕೆಲವು ನಿಬಂಧನೆಗಳನ್ನು ಹಾಕಿದಳು. ಎರಡು ವರ್ಷಕಾಲ ಇಲ್ವಲರಾಜರ ವೇದ-ವೈದಿಕ ನಿಷ್ಠೆ ಚೆನ್ನಾಗಿ ಸಂಶಯವಿಲ್ಲದಂತೆ ಪ್ರಕಟವಾಗಬೇಕು.–ಎಂದು; ಅವರ ರಾಜ್ಯದಲ್ಲಿ ಋಷಿ ಪೀಡೆ ನಿಲ್ಲ ಬೇಕೆಂದು. ಅದನ್ನು ಮಹಾರಾಜರು ಎರಡಲ್ಲ !- ಹದಿನೇಳು ವರ್ಷ ಚೆನ್ನಾಗಿಯೇ ಆಚರಿಸಿ ತೋರಿದ್ದಾರೆ ! ಆದರೂ................"

ಅಗಸ್ತ್ಯ : "ಆದರೂ........ಎಂದರೇನು ?"

ಬ್ರಾಹ್ಮಣ : "ಆದರೂ ವಿದರ್ಭರಾಜಕುಮಾರಿ ಈಗ ಯಾವುದೋ ಋಷ್ಯಾಶ್ರಮ ಸೇರಿಕೊಂಡಿರುವುದಾಗಿಯೂ, ವಿದರ್ಭದ ದೊರೆಯೂ ಹೆಚ್ಚು ಕಮ್ಮಿ ಬ್ರಾಹ್ಮಣನೇ ಆದರೆಂದೋ, ಅಥವಾ ಋಷ್ಯಾಶ್ರಮದ ಮೊರೆ ಹೊಕ್ಕಿರುವರೆಂದೋ ನಾವೆಲ್ಲ ಕೇಳಿರುವೆವು. ಕಾಲವೂ ಬಹಳ ವಾಗಿ ಉರುಳಿ ಆಗಿದೆ. ಆದುದರಿಂದ ರಾಜಕುಮಾರಿಗೆ ವಾತಾಪಿ ಯೊಡನೆ ವಿವಾಹಕ್ಕೆ ಇಷ್ಟವಿರಲಾರದೆಂದು ಭಾವಿಸಿ, ನಮ್ಮ ಮಹಾ ರಾಜರು ಈಗ ಈ ವಿಚಾರವನ್ನು ದೃಢವಾಗಿಯೇ ಕೈ ಬಿಟ್ಟಿದ್ದಾರೆ...."

ಅಗಸ್ತ್ಯ : "ಹಾಗಾದರೆ ವಿದರ್ಭಕ್ಕೆ ಮುತ್ತಿಗೆ ಹಾಕಿದವರಾರು ?"

ಬ್ರಾಹ್ಮಣ : "ಅದು ನಮ್ಮ ಸೇನಾಪತಿ ವಿಪ್ರಚಿತ್ತಿಯ ಅಧಿಕ ಪ್ರಸಂಗದಿಂದಾದ ಅಚಾತುರ್ಯ. ಅನಾಹುತ. ಅದಕ್ಕೆ ನಮ್ಮ ಅರಸರು ಹೊಣೆಯಲ್ಲ. ಸೈನ್ಯಕ್ಕೆ ಉಜ್ಜೈನಿಗೆ ದಂಡು ತೆಗೆದುಕೊಂಡು ಹೋಗು ವಂತೆ ಆಜ್ಞೆ ಮಾಡಲಾಗಿತ್ತು. ಅಲ್ಲಿಯ ಅರಸು ಬ್ರಾಹ್ಮಣನಾದನೆಂದು ಕೇಳಿ, ರಾಜ್ಯಕ್ಕೆ ವಾರಸುದಾರರಿಲ್ಲದೇ ಅನಾಯಕತ್ವ ಏರ್ಪಡಬಾರದೆಂಬ ಉದ್ದೇಶ್ಯದಿಂದ ಹಾಗೆ ಅಪ್ಪಣೆ ಮಾಡಲಾಗಿತ್ತು. ಆದರೆ ಮಾರ್ಗ ಮಧ್ಯದಲ್ಲಿ ಈ ಅನಾವಶ್ಯ ಅತಿರೇಕ ನಡೆದುದಕ್ಕೆ ಮಹಾರಾಜರು ವಿಷಾ ದಿಸುತ್ತಾರೆ. "

ಅಗಸ್ತ್ಯ ; "ನಮ್ಮ ಆಶ್ರಮದ ಮೇಲೆ ಮಾಯಾ ಪ್ರಯೋಗ ಮಾಡಿದವರಾರು ? ಅಲ್ಲಿನ ಕನ್ಯೆಯರನ್ನು ಮಾನಗೆಡಿಸಿ ಕೊಂದವರಾರು? ಆಶ್ರಮದ ಯುವಕರನ್ನು ಕೊಂದವರಾರು ?"

ಬ್ರಾಹ್ಮಣ :" ಮಹರ್ಷಿಯೇ ! ಲೋಕದಲ್ಲಿ ಬ್ರಾಹ್ಮಣದ್ವೇಷಿ ಗಳಿಗೂ ಮಾಯಾವಿಶಾರದರಿಗೂ ಯಾವ ಕಾಲದಲ್ಲಿ ಕೊರತೆಯುಂಟು ?

ಯಾರಾರೋ ಎಲ್ಲೆಲ್ಲೋ ನಡೆಸುವ ಅಕೃತ್ಯಗಳಿಗೆಲ್ಲ ಇಲ್ವಲ ಮಹಾರಾಜರೇ ಕಾರಣರಾಗಿರಬೇಕೇ ? ಎಲ್ಲಕ್ಕೂ ಅವರನ್ನೇ ದೂಷಿ-ಸುವುದು ಸರಿಯೇ ? ಉತ್ತಮ ಬ್ರಾಹ್ಮಣ್ಯದ ಮೂರ್ತೀಭವರೂಪದ ತಮಗೆ ವೈರಿಗಳು ಹೆಚ್ಚಾಗಿರುವುದೂ ವಿದಿತವಲ್ಲವೆ? ಇಲ್ವಲರಾಜರಿಗೂ ಇದಕ್ಕೂ ಗಂಟುಹಾಕುವುದು ನ್ಯಾಯವಲ್ಲ !''

ಅಗಸ್ತ್ಯರು ಚಿಂತಿಸಿದರು ! ಇವರ ವಿವರಣೆಯನ್ನು ನಿರಾಕರಿಸಲು ಯಾವ ಪ್ರಮಾಣವೂ ಇರದಂತೆ ಅಂದಿನ ಹಿಂಸಕರನ್ನೆಲ್ಲ ಒಟ್ಟಿಗೆ ಚಾಕ್ರಾಯಣ ಸುಟ್ಟದ್ದು ತಪ್ಪು ಎನಿಸಿತು ! ಹೃದಯ ಇಲ್ವಲನನ್ನೇ ದೂಷಿಸಿತು ! ಈ ಬ್ರಾಹ್ಮಣರು ಈಗ ಇಷ್ಟೊಂದು ಬುದ್ಧಿಗೇಡಿಗಳಾಗಿ, ಬುದ್ಧಿಯನ್ನೇ ಮಾರಿಕೊಂಡು, ಒಬ್ಬ ದೇವದ್ವೇಷಿಯ ಕಡೆ ನಿಂತು ಮಾತಾಡುತ್ತಿರುವುದೂ ಆಶ್ಚರ್ಯವಾಯಿತು ! ಶುಕ್ರನಂಥ ಬ್ರಾಹ್ಮಣನೇ ಆ ಕೆಲಸವನ್ನಾರಂಭಿಸಿದ ಮೇಲೆ ಇವರ ಪಾಡೇನು ? ಎಂದು ಸಮಾಧಾನ ಮಾಡಿಕೊಂಡರು. ಲೋಪಾಮುದ್ರೆಗೆ ತಮ್ಮೊಡನೆ ವಿವಾಹ ವಾದುದು ಯಾರಿಗೂ–ಸೋಮಶ್ರವನಿಗೂ, ಪರಶುರಾಮರಿಗೂ ಸಹ ಇನ್ನೂ ತಿಳಿಯದಿದ್ದುದಕ್ಕೆ ಸಂತುಷ್ಟರಾಗಿ ದೇವರಹಸ್ಯವನ್ನು ಬಹಿರಂಗ ಮಾಡಲು ಇದೇ ಸರಿಯಾದ ಅವಕಾಶವೆಂದೂ ನಿಶ್ಚಯಿಸಿದರು. "ಇಲ್ವಲ ತಾನಾಗಿಯೇ, ವಾತಾಪಿಯ ಪ್ರಸ್ತಾಪವನ್ನು ಹಿಂದೆ ತೆಗೆದುಕೊಂಡನೇಕೆ? ಬೇರೊಂದು ಸಂಚನ್ನು ಸಿದ್ಧಪಡಿಸಿರಬಹುದೇ ?'' ಎಂಬ ಪ್ರಶ್ನೆಗಳಿಗೆ ಉತ್ತರ ಸಿಗಲಿಲ್ಲವಾದರೂ "ಮುಂದೆ ತಾನೇ ತಿಳಿಯುತ್ತದೆ !" ಎಂದು ಸಮಾಧಾನ ತಂದುಕೊಂಡು, ಈ ಬ್ರಾಹ್ಮಣರ ಮೂಲಕವೇ ಇನ್ನೆರಡು ಹೊಸ ಆಘಾತಕರ ಸಮಾಚಾರಗಳನ್ನು ಇಲ್ವಲನಿಗೆ ತಿಳಿಸ ಬಯಸಿ "ಇಲ್ಲೇ ಇನ್ನೂ ಕೆಲಕಾಲ ಇದ್ದು, ನಮ್ಮ ಅಪ್ಪಣೆ ಪಡೆದು ಹೊರಡಬಹುದು" ಎಂದು ಆಜ್ಞೆ ಮಾಡಿ ಕಳುಹಿದರು.

* * *

ಆ ರಾತ್ರಿ ಅಗಸ್ತ್ಯರು ತಮ್ಮ ಆಶ್ರಮದಲ್ಲಿ ಲೋಪಾಮುದ್ರೆ, ಪರಶುರಾಮರು, ಸೋಮಶ್ರವನೆಂಬ ತಮ್ಮ ಸೋದರ, ವಿದರ್ಭರಾಜ, ಚಾಕ್ರಾಯಣ ಮತ್ತಿತರ ಕೆಲವು ಆಪ್ತರೊಂದಿಗೆ ಏಕಾಂತ ಸಭೆ ನಡೆಸಿದರು.

ಅಗಸ್ತ್ಯ : "ಹಿರಿಯರೇ, ಮಿತ್ರರೇ. ಒಂದು ದೇವರಹಸ್ಯವನ್ನು ಈಗ ಪ್ರಕಟಿಸಲು ಸಕಾಲವಾಗಿದೆ ಎಂದು ಭಾವಿಸುತ್ತೇನೆ."

ಲೋಪಾಮುದ್ರೆ, ಇದು ತನಗೇ ಸಂಬಂಧಪಟ್ಟ ವಿಷಯವಿರ ಬಹುದೆಂದೂಹಿಸಿ, ಎದ್ದು ಹೊರಹೊರಡಲು ಯತ್ನಿಸಿದಳು : ಅಗಸ್ತ್ಯರು ಅವಳನ್ನು ತಡೆದು, "ದೇವಿ ! ನೀನು ಸಾಕ್ಷಿಯಿಲ್ಲದೆ ಇದನ್ನು ಹೇಗೆ ಬಹಿರಂಗ ಪಡಿಸಲಿ ?" ಎಂದು ಹೇಳಿ ಎಲ್ಲರನ್ನೂ ಚಕಿತಗೊಳಿಸಿದರು ! ಲೋಪಾಮುದ್ರೆಗೆ ಮೈಯೆಲ್ಲ ರೋಮಹರ್ಷವಾಯಿತು ! ಪತಿಯನ್ನು ನಿಟ್ಟಿಸಿ ನೋಡಿದಳು. ಆ ಪತಿಯ ಮುಖದಲ್ಲಿನ ಗಾಂಭೀರ್ಯ ಸಡಿಲ ವಾಗಲಿಲ್ಲ ! ಆ ಚೌಕಟ್ಟಿನಲ್ಲೇ ಎದ್ದ ಒಂದು ಅಪೂರ್ವ ಪ್ರೇಮದೃಷ್ಟಿ ಅವಳಿಗೆ ಅಮೃತಾಭಿಷೇಕ ಮಾಡಿದ ಅನುಭವ ಆಯಿತು. ಉಳಿದವರೆಲ್ಲ ತನ್ನನ್ನೇ ನೋಡುತ್ತಿರುವುದರ ಅರಿವೂ ಆಗಿ ನಾಚಿ ನೀರಾದಳು. ಮೆಲ್ಲನೆ ಕುಳಿತಳು !

ಅಗಸ್ತ್ಯರು ಮುಂದುವರೆದರು : "ಹದಿನೇಳು ವರ್ಷಗಳ ಹಿಂದೆ ನಾನು ನಮ್ಮ ಹಿರಿಯರ ಇಂಗಿತದಂತೆ, ದೇವತೆಗಳ ಸೂಚನೆಯಂತೆ, ಈ ರಾಜ ಪುತ್ರಿಯ ಕೈ ಹಿಡಿದು. ರಹಸ್ಯದಲ್ಲಿ, ಆಡಂಬರವಿಲ್ಲದೆ ವಿವಾಹವಾಗಬೇಕಾ ಯಿತು. ಅದಕ್ಕೆ ವಿದರ್ಭದ ಮಹಾರಾಜರೂ, ಈ ಕನ್ಯಾಮಣಿಯೂ ಸಾಕ್ಷಿ" ಎನ್ನುತ್ತಾ ಇಬ್ಬರ ಮುಖವನ್ನೂ ನೋಡಿದರು. ಹೌದೆಂಬಂತೆ ವಿದರ್ಭರಾಜ ತಲೆಯಾಡಿಸಿ, ಎದ್ದುನಿಂತು ಸಭೆಗೆ ವಂದಿಸಿ ಕುಳಿತ. ಲೋಪಾಮುದ್ರೆ ತಲೆತಗ್ಗಿಸಿ ಕುಳಿತೇ ಕೈಮುಗಿದಳು ! ಕಂಗಳಲ್ಲಿ ನೀರು ಹನಿಯುತ್ತಿತ್ತು. ಅಲ್ಲಿ ಸೇರಿದ್ದವರು ಅಕೆಯ ಈ ಹದಿನೇಳುವರ್ಷಗಳ

ಅದುವಿ ಹಿಡಿದ ಭಾವನೆಗಳನ್ನು ಅರ್ಥಮಾಡಿಕೊಳ್ಳಬಲ್ಲ ಸೂಕ್ಷ್ಮ ಹೃದಯದವರೇ ಆಗಿದ್ದರೂ. ಅವರೆಲ್ಲ–ದೊರೆಯನ್ನು–ಬಿಟ್ಟು ಅವಿವಾಹಿತರೇ ಆಗಿದ್ದರು. ಅದಕ್ಕಾಗಿ ಅಗಸ್ತ್ಯರು ಮುಂದುವರೆದು ಹೇಳಬೇಕಾಯಿತು.

ಅಗಸ್ತ್ಯ ; "ನನ್ನ ಮುಂದೆ ದೇವತೆ ಗಳೇ ಇಟ್ಟ ಸವಾಲನ್ನು-ರಾಷ್ಟ್ರದ ಸಾಂಸ್ಕೃತಿಕ ಏಕೀಕರಣವನ್ನು–ನಾನು ಒಪ್ಪಿದೆ. ಬ್ರಹ್ಮಚಾರಿಯಾಗಿಯೇ ಅದನ್ನು ನಿರ್ವಹಿಸಲೂ ಉದ್ದೇಶಿಸಿದೆ. ನನ್ನ ತಂದೆಯವರೂ,ಹಿರಿಯರೂ, ಗೋತ್ರದ ಪಿತೃಗಳೂ ನಾನು ಗೃಹಸ್ಥನಾಗಿಯೇ ಅದನ್ನು ನಿರ್ವಹಿಸಲು ಬಯಸಿದರು. ಅಗಸ್ತ್ಯಸಂತಾನ ಅಳಿಯಬಾರದೆಂದರು ! ಹಿರಿಯ ಅಗಸ್ತ್ಯರ ಸಪಿಂಡೀಕರಣದ ದಿನ, ಪಿಂಡಸಂಯೋಜನೆ ಆಗಬೇಕಾಗ ಪವಾಡವೂ ಒಂದು ನಡೆಯಿತು ! ಈ ರಾಜಕುಮಾರಿಯೂ ಆಗ ಈ ದೇವರಹಸ್ಯವನ್ನು ಬಲ್ಲವಳಾಗಿ, ಅದನ್ನು ನನಗೆ ಸೂಚಿಸಿಕೊಟ್ಟು, ಪಿಂಡಸಂಯೋಜನೆಯ ಕಾರ್ಯದಲ್ಲಿ ನನಗೆ ಸಹಕರಿಸಿದಳು."

ಕಣ್ಣುಸನ್ನೆಮಾಡಿ ಅಗಸ್ತ್ಯರು, "ಇನ್ನು ನೀನು ಹೋಗಬಹುದು" ಎಂದು ಲೋಪಾಮುದ್ರೆಗೆ ಸೂಚಿಸಿದರು. ರಾಜಕುಮಾರಿ ವಂದಿಸಿ, ಗಂಭೀರವಾಗಿ ಹೊರ ಹೊರಟಳು.

ಸಭೆಯ ಇತರರ ಮೈಯ್ಯಲ್ಲಿ ವಿದ್ಯುತ್ ಸಂಚಾರವಾದಂತಾಗಿದ್ದು, ಇನ್ನೂ ಅಗಸ್ತ್ಯರ ಬಾಯಲ್ಲಿ ಏನೇನು ಹೊಸವಿಷಯಗಳು ಬರುವುವೋ ! ಎಂದು ಕುತೂಹಲದಿಂದ ಎದುರು ನೋಡುತ್ತಿದ್ದರು.

ಅಗಸ್ತ್ಯ ; "ಇಲ್ವಲನ ತಮ್ಮ ವಾತಾಪಿಗೆ ಈ ರಾಜಕುಮಾರಿಯ ಮೇಲೆ ಕಣ್ಣಿತ್ತು ! ಪ್ರಕಟವಾಗಿಯೇ ವಿವಾಹ ಪ್ರಸ್ತಾಪವನ್ನೂ

ಮಾಡಿದ. ಆಗ ಕೆಲಸ ಕೆಡಬಾರದೆಂದು, ಅವನಿಗೆ ಕೆಲವು ನಿಬಂಧನೆಗಳನ್ನು ದೇವಗುರು ಬೃಹಸ್ಪತಿಯ ಸೂಚನೆಯಂತೆ ಹಾಕಿ, ಅವನಿಗೆ ಆಶೆಯುಂಟು ಮಾಡಿ, ಹಾಗಾದರೂ ಅವನ ಬ್ರಹ್ಮದ್ವೇಷ ಕಡಿಮೆಯಾಗಲೆಂದು ಬಯಸಿದವು. ಈಗ ಅವನೇ ಆ ವಿಷಯ ಕೈಬಿಟ್ಟನೆಂದು ಹೇಳಿ ಕಳುಹಿದ್ದಾನೆ. ಇನ್ನು ನಮ್ಮ ವಿವಾಹ ರಹಸ್ಯವಾಗಿ ಉಳಿಯುವುದರಲ್ಲಿ ಅರ್ಥವಿಲ್ಲ. ಅದನ್ನು ಪ್ರಕಟವಾಗಿಯೇ ಸರಳ ರೀತಿಯಲ್ಲಿ ಪೂರ್ಣ ವಾಗಿ ಆಚರಿಸಿ, ಲೋಕಕ್ಕೆ ತಿಳಿಯಪಡಿಸುವುದು ಅವಶ್ಯ." ಸೋಮಶ್ರವ –ಚಾಕ್ರಾಯಣರು ಒಬ್ಬರೊಬ್ಬರ ಮುಖ ನೋಡಿಕೊಂಡರು ! ಅದರ ಇಂಗಿತವರಿತ ಅಗಸ್ತ್ಯರು ಉತ್ತರರೂಪವಾಗಿ ಹೀಗೆ ಮುಂದುವರೆದರು.

ಅಗಸ್ತ್ಯ : "ಇದು ಎರಡನೆಯ ವಿವಾಹವಲ್ಲ ! ಆಗ ನಡೆದು ಬರೀ ಪಾಣಿಗ್ರಹಣ ಮತ್ತು ಸಪ್ತಪದೀ ಎಂಬ ಎರಡೇ ವಿವಾಹಾಂಗಗಳು.

**ನೋದಕೇನ ನ ವಾಚಾ ವಾ ಕನ್ಯಾಯಾಃ ಪತಿರಿಷ್ಯತೇ ।**
**ಪಾಣಿಗ್ರಹಣ ಸಂಸ್ಕಾರಾತ್ ಪತಿತ್ವಂ ಸಪ್ತಮೇ ಪದೇ ॥**

ಎಂಬ ಶಾಸ್ತ್ರವಾಕ್ಯವನ್ನು ನೀವೆಲ್ಲ ಬಲ್ಲಿರಿ ! ಧಾರೆಯಿಂದಲೋ. ವಾಗ್ದಾನದಿಂದಲೋ, ಬೇರಾವ ಕರ್ಮದಿಂದಲೋ ಸಿದ್ಧಿಸದು, ವಿವಾಹ; ಅದಕ್ಕೆಂದೇ ಸಪ್ತಪದಿಯನ್ನು ಆಗ ಆಚರಿಸಬೇಕಾಯಿತು. ಈಗ ಉಳಿದೆಲ್ಲ ಅಂಗಗಳೊಡನೆ, ಯಾವ ಕೊರತೆಯೂ ಉಳಿಯದೆ ಈ ವಿವಾಹ ಪೂರ್ಣವಾಗಿ ನಡೆದರೆ ತಪ್ಪಿಲ್ಲ."

ಕೊಂಚ ಯೋಚಿಸಿ, "ಇದು ನಾಳೆಯೇ ಆಗಲಿ" ಎಂದೂ ಸೂಚಿಸಿದರು ! ಪರಶುರಾಮರು "ಇಲ್ಲಿ ಇನ್ನೂ ಏನೋ ಮರ್ಮ ವಿದೆ ! ಎಂದುಕೊಂಡು, ಮುಗುಳ್ನಗುತ್ತಾ ಅಗಸ್ತ್ಯರ ಮುಖನೋಡಿದರು!

ಅಗಸ್ತ್ಯರ ಮುಖದಲ್ಲೂ ಕಿರುನಗೆಯಾಡಿ, ಆದರರ್ಥವನ್ನು ಅಗಸ್ತ್ಯ ಸೋದರನೂ. ಚಾಕ್ರಾಯಣನೂ ತಿಳಿದುಕೊಳ್ಳಲು ಅಸಮರ್ಥರಾದರು !

* * *

ಸರಳ ರೀತಿಯಲ್ಲಿ, ಆಶ್ರಮದಲ್ಲಿ, ಸೇರಿದ್ದ ಸಹಸ್ರ ಸಹಸ್ರ ಸಂಖ್ಯೆಯ ಋಷಿಗಳ ಸಮ್ಮುಖದಲ್ಲಿ ಲೋಪಾಮುದ್ರೆ–ಅಗಸ್ತ್ಯರ ವಿವಾಹ ನಡೆದು ಋಷಿಸ್ತೋಮ ಸಂತಸಗೊಂಡಿತು. ವಿದರ್ಭರಾಜ ಮನ ನೆಮ್ಮದಿಯಿಂದ ನಿಟ್ಟುಸಿರಿಟ್ಟು ಸಾರ್ಥಕ್ಯದ ಭಾವವನ್ನು ತೋರಿದ. ಲೋಪಾಮುದ್ರೆಯ ಮನದಲ್ಲಿ ಬಹಳ ದಿನಗಳಿಂದ ಎಡೆಮಾಡಿಕೊಂಡಿದ್ದ ಮುಗುಡ ನೀಗಿ, ನೆಮ್ಮದಿಯೊಂದು ಅಂಕುರಿಸಿತು.

ಆ ರಾತ್ರಿ ಅಗಸ್ತ್ಯರು ಪತ್ನಿಯೊಡನೆ ಹೀಗೆ ಮಾತಾಡಲಾರಂಭಿಸಿದರು:

ಅಗಸ್ತ್ಯ : "ದೇವಿ ! ನಿನ್ನ ತಾಳ್ಮೆಯನ್ನು ಈವರೆಗೆ ವಿಧಿಯಿಲ್ಲದೆ ಪರೀಕ್ಷಿಸಬೇಕಾಯಿತು. ಇನ್ನೂ ಕೊಂಚ ಪರೀಕ್ಷಿಸುವುದೂ ಇದೆ !— ಬೇರೊಂದು ರೀತಿಯಲ್ಲಿ !"

ಲೋಪಾಮುದ್ರೆ ಚಕಿತಳಾಗಿ, ಕೊಂಚ ಭಯವನ್ನೂ, ಆತಂಕ ವನ್ನೂ ಮುಖದಲ್ಲಿ ತೋರಿಸುತ್ತಾಳೆ.

ಅಗಸ್ತ್ಯ : "ನಾನು ಒಬ್ಬ ಕುಲಪತಿ ಎಂಬುದನ್ನು ನೆನಪಿಡು ! ನೀನೂ ಒಬ್ಬ ರಾಜ ಪುತ್ರಿ ಎಂಬುದನ್ನು ಮರೆಯಬೇಡ !"

ಲೋಪಾ : "ಅದರಿಂದೇನು. ಸ್ವಾಮಿ !"

ಅಗಸ್ತ್ಯ : "ನೀನೂ ನಾನೂ ನಿನಗುಚಿತವಾದ ರಾಜರೀತಿಯಲ್ಲಿ ಶೃಂಗಾರ ಭೋಗಗಳನ್ನು ಕೊಂಚದಿನವಾದರೂ ಅನುಭವಿಸಬೇಕಲ್ಲವೆ ?"

ಲೋಪಾಮುದ್ರೆ ತನ್ನ ಕಿವಿಗಳನ್ನು ತಾನೇ ನಂಬದಾದಳು ! ವೈರಾಗ್ಯನಿಷ್ಠೆಯ ಋಷಿ ಜೀವನದಲ್ಲಿ ಶೃಂಗಾರಭೋಗದ ಪ್ರಸಂಗ-ಎಂದೂ ಇಲ್ಲದ್ದು, ಇಂದೇಕೆ ! ಪತಿದೇವ ತನ್ನನ್ನು ಪರೀಕ್ಷಿಸುತ್ತಿರುವನೋ ? ಅಥವಾ ಮತ್ತೆ ತನ್ನನಗಲಲು ಇದು ಪೀಠಿಕೆಯೋ ? ಉಪಾಯವೋ ? ಅಥವಾ ಉತ್ತರದೇಶದ ವಿಜಯಯಾತ್ರೆಯ ಪರಿಣಾಮವಾಗಿ ನಾನಾ ಅರಸರ ಅರಮನೆಗಳ ಜೀವನರೀತಿ ನೀತಿಗಳನ್ನು ನೋಡಿ ಬಂದುದರ ಪರಿಣಾಮವೋ ? ಛೇ! ತನ್ನ ಪತಿ ಎಂದೂ ಚಲಚಿತ್ತರಲ್ಲ ! ಬ್ರಹ್ಮ ಚರ್ಯವೆಂದರೆ ಇವರಷ್ಟು ಕಟ್ಟುನಿಟ್ಟಾಗಿರಲು ಬೇರಾರಿಗೆ ಶಕ್ಯ ? ಇಂಥವರೇಕೆ ಇಂದು ಶೃಂಗಾರದ ಮಾತಾಡುತ್ತಿರುವವರು ?

ಏನೂ ಅರ್ಥವಾಗಲಿಲ್ಲ ! ಅನಿರ್ವಚನೀಯವಾದ ಒಂದು ಭೀತಿ ಏಕೋ ಅವಳ ಮನವನ್ನಾವರಿಸಿತು. ಹದಿನೇಳು ವರ್ಷ ಅಗಲಿದ್ದ ಪತಿದೇವ, ತನ್ನ ತ್ಯಾಗವನ್ನೂ, ಆ ಅಗಲಿಕೆಯ ದುಃಖವನ್ನೂ ಅರ್ಥಮಾಡಿ ಕೊಂಡಿದ್ದಾರೆಯೇ ? ಎಂಬ ಸಂದೇಹ ಅವಳನ್ನು ಆಗ ಬಹುವಾಗಿ ಕಾಡಿತು. ಅದಕ್ಕೂ ಉತ್ತರ ಸಿಗದೆ, ಮುಗ್ಧವಾಗಿ, ಏಳೆಂಟು ವರ್ಷದ ಕನ್ಯೆಯಂತೆ ಗಳಗಳನೆ ಅಳಲಾರಂಭಿಸಿದಳು.

ಅಗಸ್ತ್ಯರು ಆಕೆಯನ್ನು ಸಂತೈಸದೇ ನಟ್ಟದೃಷ್ಟಿಯಿಂದ ನೋಡಲಾ ರಂಭಿಸಿದರು ! ಲೋಪಾಮುದ್ರೆಯು ಅಳುವಿನ ಮಧ್ಯೆಯೇ ತಲೆ ಎತ್ತಿ ಪತಿಯ ಮುಖವನ್ನು ಗಂಭೀರವಾಗಿ ವೀಕ್ಷಿಸಿದಳು. ಅದರಲ್ಲಿ ಯಾವ ಕಾಮವಿಕಾರವೂ ಕಾಣಲಿಲ್ಲ ! ಮುಖಮುದ್ರೆಯಲ್ಲಿ ಋಷಿಗಾಂಭೀರ್ಯ ಎಳ್ಳಷ್ಟೂ ಕೆಡಲಿಲ್ಲ. ತಾನೂ ಅತ್ತದ್ದನ್ನೂ ಅನುದ್ವಿಗ್ನವಾಗಿ ವೀಕ್ಷಿಸುವ

ಇವರು ಮಹಾನುಭಾವರೆಂಬುದರಲ್ಲಿ ಏನೂ ಸಂದೇಹ ಬರಲಿಲ್ಲ. ಸಾಕ್ಷಾತ್ ವಿಷ್ಣುವನ್ನೂ, ರುದ್ರದೇವನನ್ನೂ ಸಾಕ್ಷಾತ್ಕರಿಸಿಕೊಂಡು· ಅಷ್ಟು ದೂರದಿಂದ ತನ್ನೊಡನೆ ಅಗ್ನಿಮುಖದಲ್ಲಿ ಮಾತಾಡುವ ಈ ಮಹಾಪುರುಷರನ್ನು ಕ್ಷಣಮಾತ್ರ ತಿಳಿದುಕೊಳ್ಳದೆ, ಮನುಷ್ಯ ಸಹಜ ದೌರ್ಬಲ್ಯದಿಂದ, ಅಪನಂಬಿಕೆಯಿಂದ ನೋಡಿದ ತನ್ನ ಬಗೆಗೇ ತನಗೆ ತಿರಸ್ಕಾರವೂ ಏರ್ಪಟ್ಟಿತು. ಅಗಸ್ತ್ಯರ ಪತ್ನಿ ಎನಿಸಲು ತನಗೇನು ಯೋಗ್ಯತೆ ಇದ ? ಎಂದು ತಾನೇ ಕೇಳಿಕೊಂಡಳು, ಯೋಗ್ಯತೆ ಇಲ್ಲ ವಾದರೆ ತನಗೇಕೆ ಅಂದು ದೇವಗಹಸ್ಯ ತಿಳಿಯಿತು ? ಅಗಸ್ತ್ಯರೇ ಅಂದು ಬಿಡಿಸಲಾಗದ ಸಮಸ್ಯೆಯನ್ನು ತಾನು ಬಿಡಿಸಿದ್ದು ಹೇಗೆ ! ಎಂದು ಚಿಂತಿಸಿದಾಗ ಆತ್ಮ ವಿಶ್ವಾಸವೂ ಮೂಡಿ, ಕಣ್ಣೊರೆಸಿಕೊಂಡು ಮಾತಾಡ ಲಾರಂಭಿಸಿದಳು :

ಲೋಪಾ : "ತಾವು ಸತ್ಯಲೋಕದ ಎತ್ತರದಲ್ಲಿ ಮಾತಾಡಿದಾಗ, ನಾನಿನ್ನೂ ಮನುಷ್ಯಲೋಕದ ಚಾಂಚಲ್ಯ ಚಾಪಲ್ಯಗಳ ಕೊಳೆಯಲ್ಲಿ ವಿಹರಿಸುತ್ತಿದ್ದೆ. ತಾವು ನನ್ನಲ್ಲಿ ಕಂಡದ್ದು ಆ ಕಶ್ಮಲವನ್ನು ! ಕ್ಷಮಿಸಿ. ತಮ್ಮ ಚಿತ್ತವನ್ನು ಈ ದಾಸಿಗೆ ಬಿಡಿಸಿ ಹೇಳಬೇಕು ! ಕೃಪೆಮಾಡಿ !"

ಅಗಸ್ತ್ಯ : "ನೀನು ಎಷ್ಟಾದರೂ ರಾಜಪುತ್ರೀ ! ನಾನೋ ಗೊಡ್ಡು ಬ್ರಾಹ್ಮಣ !!"

ಮತ್ತೆ ಲೋಪಾಮುದ್ರೆಗೆ ಅಳುವಂತಾಯಿತು ! ಕಷ್ಟಪಟ್ಟು ತುಟಿ ಗಳನ್ನು ಬಿಗಿ ಹಿಡಿದು. ಕಣ್ಣೀರನ್ನೂ ಭಾವನೆಗಳನ್ನೂ ಹದ್ದುಬಸ್ತಿ ನಲ್ಲಿಡಲು ಬಲವಾಗಿ ಯತ್ನಿಸಬೇಕಾಯಿತು. ಆವರೆಗೆ ಅವಳಲ್ಲಿ ಕಾಣಬರದ ಹೊಸದೊಂದು ಚೆಲುವನ್ನು ಆಗ ಕಂಡ ಅಗಸ್ತ್ಯರು ಮುಗುಳು ನಕ್ಕು ಮಾತನಾರಂಭಿಸಿದರು ;

ಅಗಸ್ತ್ಯ : "ಪ್ರಿಯೇ ! ನನ್ನ ವಿಷಯವಾಗಿ ಒಂದು ಪ್ರಶಸ್ತಿ ವೇದಮಂತ್ರವನ್ನೇರಿ ಕುಳಿತಿರುವುದು ನೆನಪಿದೆಯೇ !"

ಲೋಪಾ : "**ನೃಷು ಪ್ರಶಸ್ತಃ** [1] -ಮನುಷ್ಯರಲ್ಲೆಲ್ಲಾ ಪ್ರಶಸ್ತ ರಾದವರು ಎಂಬುದೊಂದು. ತಾವು ಲೋಕದಲ್ಲೇ ಪ್ರಥಮತಃ **ಮಾನ್ಯ** [2] ರೆಂದು ಗೌರವಿಸಲ್ಪಟ್ಟುದೊಂದು ! ಇರಲಿ ಈಗ ಈ ವಿಷಯದ ಚರ್ಚೆ ಏಕೆ ?"

ಅಗಸ್ತ್ಯ : "ಚರ್ಚೆಗಾಗಿ ಅಲ್ಲ ! ಇಂಥ ನಾನು ಈಗ ಎಂಥ ಸಂದಿಗ್ಧ ಸ್ಥಿತಿಯಲ್ಲಿ ಸಿಕ್ಕಿಹಾಕಿಕೊಂಡಿರುವೆನೆಂಬುದನ್ನು ಯೋಚಿಸು : ಬ್ರಹ್ಮಚರ್ಯದಲ್ಲಿದ್ದ ಹೊರತು ನನ್ನ ಜೀವನದ ಪ್ರಧಾನಗುರಿ ಸಾಧಿತ ವಾಗುವಂತಿಲ್ಲ. ' ಅದು ದೈವ ಕಟ್ಟಳೆ. ಪಿತೃಗಳ ಕಟ್ಟಳೆಯಂತೆ ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಆಗಿದೆ. ಇದರಲ್ಲೂ ದೈವ ನಿಯಮ ವುಂಟು. ನೀನೇ ಅದನ್ನು ಬಲ್ಲೆ. ನಿನ್ನನ್ನು ಕೈಹಿಡಿದೂ ಹದಿನೇಳುವರ್ಷ ಆಗಲಿ, ಬ್ರಹ್ಮಚರ್ಯವನ್ನೇ ಪಾಲಿಸಿದರೂ, ನಿನ್ನನ್ನು ಮನನೋಯಿಸಿ ಆಯಿತು ! ಈಗ ಇಲ್ವಲ ಇನ್ನೂ ಬದುಕಿದ್ದಾನೆ ! ದಕ್ಷಿಣದಲ್ಲಿ ಋಷಿ ಮುನಿಗಳಿಗೆ ಹಿಂಸೆ ತಪ್ಪಿಲ್ಲ. ಅದನ್ನು ತಪ್ಪಿಸಲೆಂದೇ ಉದಿಸಿದ ನನಗೆ ಈಗ ಕರ್ತವ್ಯವೇನು ?"

ಬಾಗಿಲಲ್ಲಿ ಯಾರೋ ನಿಂತಿರುವುದು ಅಗಸ್ತ್ಯರಿಗೆ ತಿಳಿಯಿತು."ಶಾರ್ಙ್ಗ ರವ! ಇಲ್ಲಿ ಬಾ !" ಎಂದು ಅಲ್ಲಿದ್ದ ತಮ್ಮ ಪ್ರಿಯಶಿಷ್ಯನನ್ನು ಒಳಗೆ ಕರೆ ದರು. ಭಯದಿಂದ ಒಳಬಂದ ಅವನಿಗೆ ಹೀಗೆಂದರು : "ವತ್ಸ ! ನೀನು ನಿನ್ನ

---

1 ಈಗಿನ ಋಕ್ ಸಂಹಿತೆಯಲ್ಲಿ ಇದು (1-180-8)ರಲ್ಲಿ ಬಂದಿದೆ.

2 ಇದು (1-171-5) ರಲ್ಲಿ ಉಕ್ತವಾಗಿದೆ.

ಕರ್ತವ್ಯದಲ್ಲೇ ಇರುವೆ, ಭಯಪಡಬೇಡ. ಅಲ್ಲೇ ನಿಲ್ಲು, ಒಳಗೆ ಬೇರಾರನ್ನೂ ಬಿಡಬೇಡ. ಎರಡನೆಯದಾಗಿ, ಇಲ್ಲಿ ನಮ್ಮೀರ್ವರಲ್ಲಿ ನಡೆಯುವ ಸಂಭಾಷಣೆಯನ್ನು ಗಮನವಾಗಿ ಕೇಳಿ, ನೆನಪಿನಲ್ಲಿಟ್ಟುಕೋ ! ಏಕೆಂದರೆ ಇವು ಬರೀ ಸತಿಪತಿಯರ ಪ್ರೇಮಾಲಾಪಗಳಲ್ಲ. ಈಗೊಂದು ವೇದಸೂಕ್ತ 3 ಉದಿಸುತ್ತಿದೆ, ಸಂಭಾಷಣೆಯ ರೂಪದಲ್ಲಿ ! ಅದು ಲೋಕಕ್ಕೇ ಉಪಕಾರಕವಾದುದು. ಆದುದರಿಂದ ನೆನಪಿಡು, ಮುಂದೆ ಉಪಯೋಗಕ್ಕೆ ಬರುತ್ತದೆ." ಶಾಂಬಗ್ಗರವ ಹೊರಟ. ಅಗಸ್ತ್ಯರು ಮತ್ತೆ ಯೋಗಾರೂಢರಾಗಿ ಕುಳಿತು ಮಾತಾಡಲಾರಂಭಿಸಿದರು !

ಆಗಸ್ತ್ಯ : "ಪ್ರಿಯೆ ! ಈಗ ನನ್ನ ನಿನ್ನ ಕರ್ತವ್ಯವೇನು ? ನೆನೆಪಿಸುವೆಯಾ ?"

ಲೋಪಾಮುದ್ರೆ : "ಪ್ರಭು ! ನಿಮಗಿಂತ ಪ್ರಾಚೀನರಾದ ಮಹರ್ಷಿಗಳೂ ನಿಮ್ಮಂತೆಯೇ ಸದಾ ಯಜ್ಞನಿರತರಾಗಿಯೂ ಇದ್ದು ದೇವತೆಗಳೊಡನೆ ಮಾತಾಡುತ್ತಲೂ ಇದ್ದರೂ, ಅವರೂ ಪತ್ನಿಸಂಗ ಮಾಡಿ ಸಂತಾನವನ್ನೂ ಬೆಳೆಸಿದರು! ಇಲ್ಲವಾದರೆ ಋಷಿ ಸಂತಾನವೆಂಬುದು ಇರುತ್ತಿತ್ತೆ ? ನೀವು ಇರುತ್ತಿದ್ದಿರಾ ? ಋಷಿ ಋಣವೆಂಬುದುಂಟೆಂದು ಲೋಕಕ್ಕೆ ತಿಳಿಸಲು ಆಗ ಯಾರಿರುತ್ತಿದ್ದರು ? ಅವರಿಗೆಲ್ಲ ಪತ್ನೀಸಂಗದಿಂದ ಬ್ರಹ್ಮಚರ್ಯವು ನಾಶವೇ ಆಯಿತ ? ನನಗಿಂತ ಹಳಬರೂ, ತಪಸ್ವಿನಿಯರೂ ಆದ ಮಹಿಳೆಯರೂ ಮಹರ್ಷಿಗಳಾದು ದುಂಟು ! ಅವರೂ ಮಕ್ಕಳನ್ನು ಹೆತ್ತು ಲೋಕಕ್ಕೆ ಅರ್ಪಿಸಿದರು ! ಅವರಿಗೂ ಬ್ರಹ್ಮಚರ್ಯ ಚ್ಯುತಿಯಾಯಿತೇ ?

---

3 ಇದು(1-179)

ಅಗಸ್ತ್ಯ : "ಹಳಬರ ಮಾತು ಬೇಡ ! ಆವರ ಸಂಯಮ ಸಿದ್ಧಿಗಳು ಬೇರೆ ! ನಾವಿರುವುದು ಬೇರೆ ಕಾಲದಲ್ಲಿ.''

ಲೋಪಾ : "ಕಾಲಧರ್ಮಕ್ಕೂ ಬ್ರಹ್ಮಚರ್ಯಕ್ಕೂ ಏನು ಸಂಬಂಧ ಪ್ರಭು ? ನಾವು ಮಾತಾಡುತ್ತಿರುವುದು ಲೋಕೋತ್ತರ ಪುರುಷರ ನೀತಿ ರೀತಿ ನಿಯಮಗಳನ್ನು ಕುರಿತು ! ಕಾಲಧರ್ಮದ ಮಿತಿ ಯೊಳಗೆ ಮಾತಾಡಬೇಕಾದರೆ, ನನ್ನನ್ನೇ ನೋಡಿ ! ನಾನೂ ಋಷಿ ಜೀವನದ ಕಾಠಿಣ್ಯಕ್ಕೇ ಒಗ್ಗಿಕೊಂಡು ತ್ರಿಕಾಲಗಳಲ್ಲೂ ಅಗ್ನಿ ಶುಶ್ರೂಷೆ, ಆಶ್ರಮ ಸೇವೆ ಮಾಡುತ್ತಾ, ತಮ್ಮ ಸೇವೆಯಲ್ಲೇ ಪ್ರತ್ಯಕ್ಷ ಪರೋಕ್ಷ ವಾಗಿ ದೇಹ ಸವೆಸಿದ್ದೇನೆ, ಪ್ರಭು ! ಸ್ತ್ರೀಯರಿಗೆ ಮುಪ್ಪು ಬೇಗ ಬರುತ್ತದೆ ಎನ್ನುತ್ತಾರೆ. ನನ್ನ ಆಂಗೋಪಾಂಗಗಳ ಕಾಂತಿ ಕೆಡುತ್ತಿದೆ ! ನಮ್ಮ ಹಿರಿಯರು ಈ ನನ್ನ ಸೌಂದರ್ಯವನ್ನು ವ್ಯರ್ಥವಾಗಿ ಸೃಷ್ಟಿಸಿದರೇ? ನಿಮಗಾಗಿಯೇ ಆದರೆ, ನೀವು ಅದನ್ನು ನಿರೀಕ್ಷಿಸುವುದು, ಕಾಲಧರ್ಮದ ಪ್ರಕಾರವೋ, ಅದರ ವಿರುದ್ಧವೋ ? ಸತಿ–ಪತಿ ಎಂಬ ಶಬ್ದಗಳನ್ನು ಸಾರ್ಥಕ ಮಾಡುವ ಮಹರ್ಷಿಗಳ ಬಗೆ ಹೇಗೆ ? ಅಥವಾ ಈ ಶಬ್ದಗಳೇ ತುಚ್ಛವೋ, ಹೇಯವೋ ?"

ಅಗಸ್ತ್ಯ : ''ಪ್ರಿಯಳೇ ! ದೇವಕಾರ್ಯಕ್ಕಾಗಿಯೇ ಬದುಕಿ, ಶರೀರದ ಬಲ, ವೀರ್ಯ, ತೇಜಸ್ಸು, ಸೌಂದರ್ಯಗಳನ್ನು ಅವಕ್ಕಾಗಿಯೇ ಮುಡಿಪಿಟ್ಟು ಮಾಡುವ ತಪಸ್ಸು ವ್ಯರ್ಥ ಎನ್ನಬೇಡ ! ಆ ದೇವತೆಗಳೇ ಈ ಕಲ್ಪನೆಯನ್ನು ನಮ್ಮ ತಲೆಯಲ್ಲಿ ಹಾಕಿದವರಲ್ಲವೆ ?"

ಲೋಪಾ : "ಬ್ರಹ್ಮಚರ್ಯವೆಂದರೆ ಪರಬ್ರಹ್ಮ ವಸ್ತುವಿಗಾಗಿ ಬಾಳಿ ಬದುಕುವುದು. ಅವನ ಸೇವೆಯನ್ನೇ ಆಚರಿಸುವುದು ಎಂಬ ನಿಷ್ಠೆ ನಿಮಗೆ ತಿಳಿಯದುದಲ್ಲ ! ಗೃಹಸ್ಥಾಶ್ರಮವು ಅದಕ್ಕೆ ವಿರುದ್ಧ ಹೇಗಾ

ದೀತು ? ಮಕ್ಕಳು, ಮಡದಿ ಎಂಬ ಮೋಹವುಂಟಾಗಿ, ಮೇಲಿನ ಪುರುಷಾರ್ಥವೇ ಮರೆತರೆ ಮಾತ್ರ, ಒಂದಕ್ಕೊಂದು ಇವು ವಿರುದ್ಧ ವಾಗುತ್ತವೆ."

ಅಗಸ್ತ್ಯ : "ಆ ಮೋಹ ನಿನಗಿಲ್ಲವಲ್ಲ ! ಮುಂದೇನಾದರೂ ಬರುವ ಸಂಭವವಿಲ್ಲವಲ್ಲ !''

ಲೋಪಾ ; ''ಸ್ವಾಮಿ ! ನಾನು ಜನಿಸಿದ್ದೇ ನಿಮ್ಮ ವ್ರತ, ತಪಸ್ಸು, ಬ್ರಹ್ಮಚರ್ಯವನ್ನು ಪೂರ್ತಿಮಾಡಲು ಎಂಬುದನ್ನು ನನಗಿಂತ ನೀವೇ ಚೆನ್ನಾಗಿ ಬಲ್ಲಿರಿ ! ನನ್ನ ಶ್ರದ್ಧೆ ವಿಚಲಿತ ಆಗದು ! ನಿಮ್ಮ ಶ್ರದ್ಧೆಯ ಬಗೆಗೆ ತಾವೇ ಹೇಳಬೇಕು !!'' (ನಗುತ್ತಾಳೆ.)

ಅಗಸ್ತ್ಯರೂ ನಕ್ಕು : "ನಿನ್ನ ಇಷ್ಟಾರ್ಥವನ್ನು ಪೂರೈಸುವ ಬಯಕೆ ನನಗೂ ಆಗುತ್ತಿದೆ. ಇದು ನಿನ್ನ ಸಾಮಿಪ್ಯದ ಪ್ರಭಾವವೋ, ಅಥವಾ ಇದರಲ್ಲೂ ದೇವರಹಸ್ಯ ಉಂಟೋ, ನಾನರಿಯೆ ! ಈಗ ಅದನ್ನು ಪೂರೈಸಲೆಂದೇ ಮೊದಲಿನ ಮಾತಾಡಿದ್ದು – ಶೃಂಗಾರಭೋಗದಲ್ಲಿ ಕೊಂಚದಿನ ಕಳೆಯಬೇಕೆಂದು.''

ಲೋಪಾಮುದ್ರೆ ಮತ್ತೆ ತಿಳಿಯದೆ ಪೇಚಾಡಿದಳು. ಅಗಸ್ತ್ಯರು ಮುಂದು ವರೆಸಿದರು.

ಅಗಸ್ತ್ಯ ; "ಪೂರ್ಣವಾಗಿ ನಾಶವಾದ ಅಗಸ್ತ್ಯಾಶ್ರಮವನ್ನು ಮತ್ತೆ ನಿರ್ಮಿಸಬೇಕಾಗಿದೆ, ಅಲ್ಲಿ ಕುಲಪತಿಯ ನಿವಾಸ ಅಭೂತಪೂರ್ವವಾಗಿ ತಲೆ ಎತ್ತಲಿದೆ. ಇದರ ವೆಚ್ಚಕ್ಕಾಗಿ ಆರ್ಯಾವರ್ತದ ಬಡ ದೊರೆಗಳನ್ನು ಪೀಡಿಸಲಾರೆ ! ಇಲ್ವಲನಲ್ಲಿ ಧನಸಮೃದ್ಧಿ ಇದೆ! ಅವನ 'ಬ್ರಾಹ್ಮಣ್ಯ' ವನ್ನು ಪರೀಕ್ಷಿಸುವುದೂ ಇದೆ !! ಮತ್ತೆ ನನ್ನ ಪರ್ಯಟನೆ ಆರಂಭವಾಗಲಿದೆ. ಪೆವರ

ಬೇಡ. ನೀನು ನನ್ನೊಡನೆಯೇ ಈಸಲ ಬರುವೆ. ಆದರೆ ಇಲ್ವಲನನ್ನು ಮುಗಿಸಿದ ಮೇಲೆಯೇ ನಿನಗೆ ಸಂತಾನ! ಆ ದಿನ ದೂರವಿಲ್ಲ."

ಎಂದು ಹೇಳಿ ಅಗಸ್ತ್ಯರು ಮೇಲೆದ್ದರು. ಲೋಪಾಮುದ್ರೆ ಹರ್ಷದಿಂದ ಅಗಸ್ತ್ಯರನ್ನು ಆಲಿಂಗಿಸಿದಳು!

* * *

ಮರುದಿನ ಅಗಸ್ತ್ಯರು ದಾಲ್ಭ್ಯಾಶ್ರಮದ ಸಮರ್ಥ ಅಶ್ವಾರೋಹಿಗಳನ್ನೆಲ್ಲ ಕರೆಸಿ, ಚಾಕ್ರಾಯಣನೆದುರು ಹೀಗೆ ಅಪ್ಪಣೆಮಾಡಿದರು. "ವಿಂಧ್ಯನು ಪೂರ್ವ ಪಶ್ಚಿಮವಾಗಿ ಮಲಗಿರುವನಷ್ಟೆ! ಇವನ ಉತ್ತರ ಪಾರ್ಶ್ವದ ತಪ್ಪಲಲ್ಲಿರುವ ಋಷ್ಯಾಶ್ರಮಗಳೂ ಜನವಸತಿಗಳೂ ನಿಮಗೆಲ್ಲ ಪರಿಚಿತವಾಗಿವೆ. ನೀವು ಬೇರೆ ಬೇರೆ ದಿಕ್ಕುಗಳನ್ನೂ ಗ್ರಾಮಗಳನ್ನೂ ನದೀತೀರಗಳನ್ನು ಹಂಚಿಕೊಂಡು, ಅಲ್ಲಲ್ಲಾ ಹೋಗಿ ಅಲ್ಲಿನ ಮುಖ್ಯರಿಗೆ, ಮುಖಂಡರಿಗೆ, "ಆ ವಸತಿಗಳನ್ನು ಬಿಟ್ಟು ಹತ್ತಾರು ಗಾವುದ ಉತ್ತರ ದಿಕ್ಕಿಗೆ ಹೋಗಿ, ಬೇರೆಡೆ ಆಶ್ರಮಗಳನ್ನೂ ಜನವಸತಿಗಳನ್ನೂ ಏರ್ಪಡಿಸಿಕೊಳ್ಳಿ, ಇದು ಅಗಸ್ತ್ಯನ ಸೂಚನೆ" ಎಂದು ಎಚ್ಚರಿಸಿ ಬರಬೇಕು. ಒಂದು ತಿಂಗಳಲ್ಲಿ ಈ ಕೆಲಸ ಮುಗಿಯ ಬೇಕು. ವಿಂಧ್ಯನ ದಕ್ಷಿಣಕ್ಕೇನಿದೆಯೋ ತಿಳಿಯದು. ಪ್ರಾಯಃ, ಢಕಾಯಿತರ, ಅಸುರರ, ಅಡಗುತಾಣಗಳಿರಬೇಕು. ಚಿಂತೆಯಿಲ್ಲ. " ಎಂದು ಹೇಳಿ ಕಳುಹಿದರು.

ತಿಂಗಳುರುಳಿತು. ಅಶ್ವಾರೋಹಿಗಳು ಬಂದು ತಾವು ಹಾಗೇ ಮಾಡಿ ತಿಳಿಸಿದುದಾಗಿಯೂ, ಆಶ್ರಮಗಳು ದೂರಕ್ಕೆ ಹೋಗಿರುವುದಾಗಿಯೂ ಹೇಳಿದರು! ಅದರರ್ಥ ಮಾತ್ರ ಯಾರಿಗೂ ತಿಳಿಯಲಿಲ್ಲ!

ಅದರ ಮುಂದಿನ ಹುಣ್ಣಿಮೆಯಿಂದು, ಅಮಾವಾಸ್ಯೆಯಂಥ ಕಾಳ ರಾತ್ರಿ ಜಗತ್ತನ್ನೇ ಸುತ್ತಿತ್ತು. ಅದು ಮಳೆಗಾಲ ಬೇರೆಯಾಗಿ, ಆಕಾಶ ವನ್ನೆಲ್ಲ ದಟ್ಟ ಕಾರ್ಮೋಡಗಳು ಸುತ್ತುವರೆದು ಭೂಮಿ ಆಕಾಶಗಳ ವ್ಯತ್ಯಾಸವೇ ತಿಳಿಯದಂತ ಆಗಿತ್ತು. ಐದಾರು ದಿನಗಳಿಂದ ಹಿಡಿದಮಳೆ, ಬಿರುಗಾಳಿ, ಆ ಯುಗದಲ್ಲಿಯೇ ಅಪೂರ್ವವಾಗಿತ್ತು.

ಮಳೆ ಹಿಡಿದು, ಸೂರ್ಯರಶ್ಮಿಯೇ ಕಾಣದ ಆ 'ದುರ್ದಿನ' ಗಳಲ್ಲಿ ಮಹರ್ಷಿಗಳು ಉಪವಾಸ ಮಾಡಿದ್ದರು. ಅದು ಆ ಕಾಲದ ನಿಯಮವೂ ಶಾಸ್ತ್ರರೀತಿಯೂ ಆಗಿತ್ತು.

ಪರಶುರಾಮರು ಏಕಾಂತವಾಗಿ ಆಶ್ರಮದಲ್ಲಿ ಕಣ್ಣುಮುಚ್ಚಿ ಕುಳಿತಿದ್ದರು, ಅಗಸ್ತ್ಯರು ಅವರನ್ನು ಸಮೀಪಿಸಿದ್ದು ತಿಳಿದು ಕಂದೆರೆದರು.

ಪರಶುರಾಮ : "ಮಹರ್ಷಿಗಳಿಗೆ ಏನೋ ಚಿಂತೆ ಹಿಡಿದಂತಿದೆ !"

ಅಗಸ್ತ್ಯ : "ಅದು ನಿಮ್ಮ ಚಿಂತೆಗೂ ಸಂಬಂಧ ಪಟ್ಟುದೇ ಆಗಿದೆ!"

ಪರಶುರಾಮ : "ನನಗೇನು ಚಿಂತೆ ! ಮಾಡಬೇಕಾದುದನ್ನು ಮಾಡಿ ಆಯಿತು. ಯಾರೋ ಪುಣ್ಯಾತ್ಮರು ಈ ಆಶ್ರಮದಲ್ಲಿ ಅನ್ನ ಹಾಕುತ್ತಿದ್ದಾರೆ. ತಿಂದುಂಡು, ದಷ್ಟಪುಷ್ಟನಾಗಿ ಕಾಲಕಳೆಯುತ್ತಿರುವ ನನಗೇತರಚಿಂತೆ ? "

ಅಗಸ್ತ್ಯ : "ಅಕೋ, ನೀವೇ ಹೇಳಿದಿರಲ್ಲ ! ನೀವು ಪರಾಶ್ರಯ ದಲ್ಲಿರುವುದೇ ನಿಮ್ಮ ಚಿಂತೆ ! ಅಲ್ಲವೆ ? "

ರಾಮ : "ಇದಕ್ಕೆ ಸಂಬಂಧಪಟ್ಟ ನಿಮ್ಮ ಚಿಂತೆ ಏನು ?"

ಅಗಸ್ತ್ಯ : "ಮಳೆಯೂ ಬಿಡಲಿಲ್ಲ ! ಈ ವಿಂಧ್ಯ ದಕ್ಷಿಣದತ್ತ ದಾರಿ ಯನ್ನು ಕೊಡುತ್ತಿಲ್ಲ. ಇಲ್ವಲ ಇನ್ನೂ ಜೀವಿಸಿದ್ದಾನೆ. ನನ್ನ ಗುರಿ ಇನ್ನೂ ಸಾಧ್ಯವಾಗಿಲ್ಲ !"

ರಾಮ : "ವಿಂಧ್ಯನನ್ನು ಮಲಗಿಸಿದರಾಯಿತು, ನಿಮಗೆ ಆ ತಪಃಶಕ್ತಿ ಇದೆಯೆಂದು ಹಿಂದೊಮ್ಮೆ ನಾನೇ ನಿಮಗೆ ಹೇಳಲಿಲ್ಲವೇ ? ಕೈಯಲ್ಲೇ ಉತ್ತರವಿಟ್ಟುಕೊಂಡು, ಅದಕ್ಕೆ ಜಗತ್ತನ್ನೆಲ್ಲ ಸುತ್ತುವುದುಂಟೋ ? "

ಅಗಸ್ತ್ಯ : "ನೀವು ನಿಮ್ಮ ಮನೆಗೆ ಹೊರಟಾಗಲಲ್ಲವೇ ನಾನು ವಿಂಧ್ಯನನ್ನು ಮಲಗಿಸುವುದು ? "

ರಾಮ : " ಎಂದರೆ ? "

ಅಗಸ್ತ್ಯ : " ಮೊದಲು ನಿಮ್ಮ ಚಿಂತೆ ತೀರಲಿ."

ರಾಮ : " (ನಕ್ಕು) ; ಹಾಗೋ ! ಹಾಗೇ ಆಗಲಿ. ಆದರೆ ನಾನು ಗೆದ್ದ ಭೂಮಿಯನ್ನೆಲ್ಲ ಈಗ ಆ ಕಾಶ್ಯಪನಿಗೆ ದಾನ ಕೊಟ್ಟಾಗಿದೆ. ಅಂಥ ಭೂಮಿಯಲ್ಲಿ ಇನ್ನು ವಾಸಿಸುವುದು ನನಗೆ ಇಷ್ಟವಿಲ್ಲ. "

ಅಗಸ್ತ್ಯ : " ಅವತಾರಿಗಳು ಹೊಸ ಭೂಖಂಡವನ್ನೇ ಸೃಷ್ಟಿಸಬಹುದಲ್ಲ ? "

ರಾಮ : " ಅವತಾರಿಯ ಮೂಲರೂಪವನ್ನು ಸಂದರ್ಶಿಸಿದವರು ವಿಂಧ್ಯನನ್ನು ಬಗ್ಗಿಸಬಹುದಲ್ಲ ? ಉಪಾಸ್ಯನಿಗಿಂತ ಉಪಾಸಕನೇನೂ ಕಡಿಮೆ ಇಲ್ಲವಲ್ಲ ! "

ಅಗಸ್ತ್ಯ : " ಹಾಗಾದರೆ ಎರಡೂ ಒಟ್ಟಿಗೆ ಆಗಲಿ."

* * *

ಮರುದಿನ ಉಷಃಕಾಲದಲ್ಲಿ ಅಗಸ್ತ್ಯರು ಒಂದು ಕಾಮ್ಯೇಷ್ಟಿಯನ್ನಾಚರಿಸಿ, ವಿಂಧ್ಯಾಭಿಮಾನೀ ಪುರುಷನನ್ನು ಸಾಕ್ಷಾತ್ಕರಿಸಲು ಬಯಸಿದರು.

ಇಷ್ಟಿ ಮುಗಿಯಿತು. ಪೂರ್ಣಾಹುತಿ ಆಯಿತು. ದಣಿದು ಉಪವಾಸದ ಲ್ಲಿದ್ದ ಮಹರ್ಷಿ, ಆಶ್ರಮದ ಶುಭಕ್ಕೋರಗಿ ಕಣ್ಣುಮುಚ್ಚಿದರು. ಅವರ ಯೋಗಸಮಾಧಿಯಲ್ಲಿ ವಿಂಧ್ಯಪುರುಷ ಕಾಣಿಸಿಕೊಂಡ.

ವಿಂಧ್ಯ : "ಮಹರ್ಷೇ ! ಅಚೇತನವಸ್ತುವಿಗೆ ಅಭಿಮಾನಿಯಾದ ನನ್ನನ್ನು ನೀವು ಈ ಇಷ್ಟಿಮಾಡಿ ಗೌರವಿಸಿ ಕರೆಯುವುದೇ ? ಬರಬೇಕೆಂದು ಆಜ್ಞೆ ಮಾಡಿದ್ದರೆ ಸಾಲದೇ ? ಬರದಷ್ಟು ನನಗೆ ದುರಹಂಕಾರವೆಂದು ಪೂಜ್ಯರು ತಿಳಿದರೆ, ನನ್ನ ದೌರ್ಭಾಗ್ಯ !"

ಅಗಸ್ತ್ಯ : "ವತ್ಸ ! ನೀನೊಂದು ಲೋಕೋಪಕಾರ ಮಾಡಬೇಕಾ ಗಿದೆ. ಅದು ತ್ಯಾಗಪೂರ್ವಕವಾದದ್ದು. ನಿನ್ನ ಮಹತ್ವಾಕಾಂಕ್ಷೆ ಅದ ರಲ್ಲಿ ಮಣ್ಣು ಪಾಲಾಗಬಹುದು. ಯೋಚಿಸಿ ವಾಗ್ದಾನ ಮಾಡು."

ವಿಂಧ್ಯ : "ಇದರಲ್ಲಿ ಯೋಚಿಸುವುದೇನು ಪ್ರಭು ? ವಾಗ್ದಾನ ಬೇಕೆ ? ತಾವು ಇಷ್ಟಿಯ ಬಲದಿಂದ ನನ್ನನ್ನು ಕಟ್ಟಿಹಾಕಿರುವಿರಿ ! ಬಂಧಿತ ನಾದವನಿಗೆ 'ಓಡು' ಎಂಬಾದೇಶದಂತೆ, ಈ ವಾಗ್ದಾನ ಮಾಡಬೇಕಾದ ನಿರ್ಬಂಧವೇತಕ್ಕೆ ? ನೇರವಾಗಿ ಅಪ್ಪಣೆ ಮಾಡಿ, ಸಾಕು !"

ಅಗಸ್ತ್ಯ : "ಯಾವುದೂ ಬಲತ್ಕಾರವಾಗಿ ನಡೆಯಬಾರದು ! ಅದರಲ್ಲಿ ನನ್ನ ಸ್ವಾರ್ಥವೂ ಇಲ್ಲ. ಅದಕ್ಕೆ ಒಲಿಯುವುದೂ ಬಿಡುವುದೂ ನಿನ್ನ ಇಷ್ಟ ! ಇಷ್ಟಿಮಾಡುವುದು ನನ್ನ ಇಷ್ಟ !"

ವಿಂಧ್ಯ : "ವಿಧಿಪೂರ್ವಕವಾಗಿ ಇಷ್ಟಿ ಮಾಡಿ ತೃಪ್ತಿ ಪಡಿಸಿದರೆ ಒಲಿಯದೇ ಇರುವುದು ಯಾವ ಯಾಗದಲ್ಲಿ ಹೇಳಿದೆ, ಪ್ರಭು ? ನಾನು ಶಾಸ್ತ್ರ, ವಿಧಿ, ವೇದಗಳಿಗೆ ವಶ್ಯನಷ್ಟೆ ? ಈಗ ಈ ದ್ರಾವಿಡ ಪ್ರಾಣಾ ಯಾಮ ಬೇಡ ! ನೇರವಾಗಿ ಹೇಳಿ".

ಅಗಸ್ತ್ಯ : "ನನಗೀಗ ದ್ರಾವಿಡಪ್ರಾಣಾಯಾಮವೇ ಆಗತ್ಯ, ವತ್ಸ ! ದ್ರಮಿಡ ದೇಶಕ್ಕೆ ನಾನು ಒಂದು ದೇವಕಾರ್ಯಕ್ಕಾಗಿ ಹೊರಟಿದ್ದೇನೆ. ಸಾವಿರಸಾವಿರ ಶಿಷ್ಯರೊಡನೆ ! ಅದಕ್ಕೆ ನೀನು ದಾರಿ ಬಿಡಬೇಕು."

ವಿಂಧ್ಯ : "ಬಿಟ್ಟಂತಾಯಿತು ! ಇದೇನು ದೊಡ್ಡ ಕೆಲಸವೇ ?"

ಅಗಸ್ತ್ಯ : ''ಮೈ ಬೆಳೆದು ನಿಂತವನಿಗೆ ನಮಸ್ಕಾರ ಮಾಡುವುದೂ ಕಷ್ಟವೆಂಬುದು ನೆನಪಿರಲಿ''.

ವಿಂಧ್ಯ : ''ಓಹೋ ! ಮಹರ್ಷಿಗಳಿಗೆ ನನ್ನ ಮೈಮೇಲೆ ಕಣ್ಣಿರುವಂತಿದೆ ! ಉತ್ತರಕ್ಕೊಬ್ಬ ಹಿಮವಂತ ಗಗನಚುಂಬಿಯಾಗಿ ಬೆಳೆದು ನಿಂತರೆ, ದಕ್ಷಿಣದವರಿಗೊಂದು ಹಿಮವಂತ ಬೇಡವೆ ? ಉತ್ತರಕ್ಕೊಂದು ಗಂಗೆಯಾದರೆ ದಕ್ಷಿಣಕ್ಕೂ ಒಂದು ಬೇಡವೆ ?... ...."

ಅಗಸ್ತ್ಯ ; ''ನಿನ್ನ ತರ್ಕದಂತೆ ಊರಿಗೊಂದು ಚಂದ್ರ, ಕೇರಿಗೊಂದು ಸೂರ್ಯ, ಒಬ್ಬೊಬ್ಬರಿಗೆ ಒಂದೊಂದು ಕಾಲಮಾನ, ಋತಸತ್ಯದ ಭಿನ್ನ ಕಲ್ಪನೆಗಳೂ ಬೇಕಾಗುತ್ತವೆ! ಇದರ ಪರಿಣಾಮವನ್ನು ಬಲ್ಲೆಯಾ?''

ವಿಂಧ್ಯ : ''**ಲೋಕೋ ಭಿನ್ನರುಚಿಃ** ಎಂಬುದನ್ನು ಮಾಡಿದವನನ್ನು ನಾನು ಮಾಡಲಿಲ್ಲವಷ್ಟೆ, ಗುರುವರ್ಯ! ಅವರವರು ಬೇರೆ ಬೇರೆ ದೇವರ ಕಲ್ಪನೆಗಳನ್ನು, ಕಾಲ ದೇಶಕಲ್ಪನೆಗಳನ್ನು ಮಾಡಿಕೊಂಡರೆ ನಷ್ಟವೇನು ? ದಕ್ಷಿಣಕ್ಕೆ ನಾನೇ ಹಿಮವಂತನಾದರೇನು ನಷ್ಟ?''

ಅಗಸ್ತ್ಯ : "ನೀನೆಷ್ಟೇ ಬೆಳೆದರೂ ನೀನು ಹಿಮಾಲಯ ಆಗಲಾರೆ! ನಿನ್ನ ಅಕ್ಷಾಂಶ ರೇಖಾಂಶಗಳೇ ಬೇರೆ ! ನಿನ್ನ ಮೇಲೆ ಹಿಮ ಉಳಿಯಲಾರದು ! ನಿನ್ನಲ್ಲಿ ಬೇರೆ ಶಂಕರ, ಕುಬೇರಾದಿಗಳು ವಾಸಿಸಲಾರರು!

ದೇವರ ಕಲ್ಪನೆಗಳು ಎಂದೆ ! ಅವು ಬೇರೆಯಾದರೂ, ಮೂಲದ ದೇವರು ಒಬ್ಬನೇ ತಾನೇ? ನೀನು ಅನ್ವರ್ಥವಾಗಿ 'ವಿಂಧ್ಯ' (ಒಡಕ)ನೇ ಆಗಿರುವೆ! ನನ್ನ ಮುಂದಿನ ಕೆಲಸ ಭಾರತದೇಶದ ಸಾಂಸ್ಕೃತಿಕ ಏಕೀಕರಣ, ಅದಕ್ಕೆ ನನಗೆ ನಿನ್ನ ಕಾಣಿಕೆ ಮೊದಲು ಅವಶ್ಯ!"

ವಿಂಧ್ಯ : "ಕಾಣಿಕೆಯನ್ನು ನಾನು ಇಲ್ಲವೆಂದೆನೇ? ಹಿಮವಂತನಂತೆ ಬೆಳೆಯುವ ನನ್ನ ಬಯಕೆಗೂ ಅದಕ್ಕೂ ಏನು ಸಂಬಂಧ?"

ಅಗಸ್ತ್ಯ : "ಅಸಹಜ ಬಯಕೆಯನ್ನು ನೀನು ಮೊದಲು ಬಿಡುವುದೇ ನನಗೆ ಕಾಣಿಕೆ ! ದೈವ ಸೃಷ್ಟಿಯಲ್ಲಿ ನೀನು ಹೇಗಿದ್ದೆಯೋ ಹಾಗೇ ಇರುವುದು ಎಲ್ಲರಿಗೂ ಕ್ಷೇಮ".

ವಿಂಧ್ಯ : "(ದುಗುಡದಿಂದ): ಗುರುಗಳೇ, ಏನೇನೋ ಹೇಳುತ್ತಾ ನನ್ನ ಸ್ವರೂಪದ ವಿಷಯಕ್ಕೆ ನಿರ್ಬಂಧ ಹಾಕಿಬಿಟ್ಟಿರಿ !"

ಅಗಸ್ತ್ಯ : "ಅದಕ್ಕೇ ನಾನು ಹೇಳಿದ್ದು. ಯೋಚಿಸು, ಪಾಗ್ದಾನ ಮಾಡು ಎಂದು. ಈಗಲೂ ಯೋಚಿಸು," (ವಿಂಧ್ಯ ಯೋಚಿಸಿದ ! ಮಹರ್ಷಿ ಹೇಳಿದಂತೆ ಕೇಳದಿದ್ದರೆ ಸೂರ್ಯ ಚಂದ್ರರಿರುವ ತನಕ ತನಗೆ ಅಕೀರ್ತಿ; ಕೇಳಿದರೆ, ತನ್ನ ಮಹತ್ವಾಕಾಂಕ್ಷೆಯ ವಿನಾಶ !.... ತುಂಬ ಚಿಂತಿಸಿ, ಹೀಗೆನ್ನುತ್ತಾನೆ.)

ವಿಂಧ್ಯ : "ನಿಮ್ಮ ಅಪ್ಪಣೆಯನ್ನು ಪಾಲಿಸುವೆ, ಹೇಳಿ".

ಅಗಸ್ತ್ಯ : "ನೀನು ನನಗೆ ನಮಸ್ಕರಿಸಬೇಕು. ಸಾಷ್ಟಾಂಗವಾಗಿ– ಪೂರ್ವಕ್ಕೆ ತಲೆ ನೀಡಿ, ಪಶ್ಚಿಮಕ್ಕೆ ಪಾದ ನೀಡಿ, ಮೈಯ್ಯೆಲ್ಲಾ ಭೂ ಸ್ಪರ್ಶವಾಗುವಂತೆ ನಮಸ್ಕರಿಸಬೇಕು. ನಾನು ನಿನ್ನನ್ನು ಥಾಟಿ ದಕ್ಷಿಣ ಯಾತ್ರೆ ಮಾಡಿ ಬರುವ ತನಕ ಹಾಗೇ ಮಲಗಿರಬೇಕು".

ವಿಂಧ್ಯ : "ತಥಾಸ್ತು" ಎಂದ. ಅಗಸ್ತ್ಯರ ಯೋಗಸಮಾಧಿ ಭಂಗವಾಯಿತು! ಪರಶುರಾಮರು ಎದುರಿಗೆ ನಿಂತಿದ್ದರು.

ಪರಶುರಾಮರು : "ಒಂದಂತೂ ನಿಶ್ಚಿತವಾಯಿತಲ್ಲ! ಆ ಇನ್ನೊಂದು ಯಾವಾಗ ?"

ಅಗಸ್ತ್ಯ : "ರಾತ್ರಿ ಹನ್ನೆರಡಕ್ಕೆ ಸರಿಯಾಗಿ, ತಾವು ಪಶ್ಚಿಮದ ಸಿಂಧುಸಾಗರದತ್ತ ತಿರುಗಿ, ನಿಮ್ಮ ಗಂಡುಗೊಡಲಿಯನ್ನು ಬೀಸಿ, ಪಶ್ಚಿಮಕ್ಕೆ, ಭಾರತದ ಸಾಗರದಂಚಿನಲ್ಲಿ ಗೋಡೆಯಂತಿರುವ ಸಹ್ಯಾದ್ರಿಯ ಆಚೆಗೆ ಬೀಳುವಂತೆ ಎಸೆಯಬೇಕು!"

ರಾಮ : "ಎಸೆದರೆ ? "

ಅಗಸ್ತ್ಯ : "ಸ್ವಾಮಿಕಾರ್ಯ, ಸ್ವಕಾರ್ಯ ಎರಡೂ ಒಟ್ಟಿಗೇ ಆಗುತ್ತವೆ."

ರಾಮ : "ನಾನು ನಿರಾಯುಧನಾಗಬೇಕೇ ?"

ಅಗಸ್ತ್ಯ : "ಬೇಡ ! ನನ್ನನ್ನನುಗ್ರಹಿಸುವಾಗ ತಾವು ವೈಷ್ಣವ ಧನುಸ್ಸನ್ನೂ ವೈಷ್ಣವಾಸ್ತ್ರವನ್ನೂ ಸಹ ನನಗೆ ಇತ್ತಿದ್ದಿರಿ" (ಧ್ಯಾನಿಸುತ್ತಾರೆ. ಅವು ಪ್ರತ್ಯಕ್ಷವಾಗಿ ಮಹರ್ಷಿಯ ಕೈಗೆ ಬರುತ್ತವೆ.) ಅವನ್ನು ತಾವೇ ಇನ್ನೂ ಕೊಂಚಕಾಲ ಧರಿಸಬೇಕು. ತಮ್ಮ ಮುಂದಿನ ಅವತಾರಿಗೆ ತಾವೇ ಕೊಡಲು ಉಪಯುಕ್ತವಾಗುತ್ತವೆ. ನನ್ನ ಕೈಗೆ ಬರಲು ತಾವು ಸಂಕಲ್ಪಿಸಿದಾಗ ಮತ್ತೆ ಬರಲಿ. ಆಗ ನಾನು ಮಾಡಬೇಕಾದುದನ್ನು ತಮ್ಮ ಚಿತ್ತದಂತೆ ಮಾಡುವೆ."

ರಾಮ ; "ಆಮೇಲೆ ?"

ಅಗಸ್ತ್ಯ ; "ಆಮೇಲೆ ಎಲ್ಲವೂ ಸುಗಮ ! ವಿಂಧ್ಯ ನಮಸ್ಕರಿಸು ತ್ತಾನೆ ! ತಮಗೆ ವಾಸಸ್ಥಾನವೂ ಲಭಿಸುತ್ತದೆ !"

ರಾಮ ; "ಹಾಗೇ ಆಗಲಿ ! ಇನ್ನು ಉಪಾಸಕನ ಚಿತ್ತಕ್ಕೆ ಬಗ್ಗಬೇಕಾಗಿದೆ ! ಉಪಾಸ್ಯನಿಗೆ ಸ್ವಾತಂತ್ರ್ಯವೆಲ್ಲಿ ?"

ಅಗಸ್ತ್ಯ : "ನನ್ನ ಚಿತ್ತದಲ್ಲಿ ತಮ್ಮ ಚಿಂತನೆಯನ್ನೇ ಬಿತ್ತಿ, ತಾವು ಮಾಡಬೇಕಾದುದನ್ನು ನನ್ನ ಕೈಲಿಮಾಡಿಸುವುದೇ ಆ ಸ್ವಾತಂತ್ರ್ಯ !"

* * *

ಅರ್ಧರಾತ್ರಿಗೆ ಸರಿಯಾಗಿ, ಆಶ್ರಮದ ಉನ್ನತ ಪ್ರದೇಶದಿಂದ ಪರಶುರಾಮರು ಗಂಡುಗೊಡಲಿಯನ್ನು ಬೀಸಿ ಸಿಂಧುಸಾಗರದತ್ತ ಎಸೆದರು ! ಒಂದೇ ಕ್ಷಣ, ಆ ಕಾರ್ಗತ್ತಲೆಯೆಲ್ಲೂ ಚಂದ್ರಪ್ರಕಾಶ ಮಿಂಚಿ, ಹಾರುವ ಆ ಕೊಡಲಿಯನ್ನು ವಜ್ರಾಯುಧದಂತೆ ಬೆಳಗಿಸಿ ತೋರಿತು.

ಅಗಸ್ತ್ಯರು ಮತ್ತೆ ಯೋಗದಲ್ಲಿಳಿದು "ವಿಂಧ್ಯ ! ನಮಸ್ಕರಿಸು ! ಬೇಗ" ಎಂದರು. ಗಗನ ಚುಂಬಿಯಾಗಿ ಬೆಳೆದಿದ್ದ ಪರ್ವತ ದಿಢೀರನೆ ಕುಸಿದು ಅದರ ಶಿಖರ ದಕ್ಷಿಣದತ್ತ ಬಿದ್ದು ಭೂಕಂಪ ಆಯಿತು ! ಆಶ್ರಮಸ್ಥರೆಲ್ಲ ಭಯಭ್ರಾಂತರಾಗಿ ಎದ್ದು ಏನೂ ತಿಳಿಯದೆ ಅತ್ತಿಂದಿತ್ತ, ಇತ್ತಲಿಂದತ್ತ ಓಡಾಡಿದರು ! ಕತ್ತಲೆಯಲ್ಲಿ ಏನೂ ತಿಳಿಯಲಿಲ್ಲ !

ಬೆಳಗಾಯಿತು ! ಮಳೆ ನಿಂತಿತು ! ಕಾರ್ಮೋಡಗಳು ಚೆದುರಿದ್ದವು ! ಕರಾವಳಿಯ ಉದ್ದಕ್ಕೂ ಒಂದು ಪಟ್ಟಿಯಂತೆ, ಸಹ್ಯಾದ್ರಿಯ

ಪಶ್ಚಿಮಕ್ಕೆ ಒಂದು ಸಮೃದ್ಧ ಭೂಪ್ರದೇಶವು ಹೊಸದಾಗಿ ಭೂಮಿಯ ಮೇಲೆ ಕಾಣಲಾರಂಭಿಸಿತ್ತು !! "ಇದೇನು ಯುಗಪ್ರಳಯವೋ ?" ಎಂದು ಎಲ್ಲರೂ ವಿಸ್ಮಿತರಾದರು.

ಇತ್ತ ವಿಂಧ್ಯಪರ್ವತ ಕುಸಿದು, ಅದರ ದೀರ್ಘಶರೀರವಲ್ಲಿ ಅಲ್ಲಲ್ಲಿ ಕಣಿವೆಗಳು ಕಾಣಬಂದವು, ಪಲವು ಹೊಸ ನದಿಗಳೂ ಹರಿಯ ಲಾರಂಭಿಸಿದವು.

ಅಗಸ್ತ್ಯರು : "ವಿಂಧ್ಯ ! ನೆನಪಿರಲಿ ! ಹೋಗಿಬರುತ್ತೇನೆ. ನಾನು ಬರುವ ತನಕ ಹಾಗೇ ವಿಶ್ರಮಿಸಿರು. ಇದು ನನಗೆ ಶಾಶ್ವತ ನಮಸ್ಕಾರ. ಇಂತಹುದನ್ನು ಯಾರೂ ಈ ವರೆಗೆ ಮಾಡಿಲ್ಲ ! ಮುಂದೆ ಮಾಡಲಾರರು ! ನೀನು ತುಂಬಾ ಕೀರ್ತಿವಂತನಾದೆ ! ಹಿಮವಂತನಿಗಿಲ್ಲದ ಭಾಗ್ಯ ಇದು !'' ಎಂದು ಮನಃಪೂರ್ವಕವಾಗಿ ಆಶೀರ್ವದಿಸಿದರು. ಸೂರ್ಯ ಉದಿಸುತ್ತಿದ್ದ.



## ೧೬. ದಕ್ಷಿಣದತ್ತ ಅಗಸ್ತ್ಯರ ಯಾತ್ರೆ

ಪರಶುರಾಮರು ಅಗಸ್ತ್ಯರನ್ನು ಕೊಂಡಾಡಿ, ದಾಲ್ಭ್ಯರಿಗೂ ಆಶ್ರಮದ ಇತರ ಹಿರಿಯರಿಗೂ ಶುಭಕೋರಿ ತಾವು ಹೊಸದಾಗಿ ಸಂಪಾದಿಸಿದ್ದ ಕರಾವಳಿಯತ್ತ ಪಯಣ ಹೊರಟರು. ಸರಸ್ವತೀ ನದೀ ತೀರದಿಂದ ಅವರನ್ನು ಹಿಂಬಾಲಿಸಿದ್ದ ಅಸಂಖ್ಯಾತ ನಿರಾಶ್ರಿತ ಬ್ರಾಹ್ಮಣರೂ, ಗೌರವದಿಂದ ಬಂದಿದ್ದವರೂ, ಮಗಧ, ಮಾಳವಾದಿ ದೇಶಗಳಿಂದ ಬಂದಿದ್ದವರೂ, ಇತರ ಹವ್ಯಕರೂ ಅವರೊಡನೆ ಹೊರಟೇ ಬಿಟ್ಟರು. ಹೊರಡುವ ಮುನ್ನ "ಅಗಸ್ತ್ಯರೇ ! ಈ ಪ್ರದೇಶದಲ್ಲಿ ಯಕ್ಷ–ರಾಕ್ಷಸ–ನಿರ್ಋತರ ಪ್ರವೇಶವಾಗದಂತೆ ನಾನು ನೋಡಿಕೊಳ್ಳುತ್ತೇನೆ. ನಿಮ್ಮ ದಕ್ಷಿಣಯಾತ್ರೆ ಲೋಕಕ್ಕೆ ಹಿತವಾಗಲಿ. ಕರಾವಳಿಗೂ ಒಮ್ಮೆ ದಯಮಾಡಿಸಬೇಕು" ಎಂದರು. ಅಗಸ್ತ್ಯರು "ಒಮ್ಮೆ ದಕ್ಷಿಣಕ್ಕೆ ನಾನು ಬಂದರೆ ಮುಗಿಯಿತು ! ಇನ್ನೆಂದೂ ಉತ್ತರಕ್ಕೆ ಮರಳಲಾರೆ ! ಕರಾವಳಿಯ ನನ್ನ ಸಂಚಾರವನ್ನು ದೇವರು ನನ್ನ ತಲೆಯಲ್ಲಿ ಬರೆದಿದ್ದರೆ, ನೋಡೋಣ ! ಪಂದೂ ಅವತಾರಿಯೇ ಅಲ್ಲಿ ಶಾಶ್ವತವಾಗಿ ನೆಲೆಸುವಾಗ ಅಲ್ಲಿ ನನ್ನ ಕೆಲಸವೇನು ?" ಎಂದು ವಿನಯದಿಂದ ಉತ್ತರಿಸಿದರು.

* * *

ವಿಂಧ್ಯನ ಪತನ (ಅದನ್ನು ವೈದಿಕರು ನಮನ ಎಂದೇ ಕರೆದರೂ ಸಹ !) ಆಶ್ರಮಸ್ಥರೆಲ್ಲರಿಗೆ ಪರಮಾಶ್ಚರ್ಯವನ್ನೇ ಉಂಟು ಮಾಡಿತ್ತು ! ಅದರ ದಕ್ಷಿಣ ಪಾರ್ಶ್ವದಲ್ಲಿ ಇಲ್ವಲ ಏರ್ಪಡಿಸಿದ್ದ ಅಸಂಖ್ಯ

ಋಷಿಪೀಡನ ಶಿಬಿರಗಳೂ, ಕೇಂದ್ರಗಳೂ ಧ್ವಂಸವಾಗಿದ್ದುವು. ಮಣಿಮತೀ ಪುರಿಯಲ್ಲಿಯೂ, ಭೂಕಂಪನವಾಗಿತ್ತು. ಇಲ್ವಲನಿಗೆ ಏನೆಂದು ತಿಳಿಯಲೇ ಇಲ್ಲ! ಕ್ರಮವಾಗಿ ವಿಂಧ್ಯಪರ್ವತ ಕುಸಿದ ಕಥೆಯನ್ನು ಚಾರರು ಹೇಳಲಾರಂಭಿಸಿದರು! ಇಲ್ವಲ ನಂಬಲಿಲ್ಲ! ಪರ್ವತ ಕುಸಿಯುವುದೆಂದರೇನು!! ಇದರಲ್ಲೂ ಏನೋ ಮೋಸವಿರಬೇಕೆಂದು ಕಲ್ಪಿಸಿಕೊಳ್ಳಲು ಹೊರಟ. ಆದರೆ ಇದು ಅವನ ಕಲ್ಪನೆಯನ್ನೂ ಮೀರಿದ ವಿಷಯವಾಗಿದ್ದು, ಅದು ಸುಲಭವಾಗದೆ, ತಲೆಯೇ ಕೆಡುವಂತಾಯಿತು.

ಅಗಸ್ತ್ಯಾಶ್ರಮಕ್ಕೆ (ಅಗಸ್ತ್ಯ ಸ್ವಾಗತಕ್ಕೆಂದು ದಾಲ್ಭ್ಯಾಶ್ರಮಕ್ಕೆ) ಹೋಗಿದ್ದ ತಮ್ಮ ಕಡೆಯ ಬ್ರಾಹ್ಮಣರು ವಾಪಸ್ಸು ಬಂದರು. ನಡೆದುದನ್ನೆಲ್ಲ ಹೇಳಿದರು! ಇಲ್ವಲನಿಗೆ ಯಾವುದನ್ನೂ ನಂಬುವ ಶಕ್ತಿಯೇ ಹಾಳಾಗಿ ಹೋಗಿತ್ತು!

“ಏನಿರಯ್ಯ! ಇವತ್ತು ‘ಅಗಸ್ತ್ಯ, ಪರ್ವತವನ್ನು ತಗ್ಗಿಸಿದ. ಎನ್ನುತ್ತೀರಿ! ನಾಳೆ ‘ಸಮುದ್ರದನ್ನೇ ಕುಡಿದ’ ಎನ್ನುವಿರಿ!! ನಾಳಿದ್ದು ‘ಆಕಾಶವನ್ನೆ ಉರುಳಿಸಿದ’ ಎನ್ನುತ್ತೀರಿ!! ಇದೆಲ್ಲ ಮನುಷ್ಯ ಸಾಧ್ಯವಾದ ಕೆಲಸಗಳೇ? ಇದರಲ್ಲಿ ಆ ಬ್ರಾಹ್ಮಣನ ಮೋಸವೇನೋ ಇರಲೇಬೇಕು” ಎಂದು ಇಲ್ವಲ ರೇಗಾಡಿದ.

ವಾತಾಪಿಯನ್ನು ಕರೆದು, ಇನ್ನೂ ದಕ್ಷಿಣದ ದ್ರವಿಡದೇಶದ ಅರಸು ಕುಮಾರವರ್ಮನ ಆಸ್ಥಾನಕ್ಕೂ, ಪಾಂಡ್ಯದ ಇಂದ್ರದ್ಯುಮ್ನನ ಆಸ್ಥಾನಕ್ಕೂ ಹೋಗಿ ಒಂದು ಕೆಲಸಮಾಡಿಕೊಂಡು ಬರಲು ಸೇನೆಯೊಡನೆ ಕಳುಹಿದ. ಕಿಷ್ಕಿಂಧೆಯ ಅರಸು ಋಕ್ಷರಜಸ್ಸು ತಾನು ತಟಸ್ಥನಾಗಿ ಉಳಿಯುವುದಾಗಿ ಆಗಲೇ ಹೇಳಿ ಕಳುಹಿದ್ದ. ಇಲ್ವಲನ ಪುರೋಹಿತ ಪುತ್ರರು ಈ ವಿಷಯವಲ್ಲಿ ಬರೀಗೈಯಿಂದ ಬಂದಾಗಿತ್ತು! ಇನ್ನು ಅರಣ್ಯವಾಸಿಗಳ ಮುಖಂಡ

ರನ್ನು ಇಲ್ವಲ ತನ್ನ ಆಸ್ಥಾನಕ್ಕೇ ಕರೆಸಿದ. ಭಿಲ್ಲ, ಗೊಂಡ, ಮುಂಡ, ಸಂತಾಲ, ಕೋಲ ಮುಂತಾದ ಬುಡಕಟ್ಟುಗಳ ಮುಖಂಡರು ನೇರಿ ದರು. ಇಲ್ವಲ ಆರಂಭಿಸಿದ:

"ವೀರನಾಯಕರೇ ! ನಡೆಯಲಸಾಧ್ಯವಾದುದು ನಡೆದುಹೋಗಿದೆ. ನಮ್ಮ ರಾಜ್ಯಗಳ ಉತ್ತರಗಡಿಯುಂತ್ತಿದ್ದ ವಿಂಧ್ಯನನ್ನು ಅಗಸ್ತ್ಯರೂ. ಈ ಉತ್ತರದವರೂ ಮೋಸದಿಂದ ಸ್ಫೋಟಗೊಳಿಸಿದ್ದಾರೆ ! ದಕ್ಷಿಣದತ್ತ ಅವರ ದಾರಿ ಈಗ ಸುಗಮವಾಗಿದೆ. ನಾವು ನೆಮ್ಮದಿಯಿಂದ ನಮ್ಮಿಷ್ಟಕ್ಕೆ ಬಾಳಿ ಬದುಕಲು ಇವರು ಇನ್ನು ಬಿಡುವವರಲ್ಲ. ಉತ್ತರದಲ್ಲೇ ಇದ್ದ ನಮ್ಮವರು ಈ ಆರ್ಯರೆಬುಂವರ ಆಕ್ರಮಣದ ದೆಸೆಯಿಂದಲ್ಲವೆ, ಕ್ರಮೇಣ ಹಿಮ್ಮೆಟ್ಟುತ್ತಾ ಈಗ ದಕ್ಷಿಣಕ್ಕೆ ಬಂದಿರುವುದು ? ಇವರ ಗೂಢಚಾರರಾದ ಋಷಿಗಳೆಂಬುವರು ವಾಮಾಚಾರಿಗಳು, ಮಾಂಸಾಹಾರಿ ಗಳು. ಧಾರ್ಮಿಕರ ವೇಷ ಹಾಕಿದ ಇವರಿಗೆ ಸೈನ್ಯಶಿಕ್ಷಣ ಏತಕ್ಕೆ ? ಮೋಸಕ್ಕೆ ಇದೇ ಸಾಕ್ಷಿ ಸಾಲದೆ ? ಯಜ್ಞ, ಯಾಗ, ಅಗ್ನ್ಯುಪಾಸನೆ, ಎಂಬುದೆಲ್ಲ ಮೋಸ; ಅದೂ ಹಿಂಸಾಚಾರವೇ ! ಉತ್ತರದ ಕ್ಷತ್ರಿಯ ರನ್ನು ಪರಶುರಾಮ ಹೇಗೆ ನಿರ್ದಯವಾಗಿ ಕೊಂದ, ನೋಡಿದಿರಾ ? ಈಗವನು ನಮ್ಮ ದಕ್ಷಿಣಕ್ಕೇ ಬಂದು ನಮ್ಮ ಪ್ರಾಂತಗಳನ್ನೆಲ್ಲ ಸುತ್ತಿ ಬಳಸಿ ಒಂದು ಹೊಸ ಪ್ರದೇಶವನ್ನೇ ಭೂಮಿಯಿಂದೆತ್ತಿದ್ದಾನಂತೆ ! ಇದು ಮೋಸವಲ್ಲವೇ ? ಇದೂ ಸಾಧ್ಯವೇ ? ಸಹ್ಯಾದ್ರಿಯ ಶ್ರೇಣಿಗಳಲ್ಲಿ ಎಲ್ಲೋ ಅಡಗಿಕೊಂಡು ನಮ್ಮ ಮೇಲೆ ಧಾಳಿಮಾಡಲು ಹೊಂಚು ಹಾಕಲು ಇದೂ ಒಂದು ಮೋಸ ! ಇನ್ನು ಅಗಸ್ತ್ಯ ! ವಿದರ್ಭ ರಾಜಕುಮಾರಿಯನ್ನು ಕೆಡಿಸಿದ ! ನಮ್ಮ ವಶವಾಗಬೇಕಿದ್ದ ಆ ಪಕ್ಷಿ ಈಗ ಪಂಜರಸೇರಿ, ಬ್ರಾಹ್ಮಣನ ಅರಗಿಣಿಯಾಗಿದೆ ! ಈ ಕಪಟಿ ಅಗಸ್ತ್ಯ ಉತ್ತರದ ಎಷ್ಟೊಂದು ವಿವಾಹಿತ ರಾಜಮಹಿಷಿಯರನ್ನು 'ನಿಯೋಗ'ದ ಹೆಸರಿನಲ್ಲಿ ಬ್ರಾಹ್ಮಣರಿಂದ ಕೆಡಿಸಿದ, ಕೇಳಿದಿರಾ ? ಇದೆಲ್ಲಾ ಧರ್ಮ

ಶಾಸ್ತ್ರದಲ್ಲಿ ಅಪಧ್ವರ್ಮವಂತೆ ! ನಮ್ಮಲ್ಲಿ ಈ ಬಗೆಯ ದುರಾಚಾರ ವನ್ನೆಂದಾದರೂ ಕೇಳಿರುವಿರಾ ? ನೋಡಿರುವಿರಾ ? ಇನ್ನು ಅಗಸ್ತ್ಯನೊಡನೆ ನೀವೆಲ್ಲ ಪ್ರಕಟವಾಗಿಯೇ ಹೋರಾಡಬೇಕಾಗುತ್ತದೆ ! ನಾನು ಅವನನ್ನು ನನ್ನ ರಾಜಧಾನಿಗೆ ಉಪಾಯದಿಂದ ಕರೆಸುತ್ತೇನೆ. ಮಾರ್ಗಮಧ್ಯದಲ್ಲೇ ಅವನ ದೊಡ್ಡ ಸೈನ್ಯದ ತುಕಡಿಗಳನ್ನು ಅಲ್ಲಲ್ಲೇ ಉಪಾಯಗಳಿಂದ ಸಂಹರಿಸಿ; ಅಡವಿಯಲ್ಲಿ ಕಣ್ಣುಮರೆಸಿ ತಪ್ಪಿಸಿಕೊಳ್ಳಿ. ಅವನಲ್ಲಿ ಮಾಯಾವಿದ್ಯೆಗಳೂ ಇವೆ; ಅವನ ವೀರರು ಕ್ರೂರಿಗಳು; ಅವನ ಕಡೆಯ ಸ್ತ್ರೀಯರನ್ನೂ ನಿರ್ದಾಕ್ಷಿಣವಾಗಿ ಕೊಲ್ಲಿರಿ ! ಯಾವ ಪುರುಷ ರಿಗೂ ಇವರ ಶಕ್ತಿಗಳು ಕಡಿಮೆ ಇಲ್ಲ ! ಈ ದುಷ್ಟ ಸಂಸ್ಕೃತಿಯನ್ನು ಹೇಗೂ ದಕ್ಷಿಣಕ್ಕೆ ಇಳಿಯ ಬಿಡಬಾರದು.” ಎಂದು ತನ್ನ ಅಳಲನ್ನೂ, ಆಕ್ರೋಶವನ್ನೂ ತುಸು ದೀರ್ಘವಾಗಿಯೇ ತೋಡಿಕೊಂಡ !

ಭಿಲ್ಲರ ನಾಯಕ ಹೇಳಿದ ; “ಮಹಾರಾಜರೇ ! ಈಗ ನಿಮ್ಮಲ್ಲೇ ಇರುವ ಬ್ರಾಹ್ಮಣರೂ ಅಗಸ್ತ್ಯರಂತೆ ಉತ್ತರದವರೇ ಅಲ್ಲವೇ ? ಅವರನ್ನೇನು ಮಾಡುವಿರಿ ? ಅಥವಾ ಇವರೂ ದಕ್ಷಿಣದವರೇ ಹೌದೋ ? ನಿಮ್ಮ ರಾಜಗುರುಗಳೂ ಬ್ರಾಹ್ಮಣರಲ್ಲವೇ ?”

ಇಲ್ವಲ : “ಕಾಡು ಆನೆಗಳಿಗೂ ಪಳಗಿದ ಆನೆಗಳಿಗೂ ವ್ಯತ್ಯಾಸ ವಿಲ್ಲವೇ ? ಹಾಗೆ ಇರುವ ಇವರಿಂದ ನಮಗೇನೂ ಅಪಾಯ ವಿಲ್ಲ ! ”

ಗೊಂಡ, ಮಲ್ಲ, ಜಲ್ಲ, ಮುಂಡ, ಕೋಲ, ಸಂತಾಲ ನಾಯಕರಿಗೆ ಮತ್ತೆ ಇಲ್ವಲ ಹೇಳಿದ : “ನೀವು ಪೂಜಿಸುವ ದೇವತೆಗಳಿಗೂ ನಿಮ್ಮ ಆಚಾರವಿಚಾರಗಳಿಗೂ ಇನ್ನು ಉಳಿಗಾಲವಿಲ್ಲ ! ಅಗಸ್ತ್ಯ ನಿಮ್ಮನ್ನು ಜೀವಸಹಿತ ಬಿಟ್ಟರಲ್ಲವೆ ಆಚಾರವಿಚಾರಗಳ ಉಳಿವು ? ಬೇಗನೆ

ಆವನನ್ನೂ ಅವನ ಕಡೆಯುವರನ್ನೂ ಮುಗಿಸಿ; ಯಾವ ದಾರಿಯಿಂದಾದರೂ ಸರಿ."

* * *

ದ್ರಮಿಡದೊರೆ ಕುಮಾರವರ್ಮನ ಆಸ್ಥಾನದಲ್ಲಿ ವಾತಾಪಿ ಅಣ್ಣನ ಸಂದೇಶಹೊತ್ತು ಹೋಗಿದ್ದ. ಶಿವಗುರುಗಳು ಸಭೆಯಲ್ಲಿ ಆಸೀನರಾಗಿದ್ದು ಅವನ ಮಾತುಗಳನ್ನು ಅಕ್ಕರೆಯಿಂದ ಕೇಳುತ್ತಿದ್ದರು. ವಾತಾಪಿಯ ವಾಕ್‌ಸರಣಿ ಹೀಗಿತ್ತು, "ಭಾಷೆ, ವೇಷ, ಭೂಷಣ, ಆಚಾರ, ವಿಚಾರ–ಯಾವುದರಲ್ಲೂ ಉತ್ತರದವರಿಗೂ ನಮಗೂ ತಾಳೆ ಇಲ್ಲ! ಅವರಿಲ್ಲಿ ಬರಬೇಕಾದ ಪ್ರಮೇಯವೇನು? ಅಗಸ್ತ್ಯನ ಈ ಯಾತ್ರೆಯಲ್ಲಿ ಮೋಸದ ಉದ್ದೇಶವೇ ಇದೆ! ದೊಡ್ಡ ಸೈನ್ಯ ಬೇರೆ ಅವನೊಡನೆ ಬರುತ್ತಿದೆಯಂತೆ! ಋಷಿಯಾದವನಿಗೆ ಅಧ್ಯಾತ್ಮ ಬಿಟ್ಟು ಈ ಸೈನ್ಯ ಕಟ್ಟುವ ಕೆಲಸವೇಕೆ? ಪರಶುರಾಮರು ಉತ್ತರದಲ್ಲಿ ಮಾಡಹೊರಟಿರುವುದನ್ನೇ ಈ ಕಪಟೀ ಕುಳ್ಳಪುರುಷ ದಕ್ಷಿಣದಲ್ಲೂ ಮಾಡ ಬರುತ್ತಿದ್ದಾನೆ. ಆದ್ದರಿಂದ ದಕ್ಷಿಣದ ಎಲ್ಲರೂ ಒಗ್ಗೂಡಿ ಅವರನ್ನು ಎದುರಿಸಬೇಕಾದ್ದು ಕರ್ತವ್ಯ. ಅರಣ್ಯವಾಸಿಗಳು ಸದ್ಯಕ್ಕೆ ಆ ದುಷ್ಟ ಸೈನ್ಯವನ್ನೆದುರಿಸುತ್ತಾರೆ. ಮುಂದಿನ ಸರದಿ ನಮ್ಮದು. ಕಿಷ್ಕಿಂಧೆಯ ಮೂರ್ಖ ಮುದುಕ ಅರಸು ತಟಸ್ಥನಾಗಿರುವನಂತೆ! ನೀವೂ ಪಾಂಡ್ಯರೂ ಸೇರಿಕೊಂಡರೆ ಉತ್ತಮ. ಲಂಕೆಯ ಕುಬೇರನೂ ತಟಸ್ಥನಾಗಬಹುದು. ಪುಲಸ್ತ್ಯ ವಂಶಜರು ರಾಕ್ಷಸರಾದರೂ ಸದ್ಯ ಎಲ್ಲೋ ಬೇರೆ ದ್ವೀಪಾಂತರಗಳಲ್ಲಿ ಅಡಗಿದ್ದಾರೆ. ಆವರಿಂದ ನಮಗೆ ಸಹಾಯ ಈಗ ದುರ್ಲಭ. ಅಗಸ್ತ್ಯನು ಉತ್ತರದಿಂದಲೂ ಪರಶುರಾಮ ಪಶ್ಚಿಮದಿಂದಲೂ ಕೂಡಿಕೊಂಡು ನಮ್ಮ ಮೇಲೆರಗಿದರೆ, ನಮಗೆ ಗಂಗಾಸಾಗರವೇ ಗತಿ. ಅದರೊಳಗೆ ನಮ್ಮ ಯತ್ನ ಮಾಡಬೇಕು"

ದೊರೆ ವಿಚಾರಮಾಡಿ ಹೇಳುವುದಾಗಿ ತಿಳಿಸಿದ. ವಾತಾಪಿ ಪಾಂಡ್ಯದೇಶದತ್ತ ಕುದುರೆ ಹೊರಳಿಸಿದ.

*　　*　　*

ಸಭೆಯಲ್ಲಿ ಭಿಲ್ಲರ ಮುಖಂಡ ಇಲ್ವಲನನ್ನು ಪ್ರಶ್ನಿಸಿದ್ದು ಆಶ್ಚರ್ಯವಾಯಿತು ! ಇಲ್ವಲನನ್ನು ಯಾರೇ ಆಗಲೀ. ಪ್ರಶ್ನಿಸುವು ದೆಂದರೇನು ? "ನಿಮ್ಮಲ್ಲಿರುವ ಬ್ರಾಹ್ಮಣರೂ ಉತ್ತರದವರೇ ಅಲ್ಲವೆ?" ಎಂದನಲ್ಲ ! ಏನರ್ಥ ? ಶುಕ್ರನ ಬಗೆಗೂ ಅವನೂ ವ್ಯಂಗ್ಯವಾಡಿದನಲ್ಲ ! ಅದರರ್ಥವೇನು ?

ಇಲ್ವಲನಿಗೆ ಅನುಮಾನ ಬಂದಿತು. ಹಳೆಯ ಸೇನಾನಿ ವಿಪ್ರಚಿತ್ತಿ ವಿದರ್ಭದ ಮುತ್ತಿಗೆಯಲ್ಲಿ ಸತ್ತಿದ್ದ. ಆ ಜಾಗಕ್ಕೆ ಈಗ ಮಣಿಗ್ರೀವ ನೆಂಬುವವನ್ನು ನೇಮಿಸಲಾಗಿತ್ತು. ಇಲ್ವಲ ಇವನನ್ನು ಕರೆದು "ಈ ಭಿಲ್ಲಮುಖಂಡನ ಚಲನವಲನಗಳನ್ನು ಪರೀಕ್ಷಿಸು. ಇಲ್ಲಿಂದ ಎಲ್ಲಿಗೆ ಹೋಗುವನೆಂಬುದನ್ನೂ ಅಲ್ಲಿ ಏನೇನು ಮಾಡುವನೆಂಬುದನ್ನೂ ಪರೀಕ್ಷಿಸುವಂತೆ ಭಟರಿಗೆ ಹೇಳು. ಬೇಗ ಸಮಾಚಾರ ಬರಲಿ" ಎಂದ: ಮಣೀಗ್ರೀವ ನಾಲ್ವರು ಅನುಚರರನ್ನು ಕಾವಲು ಹಾಕಿದ. ಭಿಲ್ಲ ಮುಖಂಡ ಒಂದು ದಿನ ಮಣಿಮತೀಪುರಿಯಲ್ಲೇ ಇದ್ದು, ಮರುದಿನ ಸೂರ್ಯೋದಯಕ್ಕೆ ಮುಂಚೆಯೇ ಅಡವಿಯ ತನ್ನವರ ತಾಣದತ್ತ ಧಾವಿಸಿದ. ಮಣಿಗ್ರೀವನ ಅನುಚರರು ವನವಾಸಿಗಳಂತೆಯೇ ವೇಷ ಭೂಷಣಧರಿಸಿ, ಅವನಿಗೆ ಸುಳಿವು ಸಿಗದಂತೆ ಬಹೂದೂರ ಅನುಸರಿಸಿದರು.

ಭಿಲ್ಲಮುಖಂಡ, ತನ್ನ ತಾಣವನ್ನು ಧಾಟಿ ದಾಲ್ಭ್ಯಾಶ್ರಮದತ್ತ ನಡೆದುದನ್ನು ಕಂಡು ಮಣಿಗ್ರೀವನ ಅನುಚರರಿಗೆ ಸಂದೇಹ ಬಲಿಯಿತು ! ಆಶ್ರಮದ ಹೊರವಲಯದ ಅಡವಿಯಲ್ಲಿ ಅಡಗಿ ಕುಳಿತರು.

ಮುಖಂಡ ಆಶ್ರಮದೊಳಗೆ ಪ್ರವೇಶಿಸಿದ, ಹಿಂದೆ ಮುಂದೆ ನೋಡಿ, ಯಾರೂ ನೋಡುತ್ತಿಲ್ಲವೆಂದು ದೃಢಪಡಿಸಿಕೊಂಡಾಗಿತ್ತು. ಮಣಿಮತೀಪುರಿಯಲ್ಲಿ ಇಲ್ವಲ ನಡೆಸಿದ ಸಭೆಯ ಬಗೆಗೆ, ಅಲ್ಲಿ ಅವನ ಮಾತಿನ ಧೋರಣೆಯ ಬಗೆಗೆ, ಗೊಂಡ, ಮಲ್ಲ ಮೊದಲಾದ ಇತರ ಆರಣ್ಯ ವಾಸೀ ಜನರ ಮುಖಂಡರೂ ಅಲ್ಲಿ ಸೇರಿದ್ದ ಬಗೆಗೆ ಎಲ್ಲ ವಿವರಗಳನ್ನೂ ಭಿಲ್ಲ, ಸ್ವಯಂ ಅಗಸ್ತ್ಯರಿಗೆ ನೀಡಿದ. ಅಗಸ್ತ್ಯರು ಚಾಕ್ರಾಯಣ, ಪ್ರಿಯವ್ರತರನ್ನು ಕರೆಸಿ, ಅವರಿಂದಲೇ ಮತ್ತೆ ಸಮಾಚಾರ ಹೇಳಿಸಿದರು. ಸೋಮಶ್ರವನೂ ಕೇಳಿದ. ಇಂದು ನಾಳೆ ಅಗಸ್ತ್ಯ ಸೈನ್ಯ ದಕ್ಷಿಣದತ್ತ ಹೊರಡುವುದಿತ್ತು. ಈಗ ಬಂದ ಮಾಹಿತಿ ಸಕಾಲಿಕವೂ, ಉಪಯುಕ್ತವೂ ಆಗಿದ್ದು ಮುಂದಿನ ಎಚ್ಚರಿಕೆಗಳನ್ನು ವಹಿಸಲು ತುಂಬಾ ಉಪಯೋಗ ವಾಯಿತು. ಭಿಲ್ಲನನ್ನು ಗೌರವಿಸುವಂತೆಯೂ, ಅವನೂ ಚಾಕ್ರಾಯಣನೂ ಹತ್ತಾರು ಯೋಧರೊಡನೆ, ಸೈನ್ಯದ ಮುಂದುಮುಂದೆ ನಡೆಯುತ್ತಾ ಮಾರ್ಗವನ್ನು ಶುದ್ಧಿ ಮಾಡುವಂತೆಯೂ, ಅಪಾಯಗಳನ್ನು ಮುಂಚಿತ ವಾಗಿ ತಿಳಿಸುತ್ತಿರುವಂತೆಯೂ, ತನ್ನವರನ್ನು ಸದಾ ಸಿದ್ಧರನ್ನಾಗಿರು ವಂತೆಯೂ ಆಜ್ಞಾಪಿಸಿ, ಅವರೆಲ್ಲ ಅಗಸ್ತ್ಯಸೈನ್ಯಕ್ಕೆ ರಹಸ್ಯ ರಕ್ಷಣೆ ಒದಗಿ ಸುತ್ತಾ, ಛಾಯೆಯಂತೆ, ಅಡವಿಯ ಎರಡೂ ಬದಿಗಳಲ್ಲಿ ಹಿಂಬಾಲಿಸಿ ಬರುವಂತೆಯೂ, ಇದಕ್ಕೆ ಪ್ರತಿಯಾಗಿ ಇಡೀ ಭಿಲ್ಲ ಜನಾಂಗಕ್ಕೆ ಅಗಸ್ತ್ಯರಿಂದ ಮುಂದೊಂದು ದಿನ ಪ್ರತ್ಯುಪಕಾರವನ್ನು ಅವರು ನಿರೀಕ್ಷಿಸಬಹುದೆಂದೂ ಅಗಸ್ತ್ಯರು ಸೂಚಿಸಿ, ಚಿಂತಾಮಗ್ನರಾಗಿ, ಪಯಣದ ದಿನವನ್ನು ಕೊಂಚ ಮುಂದೆ ದೂಡಿ. ಅಷ್ಟಷ್ಟು ದೂರದ ಪ್ರಯಾಣದ ಸುರಕ್ಷಿತತೆಯ ಬಗೆಗೆ ಮುಂಗಡ ಸಮಾಚಾರ ಬರುವ ತನಕ ತಮ್ಮ ಸೈನ್ಯ ಮುಂದಡಿಯಿಡು ವುದು ಅಪಾಯಕರವೆಂದು ತೀರ್ಮಾನಿಸಿದರು.

* * *

ಚಾಕ್ರಾಯಣನ ಯೋಧರೂ ಭಿಲ್ಲಮುಖಂಡನೂ ಆಶ್ರಮದಿಂದ

ಆ ರಾತ್ರಿಯೇ ನಿರ್ಗಮಿಸಿದರು. ಮರುದಿನ ಪೌರ್ಣಮಿಯಿತ್ತು ಆದುದ ರಿಂದ ಅರಣ್ಯದಲ್ಲಿ ಬೆಳದಿಂಗಳು ಯಥೇಷ್ಟವಾಗಿ ಹರಡಿತ್ತು. ಇಲ್ವಲನ ದೂತರು ಅಲ್ಲಿ ಅಡಗಿರಬಹುದಾದ ಸಂಭವವನ್ನು ತೀವ್ರವಾಗಿ ನಿರೀಕ್ಷಿ ಸಿರದಿದ್ದರೂ, ಎಂದಿನಂತೆ ಎಚ್ಚರವಾಗಿಯೇ ಎಲ್ಲರೂ ನಿಧಾನವಾಗಿ ಮುಂದುವರೆದರು. ಎರಡು ಮೂರು ಗಳಿಗೆ ನಡೆದಮೇಲೆ ಆಯಾಸ ಹೆಚ್ಚಿ, ಒಂದು ಝರಿಯಲ್ಲಿ ಮೈಕೈತೊಳೆದುಕೊಂಡು, ಮುಖಕ್ಕೊ ನೀರೆರೆಚಿಕೊಂಡು ಆ ಝರಿಯ ದಂಡೆಯಲ್ಲೇ ಹಾಗೇ ಬಿದ್ದುಕೊಂಡು ಆಕಾಶ ನೋಡುತ್ತಾ ಆಯಾಸ ಪರಿಹಾರಕ್ಕೆ ಆರಂಭಿಸಿದ್ದರು! ದೂರದ ಮರದ ಹಿಂದೆ ಯಾವುದೋ ಕಪ್ಪು ನೆರಳು ಆಡಿದಂತಾಯ್ತು! ಬೆಳದಿಂಗಳು ಸಾಂದ್ರವಾಗಿದ್ದುದರಿಂದ ಒಂದು ಸಣ್ಣಪ್ರಾಣಿ ಅಲ್ಲಿ ಅಲುಗಾಡಿದ್ದರೂ ಗಮನಸೆಳೆಯುವಂತೆ ಇತ್ತು. ಭಿಲ್ಲ ಮುಖಂಡ ಜಗ್ಗನೆದ್ದು ಅದೇನೆಂದು ನೋಡಿದ. ಕೊಂಚಹೊತ್ತು ಏನೂ ಕಾಣಲಿಲ್ಲ! ಯಾವ ಸಪ್ಪಳವೂ ಆಗಲಿಲ್ಲ! ಸಂದೇಹ ಬಲವಾದ ಆ ಭಿಲ್ಲ ಸ್ವಯಂ ತಾನೇ ನೋಡಿಬರಲು ಆ ಮರದತ್ತ ಹೋದ! ಉಳಿದವರೂ ಎದ್ದು ಎಚ್ಚರವಾಗಿ ಧನುರ್ಬಾಣಗಳನ್ನು ಸಿದ್ಧಪಡಿಸಿಕೊಂಡರು! ಮರದತ್ತ ಹೋದ ಭಿಲ್ಲ ಕೊಂಚ ಹೊತ್ತಿನಲ್ಲೇ ವಿಕಾರವಾಗಿ ಚೀರಿಕೊಂಡ! ಇಬ್ಬರು ಚಾಕ್ರಾಯಣನ ಶಿಷ್ಯರು ಕೂಡಲೇ ಅತ್ತ ಧಾವಿಸಿದರು! ಆದರೆ ಆ ಹೊತ್ತಿಗೆ ಭಿಲ್ಲಮುಖಂಡನ ಎದೆಯಲ್ಲಿ ಭರ್ಜಿಯೊಂದು ನಾಟಿದ್ದು, ರಕ್ತ ಬುಗ್ಗೆಯಂತೆ ಹೊರ ಬರುತ್ತಿತ್ತು! "ಕೆಲಸ ಕೆಟ್ಟಿತು! ಎಚ್ಚರಿಕೆ" ಎನ್ನುತ್ತಾ, ಅವನು ಕ್ಷಣಮಾತ್ರಲ್ಲೇ ಸತ್ತುಬಿದ್ದ. ಅಷ್ಟರಲ್ಲಿ ಉಳಿದವರು ವಿಭ್ರಾಂತರಾಗಿದ್ದ ಜಾಗೆಯ ಹಿಂಬದಿಯಿಂದ ಇಲ್ವಲನ ಅನುಚರರು ಸಪ್ಪಳವಿಲ್ಲದೆ ಬಂದು ಇನ್ನೂ ನಾಲ್ವರು ಅಗಸ್ತ್ಯಶಿಷ್ಯ ಸೈನಿಕರನ್ನು ಸಂಹರಿಸಿದರು! ಏನೆಂದು ತಿಳಿಯುವ ಮೊದಲೇ ಅನಾಹುತ ನಡೆದು ಹೋಗಿತ್ತು. ಉಳಿದ ಅಗಸ್ತ್ಯ ಶಿಷ್ಯರು ಬಾಣಗಳಿಂದ ಕ್ಷಣಮಾತ್ರದಲ್ಲಿ ಇಲ್ವಲನ ಅನುಚರರಲ್ಲಿ ಮೂವರನ್ನು ಕೊಂದರು.

ಇನ್ನಿಬ್ಬರು ಹೇಗೋ ತಪ್ಪಿಸಿಕೊಂಡು ಆ ಅಡವಿಯಲ್ಲಿ ಮಾಯವಾದರು !

* * *

ಓಡಿಹೋದ ಮಣಿಗ್ರೀವನ ಅನುಚರರು ಭಿಲ್ಲರ ಠಾಣಕ್ಕೆ ಹೋಗಿ, ಅವರ ಮುಖಂಡ ತಮಗೆ ದ್ರೋಹಬಗೆದುದಕ್ಕೆ ಶಿಕ್ಷೆಯಾಗಿ ಪ್ರಾಣ ಕಳಕೊಂಡಿದ್ದನ್ನು ತಿಳಿಸಿ, ಉಳಿದ ಭಿಲ್ಲರನ್ನು ನಾನಾ ಚಿತ್ರಹಿಂಸೆಗಳಿಗೆ ಗುರಿಮಾಡಲಾರಂಭಿಸಿದರು. ಅವರ ಸ್ತ್ರೀಯರ ಮಾನಭಂಗಕ್ಕೆಳೆಸಿ, ಆ ಠಾಣವನ್ನೇ ಸುಡಲೂ ಯತ್ನಿಸಿದರು. ಸಮಯಪ್ರಜ್ಞೆ ಎದ್ದ ಭಿಲ್ಲ ಯುವಕರು ಕ್ಷಣದೊಳಗೇ ಆ ಮಣಿಗ್ರೀವನ ಅನುಚರರನ್ನು ತಲೆ ತುಂಡರಿಸಿ, ತಮ್ಮ ಠಾಣದ ದ್ವಾರದ ತೋರಣಕ್ಕೆ ಕಟ್ಟಿದರು ! ಆದರೆ ನಾಕಷ್ಟು ಹಾನಿಯನ್ನು ಆ ಇಲ್ವಲನ ಅನುಚರರು ಅಲ್ಲಿ ಮಾಡಿಯೇ ನತ್ತಿದ್ದರು.

ಅಗಸ್ತ್ಯಶಿಷ್ಯರು ಈ ಮಣಿಗ್ರೀವನ ಚಾರರನ್ನು ಹುಡುಕಿಕೊಂಡು ಅಲ್ಲಿಗೆ ಬರುತ್ತಾ ನಡೆದುದೇನೆಂಬುದನ್ನು ಊಹಿಸಿದರು. ಠಾಣಕ್ಕೆ ಮುನ್ನೆಚ್ಚರಿಕೆ ಕೊಡುವವೇಳೆಗೆ ಅನರ್ಥ ನಡೆದೇ ಹೋಗಿತು. ಗೋಳಿಡು ತ್ತಿದ್ದ ಆ ವನ್ಯಸ್ತ್ರೀಯರನ್ನು ಅಗಸ್ತ್ಯಶಿಷ್ಯರು ಹೇಗೋ ಸಂತೈಸಿ, ಅಲ್ಲಿನ ಯುವಭಿಲ್ಲರಿಗೆ, ಕೂಡಲೇ ಈ ಸಮಾಚಾರವನ್ನು ತಮ್ಮ ಇತರ ಠಾಣಗಳಿಗೂ ತಿಳಿಸಿ ಎಚ್ಚರಿಸಲು ಕಳುಹಿದರು.

ಅದರಿಂದ ಬಹಳ ಉಪಯೋಗವೂ ಆಯಿತು. ಇಲ್ವಲನ ಸೇನಾನಿಯೂ ಅನುಚರನೂ ಭಿಲ್ಲಮುಖಂಡನನ್ನು ಹೇಯವಾಗಿ ನಡೆಸಿ ಕೊಂಡು, ಅವನನ್ನು ಕೊಂದು ಅವರ ವಾಸಸ್ಥಳಕ್ಕೆ ಬೆಂಕಿಹಚ್ಚಿ ಅವರ ಸ್ತ್ರೀಯರನ್ನು ಕೆಡಿಸಲು ಯತ್ನಿಸಿದ್ದನ್ನು ಪ್ರಚಾರಸಾಧನವನ್ನಾಗಿ ಬಳಸಿ, ಮುಂದೆ ವಿಂಧ್ಯಾಟವಿಯ ಗೊಂಡ, ಮುಂಡೆ, ಸಂತಾಲಾದಿ ಸಕಲ ವನ

ವಾಸೀ ಬಣಗಳಿಗೂ ತಿಳಿಸಿ, ಅವರನ್ನು ಇಲ್ವಲನ ನಿಷ್ಠೆಯಿಂದ ಸೆಳೆದು ಕೊಂಡು ಅಗಸ್ತ್ಯ ಸೈನ್ಯಕ್ಕೆ ಬಳಸಿಕೊಳ್ಳಲು ತುಂಬಾ ಸಾಧನವಾಯಿತು.

ಆಮೇಲೆ ಇತ್ತ ಆಶ್ರಮದತ್ತ ಆ ಶಿಷ್ಯರು ನಡೆದರು. ಆಶ್ರಮ ದಿಂದ ನಡೆದ ಶಿಷ್ಯರು ಒಂದೆರಡು ದಿನಗಳ ತನಕ ಏನೊಂದೂ ಸಮಾಚಾರ ವನ್ನು ತರದೆ, ಮುಂದಿನ ಪಯಣಕ್ಕೆ ಯಾವ ಮುನ್ಸೂಚನೆಯೂ ಬಾರದೆ ಅಗಸ್ತ್ಯರು ಚಿಂತಾಕ್ರಾಂತರಾದರು. ಶಿಷ್ಯರು ಬಂದು ಹೇಳಿದ ಘೋರ ವಾರ್ತೆಯಿಂದ ಆಶ್ರಮದಲ್ಲಿ ಕೊಂಚ ತಲ್ಲಣವೇ ಆಯಿತು ! ವಿಂಧ್ಯಾಟವಿಯ ಸಂಚಾರವನ್ನು ಮಹರ್ಷಿಯೂ ಅವನ ಶಿಷ್ಯರೂ ಅದೇ ಮೊದಲಿಗೆ ಮಾಡುತ್ತಿದ್ದು, ಮಾರ್ಗವಿಲ್ಲದ ತೊಂದರೆ ಒಂದು ಕಡೆ ಆದರೆ, ಅಪರಿಚಿತ ಜನಾಂಗಗಳ ವಿರೋಧವನ್ನೆದುರಿಸಬೇಕಾದ ಅನಿರೀಕ್ಷಿತ ಪ್ರಸಂಗಗಳು ಒಂದು ಕಡೆ ಆಗಿ, ಯಾವ ಯಾವ ತೊಂದರೆಗಳನ್ನು ಎದುರಿಸಬೇಕಾಗಿ ಬರುವುದೆಂಬ ಯಾವ ಪೂರ್ವಸೂಚನೆಯೂ ಇಲ್ಲದೆ. ಅವುಗಳ ನಿವಾರಣೆಗೆ ಸಿದ್ಧರಾಗುವುದೆಂತು ? ಏನೆಂದು, ಯಾವುದಕ್ಕೆಂದು. ಎಲ್ಲೆಲ್ಲಿ, ಹೇಗೆ ಹೇಗೆ ಸಿದ್ಧತೆ ಮಾಡುವುದು ? ಚಾಕ್ರಾಯಣನ ಪಡೆಗಳು ನೇರಯುದ್ಧದಲ್ಲಿ ಚೆನ್ನಾಗಿ ಪಳಗಿ, ವೀರರೂ ಶೂರರೂ ಆಗಿ, ಎಂಥ ವೈರಿಯನ್ನೂ ಎದುರಿಸಬಲ್ಲವರಾಗಿದ್ದೂ, ಈಗ ಈ ಪ್ರಚ್ಛನ್ನ ಯುದ್ಧದಲ್ಲಿ ಪರಿಶ್ರಮವಿಲ್ಲದೇ ಕಾಡುನರಿಗಳಂತೆ ಯಾರ ಯಾರ ತಂತ್ರಗಳಿಗೋ ಬಲಿಯಾಗುವಂತಾದರೆ, ಎಂಥ ಘೋರತೆ ?

ಅಗಸ್ತ್ಯರು ಮತ್ತೆ ಯೋಗಸಮಾಧಿಯಲ್ಲಿ ಕುಳಿತು ಮಹಾದೇವ ಶಂಕರನನ್ನು ಧ್ಯಾನಿಸಿದರು; ಶಂಕರ ಪ್ರತ್ಯಕ್ಷನಾಗಿ ಹೇಳಿದ; ''ಮಹರ್ಷಿ ! ನಾನು ಕೊಟ್ಟ ಭಸ್ಮವನ್ನು ಉಪಯೋಗಿಸು. ಮಾಯಾವಿ ಗಳ ಮಾಯೆ ನಿನ್ನನ್ನೇನೂ ಮಾಡದು ! ಪ್ರಚ್ಛನ್ನ ಯುದ್ಧಕ್ಕೆ ಚಿಂತಿಸ ಬೇಡ ! ಅಡವಿಯ ಜನರೇ ನಿನ್ನ ಸಹಾಯಕ್ಕೆ ಬರುತ್ತಾರೆ. ನಿನ್ನ

ಕಿರಾತರ ಪಡೆಯಿದೆಯಲ್ಲ ! ಅದನ್ನು ಮುಂದೆ ಬಿಡು ! ನಾನೇ ಅದೃಶ್ಯನಾಗಿ ಅದರ ಮುಂದೆ ಹೋಗುತ್ತಿರುತ್ತೇನೆ ! ನಿನ್ನ ಸೈನ್ಯಗಳು ಈಗ ನಮ್ಮ ದೇವಸೈನ್ಯಗಳಷ್ಟೇ ! ಅದನ್ನು ಮುಂದೆ ನಡೆಸುವುದು ನನ್ನದೇ ಸಾಂಪ್ರದಾಯಿಕ ಹೊಣೆ. ಈ ಕಿರಾತಕರಿಗೆ ಅಡವಿಯ ಜನಾಂಗ ಗಳ ಭಾಷೆಗೊತ್ತು. ನಿನಗೆ ಕಿರಾತಭಾಷೆ ಗೊತ್ತು. ಅಡವಿಯನ್ನು ದಾಟುವಷ್ಟರಲ್ಲಿ ಈ ಎಲ್ಲರ ಭಾಷೆಯೂ ನಿನಗೂ ಪರಿಚಿತವಾಗುತ್ತದೆ. ಇಲ್ವಲನ ಕಡೆಯವರು ಮಾಡಿದ ಹೇಯ ಕೆಲಸ ಈಗ ಅವರನ್ನೇ ಅವರ ವಿರುದ್ಧ ಎತ್ತಿಕಟ್ಟಿ ನಿನಗೇ ಸಹಾಯವಾಗಿದೆ. ಧೈರ್ಯವಾಗಿ ಮುಂದು ವರಿ'' ಎಂದು ಅಭಯವಿತ್ತು.

ಅಗಸ್ತ್ಯರು ಇಂದ್ರನನ್ನೂ ಮರುದ್ಗಣಗಳನ್ನೂ ಧ್ಯಾನಿಸಿ, ಇಂದ್ರ ರಕ್ಷಣೆಯನ್ನು ಬೇಡಿದರು. ಪೂಷಣನನ್ನು ಧ್ಯಾನಿಸಿ, ಅಡವಿಯ ರಸ್ತೆ ಗಳನ್ನು ತೋರುವಂತೆ ಪ್ರಾರ್ಥಿಸಿದರು. ಅಶ್ವಿನಿಗಳನ್ನು ಕರೆದು ಸೈನ್ಯಕ್ಕೆ ಬಲ, ಶಕ್ತಿ, ಉತ್ಸಾಹ ತುಂಬಿ ಅವರ ಆರೋಗ್ಯ ರಕ್ಷಿಸುವಂತೆ ಪ್ರಾರ್ಥಿಸಿ ದರು. ದೇವತೆಗಳೆಲ್ಲರೂ ಒಬ್ಬೊಬ್ಬರಾಗಿ ಬಂದು ಹರಸಿ, ಇದು ಬರೀ ಋಷಿಯೊಬ್ಬನ ಯಾತ್ರೆ ಅಲ್ಲವೆಂದೂ, ಅಥವಾ ಸೈನ್ಯದ ದಂಡಯಾ ತ್ರೆಯೂ ಅಲ್ಲವೆಂದೂ, ಭರತಭೂಮಿಯ ಸಾಸ್ಕೃತಿಕ ಏಕೀಕರಣದ ಧಾರ್ಮಿಕಯಾತ್ರೆಯಾಗಿರುವುದರಿಂದ, ಇಂಥದು ಇದೇ ಮೊದಲೂ ಆದು ದರಿಂದ ತಂತಮ್ಮ ದಿವ್ಯಾಸ್ತ್ರಗಳ ಶಕ್ತಿಗಳ ಮರ್ಮಗಳನ್ನು ಅಗಸ್ತ್ಯರಿಗೆ ಅನುಗ್ರಹಿಸಿದರು.

ಯೋಗನಿಮುಖರಾಗಿ ಎದ್ದ ಮಹರ್ಷಿಯನ್ನು, ಸೋದರ ನೊ'ಮಶ್ರವನೂ, ಚಾಕ್ರಾಯಣನೂ, ಪ್ರಿಯವ್ರತನೂ, ಲೋಪಾ ಮುದ್ರೆ ಮತ್ತಿತರ ಆಶ್ರಮದ ಋಷಿಪತ್ನಿಯರೂ, ಪರಶುರಾಮರ ಕಡೆ ಯಿಂದ ಬಂದು ಸೇರಿದ್ದ ಯೋಧರೂ, ಅಭಿವಂದಿಸಿ, ಅವರ ಆಶೀರ್ವಾದ

ಪಡೆದು. ಯಾತ್ರಾರಂಭದ ಸುಮುಹೂರ್ತದ ಕಾಲವನ್ನು ಅವರ ಬಾಯಿಂದ ಲೇ ತೀಳಲು ಉತ್ಸುಕರಾಗಿ. ಕೈಕಟ್ಟಿ ನಿಂತರು.

"ಪ್ರಾತರಾಹ್ನಿಕಗಳನ್ನು ಮುಗಿಸಿ ಕೊಂಡು ಪ್ರಯಾಣ. ದಿನಕ್ಕೆ ಸೂರ್ಯಾಸ್ತದೊಳಗೆ ಎಷ್ಟು ಪಯಣ. ಎಲ್ಲಿ ಬಿಡಾರ, ಎಲ್ಲಿ ಮತ್ತೆ ಆಹ್ನಿಕ, ಇತ್ಯಾದಿ ವಿಷಯಗಳನ್ನು ಅಗಸ್ತ್ಯಸೋದರ, ಚಾಕ್ರಾಯಣ ಮತ್ತು ಪ್ರಿಯವ್ರತರೊಡಗೂಡಿ ನಿಷ್ಕರ್ಷಿಸಬೇಕೆ"ಂದೂ, "ಕಿರಾತ ಪಡೆ ಮುಂದೆ ನಾಲ್ಕಾರು ಹರಿದಾರಿ ನಡೆದು ಸಮಾಚಾರ ಕೊಡುತ್ತಾ ಯಾತ್ರೆ ಸುಗಮವಾಗಿ ನಡೆಯಲು ಸಹಕರಿಸಬೇಕೆ"ಂದೂ ಅಗಸ್ತ್ಯರು ಅಪ್ಪಣೆ ಮಾಡಿದರು. ಮೊದಲು ಅಸ್ತವ್ಯಸ್ತವಾಗಿದ್ದ ಭಿಲ್ಲರ ತಾಣ ಸಿಕ್ಕಿತು ! ಅಗಸ್ತ್ಯರು, ತಮ್ಮ ಪಾದಕ್ಕೆಬಿದ್ದ ಆ ಜನಾಂಗವನ್ನು ಸಂತೈಸಿ, ಗಾಯಗೊಂಡವರಿಗೆ ಸೋಮಶ್ರವಸ ಮತ್ತಿತರ ವೈದ್ಯರ ಮೂಲಕ ಚಿಕಿತ್ಸೆ ಮಾಡಿಸಿದರು. ಅಗಸ್ತ್ಯಪತ್ನಿಯೇ ಭಿಲ್ಲಸ್ತ್ರೀಯರ ಶುಶ್ರೂಷೆಗೆ ನಿಂತು ಅವರ ಗೌರವಕ್ಕೆ ಪಾತ್ರಳಾದಳು ! ಮಹರ್ಷಿ ಎಂದರೆ ನಾನಾ ಭಯಂಕರ ಕಲ್ಪನೆಗಳನ್ನು ಬೆಳೆಸಿಕೊಂಡಿದ್ದ ಆ ಮುಗ್ಧ ಅರಣ್ಯವಾಸಿಗಳಿಗೆ ಅವರ ಭಯ ಅಷ್ಟರಿಂದಲೇ ನಿವಾರಣೆಯಾಗಿ, ಮಹರ್ಷಿಯ ಅನುಚರರ ಮಾನವೀಯ ವರ್ತನೆಯಿಂದ, ಸರಳನಡಗೆಯಿಂದ ತುಂಬಾ ಗೌರವವೂ ಪ್ರೀತಿಯೂ ಏರ್ಪಟ್ಟವು. ಇಲ್ವಲನ ಕಡೆಯವರು ಇವರನ್ನೆಲ್ಲ ಅಗಸ್ತ್ಯರ ವಿರುದ್ಧ ಎತ್ತಿಕಟ್ಟಲು ಹಬ್ಬಿಸಿದ್ದ ಕಥೆಗಳೂ ಕಲ್ಪನೆಗಳೂ ಹುಸಿಯಾಗಿ, ಇಬ್ಬರ ನಡುವಿನ ಅಂತರದ ಪರ್ವತವೊಂದು ಮಂಜಿನ ಹನಿಯಂತೆ ಕರಗಿಹೋಗಿ, ಶಂಕರನ ಆಶೀರ್ವಾದದ ಮೊದಲ ಫಲ ಬಹು ಸುಲಭವಾಗಿ ಸಿದ್ಧಿಸಿತು. ಅಗಸ್ತ್ಯರು ಪ್ರೀತರಾದರು !

ಕುಲಪತಿಯ ಸೈನ್ಯಕ್ಕೆ ಬೇಕಾದ ಆಹಾರಗಳನ್ನು ಈ ವನವಾಸಿಗಳು ಯಥೇಷ್ಟವಾಗಿ ಸಂಗ್ರಹಿಸಿಕೊಟ್ಟರು. ಕುದುರೆಗಳನ್ನು ಚೆನ್ನಾಗಿ ನೋಡಿ

ಕೊಂಡರು. ಚಾಕ್ರಾಯಣ, ಅಲ್ಲಲ್ಲಿ ಬಿಡಾರ ಹೂಡಿದಾಗ, ಭಿಲ್ಲ ಯುವಕರಿಗೆ ಸೈನ್ಯತರಬೇತಿಯನ್ನೂ, ಅಶ್ವಾರೋಹಣ, ಧನುರ್ಬಾಣ ಪ್ರಯೋಗಾದಿಗಳನ್ನು ಕಲಿಸಲು ಚೆನ್ನಾಗಿ ವ್ಯವಸ್ಥೆ ಮಾಡಿದ್ದನು. ಸೈನ್ಯ ಹೀಗೆ ನಾಲ್ಕು ದಿನ ಸುಖವಾಗಿ ಪ್ರಯಾಣ ಮಾಡಿತು! ಐದನೆಯ ದಿನ ಮಧ್ಯಾಹ್ನದ ಹೊತ್ತಿಗೆ ದಂಡು ಒಂದು ನದಿಯ ತಟದಲ್ಲಿ ಬೀಡು ಬಿಟ್ಟಿತ್ತು!

*                    *                    *

ಅಲ್ಲಿಂದ ಮುಂದೆ ಗೊಂಡಾರಣ್ಯವೆಂದು ಪ್ರಸಿದ್ಧವಾದ ಒಂದು ದುರ್ಗಮ ಅರಣ್ಯಪ್ರದೇಶವಿತ್ತೆಂದು ಎಲ್ಲರೂ ಕೇಳಿದ್ದರೇ ವಿನಾ, ಯಾರಿಗೂ ಅದರ ನೇರ ಪರಿಚಯ, ಅನುಭವ ಇರಲಿಲ್ಲ. ಅಗಸ್ತ್ಯರು ನದಿಯಲ್ಲಿ ಮಾಧ್ಯಾಹ್ನಿಕ ಮುಗಿಸಿ, ಮೊದಲು ಕಿರಾತಪಡೆಗೆ ಊಟ ಬಡಿಸಿ, ಅವರು ಮುಂದೆ ನಡೆದು ಮಾರ್ಗ ಸುರಕ್ಷಿತತೆಯ ಬಗೆಯ ಸಮಾಚಾರ ತರಬೇಕೆಂದು ನಿಯಮಿಸಿದರು. ಹಾಗೇ ಕಿರಾತರು ಒಂದು ಗಂಟೆಯ ನಂತರ ಆಗ್ನೇಯದಿಕ್ಕಿನತ್ತ ನಡೆದರು.

ಒಂದು ಗೊಂಡರ ಠಾಣಕ್ಕೆ ಬರಲು ಮತ್ತೊಂದು ತಾಸು ಬೇಕಾಯಿತು! ಯಾವ ಗಿಡಮರಗಳಲ್ಲೂ ಯಾರೂ ಹೊಂಚು ಹಾಕಿದ್ದು ಕಾಣದೆ, ಮಾರ್ಗಸುರಕ್ಷಿತವಾಗಿದೆಯೆಂದು ಭಾವಿಸಿದ ಕಿರಾತರು ಆ ಠಾಣಕ್ಕೆ ಬಂದು ನೋಡಿದಾಗ ಅದೆಲ್ಲ ರಕ್ತಮಯವಾಗಿದ್ದು, ಅಲ್ಲಿನ ಯುವಕರೂ ಮಧ್ಯಮ ವಯಸ್ಕರೂ ತಮ್ಮ ತಮ್ಮಲ್ಲಿಯೇ ಕಾದಾಡಿ ಸತ್ತರೆಂಬ ವಿವರಣೆಯೂ, ಸತ್ತವರ ಕಳೇಬರಗಳು ಉತ್ತರದ ಕ್ರಿಯೆ ಇಲ್ಲದೆ ಅಲ್ಲಿಯೇ ಬಿದ್ದುದನ್ನೂ, ಅದನ್ನು ಅಲ್ಲಿನ ಅರೆನಗ್ನಸ್ತ್ರೀಯರು ದೈನ್ಯವಾಗಿ ವಿವರಿಸುತ್ತಾ ಎದೆಬಡಿಕೊಂಡು ನಿಂತುದನ್ನೂ ಅರಿತು

ಕಿರಾತರಿಗೆ ಏನು ಮಾಡಲೂ ತಿಳಿಯಲಿಲ್ಲ ! ಕಾರಣವೇನೆಂದು ವಿಚಾರಿಸಿದಾಗ ಭಯಂಕರವಾರ್ತೆಯೊಂದು ತಿಳಿಯಬಂದಿತು.

ಭಿಲ್ಲರತಾಣದಲ್ಲಿ ಇಲ್ವಲನ ಅನುಚರರು ನಡೆಸಿದ ಅಕೃತ್ಯಗಳನ್ನು ಕುರಿತು, ಇಲ್ಲೂ ಅಂಥದು ನಡೆಯುವ ಸಂಭವವುಂಟೆಂದು ಎಚ್ಚರಿಸಲು ಅಲ್ಲಿನ ಕೆಲವು ಯುವಕರು ಮೊದಲ ರಾತ್ರಿಯಷ್ಟೇ ಅಲ್ಲಿಗೆ ಬಂದಿದ್ದರಂತೆ ! ಇಲ್ವಲನ ಅನುಚರರ ಕ್ರೌರ್ಯವನ್ನೂ ಕಪಟತನವನ್ನೂ ಕುರಿತು ವಿವರಿಸಿ, ಇನ್ನು ಅತ್ತ ನಿಷ್ಠೆತೋರುವುದು ಅಪಾಯವೆಂದು ಹೇಳಿದ ಆ ಯುವಕರನ್ನು ನಂಬದೇ, ಅಲ್ಲಿನ ಮುಖಂಡರು ಇಲ್ವಲನಿಗೇ ನಿಷ್ಠೆತೋರುವುದು ತಮಗೆ ಪರಂಪರೆಯಿಂದ ಬಂದಿರುವುದೆಂದೂ, ಈ ಯುವಕರಿಗೆ ಬುದ್ಧಿಭ್ರಾಂತಿ ಆಗಿರಬೇಕೆಂದೂ ವಾದಿಸಲು. ಮೊದಲು ವಾಗ್ವಾದವಾಗಿ, ಆ ಮೇಲೆ ಕೈಗೆ ಕೈ ಹತ್ತಿ ಅದು ವಿಕೋಪಕ್ಕೆ ಮುಟ್ಟಿ ಆಮೇಲೆ ಆಯುಧಗಳಿಂದ ಹೊಡೆದಾಡಿ ಗಂಡಸರೆಲ್ಲ ಸತ್ತುದಾಗಿಯೂ ಈ ಕಾಳಗ ರಾತ್ರಿಯೆಲ್ಲ ನಡೆಯಿತೆಂದೂ ಹೇಳಿ ಮುಗಿಸಿದರು. ಬಿಡಿಸಲು ಹೋದ ಆ ಗೊಂಡಸ್ತ್ರೀಯರಿಗೂ ಗಾಯಗಳಾಗಿದ್ದುದನ್ನು ತೋರಿಸಿದರು !

ವಿವರಣೆಯನ್ನು ಹೊತ್ತು ಕಿರಾತರು ವಾಪಸ್ಸು ಬರಲು ಮತ್ತೆ ವೇಳೆಯಾಯಿತು ! ಅಗಸ್ತ್ಯರು, ಮತ್ತೇನಾಯಿತೋ ! ಎಂದು ಪುನಃ ಚಿಂತಾಕ್ರಾಂತರಾಗಿದ್ದರು. ಸಾಯಂಕಾಲವಾಗುತ್ತ ಬಂದಿತ್ತು. ಆ ಕಡೆ ಅಲ್ಲೇ ಉಳಿಯುವುದೆಂದು ತೀರ್ಮಾನಿಸಿ. ಆ ನಿರ್ಗತಿಕಗೊಂಡ ಸ್ತ್ರೀಯರನ್ನು ಏನುಮಾಡುವುದೆಂದು ಅಗಸ್ತ್ಯರು ಸೋಮಶ್ರವಾದಿಗಳೊಡನೆ ಸಮಾಲೋಚಿಸಿದರು. ಅರಣ್ಯ ಮಾರ್ಗದ ಇಕ್ಕೆಲ್ಲಗಳಲ್ಲೂ, ಅಡವಿಯ ಬಳಿಗೆ ಅಲ್ಲಲ್ಲಿ ಇನ್ನೂ ಗೊಂಡರ ತಾಣಗಳಿರಬೇಕೆಂದೂ ಅಲ್ಲೇ ಎಲ್ಲಾದರೂ ಇವರನ್ನು ಸುರಕ್ಷಿತವಾಗಿ ಬಿಟ್ಟುಬರಬೇಕೆಂದೂ ತೀರ್ಮಾನ

ವಾಗಿತ್ತು ! ಮತ್ತೆ ಏನೆಂದು ಹೇಳುವುದು ? ಆ ಜನ ನಂಬದಿದ್ದರೋ ? ಮತ್ತೆ ಹೇಳಿದವರೊಡನೆಯೇ ಕಾಳಗಕ್ಕಿಳಿದರೋ ? ಈ ಅನವಶ್ಯ ಘರ್ಷಣೆ ಈಗ ಏಕೆ ಬೇಕು ? ಎಂಬ ಪ್ರಶ್ನೆಗಳೆದ್ದವು.

"ಇದು ಮಾನವೀಯ ಪ್ರಶ್ನೆ. ಅಗಸ್ತ್ಯರ ದಕ್ಷಿಣಯಾತ್ರೆಯ ಉದ್ದೇಶ್ಯಗಳಲ್ಲಿ ಇಲ್ವಲನ ಸಂಹಾರವೊಂದೇ ಮುಖ್ಯವಲ್ಲ ! ಈ ಆರಣ್ಯಕ ಜನರನ್ನು ಅವನ ಕಪಿಮುಷ್ಟಿಯಿಂದ ಮುಕ್ತಮಾಡುವುದೂ ಒಂದು ಮುಖ್ಯವಾದುದೇ ! ಈ ಜನರೆಲ್ಲ ಸೌಖ್ಯವಾಗಿ, ಬಾಳುವಂತಾದ ಹೊರತು ದಕ್ಷಿಣಾಪಥದ ಸೌಖ್ಯ ಹೇಗೆ ಸಾಧ್ಯ ? ಇದು ಕ್ಷೇಮಯಾತ್ರೆಯೇ ಹೊರತು, ದಂಡಯಾತ್ರೆ ಅಲ್ಲ ! ಈ ಜನರನ್ನೂ ಒಲಿಸಿಕೊಂಡು, ಅವರಿಗೂ ಅಭಯದಾನ ಮಾಡುವುದೂ ಆರ್ಯಸಂಸ್ಕೃತಿಯ ಒಂದು ರೀತಿಯೇ ಆಗಿ, ಇದೂ ಮುಂಗೆ ಅಪರಿಮಿತ ಫಲವನ್ನು ಕೊಡುವುದು; ಇಲ್ವಲನ ಬಲವನ್ನು ಮುರಿಯಲೂ ಸಹಾಯವಾದಿತು" ಎಂದು ಅಗಸ್ತ್ಯರು ತೀರ್ಪಿತ್ತರು.

ಚಾಕ್ರಾಯಣನನ್ನೇ ಕೆಲವು ಸೈನಿಕರೊಡನೆ ಆ ಸ್ತ್ರೀಯರನ್ನು ಸುರಕ್ಷಿತ ಸ್ಥಾನಗಳಿಗೆ ಬಿಟ್ಟು ಬರುವಂತೆ ಅಗಸ್ತ್ಯರು ನಿಯಮಿಸಿದರು. ಹೊರಡುತ್ತಿರುವವರು ಸ್ತ್ರೀಯರಾದುದರಿಂದ ಲೋಪಾಮುದ್ರೆ ತಾನೂ ಅವರ ಜೊತೆಗೆ ಹೋಗಿ ಕಳುಹಿಬರುವುದಾಗಿ ಹೊರಟು ನಿಂತಳು. ಸ್ತ್ರೀಯರಿಗೆ ಅದು ಸುರಕ್ಷಿತವೋ ಅಲ್ಲವೋ ಹೇಳಲು ಬಾರದಾದುದರಿಂದ ಅದು ಕೂಡದೆಂದು ಯುವ ಸೈನಿಕರು ವಾದಿಸಿದರು. ಆಶ್ರಮದ ಇತರ ವೃದ್ಧಸ್ತ್ರೀಯರೂ ಕೂಡಹೋಗಿ ಬರುವುದೆಂದೂ, ಕಿರಾತರೂ ಭಿಲ್ಲರೂ ಅವರ ಸಂರಕ್ಷಣೆಗೆ ಕೂಡ ಹೋಗಿ, ದಾರಿಯನ್ನು ತೋರಿ ಬರಬೇಕೆಂದೂ ತೀರ್ಮಾನವಾಗಿ, ರಾತ್ರಿಯ ಉಳಿದ ಭಾಗವನ್ನು ಅಲ್ಲೇ ಕಳೆದು ಮರುದಿನ ಸೂರ್ಯೋದಯಕ್ಕೆ ಕೊಂಚಮುನ್ನ ತಂಡವು ಅಗಸ್ತ್ಯಮಾರ್ಗದಿಂದ ದಕ್ಷಿಣಕ್ಕೆ ತಿರುಗಿತು.

ಸೂರ್ಯೋದಯವಾಗಿ ಎರಡು ಗಂಟೆಯವೇಳೆಗೆ ಗೊಂಡರ ಇನ್ನೊಂದು ದೊಡ್ಡ ವಸತಿಯೇ ಕಣ್ಣಿಗೆಬಿತ್ತು. ತಮ್ಮವರಾದ ಈ ಅರೆನಗ್ನ ಗೊಂಡಸ್ತ್ರೀಯರು ಮುಂದೆ ಬರುತ್ತಿದ್ದುದನ್ನು ನೋಡಿ ವಿಸ್ಮಯಪಟ್ಟು, ವಸತಿಯ ಮುಖಂಡರು ಮುಂದೆ ಬಂದು ಏನಾಯಿತೆಂದು ಪ್ರಶ್ನಿಸಿದರು. ನಡೆದುದನ್ನು ಕೇಳಿ ಅವರಿಗೂ ಬಹಳ ಕಳವಳವಾಗಿ, ಏನುಮಾಡುವುದೆಂದು ತಿಳಿಯದೆ ತಮ್ಮತಮ್ಮಲ್ಲೇ ತುಂಬವೇಳೆ ಸಮಾಲೋಚಿಸಿದರು. ಭಿಲ್ಲರು ತಮ್ಮ ತಾಣದಲ್ಲಿ ನಡೆದುದನ್ನೂ, ತಮ್ಮ ಮುಖಂಡನನ್ನು ಮಣಿಗ್ರೀವನ ಭಟರು ಅಮಾನುಷವಾಗಿ ಕೊಲೆಮಾಡಿದುದನ್ನೂ ತಿಳಿಸಿ ತಾವೆಲ್ಲ ಈಗ ಇಲ್ವಲನ ಪಕ್ಷವನ್ನು ತ್ಯಜಿಸಿ ಅಗಸ್ತ್ಯಸೈನ್ಯವನ್ನು ಸೇರಿ ಹೊರಟಿರುವುದಾಗಿಯೂ ಹೇಳಿದರು. ಇದರಿಂದ ಆ ಗೊಂಡರಿಗೆ ಕೊಂಚ ನಂಬಿಕೆಯುಂಟಾದರೂ, ತಾವು ತಮ್ಮವರು ಇತರ ವಸತಿಗಳಲ್ಲಿರುವ ಬಾಂಧವರನ್ನು ಕರೆದು ಸಮಾಲೋಚಿಸಿ ಇಡೀ ಗೊಂಡ ಜನಾಂಗವೇ ಒಂದು ಸಾಮೂಹಿಕ ತೀರ್ಮಾನಮಾಡುವುದು ವಾಸಿಯೆಂದೂ, ಬಿಡಿ ಬಿಡಿಯಾಗಿ ಒಂದೊಂದು ವಸತಿಯವರು ಒಂದೊಂದು ತಿರ್ಮಾನವನ್ನು ಕೈಗೊಂಡರೆ ತಮ್ಮಲ್ಲೇ ಅಂತರ್ಯುದ್ಧವಾದೀತೆಂದೂ, ಅಲ್ಲಿನ ವೃದ್ಧ ಗೊಂಡಮುಖಂಡ ಹೇಳಿದ ! ಅವನ ಜಾಣತನಕ್ಕೆ ಸೋಮಶ್ರವ ತಲೆದೂಗಿ "ಹಾಗೇ ಆಗಲಿ; ಬೇಗ ಜನರನ್ನು ಕಳುಹಿಸಿ'' ಎಂದ.

ಇದು ಒಂದೆರಡು ಗಂಟೆಗಳಲ್ಲಿ ಆಗತಕ್ಕ ವಿಷಯವಲ್ಲವಾದುದರಿಂದ, ತೀರ್ಮಾನವು ಉದಿಸಿ ಬರುವವರೆಗೂ ಇಲ್ಲಿಗೆ ಬಂದಿದ್ದವರ ಕರ್ತವ್ಯವೇನು ? ಎಂಬುದನ್ನು ಸೋಮಶ್ರವನು ಭಿಲ್ಲ, ಗೊಂಡಬಾಂಧವರೊಡನೆ ಚರ್ಚಿಸಿದ. ಚಾಕ್ರಾಯಣ ತಾನು ಕೆಲವರೊಡನೆ ಅಲ್ಲೇ ನಿಲ್ಲುವುದಾಗಿಯೂ ಉಳಿದವರೂ ಹಿಂದೆ ನಡೆದು ಅಗಸ್ತ್ಯರನ್ನು ಕೂಡಿಕೊಳ್ಳಬೇಕೆಂದೂ ಸೂಚಿಸಿದ. ಚಾಕ್ರಾಯಣ ತಾನು ಕೆಲವರೊಡನೆ

ಅಲ್ಲೇ ನೀಲ್ಲುವುದಾಗಿಯೂ ಉಳಿದವರು ಹಿಂದೆ ನಡೆದು ಅಗಸ್ತ್ಯರನ್ನು ಕೂಡಿಕೊಳ್ಳಬೇಕೆಂದೂ ಸೂಚಿಸಿದ. ಲೋಪಾಮುದ್ರೆ ಮತ್ತಿತರ ಸ್ತ್ರೀಯರು ಅದನ್ನೊಪ್ಪಲಿಲ್ಲ. ಅವರ ಬದಲಾಗಿ, ಚಾಕ್ರಾಯಣನೇ ಹಿಂದಿರುಗಿ ಅಗಸ್ತ್ಯರನ್ನು ಕಂಡು ಅವರಿಗೆ ಸಮಾಚಾರ ತಿಳುಹಿ, ಅವರನ್ನೆಲ್ಲ ಇತ್ತ ಕರೆತರಬೇಕೆಂದೂ, ಇಲ್ಲಿ ಸೋಮಶ್ರವಾದಿಗಳು ಹೇಗೂ ರಕ್ಷಣೆಗಿರುವರೆಂದೂ ಸೂಚಿಸಿದರು.

ಗೊಂಡರ ಮುಖಂಡ ಏನೆಂದು ವಿಚಾರಿಸಿದ. ಆಮೇಲೆ ದೊಡ್ಡದಾಗಿ ನಕ್ಕ! ಅವರ ಸುರಕ್ಷತೆಯ ಬಗೆಗಿನ ಪ್ರಶ್ನೆ ಅದೆಂದು ತಿಳಿದ ಮೇಲೆ, ತನ್ನ ಸ್ತ್ರೀಯರ ತಲೆಯಮೇಲೆ, ತನ್ನ ಎದೆಯಮೇಲೆ ಕೈಯ್ಯಿಟ್ಟು ಭೂಮಿ ಆಕಾಶಗಳನ್ನು ನೋಡುತ್ತಾ ಏನೇನೋ ಹೇಳಿ, ಕಣ್ಣಲ್ಲಿ ನೀರು ಸುರಿಸಲಾರುಭಿಸಿದ! ಅವನ ಭಾಷೆ ತಿಳಿಯದವರಿಗೂ, ಅವನು ತನ್ನ ಸ್ತ್ರೀಯರಮೇಲೆಯೂ, ತನ್ನ ಮೇಲೆಯೂ ಆಣೆಯಿಟ್ಟು, ಭೂಮಿ ಆಕಾಶಗಳನ್ನು ಸಾಕ್ಷಿ ಹಾಕಿ ಪ್ರಮಾಣಮಾಡುತ್ತಿರುವುದಾಗಿಯೂ, ತಮ್ಮಿಂದ ಅವರಿಗೇನೂ ಕೇಡು ಬರುವುದಿಲ್ಲವೆಂಬುದಾಗಿಯೂ ಹೇಳುತ್ತಿರುವುದು ಅರ್ಥವಾಗಿ, ಆ ಮುಗ್ಧವೃದ್ಧನ ನಿಷ್ಕಪಟ ಸ್ವಭಾವಕ್ಕೆ ಎಲ್ಲರೂ ಮೆಚ್ಚಿದರು.

ಚಾಕ್ರಾಯಣ ವೇಗವಾಗಿ ಅಗಸ್ತ್ಯಾಶ್ರಮಕ್ಕೆ – ಅವರು ಹಿಂದೆ ತಂಗಿದ್ದ ಕಡೆಗೆ – ಹೋಗಿ ನಡೆದುದೆಲ್ಲವನ್ನು ತಿಳಿಸಿದ. ಅಗಸ್ತ್ಯರು ಆ ನಿರ್ಣಯವನ್ನು ಮೆಚ್ಚಿದರು. ಮಾಧ್ಯಾಹ್ನಿಕ ವೇಳೆಯಾದುದರಿಂದ, ಅನುಷ್ಠಾನವನ್ನು ಮುಗಿಸಿ, ಆಹಾರ ಸೇವಿಸಿ ಮುಂದೆ ಹೊರಡುವುದೆಂದು ತೀರ್ಮಾನವಾಯ್ತು. ಇದೆಲ್ಲ ಮುಗಿದು ಗೊಂಡರ ಆ ದೊಡ್ಡ ವಸತಿಗೆ ಅಗಸ್ತ್ಯಸೈನ್ಯ ತಲುಪುವ ವೇಳೆಗೆ ಮತ್ತೆ ಸಂಜೆಯೇ ಆಯಿತು!

ದುರ್ಗಮ ಅರಣ್ಯ ಪ್ರದೇಶವಾದುದರಿಂದಲೂ, ನಾಗರಿಕತೆಯನ್ನೇ ಕಾಣದ ಈ ಮುಗ್ಧ ಜನರ ವಸತಿಗಳನ್ನು ಹಾಯ್ದೇ ಹೋಗಬೇಕಾದುದರಿಂದಲೂ, ಸೈನ್ಯಗತಿಯ ಪ್ರಗತಿ ಕುಂಠಿತವಾದುದು ಅನಿವಾರ್ಯವೆಂದು ಅಗಸ್ತ್ಯರು ಸಮಾಧಾನಪಟ್ಟುಕೊಂಡರು. ಸೂರ್ಯಾಸ್ತವಾಯಿತು. ರಾತ್ರಿ ಪಂಜಿನ ಬೆಳಕಿನಲ್ಲಿ ಹೋದವರಲ್ಲಿ ಕೆಲವರು ಮತ್ತೆ ಬಂದರು.



# ೧೭ ಇಲ್ವಲ-ಶುಕ್ರರಲ್ಲಿ ವೈರಸ್ಯ !

ಅಗಸ್ತ್ಯರು ವಿನ್ಧ್ಯನನ್ನು ಬಗ್ಗಿಸಿದರೆಂಬ ಅತಿಮಾನುಷವಾರ್ತೆಯನ್ನು ಕೇಳಿಯೇ ಇಲ್ವಲನ ಎದೆಯೊಡೆದಿತ್ತು ! ಪರಶುರಾಮರು ಕರಾವಳಿಯನ್ನು ಸಮುದ್ರದಿಂದೆತ್ತಿ ಅಲ್ಲಿಯೇ ಈಗ ವಾಸಮಾಡುತ್ತಿರುವರೆಂಬುದೂ ಅವನಿಗೆ ಶುಭವಾರ್ತೆಯಾಗಿರಲಿಲ್ಲ !! ಈಗ ಸ್ವಯಂ ಅಗಸ್ತ್ಯರೇ ತನ್ನ ರಾಜ್ಯದತ್ತ ಉತ್ತರದ ಆರ್ಯಸೈನ್ಯವನ್ನು ಕೂಡಿಸಿ ದಂಡೆತ್ತಿ ಬರುತ್ತಿರುವರೆಂಬ ವಾರ್ತೆ ಅವನಿಗೆ ಇನ್ನಷ್ಟು ಹೃದಯಾಘಾತವನ್ನುಂಟು ಮಾಡಿತು ! ವಿಂಧ್ಯಾಟವಿಯ ಭಿಲ್ಲರೂ, ಗೊಂಡರೂ ತನ್ನ ವಿರುದ್ಧ ತಿರುಗಿಬಿದ್ದರೆಂಬ ವಾರ್ತೆಯೂ ಅವನಿಗೆ ಜಂಘಾಬಲ ಉಡುಗುವಂತೆ ಮಾಡಿತ್ತು ! ನೇರಯುದ್ಧದಲ್ಲಿ ಈ ವೈದಿಕನ ಸೈನ್ಯವನ್ನೆದುರಿಸುವುದಾಗದೆಂಬ ತೀರ್ಮಾನಕ್ಕೆ ಅವನೆಂದೋ ಬಂದಾಗಿತ್ತು. ಅದರಿಂದಲೇ ಮಾಯಾಪ್ರಯೋಗಗಳನ್ನು ಅವನು ಬಳಸುತ್ತಿದುದು ! ಈಗ ಅದರ ನಿರೋಧಕ್ಕೂ ಅಗಸ್ತ್ಯರು ಯಾವುದೋ ಭಸ್ಮವನ್ನು ಕಂಡುಹಿಡಿದಿರುವರೆಂದೂ ಅವನು ಕೇಳಿದ್ದ. ಈವರೆಗೆ ಅವನು ಆಡಿದ್ದ ನಾಟಕಗಳೆಲ್ಲ ಅವನಿಗೆ ಪ್ರತಿಕೂಲವೇ ಆಗಿದ್ದು, ಯಾಗ, ಯಜ್ಞ, ಬ್ರಾಹ್ಮಣದಾನಗಳಿಂದ ಅವರ ಸಂಪತ್ತೆಲ್ಲ ವ್ಯರ್ಥವಾಗಿ ಖರ್ಚಾಗಿತ್ತೇ ವಿನಾ, ಇತ್ತ ಅಗಸ್ತ್ಯರು ಅವನ ವೈದಿಕತ್ವವನ್ನು ನಂಬಲೂ ಇಲ್ಲ ! ಸ್ವತಃ ತಾವೇ ಬಂದು ಪರೀಕ್ಷಿಸಿ "ಅನುಗ್ರಹಿಸುವುದಾಗಿ" ಹೇಳಿ ಕಳುಹಿದ್ದರು, ತನ್ನ ಬ್ರಾಹ್ಮಣರೊಡನೆ ; ಹಾಗೆಂದರೇನು ? ಅಗಸ್ತ್ಯರ "ಅನುಗ್ರಹ" ಎಂದರೇನು ? ವಿಂಧ್ಯನಿಗೆ ಅನುಗ್ರಹ ಮಾಡಿದಂತೆಯೇ ಅಲ್ಲವೇ ? ಇನ್ನೂ ತನ್ನಲ್ಲಿ ಉಳಿದಿರುವುದೇನು ? ಶುಕ್ರಾಚಾರ್ಯರೊಬ್ಬರು, ಅವರ ಪುತ್ರರು, ಮತ್ತು ಶುಕ್ರರ ವಿದ್ಯೆಯಾದ

"ಮೃತಸಂಜೀವನೀ" ! ಇತ್ತ ವಾತಾಪಿಯೂ ತಿರುಗಿ ಬರಲಿಲ್ಲ !
ದ್ರಮಿಡಾಧಿಪತಿ ಕುಮಾರವರ್ಮ ಏನು ಹೇಳಿದನೋ ? ಪಾಂಡ್ಯದ
ಇಂದ್ರದ್ಯುಮ್ನ ? ಇಬ್ಬರೂ ಸಹಕರಿಸಿದರೆ ಈ ಆರ್ಯಸೈನ್ಯ ಎಷ್ಟು
ಮಾತ್ರ ? ಅವರಲ್ಲಿ ತಪಸ್ವಿರಬಹುದು ! ಆದರೆ ಯುದ್ಧ ವಿದ್ಯೆಯನ್ನು
ಹೊಸದಾಗಿ ಕಲಿಯುತ್ತಿರುವ ಬ್ರಾಹ್ಮಣರು ತನಗೆ ಎಷ್ಟು ಮಾತ್ರರು ?
ಹೀಗೆಲ್ಲ ಯೋಚಿಸುತ್ತಾ ಇಲ್ವಲ ದಿನಗಳನ್ನು ಕಳೆದಂತೆ ಇತ್ತ ಅಗಸ್ತ್ಯರು
ಒಂದೊಂದೇ ಅರಣ್ಯವಾಸೀ ಜನಾಂಗದವರನ್ನೂ ವಿಶ್ವಾಸದಿಂದ, ತಪೋ
ಬಲದಿಂದ ವಶೀಕರಿಸುತ್ತಾ ಮುಂದುವರೆಯುತ್ತಿರುವ ವಾರ್ತೆಗಳು ದಿನಂ
ಪ್ರತಿ ಬರಲಾರಂಭಿಸಿದ್ದವು.

* * *

ಅಗಸ್ತ್ಯರು ದಾರಿಯುದ್ದಕ್ಕೂ ಬೆಳೆವ ಸೈನ್ಯದೊಡನೆ ದಕ್ಷಿಣಯಾತ್ರೆ
ಯನ್ನು ಮುಂದುವರೆಸಿದ್ದರು. ಅರಣ್ಯದ ದಾರಿಯ ಎಡ ಬಲಗಳಲ್ಲಿ
ದೂರ ದೂರಗಳಲ್ಲಿ ನೆಲೆಸಿದ್ದ ಗೊಂಡ, ಭಿಲ್ಲ, ಮುಂಡರ ಅನೇಕ ಸಣ್ಣ–
ದೊಡ್ಡ ವಸತಿಗಳಿಗೆಲ್ಲ ಈ ಸಮಾಚಾರ ಹಬ್ಬಿತ್ತು. ಆ ಜನಾಂಗಗಳೆಲ್ಲ
ಸಾಮೂಹಿಕವಾಗಿಯೇ ಅಗಸ್ತ್ಯರನ್ನು ಬೆಂಬಲಿಸಲು ನಿರ್ಧರಿಸಿ, ಯಾವ
ತ್ಯಾಗಕ್ಕೂ ಸಿದ್ಧವಿರುವುದಾಗಿ ಹೇಳಿ, ತಂತಮ್ಮ ವಸತಿಗಳಲ್ಲೂ ಒಂದು
ದಿವಸವೋ, ರಾತ್ರಿಯೋ ಅಗಸ್ತ್ಯರು ತಂಗಿ, ಆತಿಥ್ಯಮಾಡಿಸಿಕೊಂಡು
ಮುಂದುವರಿಯಬೇಕೆಂದು ಒತ್ತಾಯಿಸಿದರು. ತಮ್ಮ ದಾರಿಯೇ
ಬದಲಾಗಿ ಬಿಡುವ ಈ ಒತ್ತಾಯಕ್ಕೆ ಅಗಸ್ತ್ಯರು ಒಪ್ಪದೆ, ಮತ್ತೆ ಇತ್ತ
ಬರುವುದಾಗಿ ವಾಗ್ದಾನ ಮಾಡಿ ಮುಂದೆ ನಡೆದರು. ಯುವ ವನವಾಸಿ
ಗಳು ಅವರ ದಳವನ್ನು ಸೇರಿದರು.

ಅಗಸ್ತ್ಯರ ಸೈನ್ಯದ ಮುಂಚೂಣಿಯಲ್ಲಿ ಎಡಕ್ಕೆ ಚಾರಾಯಣನೂ,

ಬಲಕ್ಕೆ ಪ್ರಿಯವ್ರತನೂ ನಡುವಿನಲ್ಲಿ ಸೋಮಶ್ರವನೂ ಪುಟ್ಟ ಪರಿವಾರ ಗಳೊಡನೆ ಅಶ್ವಾರೋಹಿಗಳಾಗಿ ಹೊರಟಿದ್ದರು.

ಒಂದು ದಿನ ಸಂಜೆ, ಸೂರ್ಯಾಸ್ತಮಾನಕ್ಕೆ ಇನ್ನೂ ಕೊಂಚ ವೇಳೆ ಯಿರುತ್ತಾ ಇದ್ದಕ್ಕಿದ್ದಂತೆ ಪ್ರಿಯವ್ರತ ಮತ್ತು ಅನುಚರರು ಮಾಯವಾದರು !

ಕಿರಿದಾದ ಅಡವಿಯ ಕಾಲುದಾರಿಯಲ್ಲಿ ಸೋಮಶ್ರವ ಒಂದು ಕೊಳದ ಬಳಿ ಬೀಡು ಬಿಟ್ಟಿದ್ದ. ಅಗಸ್ತ್ಯರೂ ಪರಿವಾರವೂ ನಾಲ್ಕು ಹರಿದಾರಿ ಹಿಂದೆಯೇ ಉಳಿದಿದ್ದು, ಮುಂಗಾವಲಿನವರ ಸಮಾಚಾರವನ್ನು ನಿರೀಕ್ಷಿಸುತ್ತಿವರು. ಕಿರುದಾರಿಯ ಎಡಕ್ಕೆ ಒಂದೇ ಹರಿದಾರಿ ದೂರದಷ್ಟು ಚಾಕ್ರಾಯಣ ಪರೀಕ್ಷಿಸಿ ಬರಬೇಕೆಂದೂ, ಬಲಕ್ಕೆ ಪ್ರಿಯವ್ರತ ಹಾಗೇ ಹೋಗಿ ಪರಿಕ್ಷಿಸಿ ಬರಬೇಕೆಂದೂ ಸೋಮಶ್ರವ ಹೇಳಿದ್ದ ! ಸೂರ್ಯಾಸ್ತ ಮಾನವಾದರೂ ಪ್ರಿಯವ್ರತ ಬರಲಿಲ್ಲ ! ಚಾಕ್ರಾಯಣ ಆಗಲೇ ಬಂದಿದ್ದ !! ಏನಾಯಿತೆಂದು ತಿಳಿಯದೇ ಎಲ್ಲರೂ ಪರಿತಪಿಸುತ್ತಿದ್ದರು. ದಿವ್ಯಭಸ್ಮ ತಮ್ಮ ಬಳಿ ಇದ್ದುದರಿಂದ ಅಸುರಮಾಯೆಗೆ ಅವಕಾಶ ವಿರಲಿಲ್ಲ ! ಎಲ್ಲೂ ಯಾವ ಸದ್ದೂ ಕೇಳಿ ಬರಲಿಲ್ಲ ! ಮತ್ತೇನಾಯಿತು? ರಾತ್ರಿಯಾದುದರಿಂದ ಎಲ್ಲಾದರೂ ದಾರಿ ತಪ್ಪಿರಬಹುದೋ ? ಕಿರಾತರೂ ಗೊಂಡರೂ ಪತ್ತಿರದಲ್ಲಿದ್ದು, ಅದು ಸಂಭವ ಇರಲಿಲ್ಲ ! ಚಾಕ್ರಾಯಣ ಇನ್ನಿಬ್ಬರು ಗೊಂಡರನ್ನು ಕರೆದುಕೊಂಡು ಮೆಲ್ಲ ಮೆಲ್ಲನೆ ಕಿರುದಾರಿಯ ಬಲಕ್ಕೆ ಹೊರಳಿ, ಏನಾಯಿತೆಂದು ತಿಳಿದು ಬರಲು ಹೊರಟ, ಮೂವರಿಗೂ ಕೈಯಲ್ಲಿ ಪಂಜುಗಳಿದ್ದವು. ಸುಮಾರು ಅರ್ಧ ಗಂಟೆಯಕಾಲ ಅದೇ ದಿಕ್ಕಿನಲ್ಲಿ ಹೊರಟಮೇಲೆ ಕೈಯಲ್ಲಿದ್ದ ಪಂಜುಗಳು ದಿಢೀರನೆ ಆರಿದವು !! ಯಾವ ಬಿರುಗಾಳಿಯೂ ಇರಲಿಲ್ಲ ! ಚಾಕ್ರಾಯಣ ಗೊಂಡರನ್ನು ಕರೆಯಲು ಧ್ವನಿ ಎಬ್ಬಿಸುವಷ್ಟರಲ್ಲಿ ರಾಕ್ಷಸ

ಬಲದ ಎರಡುಕೈಗಳು ಅವನ ಬಾಯಿಯನ್ನು ಮುಚ್ಚಿದವು. ದೃಢ ಗಾತ್ರನಾದ ಚಾಕ್ರಾಯಣ ಅದನ್ನು ಹೇಗೋ ಬಿಡಿಸಿಕೊಂಡು ಒಡನೆಯೇ ಕತ್ತಿಯನ್ನು ಬಿಚ್ಚಿ ಸುತ್ತಲೂ ವರಸೆಯಂತೆ ಗರಗರನೆ ತಿರುಗಿಸಲು ಒಂದು ಆಕೃತಿ ಭಯಂಕರವಾಗಿ ಚೀರುತ್ತಾ ಕೆಳಗೆ ಬಿದ್ದು ಅಸುನೀಗಿತ್ತು. ಇನ್ನೊಂದು ಓಡಿ ಹೋಯಿತು ! ಆ ಓಡಿಹೋದುದನ್ನು ಗೊಂಡ ರಿಬ್ಬರೂ ಬೆನ್ನಟ್ಟಿ ಹಿಡಿದು ತಂದು ಚಾಕ್ರಾಯಣನ ಮುಂದೆ ತಂದು ಉರುಳಿಸಿದರು ! ಆ ಆಕೃತಿಯೂ ಮಾನವರೂಪದ್ದೆಂಬುದನ್ನು ಆ ಕತ್ತಲಲ್ಲೂ ಚಾಕ್ರಾಯಣ ಸುಲಭವಾಗಿ ಊಹಿಸಿದ. ಗೊಂಡರು ಅವನನ್ನು ಚೆನ್ನಾಗಿ ಥಳಿಸಿ, ಬಾಯಿ ಬಿಡಿಸಿದರು. ಅವನು ಗೊಂಡ ಭಾಷೆಯಲ್ಲಿ ಹೇಳಿದ ಸಾರಾಂಶ : ಆ ಅರಣ್ಯದಲ್ಲಿ ಕಾಪಾಲಿಕರು ಕಾಲಭೈರವರ ನಿವಾಸವೊಂದಿದೆ. ವಿಂಧ್ಯಾಟವಿಯಲ್ಲಿ ಅದು ಅಭೇದ್ಯವಾದ ಗುಹೆ. ಅಲ್ಲಿ ಈ ವರೆಗೆ ಎಷ್ಟು ನರಬಲಿಗಳಾದವೋ ಗೊತ್ತಿಲ್ಲ ! ಇತ್ತ ಬಂದ ಯಾವ ಮನುಷ್ಯನೂ ಆ ಕಾಪಾಲಿಕರಿಂದ ಪಾರಾಗಿಲ್ಲ ! ಪ್ರಿಯವ್ರತನನ್ನು ಅವರಿಗಾಗಿ ಈ ಗೊಂಡದೂತರೇ ಹಿಡಿದು ಬಂಧಿಸಿ ಗುಹೆಯೊಳಗೆ ತಳ್ಳಿದ್ದಾರೆ. ಅವನ ಅನುಚರರನ್ನೂ ಸಹ. ನರಬಲಿಗೆ ಮುಂದಿನ ಅಮವಾಸ್ಯೆ ನಿಗದಿಯಾದ ದಿನ. ಈ ಹಿಂದೆ ಮೂರು ಅಮವಾಸ್ಯೆಗಳಲ್ಲಿ ಯಾವ ನರಪಶುವೂ ದೊರೆಯದೆ ಈಗ ಆಕಸ್ಮಿಕವಾಗಿ ದೊರೆತುದಕ್ಕೆ ಕಾಪಾಲಿಕರು ಹಿಗ್ಗಿದ್ದಾರೆ !—ಎಂದೂ. ........

ಚಾಕ್ರಾಯಣನ ಅಪ್ಪಣೆಯಂತೆ ಗೊಂಡರು ಆ ದೂತನಿಗೆ ಮತ್ತೆ ಹಿಂಸಿಸಿ. ಅವನನ್ನೊಡಂಬಡಿಸಿ, ಕೈಗಳನ್ನು ಕಟ್ಟಿ, ಬಾಯಿಗೆ ಕಾಡಿನ ಎಲೆ ಗಳನ್ನು ತುರುಕಿ, ಆ ಗುಹೆಯನ್ನು ಬೇಗ ತೋರಿಸುವಂತೆ ಅಪ್ಪಣೆ ಮಾಡಿದರು. ವಿಧಿಯಿಲ್ಲದೆ ಆ ನರಪಶು ಒಪ್ಪಿ ನಡೆಯಿತು !

ದಾರಿ ನಡೆದು ಆ ಗುಹೆಯ ದ್ವಾರಕ್ಕೆ ಚಾಕ್ರಾಯಣನೂ ಅವನ

ಇಬ್ಬರು ಅನುಚರರೂ ಬರಲು ಸ್ವಲ್ಪ ವೇಳೆಯಾಯಿತು. ಗುಹೆಯ ಬಾಗಿಲು ತೆರೆದೇ ಇತ್ತು – ಹಿಂದೆ ಉಳಿದವನು ಬೇರೊಂದು ಪಶುವನ್ನು ತಂದಾನೆಂಬ ನಿರೀಕ್ಷೆಯಿಂದ. ಗುಹೆಯ ಸಮೀಪಕ್ಕೆ ಬರುತ್ತಾ ಬಂಧಿತನ ಬಾಯನ್ನು ತೆರೆಯಲಾಯಿತು. ತನ್ನವರನ್ನು ಎಲ್ಲರನ್ನೂ ಪಂಜುಗಳೊಡನೆ ಗುಹೆಯ ಹೊರಕ್ಕೆ ಕರೆತರಬೇಕೆಂದೂ. "ಅಪಾಯ ಬಂದಿದೆಯಾದುದರಿಂದ, ಹೇಗಿದ್ದರೆ ಹಾಗೇ ಎಲ್ಲರೂ ಹೊರಗೆ ಬರಬೇಕೆ"ಂದೂ ಅವನು ನಿಂತಲ್ಲಿಂದಲೇ ಗೊಂಡ ಭಾಷೆಯಲ್ಲಿ ಕೂಗುಹಾಕಬೇಕೆಂದೂ, ಚಾಕ್ರಾಯಣ ಹೇಳಿ, ಒಂದು ಮರದಮರೆಯಲ್ಲಿ ನಿಂತ; ಇಬ್ಬರು ಅವನ ಅನುಚರರು ಈ ಬಂಧಿತನನನ್ನು ಈಗ ಕಾಲುಕಟ್ಟಿ (ಕೈಮೊದಲೇ ಕಟ್ಟಿತ್ತು). ಗುಹೆಗೆ ಕೊಂಚ ಸಮೀಪದಲ್ಲಿ ಉರುಳಿಸಿ ಎಲ್ಲರೂ ದೂರ ಸರಿದು ಧನುರ್ಧರರಾಗಿ ನಿಂತರು. ಬಂಧಿತ, ಭಯಂಕರ ಧ್ವನಿಯಲ್ಲಿ ಬೊಬ್ಬಾಟ ಮಾಡಿದ.

ಒಡನೆಯೇ ಹತ್ತಾರು ಪಂಜುಗಳೊಡನೆ ರಾಕ್ಷಸಾಕಾರದ ಕೆಲವ್ಯಕ್ತಿಗಳು ಗುಹಾದ್ವಾರದಲ್ಲಿ ಕಾಣಿಸಿಕೊಂಡು ಪ್ರತಿಯಾಗಿ ಕೆಲವು ಪ್ರಶ್ನೆಗಳನ್ನು ಕೇಳಿದರು : ಕೂಗಿದವನು ಯಾರು ? ಬೇರೊಂದು ಪಶು ದೊರೆಯಿತೇ ? ಅಪಾಯವೆಂದರೇನು ? ಯಾರಿಂದ ? ಎಂಥದ್ದು ? ಈ ರಾತ್ರಿಯಲ್ಲಿ. ಈವರೆಗೆ ಬಾರದ ಅಪಾಯ ಎತ್ತ ಕಡೆಯಿಂದ ? – ಎಂಬುದು ಆ ಪ್ರಶ್ನೆಗಳಿರಬೇಕು.

ಬಂಧಿತ ಉತ್ತರ ಹೇಳಲು ತಡಮಾಡಿದ. ಪಂಜಿನ ವ್ಯಕ್ತಿಗಳು ಹತ್ತಿರ ಬಂದು ಕೆಳಗೆ ಬಿದ್ದಿದ್ದವನ ಬಳಿ ಮಂಡಿಯೂರಿ ಕುಳಿತು, ಅವನು ಬಂಧಿತನಾಗಿರುವುದನ್ನು ಕಂಡು ದಿಗ್ಭ್ರಮೆಯಿಂದ ಪಂಜುಗಳನ್ನು ಉಳಿದವರ ಕೈಗೆ ಕೊಟ್ಟು ಇಬ್ಬರು ಅವನನ್ನು ಗುಹೆಯೊಳಕ್ಕೆ ಒಯ್ಯಲು ಎತ್ತಿದರು ! ಅಷ್ಟೆ ! ಚಾಕ್ರಾಯಣನ ಮತ್ತು ಗೊಂಡರ ಬಾಣಗಳು ಬೇರೆ ಬೇರೆ ದಿಕ್ಕುಗಳಿಂದ ಹಾಯ್ದು, ಬಂಧಿತನನ್ನೊಳಗೊಂಡು ಆ ಗುಹೆಯ ಕಾವಲಿನವರನ್ನೆಲ್ಲ ಸಂಹರಿಸಿದುವು !

ಹೊರಗೆ ಹೋದವರು ಬಾರದೆ, ಒಳಗಿಂದ ಮತ್ತೊಂದು ತಂಡ ಹೊರ ಬಂದು, ಉರಿಯುತ್ತ ಕೆಳಗೆ ಬಿದ್ದಿದ್ದ ಪಂಜುಗಳನ್ನೂ ನೋಡಿ, ಕೆಳಗುರುಳಿದವರ ನರಳಾಟದ ಧ್ವನಿಯನ್ನು ಆಲಿಸಿ, ಯಾರೋ ಶತ್ರುಗಳು ಬಂದಿರಬಹುದೆಂದೂಹಿಸಿ, ಭಯಂಕರವಾಗಿ ಗರ್ಜಿಸುತ್ತಾ ನಾನಾ ದಿಕ್ಕುಗಳತ್ತ ಓಡಿದರು. ಚಾಕ್ರಾಯಣ ಮತ್ತು ಅನುಚರರ ಬಾಣಗಳಿಗೆ ತುತ್ತಾಗಿ ಅವರೂ ಸತ್ತು ಬಿದ್ದರು.

ಬಹಳ ಹೊತ್ತಾಯಿತು! ಯಾರೂ ವಾಪಸ್ಸು ಬಾರದುದನ್ನು ನೋಡಿ,ಗುಹೆಯ ಒಳಗಿಂದ ಮನುಷ್ಯಕಪಾಲಗಳ ಮಾಲಾಧಾರಿಯಾದ, ಬೊಜ್ಜು ಹೊಟ್ಟೆಯ ಒಂದು ನರಾಕೃತಿ ಹೊರಕ್ಕೆ ಬಂದಿತು. ಮೈಗೆಲ್ಲ ವಿಭೂತಿಯನ್ನು ಧರಿಸಿದ್ದ ಅದು ಕೈಯಲ್ಲಿ ತ್ರಿಶೂಲವೊಂದನ್ನು ಹಿಡಿದಿತ್ತು. ಮೊಣಕಾಲಿನಲ್ಲೂ ಪಾದಗಳ ಮಣಿಕಟ್ಟಿನಲ್ಲೂ ಗೆಜ್ಜೆಗಳನ್ನು ಕಟ್ಟಿಕೊಂಡಿದ್ದ ಆ ಆಕೃತಿ, ತಲೆಯನ್ನು ನುಣ್ಣಗೆ ಬೋಳಿಸಿಕೊಂಡಿತ್ತು! ಚಾಕ್ರಾಯಣ ಅದನ್ನು ಜೀವಂತ ಹಿಡಿದು ಅಗಸ್ತ್ಯರಿಗೊಪ್ಪಿಸಬೇಕೆಂದು ಪಿಸುಮಾತಿನಲ್ಲಿ ಅನುಚರರಿಗೆ ಹೇಳಿದ. ಪ್ರಾಯಃ ಒಳಗೆ ಇನ್ನು ಬೇರಾರೂ ಇರಲಾರರಾದುದರಿಂದ, ಇವನನ್ನು ಬಂಧಿಸಿ, ಗುಹೆಯನ್ನು ಶೋಧಿಸಬೇಕೆಂದು ಅಪ್ಪಣೆ ಮಾಡಿದ.

ಕಪಾಲಿ ಸುಲಭವಾಗಿ ಸೆರೆಸಿಕ್ಕ! ತ್ರಿಶೂಲ ಬಿಟ್ಟರೆ ಬೇರಾವ ಆಯುಧವೂ ಅವನಲ್ಲಿರಲಿಲ್ಲ! ಅದೂ ಅಲಂಕಾರಕ್ಕಾಗಿ ಇದ್ದದ್ದೇ, ವಿನಾ ಉಪಯೋಗಕ್ಕಾಗಿ ಅಲ್ಲ. ಮೈಭಾರವೇ ಬಹಳವಾಗಿದ್ದ ಅವನು ಗೊಂಡರೊಡನೆ ಬಹಳ ಹೊತ್ತು ಗುದ್ದಾಡುವುದೂ ಆಗಲಿಲ್ಲ. ಅವನನ್ನು ಬಂಧಿಸಿ ಕೆಳಗೆ ಉರುಳಿಸಲಾಯಿತು. ಒಬ್ಬ ಗೊಂಡನನ್ನು ಅಲ್ಲೇ ಅವನ ಕಾವಲಿಗೆ ಬಿಟ್ಟು ಚಾಕ್ರಾಯಣನೂ ಇನ್ನೊಬ್ಬನೂ ಆ ಗುಹೆಯೊಳಕ್ಕೆ ಹೋದರು. ಒಳಗೆಲ್ಲ ದುರ್ಗಂಧಮಯ ವಾತಾವರಣ.

ನರಮಾಂಸದ, ಇತರ ಪ್ರಾಣಿಗಳ ಮಾಂಸದ ಅವಶೇಷಗಳು ಅಲ್ಲಲ್ಲೇ ಇನ್ನೂ ಬಿದ್ದಿದ್ದವು. ಒಳಗೆ ಪ್ರಿಯವ್ರತನ ಕೈಕಾಲುಗಳನ್ನು ಬಂಧಿಸಿ ಒಂದೆಡೆ ಉರುಳಿಸಲಾಗಿತ್ತು. ಮಂಕಾದ ಪಂಜಿನ ಬೆಳಕಿನಲ್ಲಿ ಅವನ ಅನುಚರರಿಬ್ಬರೂ ಹಾಗೇ ಅದೇ ಸ್ಥಿತಿಯಲ್ಲಿದ್ದುದನ್ನು ನೋಡಿ, ಅಲ್ಲಿ ಬೇರಾರೂ ಇಲ್ಲವೆಂಬುದನ್ನು ಖಚಿತ ಮಾಡಿಕೊಂಡು, ಚಾಕ್ರಾಯಣ ಅವರ ಬಂಧನಗಳನ್ನು ಬಿಡಿಸಿದ. ಪ್ರಿಯವ್ರತನಿಗೆ ಯಾವುದೋ ಮಾದಕ ದ್ರವ್ಯವನ್ನು ಕುಡಿಸಲಾಗಿತ್ತು ಎಂದು ಕಂಡು ಬಂದಿತು. ಅವನು ನಡೆಯುವ ಸ್ಥಿತಿಯಲ್ಲಿರಲಿಲ್ಲ. ಅವನ ಅನುಚರರು ಸ್ವಸ್ಥವಾಗಿದ್ದರೂ ಬಹಳ ಬಳಲಿದ್ದರು. ಪ್ರಾಯಃ ನಾನಾ ಹಿಂಸೆಗಳಿಗೆ ಗುರಿಯಾಗಿದ್ದು, ದಣಿದೂ ಇರಬೇಕು. ಚಾಕ್ರಾಯಣನ ಗುಂಪನ್ನು ಪ್ರಿಯವ್ರತ ನಿಧಾನವಾಗಿ ಹಿಡಿದ. ಅವನನ್ನು ಎತ್ತಿಕೊಂಡು, ಇತರರನ್ನೂ ಬಿಡಿಸಿ ನಡೆಸುತ್ತಾ, ಚಾಕ್ರಾಯಣನೂ ಅನುಚರರೂ ಗುಹೆಯ ಹೊರಕ್ಕೆ ಬಂದರು. ಪ್ರಿಯವ್ರತನ ಕುದುರೆ ಅಲ್ಲಿಯೇ ಎಲ್ಲಾದರೂ ಜೀವಂತ ಇರಬಹುದೇ ? ಎಂದು ಹುಡುಕಲಾಯಿತು! ಅಷ್ಟು ದೂರದ ಮರವೊಂದಕ್ಕೆ ಅದನ್ನು ಕಟ್ಟಿ ಹಾಕಲಾಗಿತ್ತು.

ಈಗ ನಡೆಯಲೂ ಅಶಕ್ತನಾದ ಪ್ರಿಯವ್ರತನನ್ನು ಕುದುರೆಯ ಮೇಲೆ ಹಾಕಿಕೊಂಡು ಚಾಕ್ರಾಯಣ ಸೋಮಶ್ರವನ ಬಳಿ ಹೊರಡುವುದು ಅನಿವಾರ್ಯವಾದಾಗ, ಈ ಡೊಳ್ಳುಹೊಟ್ಟೆಯ ಕಾಪಾಲಿಕನನ್ನೇನು ಮಾಡುವುದು ? ಅಲ್ಲೇ ಬಿಟ್ಟರೆ ಅವನ ನರಬಲಿಯ ಭೈರವಾರಾಧನೆ ಎಂದಾದರೂ ಮುಂದುವರಿದು ಬೇರೆಯವರೂ ಹಾಗೇ ಸಾಯುವುದು ಖಂಡಿತ ! ಮುಂದೆ ಕರೆದೊಯ್ಯೋಣವೆಂದರೆ ಅವನು ನಡೆಯುವುದು ಅಸಾಧ್ಯವಾಗಿತ್ತು. ಏನು ಮಾಡುವುದೆಂದು ಚಾಕ್ರಾಯಣ ತನ್ನವರೊಡನೆ ಅಲ್ಲೇ ಸಮಾಲೋಚಿಸಿದ. ಕೊಂಚ ಮಾತಾಡುವ ಸ್ಥಿತಿಯಲ್ಲಿದ್ದ ಪ್ರಿಯವ್ರತ- "ಇವನನ್ನು ಜೀವಂತ ಉಳಿಸುವುದರಿಂದ ಯಾವ ದೇವತೆಗೂ ಪ್ರೀತಿಯಿಲ್ಲ!

ನಮ್ಮ ಸೈನ್ಯಕ್ಕೆ ಎಂತೂ ಲಾಭವಿಲ್ಲ ! ಜೀವದೊಡನೆ ಉಳಿದು ಅವನಿಗೂ ಸುಖವಿಲ್ಲ ! ಅವನಿಗೆ ಅನ್ನ ಹಾಕುವವರಾರು ? ನರಮಾಂಸದ ರುಚಿ ತಿಳಿದ ಈ ಪಶು ಉಳಿಯಬೇಕೇ ?" ಎಂದು ಆಕ್ರೋಶದಿಂದ ಕೇಳಿದ.

ಗೊಂಡಶಿಷ್ಯರು ಅವನನ್ನು ಅಲ್ಲೇ ನಿರ್ದಾಕ್ಷಿಣ್ಯವಾಗಿ ಮುಗಿಸಿದರು! ಅವನ ಹೆಣವನ್ನು ಅಲ್ಲೇ ಬಿಟ್ಟು ಉಳಿದವರು ದಾರಿ ನಡೆದು ಸೋಮ ಶ್ರವನ ಬಳಿ ಬಂದು ನಡೆದುದನ್ನೆಲ್ಲ ಹೇಳಿದರು ಸಂಧ್ಯಾಕಾಲದ ಮೇಲೆ ಅಂದಿನಿಂದ ಅಗಸ್ತ್ಯಸೈನ್ಯ ಎಲ್ಲಿದ್ದರಲ್ಲೇ ಬೀಡುಬಿಡಬೇಕೆಂಬ ಸಲಹೆ ಯನ್ನು ಅಗಸ್ತ್ಯರ ಮುಂದಿಟ್ಟು ಮಹರ್ಷಿಯನ್ನೊಪ್ಪಿಸಲು ಈ ಪ್ರಸಂಗ ಉಪಯುಕ್ತವಾಯಿತು.

ಅಗಸ್ತ್ಯರನ್ನು ಸೋಮಶ್ರವ, ಪ್ರಿಯವ್ರತ, ಚಾರ್ಕ್ರಾಯಣಾದಿಗಳು ಕೂಡಿಕೊಳ್ಳುವ ವೇಳೆಗೆ ಸರಿರಾತ್ರಿಯೇ ಆಗಿತ್ತು. ಆ ಮುಂಚೆ ಸಂಧ್ಯೋ ಪಾಸನೆ ಮುಗಿಸಿ, ಅಗ್ನಿಹೋತ್ರವನ್ನು ಮುಗಿಸಿ, ಯೋಗದಲ್ಲಿದ್ದ ಅಗಸ್ತ್ಯ ರಿಗೆ ಶಂಕರಮಹಾದೇವ ಸಮಾಧಿಯಲ್ಲಿ ಕಾಣಿಸಿಕೊಂಡ.

"ಮಹರ್ಷೇ ! ಪ್ರಿಯವ್ರತ ಸೌಖ್ಯವಾಗಿ ಹಿಂದಿರುಗುತ್ತಾನೆ. ನನ್ನ ಉಪಾಸನೆಯ ವಿಡಂಬನೆಯ ವಿಕೃತ ಆಚಾರದವನ ಬಳಿ ಅವನು ಸಿಕ್ಕಿಹಾಕಿ ಕೊಂಡಿದ್ದಾನೆ. ಇಲ್ಲಿಗೆ ಸುಖವಾಗಿ ಬರುತ್ತಾನೆ. ಈ ಮುಂದಿನ ಯಾತ್ರೆ ಯಲ್ಲಿ ಇನ್ನಾವ ಆಪತ್ತೂ ಬರಲಾರದು. ವಿಂಧ್ಯದ ಶ್ರೇಣಿಗಳನ್ನು ದಾಟಿ ರುವೆ. ಬಯಲು ಸೀಮೆ ನಿನ್ನ ಮುಂದೆ ಇನ್ನು ಕಾಣಿಸಿಕೊಳ್ಳಲಿದೆ. ಈಗ ಮುಖ್ಯವಾಗಿ ದ್ರಮಿಡದೇಶಾಧಿಪತಿಯ ಬಳಿ ನಿನ್ನ ರಾಯಭಾರಿಯೊಬ್ಬ ನನ್ನು ಕಳುಹು ! ಅಲ್ಲಿ ಅವಶ್ಯ ಮಾಡಬೇಕಾದ ಕೆಲಸವಿದೆ. ಈಗಲೇ ಮಾಡಿದರೆ ಅನುಕೂಲ. ಇಲ್ಲವಾದರೆ ಪ್ರತಿಕೂಲವೂ ಆಗಿ ಕಾರ್ಯ ಕೆಡು ವುದು" ಎಂದು ಹೇಳಿದ.

ಮಹರ್ಷಿ ಕಣ್ಣುಬಿಡುವ ವೇಳೆಗೆ ಪ್ರಿಯವ್ರತ ಬಂದಾಗಿತ್ತು. "ಆ ಕಾಪಾಲಕನಿಂದ ಹೇಗೆ ತಪ್ಪಿಸಿಕೊಂಡು ಬಂದಿರಿ ?" ಎಂದು ಅವರು ಕೇಳಿದಾಗ ಚಾಕ್ರಾಯಣಾದಿಗಳಿಗೆಲ್ಲ ಆಶ್ಚರ್ಯವಾಯಿತು ! ವಿವರಗಳನ್ನೆಲ್ಲ ಕೇಳಿ ಮಹರ್ಷಿ ತೃಪ್ತರಾದರು.

ಕಿರಾತರನ್ನು ಕರೆಸಿ, "ದ್ರವಿಡದೇಶಕ್ಕೆ ಮಾರ್ಗ ಬಲ್ಲಿರಾ ?" ಎಂದು ಕೇಳಿದರು ! ಇನ್ನೂ ಕೃಷ್ಣವೇಣೀನದಿಯೂ, ಅದರ ತಟದ ಮಣಿಮತೀ ಪುರಿಯೂ ಸಮೀಪಿಸದ ಆ ಸ್ಥಿತಿಯಲ್ಲಿ ಇವರಿಗೆ ದ್ರಮಿಡದೇಶದ ಚಿಂತೆ ಯೇಕೆ ? ಎಂದು ಚಾಕ್ರಾಯಣಾದಿಗಳು ವಿಸ್ಮಿತರಾದರು ! ಆದರೆ ಅಗಸ್ತ್ಯರ ರೀತಿನೀತಿಗಳನ್ನೂ, ಅವರ ದಿವ್ಯಜ್ಞಾನವನ್ನೂ ಅರಿತ ಅವರು ಕಿರಾತರನ್ನು ಗೊಂಡರನ್ನು ವಿಚಾರಿಸಲು, ಅವರು ಅಡವಿಯ ಮಾರ್ಗ ಗಳನ್ನೆಲ್ಲ ತಾವು ಬಲ್ಲವರೆಂದೂ, ಅಲ್ಲಿಂದ ಧಾಟಿಸಿ ಬಯಲುಸೀಮೆಗೆ ತಲುಪಿಸುವುದು ತಮ್ಮ ಕರ್ತವ್ಯವೆಂದೂ, ಮುಂದಿನ ದಾರಿ ತಮಗೆ ಗೊತ್ತಿಲ್ಲವೆಂದೂ ಹೇಳಿದರು.

ಚಾಕ್ರಾಯಣ ಸೋಮಶ್ರವರು ಚಿಂತಿಸಿದರು. ಪ್ರಿಯವ್ರತ ದಣಿ ದಿದ್ದರೂ ಬೆಳಗಾಗುವುದರೊಳಗೆ ಚೇತರಿಸಿಕೊಂಡು ಮಹರ್ಷಿಯ ಸೈನ್ಯಕ್ಕೆ ಹೇಗೂ ರಕ್ಷಕನಾಗಿ ನಡೆಯಬಲ್ಲ. ತಾವಿಬ್ಬರೂ ಗೊಂಡರ ಸಹಾಯದಿಂದ ಅಡವಿಯನ್ನು ಧಾಟಿದರೆ, ವೇಗವಾದ ಕುದುರೆಗಳ ಮೇಲೇರಿ ದ್ರವಿಡ ದೇಶವನ್ನು ಹೇಗೋ ಅಲ್ಲಿ ಇಲ್ಲಿ ದಾರಿ ವಿಚಾರಿಸುತ್ತಾ ಸೇರಿ, ಮಹರ್ಷಿಯ ಕಾರ್ಯವನ್ನು ನಡೆಸಲು ಸಾಧ್ಯ, ಎಂದು ತಮ್ಮೊಳಗೇ ಆಲೋಚಿಸಿ ಸಿದ್ಧರಾಗಿ, ನಮ್ರರಾಗಿ ಮಹರ್ಷಿಗೆ ನಿವೇದಿಸಿದರು.

ಸೈನ್ಯದ ಮುಂಚೂಣಿಯ ಕಾರ್ಯಕ್ಕೆ ಕಾಲಾಯನ, ದಾರ್ಭಿ, ಮೌಲಾಯನ, ವತ್ಸ ಮೊದಲಾದ ಕಿರಿಯ ದೃಢಕಾಯರಾದ ಚುರುಕು

ಬುದ್ಧಿಯ ಯುವಕರನ್ನು ನೇಮಿಸಿ, ಮಹರ್ಷಿ, ಚಾಕ್ರಾಯಣ ಮತ್ತು ಸೋಮಪ್ರಶ್ರರನ್ನು ಮರುದಿನ ಬೆಳಿಗ್ಗೆ ದಕ್ಷಿಣದ ದ್ರವಿಡದೇಶದತ್ತ ಸುಮುಹೂರ್ತದಲ್ಲಿ ಕಳುಹಿಸಿದ. ಅವರು ದೊರೆಯಲ್ಲಿ ಏನೇನು ಹೇಳಬೇಕೆಂಬುದನ್ನೂ ಮಾರ್ಗಮಧ್ಯದಲ್ಲಿ ಅಡಚಣೆಗಳಾದರೆ, ಯಾವಾಗ ಏನೇನು ಮಾಡಬೇಕೆಂಬುದನ್ನೂ ವಿವರವಾಗಿ ಹೇಳಿ, ದಿವ್ಯಭಸ್ಮವನ್ನು ಅವರ ರಕ್ಷೆಗಿತ್ತು, ಅವರ ಕುದುರೆಗಳಿಗೆ ಇಂದ್ರರಕ್ಷೆಯನ್ನೊದಗಿಸಿ, ದಿವ್ಯ ಮಾಲೆಗಳನ್ನು ಶಿಷ್ಯರ ಕೊರಳಿಗೆ ತಾವೇ ಹಾಕಿ, ಆಶೀರ್ವದಿಸಿ ಕಳುಹಿದರು. ಎದೆಗೆ ವ್ಯಾಘ್ರಚರ್ಮದ ಕವಚಗಳನ್ನು ಬಿಗಿದುಕೊಂಡು, ಧನುರ್ಬಾಣಧರರಾಗಿ, ಬೆಟ್ಟದಂತಹ ಕುದುರೆಗಳ ಮೇಲೆ ಕುಳಿತು ಲಗಾಮುಗಳನ್ನು ಕೈಯಲ್ಲಿ ಹಿಡಿದ ಅವರನ್ನು ಕಂಡು ಮಹರ್ಷಿಯೇ "ಕಾರ್ಯಸಿದ್ಧಿಯಾಯಿತು" ಎಂದು ಧನ್ಯನಾಗಿ ಮುಸಿನಕ್ಕ. ಅಶ್ವಾರೋಹಣ ಕಲಿತಿದ್ದ ಕೆಲವು ಗೊಂಡ ಯುವಕರು ಅವರನ್ನು ಹಿಂಬಾಲಿಸಿದರು. ಅರಣ್ಯ ಮುಗಿದೊಡನೆಯೇ ಅವರು ವಾಪಸ್ಸು ಬಂದು ಸೈನ್ಯವನ್ನು ಕೂಡಿಕೊಳ್ಳಬೇಕೆಂದು ಅಪ್ಪಣೆಯಾಗಿತ್ತು. ಔಷಧಿಗಳನ್ನು ಕುದುರೆಯ ಹೆಗಲಲ್ಲಿ ಹೇರಿಕೊಳ್ಳುವುದನ್ನು ಸೋಮಶ್ರವ ಮರೆಯಲಿಲ್ಲ. ಅಗಸ್ತ್ಯೋಪದಿಷ್ಟವಾದ, ಆಪತ್ಕಾಲಕ್ಕೆ ಉಪಯುಕ್ತವಾದ, ದಿವ್ಯ ಮಂತ್ರಗಳು ಇಬ್ಬರ ಬಳಿಯೂ ಇದ್ದವು. ಸಮಯ ಪ್ರಜ್ಞೆಯೂ, ಧೈರ್ಯವೂ, ಶೌರ್ಯವೂ, ಆಚಾರವೂ ಇದ್ದ ಇಬ್ಬರೂ ನಿರಪಾಯರಾಗಿ, ಕಾರ್ಯ ಸಾಧಿಸಿ ಬರುವ ವಿಷಯದಲ್ಲಿ ಅಗಸ್ತ್ಯಪರಿವಾರದಲ್ಲಿ ಯಾರಿಗೂ ಸಂದೇಹವಿರಲಿಲ್ಲ.

* * *

ವಾತಾಪಿ, ಬಹುದಿನಗಳಾದರೂ ಹಿಂದಿರುಗದೇ ಇಲ್ವಲನಿಗೆ ಚಿಂತೆಯಾಯಿತು. ಶುಕ್ರಾಚಾರ್ಯರ ಬಳಿಗೆ ಹೋಗಿ ಅಪ್ತಸಲಹೆಯನ್ನು

ಕೇಳಲು ಇಚ್ಛಿಸಿದ. ಆಚಾರ್ಯನ ಸಮಯ ಹೇಗೆಂದು ಕೇಳಿ ಬರಲು ದೂತರನ್ನು ಶುಕ್ರನ ಸೌಧಕ್ಕೆ ಅಟ್ಟಿದ.

ಶುಕ್ರ ಬಹು ಸಿಟ್ಟಾಗಿದ್ದಂತೆಯೂ, ತಾನೇ ಇಲ್ವಲನಿಗೆ ಹೇಳಿ ಕಳುಹಬೇಕೆಂದಿದ್ದುದಾಗಿಯೂ ಆಚಾರ್ಯ ಉತ್ತರಿಸಿದ. ಆಚಾರ್ಯನ ಕೋಪಕ್ಕೆ ಇಲ್ವಲನಿಗೆ ಕಾರಣ ತಿಳಿಯಲಿಲ್ಲ! ತನಗೆ ಸಂದರ್ಭ ಎಳ್ಳಷ್ಟೂ ಅನುಕೂಲವಿಲ್ಲದ ಆ ದುಃಸಂಧಿಯಲ್ಲಿ ಆಚಾರ್ಯನೂ ಹೀಗೆ ಸಿಟ್ಟಾದರೆ ಏನು ಗತಿ? ಎಂದು ಇಲ್ವಲ ಚಿಂತಿಸುತ್ತಲೇ ಗುರುಮನೆಯನ್ನು ಹೊಕ್ಕ.

ಬಂಗಾರದ ತೂಗುಮಂಚದಲ್ಲಿ ನವಮಣಿಗಳಿಂದಲಂಕೃತವಾದ ಮಣೆಯ ಮೇಲೆ ಹಾಸಿದ್ದ ಸುಪ್ಪತ್ತಿಗೆಯಲ್ಲಿ ಒರಗಿ ಶುಕ್ರ ಕೊಂಚ ಡೋಲಾಯಮಾನನಾಗಿ ವಿಜೃಂಭಿಸಿದ್ದ. ದಿಂಬಿನ ಮೇಲೆ ವೃದ್ಧ, ಶಿರಸ್ಸನ್ನಿಟ್ಟು, ಒಂದು ಕಾಲನ್ನು ನೀಡಿ, ಇನ್ನೊಂದನ್ನು ಅದರ ಮೇಲೆ ಮೇಲೆ ಲಘುವಾಗಿ ಮಡಚಿ, ಶುಕ್ರ ಏನನ್ನೋ ಚಿಂತಿಸುತ್ತಾ ಆಕಾಶವನ್ನು ನೋಡುತ್ತಿದ್ದ.

ಇಲ್ವಲ ಬಂದನೆಂಬುದನ್ನು ಕೇಳಿ, ತಲೆಯ ಬಳಿಯ ರಾಜಾಸನದಲ್ಲಿ ಅವನನ್ನು ಸ್ವಾಗತಿಸಿ, ಕೂಡುವಂತೆ, ಸನ್ನೆಮಾಡಿ, ತಾನೂ ಮೆದುವಾಗಿ ಎದ್ದು ಕುಳಿತ. ಇಲ್ವಲನನ್ನೇ ಬಹುಕಾಲ ದಿಟ್ಟಿಸಿ ನೋಡಿದ. ಇಲ್ವಲ ಏನೂ ತಿಳಿಯದೆ ಗುರುವಿನ ದೃಷ್ಟಿಯನ್ನೆದುರಿಸಿ ತಾನೂ ನೋಡಿದ! ಕೊಂಚ ಕಾಲ ಇಬ್ಬರೂ ಏನನ್ನೂ ಮಾತಾಡಲಿಲ್ಲ! ಆಮೇಲೆ ಶುಕ್ರನೇ ಮಾತಾಡಲಾರಂಭಿಸಿದ.

ಶುಕ್ರ: "ಎಲೋ ಅರಸೇ! ನಿನ್ನವರು ಸೂರ್ಯಪ್ರಕಾಶವನ್ನೂ ಒಂದು ಕಾಲದಲ್ಲಿ ಮಸಕಾಗುವಂತೆ ಮಾಡಿದ್ದವರು ಎಂಬುದು ನೆನಪಿದೆಯೆ?"

ಇಲ್ವಲ : "ಹೌದು, ಆಚಾರ್ಯ !"

ಶುಕ್ರ : "ಕ್ಷೀರಸಮುದ್ರದಲ್ಲಿ ಅಮೃತವಿರುವುದೆಂಬ ರಹಸ್ಯವನ್ನು ನಿನ್ನವರಿಗೆ ಹಿಂದೆ ಹೇಳಿಕೊಟ್ಟವರು ಯಾರು ?

ಇಲ್ವಲ : "ತಾವೇ, ಗುರುಗಳೇ !"

ಶುಕ್ರ : "ಬಲಿಗೆ ವಿಶ್ವಜಿದ್ಯಾಗ ಮಾಡಿಸಿ, ಆ ಪೂರ್ವದಲ್ಲಿ ಇಂದ್ರ ಪದವಿಯನ್ನು ಕೊಡಿಸಿ, ಸಕಲ ಲೋಕವೂ ಅವನ ವಶವಾಗುವಂತೆ ಮಾಡಿದವರಾರು ?"

ಇಲ್ವಲ : "ತಾವೇ ಗುರುಗಳೇ ? ಇಂದೇಕೆ ನನಗೆ ಈ ಇತಿಹಾಸಗಳ ನೆನಪಿನ ಪರೀಕ್ಷೆ ?"

ಶುಕ್ರ : "ಇತಿಹಾಸವನ್ನು ಮರೆತವನು ಮೂರ್ಖನಾಗುತ್ತಾನಾದುದರಿಂದ ನಿನಗೆ ಇತಿಹಾಸವೂ ಅದರ ಪಾಠವೂ ಸರಿಯಾಗಿ ನೆನೆಪಿದೆಯೋ ಇಲ್ಲವೋ ಎಂಬುದನ್ನು ಈಗ ಪರೀಕ್ಷಿಸುವ ಕಾಲ ಬಂದಿದೆ !"

ಇಲ್ವಲ ; "ಗುರುವರ್ಯ ! ನಾನೇ ಬರೆದ 'ಸಮುದ್ರಮಥನ' ವೆಂಬ ಸಂಸ್ಕೃತಕಾವ್ಯವನ್ನು ತಾವೇ ಓದಿ ಶ್ಲಾಘಿಸಿರುವಿರಷ್ಟೆ ?

ಶುಕ್ರ : "ದೊರೆಗೆ ಬರೀ ಪಾಂಡಿತ್ಯವಿದ್ದರೆ ಸಾಲದು. ವಿಮರ್ಶನ ವಿಚಕ್ಷಣತೆಯೂ ಇರಬೇಕು. ಎಲ್ಲಿ, ಹೇಳು; ಸಮುದ್ರಮಥನ ಪ್ರಸಂಗದಲ್ಲಿ ನೀನು ಕಲಿಯಬೇಕಾದ ಪಾಠವೇನು ?

ಇಲ್ವಲ : "ದೇವತೆಗಳನ್ನು ಬದುಕಿರಲು ಬಿಡಬಾರದು ಎಂದು !"

ಶುಕ್ರ : "ಹಾಗಲ್ಲ ! ದೇವತೆಗಳು ನಿಮ್ಮವರನ್ನು ವಂಚಿಸಲು ಬಿಡಬಾರದೆಂದು !! ಅಮೃತಕ್ಕಾಗಿ ಬೆವರು ಸುರಿಸಿದವರು ನೀವು !

ಅಮೃತ ದೊರೆತದ್ದು ಅವರಿಗೆ ! ಮೋಹಿನಿಯ ರೂಪಕ್ಕೆ ಮರುಳಾದವರು ನಿಮ್ಮವರೇ ಅಲ್ಲವೇ ? ವಿಷ್ಣು ನಿಮ್ಮವರನ್ನು ಮರುಳು ಮಾಡಿದ, ಹೌದು. ಅದು ಅವನ ಕಸಬು ! ಅವನು ಮಹಾ ಮಾಯಾವೀ, ಅವನನ್ನು ತಡೆಯುವುದು ನಮಗಾರಿಗೂ ಶಕ್ಯವಿಲ್ಲ ! ಆದರೆ ನಿಮ್ಮವರು ಅವನಿಗೆ – ಆ ದಿವ್ಯರೂಪಕ್ಕೆ ಮರುಳಾಗ ದಿರಲೆಂದು – ನಾನು ಬಂದು ಆಗ ಅಲ್ಲೇ ಉಪದೇಶಿಸಬೇಕಿತ್ತೆ ? ಮಹ ತ್ಕಾರ್ಯ ಸಾಧನೆಯ ಛಲ ಇರುವವನಿಗೆ ಬ್ರಹ್ಮಚರ್ಯ ಇರಬೇಕೆಂದು ನಾನೆಷ್ಟು ಸಲ ನಿಮ್ಮವರಿಗೆ ಹೇಳಿದ್ದೇನೆ ? ಶ್ರದ್ಧೆ, ತಪಸ್ಸು, ಬ್ರಹ್ಮಚರ್ಯ ಇವು ಕೊನೆಯ ತನಕವೂ ಉಳಿದರೆ ಯಾರಾದರೂ ಅಜೇಯರಾಗುತ್ತಾರೆ. ಮಹಾ ಮಹಾ ಅಸುರರು ಅದರಿಂದ ಸಿದ್ಧಿ ಪಡೆದೂ, ಮರುಗಳಿಗೆ ಯಲ್ಲೇ, ಆ ಸಿದ್ಧಿ ತಂದು ಕೊಟ್ಟ ಸಲಕರಣೆಗಳನ್ನೇ ಮರೆತು ಶತ್ರು ಗಳಿಂದ ಹತರಾದರೆಂಬ ಎಷ್ಟು ಇತಿಹಾಸವನ್ನು ನೀನು ಓದಿಲ್ಲ ! ಬ್ರಹ್ಮ ನನ್ನೋ ರುದ್ರನನ್ನೋ ಕಟ್ಟಿಹಾಕಿ, ಅಸಾಧ್ಯವಾದ ವರಗಳನ್ನೂ ಪಡೆದ ನಿನ್ನ ಪೂರ್ವಜರು, ಕೊನೆಗೆ ಹಾಳಾದರೇಕೆ ? ಬ್ರಹ್ಮಚರ್ಯ, ಶ್ರದ್ಧೆ, ತಪಸ್ಸು ಇಲ್ಲದೆಯೇ ಅಲ್ಲವೇ ? **ಅಸುರ** ಎಂದರೆ 'ಬಲಿಷ್ಠ' ಎಂಬ ಗೌರ ವಾರ್ಥವನ್ನು ಹೊಂದಿದ ಶಬ್ದವನ್ನು 'ದುಷ್ಟರು' ಎಂಬರ್ಥದ ಕೆಳ ಮಟ್ಟಕ್ಕೆ ಇಳಿಸಿದವರು ನೀವೇ ಅಲ್ಲವೆ ? ಇದಕ್ಕೆಲ್ಲ ದೇವತೆಗಳನ್ನು ದೂಷಿಸುವಿರಾ ? ವಿಷ್ಣುವೇನೋ ದೇವಪಕ್ಷಪಾತಿ; ಇಂದ್ರಾದಿಗಳೂ ಅಷ್ಟೆ. ನಿಮಗೆಂದೂ ಒಲಿಯಲಾರದ ವೈರಿಗಳು ಅವರು. ಬ್ರಹ್ಮರುದ್ರ ನವಗ್ರಹಾದಿಗಳು, ಲೋಕಪಾಲಕರು, ತಟಸ್ಥರು ! ಇವರನ್ನು ಪಯೋಗಿಸಿ ಕೊಂಡು ಬಹುಸಂಖ್ಯಾಕರಾದ ನೀವು, ಅಲ್ಪಸಂಖ್ಯಾಕರಾದ ದೇವತೆಗಳನ್ನು ವಶದಲ್ಲಿಟ್ಟು ಲೋಕಸಪ್ತಕವನ್ನೂ ಆಳುವುದು ಬಿಟ್ಟು, ಮತ್ತೆ ಮತ್ತೆ ಮಾಡಿದ ತಪ್ಪನ್ನೇ ಮಾಡುತ್ತಿರುವಿರೆಂದರೆ, ನಿಮಗೆ ಗುರುವಾಗಿರಲು ನನಗಿನ್ನು ನಾಚಿಕೆಯಾಗುತ್ತಿದೆ. "

ಇಲ್ವಲ : "ಗುರುಗಳೇ ! ಸುವಿದಿತವಾದ ಈ ಪಾಠವನ್ನು ಇಷ್ಟು ದೀರ್ಘವಾಗಿ ತಾವಿಂದು ನನಗೆ ಬೋಧಿಸುತ್ತಿರುವ ಮರ್ಮವೇನು ? ನನಗೆ ಇಂದ್ರಿಯ ನಿಗ್ರಹವಿಲ್ಲವೆಂದು ತಮ್ಮ ಭಾವನೆಯೇ ? ತಪಸ್ಸಿನ ಶಕ್ತಿ ನನಗೆ ಸಾಲದೆಂದು ಭಾವನೆಯೇ ? ಅಥವಾ ಶೌಚದಲ್ಲಿ ಕೊರತೆಯೇ? ತಮ್ಮ ಭಾವವನ್ನು ತಾವು ಸರಿಯಾಗಿ ತಿಳಿಸಿದರೆ ನಾನು ತಿದ್ದಿಕೊಳ್ಳಲು ಪ್ರಯತ್ನಿಸುವೆ."

ಶುಕ್ರ : "ಅದೇ ನಿನ್ನ ಕೊರತೆ ! ನಾನು ಹೇಳಿಯೂ ಭಾವ ಗ್ರಹಿಸುವ ಶಕ್ತಿ ಇಲ್ಲದಿರುವ ಬುದ್ಧಿಮಾಂದ್ಯ !!" ಇಲ್ವಲ ತಲೆತಗ್ಗಿಸಿದ ! ಏನೂ ಹೇಳಲೂ ಹೊಳೆಯಲಿಲ್ಲ. ಶಿಷ್ಯನ ಮನ ನೊಂದುದಕ್ಕೆ ಚಿಂತಿಸಿ ಶುಕ್ರ ಮುಂದುವರೆಯುತ್ತಾನೆ.

ಶುಕ್ರ : "ನಿನಗೆ ತಟಸ್ಥರಾದ ಯಾವುದಾದರೊಂದು ದೇವತೆಯಲ್ಲಿ ಭಕ್ತಿ ಇರಬೇಕಾದುದು ಅವಶ್ಯವೆಂದು ಹೇಳಿಯೂ ನೀನು ಈವರೆಗೆ ಶಿವೋಪಾಸನೆಯನ್ನೋ ಬ್ರಹ್ಮೋಪಾಸನೆಯನ್ನೋ ಮಾಡಿ ಒಲಿಸಿಕೊಳ್ಳಲಿಲ್ಲ ! ಬರಿಯ ನಾಸ್ತಿಕವಾದವನ್ನು ನಂಬಿದರೆ ಯಾವ ಶಕ್ತಿ ನಿನ್ನನ್ನು ರಕ್ಷಿಸಬಲ್ಲದು ? ನಾನೊಬ್ಬನೇ ನಿನ್ನನ್ನು ಎಷ್ಟು ರಕ್ಷಿಸಬಲ್ಲೆ? ನಾನೇನು ದೈವವೇ ? ಅಗಸ್ತ್ಯ, ವಿಷ್ಣುಭಕ್ತನಾಗಿಯೂ ಶಿವನನ್ನು ಒಲಿಸಿಕೊಂಡ ! ನಿನ್ನ ಮಾಯೆಗಳು ವಿಫಲವಾಗುವಂತಹ ಭಸ್ಮವನ್ನು ಶಿವ ಅವನಿಗೆ ಕೊಟ್ಟ !! ನಿನ್ನ ಒಂದು ದೊಡ್ಡ ಶಕ್ತಿ, ಮಾಯೆ!– ವ್ಯರ್ಥವಾಯಿತು! ಬರೀ ಶಾಂಬರವಿದ್ಯೆಗಳನ್ನು ನೀನೆಷ್ಟು ಅಭ್ಯಸಿಸಿ ಏನು ಪ್ರಯೋಜನವಾಯಿತು ? ಈಗ ನೋಡು ಅಗಸ್ತ್ಯ ತನ್ನ ಶಿಷ್ಯರನ್ನು ದ್ರಾವಿಡ ದೇಶದತ್ತ ಕಳುಹಿದ್ದಾನೆ ! ಅದೂ ಶಿವಸೂಚನೆಯೇ ! ವಾತಾಪಿ ಸಂಧಾನದಲ್ಲಿ ಸಫಲನಾಗಿ ಬರುತ್ತಾನೆಂಬುದನ್ನು ಇದು ಸೂಚಿಸಲಾರದು, ಅಲ್ಲವೇ ? ಶಿವವಿಷ್ಣುಗಳು ಒಂದುಗೂಡಿ ಒಬ್ಬರತ್ತ ನಿಂತರೆಂದರೆ,

ಅವರ ವೈರಿಗೆ ಜಯವೆಲ್ಲಿಯದು ? ನೀನು ದೈವದ್ರೋಹಿ ಎಂಬ ಪಟ್ಟ ವನ್ನು ಹೊತ್ತೆ. ಜನೋಪಕಾರಕ ಕೆಲಸಗಳನ್ನು ನೀನೆಷ್ಟು ಮಾಡಿಯೂ ಅದು ನಿನ್ನ ರಕ್ಷೆಗೆ ನಿಲ್ಲುವುದಿಲ್ಲ. ಇತ್ತ ಜನರ ಬಲವನ್ನೂ ನೀನು ಕಳೆದು ಕೊಂಡೆ ! ವಿದರ್ಭದ ಮುತ್ತಿಗೆ, ಅಗಸ್ತ್ಯಾಶ್ರಮದ ನಿರ್ನಾಮ, ಋಷಿ ಕನ್ಯೆಯರ ಮಾನಭಂಗ, ಹತ್ಯೆ, ಇವೆಲ್ಲವನ್ನೂ ಮಾಡಿಸೆಂದು ನಾನು ನಿನಗೆ ಹೇಳಿದ್ದೆನೇ ? ಭಿಲ್ಲರ ಮುಖಂಡರನ್ನು ಕೊಲ್ಲಿಸಿ, ಅವರ ಠಾಣವನ್ನು ಧ್ವಂಸಮಾಡಿ ಅವರ ಬಲವನ್ನೂ ಕಳೆದುಕೊಂಡೆ ! ಗೊಂಡರನ್ನು ಎದುರು ಹಾಕಿಕೊಂಡದ್ದೂ ಹೀಗೆಯೇ ! ನಾನು ಹೇಳದ ಈ ಅನರ್ಥಕರ ಕೆಲಸಗಳನ್ನು ಮಾಡಿ, ನಾನು ವಿಧಿಸಿದ ಯಾವುದನ್ನು ಮಾಡದೇ ಇರುವ ನಿನಗೆ ನಾನು ಇನ್ನೆಂತು ಗುರುವಾಗಿ ಮುಂದುವರೆಯಬಲ್ಲೆ ? ಮುಂದು ವರೆದರೂ ಪ್ರಯೋಜನವೇನು ? ನನಗೂ ಪ್ರತಿಷ್ಠೆ, ಸ್ವಾಭಿಮಾನವುಂಟು ! ಸ್ವತಃ ಧನಾಢ್ಯನಾದ ನಾನು ನಿನ್ನ ಸಂಬಳಕ್ಕಾಗಿ ಕೂಳು ತಿನ್ನುವ ಮಂತ್ರಿಯೋ, ಪುರೋಹಿತನೋ ಅಲ್ಲವೆಂಬುದನ್ನು ತಿಳಿದಿರುವೆಯಲ್ಲವೇ?"

ಇಲ್ವಲನಿಗೆ ಭಯವಾಯಿತು ! ಶುಕ್ರ ಹೇಳಿದ್ದೆಲ್ಲ ನಿಜವಾಗಿಯೇ ಇತ್ತು ! ಅಗಸ್ತ್ಯರನ್ನು ತಾನು ಗಂಭೀರವಾಗಿ ಗಣಿಸದೆ, ಈ ಕ್ಷುಲ್ಲಕ ಉಪಾಯಗಳಿಂದ ತಣ್ಣಗಾಗಿಸಲು ಯತ್ನಿಸಿ, ಆಗದೆ, ಈಗ ಶತ್ರುವು ಬಲಾಢ್ಯನಾಗಲು ಬಿಟ್ಟಿದ್ದು ತನ್ನದೇ ತಪ್ಪೆಂದು ಅರಿವಾಯಿತು !

ಇಲ್ವಲ : "ಹಾಗಾದರೆ ದ್ರಮಿಡನೂ ಪಾಂಡ್ಯನೂ ನನಗೆ ಅನು ಕೂಲವಾಗಲಾರರೆ !"

ಶುಕ್ರ : "ನಾನು ಭವಿಷ್ಯವನ್ನು ನಿರ್ಧರಿಸುವವನೂ ಅಲ್ಲ! ನುಡಿ ಯುವವನೂ ಅಲ್ಲ. ನಾನೊಬ್ಬ ಪುರುಷಪ್ರಯತ್ನವಾದಿ. ವಾಸ್ತವತೆ ಯನ್ನು ಮರೆಯದೆ, ಪುರುಷನು ಕೊನೆಯತನಕ, ಪುರುಷಾರ್ಥ ಸಿದ್ಧಿ

ಗಾಗಿ ಹವಣಿಸಿ, ಯತ್ನಿಸಬೇಕೆಂಬುದನ್ನು ನಂಬಿದವನು. ದೊರೆಯುವ ಎಲ್ಲಾ ಉಪಾಯಗಳನ್ನೂ ಉಪಯೋಗಿಸಬೇಕೆನ್ನುವವನು. ಒಂದು ಕೆಲಸ ಸಿದ್ಧಿಯಾಗುವ ಮೊದಲೇ, 'ಅದು ಸಿದ್ಧಿಯಾಗದಿದ್ದರೆ ಏನು ಮಾಡಬೇಕೆಂದು ಚಿಂತಿಸು' ಎಂದು ಬೋಧಿಸುವವನು ! "

ಇಲ್ವಲ : " ಇಂಥ ಗುರುವಿರುವಾಗ ನನಗೇನು ಕೊರತೆ ಆಚಾರ್ಯ ? "

ಶುಕ್ರ : "ಹೊಗಳುಭಟ್ಟನಾಗುವುದು ದೊರೆಗೆ ಶೋಭಿಸುವುದಿಲ್ಲ. "

ಇಲ್ವಲನಿಗೂ ಸಹನೆ ಮೀರುತ್ತಿತ್ತು ! ಗುರುವನ್ನು ಎದುರು ಹಾಕಿಕೊಳ್ಳಬಾರದೆಂದು ಈವರೆಗೆ ತುಂಬಾ ಯತ್ನದಿಂದ ನಾಲಗೆಯನ್ನು ಬಿಗಿ ಹಿಡಿದಿದ್ದ ! ಈಗ ಸಂಯಮ ಮೀರುತ್ತ ಬಂದಿತ್ತು.

ಇಲ್ವಲ : "ಆಶ್ರಿತನ ಕಷ್ಟಕಾಲದಲ್ಲಿ ಅವನ ದೋಷಗಳನ್ನು ಪಟ್ಟಿ ಮಾಡದೇ, ಗುಣಗಳನ್ನೇ ಪೋಷಿಸಿ, ಕೈಬಿಡದೆ, ಅವನ ರಕ್ಷಣೆಗೆ ನಿಲ್ಲಬೇಕಾದುದು ಗುರುವಿನ ಕರ್ತವ್ಯ ಅಲ್ಲವೇ, ಆಚಾರ್ಯ ? "

ಶುಕ್ರ : "ನೀನೇ ಹೇಳಿರುವಂತೆ ಇದು 'ಆಶ್ರಿತ'ನ ವಿಷಯ."

ಇಲ್ವಲ : "ಅಂದರೆ ! "

ಶುಕ್ರ : "ಅಂದರೆ, ತನಗೆ ಬೇಕಾದಾಗ ಸ್ವತಂತ್ರನೂ, ತನಗೆ ಕೇಡು ಬಂದಾಗ ಮಾತ್ರ ನಿರಾಶ್ರಿತನೂ, ಗುರುವಿನ ಮೇಲೆ ತನ್ನ ದೋಷಗಳನ್ನು ಹೊರಿಸುವವನೂ ಅಲ್ಲದ ಗುಣಶಾಲೀ, ವಿನೀತನ ವಿಷಯ ಅದು ! "

ಇಲ್ವಲ : "ಈಗ ನಾನು ದುರ್ವಿನೀತನೆಂದು ತಮ್ಮ ಅಭಿಪ್ರಾಯವೇ ?"

ಶುಕ್ರ : "ಅಭಿಪ್ರಾಯವಲ್ಲ ! ಸಿದ್ಧಾಂತ !! ನಿನ್ನ ಒಂದೊಂದೂ ತಪ್ಪು ಹೆಜ್ಜೆಯನ್ನು ಎತ್ತಿತೋರಿಸಿ, ಮನದಟ್ಟು ಮಾಡಿಕೊಡಿ ಕೊಟ್ಟೂ ತಿಳಿಯಲಿಲ್ಲವೆಂದರೆ, ನೀನು ದುರ್ವಿನೀತಮಾತ್ರವಲ್ಲ ! ಮತಿಮಾಂದ್ಯದ ಮೂರ್ಖ ಎನ್ನಬೇಕು !!!"

ಇಲ್ವಲ : "ಆಗಲಿ ಎಂದಿಟ್ಟುಕೊಳ್ಳಿ; ಈಗ ನನಗಿರುವ ಮಾರ್ಗ ವೇನು ?"

ಶುಕ್ರ ಬಹುವಾಗಿ ಚಿಂತಿಸುತ್ತಾನೆ. ಬೇಗ ಉತ್ತರ ದೊರೆಯದೆ ಇಲ್ವಲ ಮೇಲೆದ್ದು ಶುಕ್ರನ ಅಂಗಳದಲ್ಲಿ ಬಹಳ ಹೊತ್ತು ಶತಪಥ ಹಾಕುತ್ತಾನೆ; ಪದೇ ಪದೇ ಆಚಾರ್ಯನ ಮುಖ ನೋಡುತ್ತಾನೆ. ಶುಕ್ರ ಇನ್ನೂ ಚಿಂತೆಯಲ್ಲಿ ಇದ್ದುದನ್ನು ಕಂಡು ಮನಸ್ಸು ಉದ್ವಿಗ್ನವಾಗಿ, ಇನ್ನಷ್ಟು ಚಂಚಲವಾಗಿ, ಕುದಿಯುತ್ತದೆ- ಹತಾಶನಾಗಿ ಮತ್ತೆ ಆಚಾರ್ಯನ ಪಾದದ ಬಳಿಯೇ ಕುಳ್ಳಿರುತ್ತಾನೆ,

ತುಂಬಾ ಚಿಂತಿಸಿದ ನಂತರ ಶುಕ್ರ ಮತ್ತೆ ಮಾತಾರಂಭಿಸುತ್ತಾನೆ.

ಶುಕ್ರ : "ಹಿಂದೆ, ಮಹಾಬಲಿ, ನನ್ನ ಮಾತು ಕೇಳದೆ ಮಿತಿ ಮೀರಿದ ದಾನವನ್ನು ಶತ್ರುವಿಗೇ ಕೊಟ್ಟಂತೆ ಮಾಡಬೇಡ. ಅರಸರಿಗೆ ಸಂಧಿ, ವಿಗ್ರಹಗಳ ಕಾಲ ಮಹತ್ವದ್ದು. ಯಾವಾಗ ಯುದ್ಧ, ಯಾವಾಗ ಒಡಂಬಡಿಕೆ ಎಂದು ಕೂಡಲೇ ಅರಿಯುವ ಸಾಮರ್ಥ್ಯ ಅವನಿಗಿರ ಬೇಕೆಂದು ಹೇಳಿದ್ದೇನೆ. ಸಂಧಿ ಎಂದರೆ ಸೋಲೆಂದು ಭಾವಿಸಬಾರದು ! ಈಗ ನೀನು ಎಲ್ಲ ಬಲವನ್ನೂ ಕಳೆದುಕೊಂಡವನು ! ನಿನಗಿರುವುದು ಧನಬಲವೊಂದೇ ! ಅದು ನಿನ್ನನ್ನು ರಕ್ಷಿಸಲಾರದು !"

ಇಲ್ವಲ : "ಗುರುವೇ ! ಮೃತಸಂಜೀವಿನೀ ವಿದ್ಯೆ ಇರುವ ತನಕ ಏನು ಚಿಂತೆ ?"

ಶುಕ್ರ : ಅದಕ್ಕೇ ನಿನ್ನನ್ನು ಮೂರ್ಖನೆಂದದ್ದು ! ಇದರ ಗುಟ್ಟನ್ನು ನನ್ನ ಶತ್ರುವಾದ ದೇವಗುರು ಬೃಹಸ್ಪತಿಯು ಉಪಾಯದಿಂದ ತನ್ನ ಪುತ್ರನ ಮೂಲಕ ಎಂದೋ ವಶಪಡಿಸಿಕೊಂಡಿದ್ದಾನೆ. ಶತ್ರುಭೇದ್ಯ ವಲ್ಲದ ಆ ಇನ್ನೊಂದು ಮೃತಸಂಜೀವನೀ - ಮಧುವಿದ್ಯೆ - ಅಶ್ವಿನೀ ದೇವತೆಗಳಲ್ಲಿದೆ ! ಅಗಸ್ತ್ಯ ಅದನ್ನರಿಯುವ ದಿನ ದೂರವಿಲ್ಲ. ನನ್ನ 'ಮೃತಸಂಜೀವಿನೀ' ಈಗ ತೂತಾದ ದೋಣಿಯಂತೆ ! ಇದನ್ನಾಶ್ರಯಿಸಿ ಏನಾದರೂ ಅಗಸ್ತ್ಯನ ಮೇಲೆ ಕುಚೇಷ್ಟೆಮಾಡಹೋದರೆ, ಎಚ್ಚರಿಕೆ !, ನಿನಗೇ ಅದು ತಿರುಗುಬಾಣವಾದೀತು !"

ಇಲ್ವಲ : "(ಬುಸುಗುಟ್ಟುತ್ತಾ) ಆಚಾರ್ಯ ! ಹಿತಬೋಧನೆಯ ರೂಪದಲ್ಲಿ ಮಾತುಮಾತಿಗೂ ನನ್ನನ್ನು ನಿರುತ್ಸಾಹಗೊಳಿಸುತ್ತಿರುವ ನೀವು, ಇಂದು ನನಗೆ ಮಿತ್ರರೋ ಶತ್ರುಗಳೋ, ತಿಳಿಯುತ್ತಿಲ್ಲ ! ನನ್ನನ್ನು ಈಗ ಏನು ಮಾಡು ಎಂದು ಆಜ್ಞಾಪಿಸುವಿರಿ ? ನಿಮ್ಮ ಕೊನೆಯ ಆದೇಶ ಏನು ?"

ಶುಕ್ರ : "ನೀನು ಕೇಳುವುದೂ ಇಲ್ಲ, ! ಗೊತ್ತು !! ಆದರೂ ಆಚಾರ್ಯನ ಕರ್ತವ್ಯವೆಂದು ತಿಳಿದು ಹೇಳುತ್ತೇನೆ. ಕೇಳು. ಅಗಸ್ತ್ಯ ಈಗ ಎಲ್ಲ ವಿಧದಲ್ಲಿಯೂ ಪ್ರಬಲ. ಆರ್ಯಸೈನ್ಯವೆಲ್ಲ ಅವನಲ್ಲಿದೆ. ಬ್ರಾಹ್ಮೀಶಕ್ತಿ ಕ್ಷಾತ್ರಶಕ್ತಿ ಎರಡರಲ್ಲೂ ಅವನೀಗ ಸಮೃದ್ಧ. ದೇವತೆಗಳಲ್ಲ ಏಕ ಮುಖವಾಗಿ ಅವನ ರಕ್ಷಣೆಗಿದ್ದಾರೆ. ವನವಾಸೀ ಜನಗಳೆಲ್ಲರ ಆದರವನ್ನೂ ಬಲವನ್ನೂ, ಅವನು ಸಂಪಾದಿಸಿ ಆಗಿದೆ. ದಕ್ಷಿಣದವರೂ ಅವನನ್ನು ಒಗ್ಗೂಡುತ್ತಾರೆ. ಬೇಕಾದರೆ ಪರಶುರಾಮರೂ ಅವರ ಮಿತ್ರ ರಾಗಿದಾರೆ ! ಈ ಅಗಸ್ತ್ಯನನ್ನೆದುರಿಸಲು ನೀನು ಅವನಿಗಿಂತ ಉತ್ತಮ ತಪಸ್ಸು, ಚಾರಿತ್ರ್ಯ, ಶಕ್ತಿಗಳನ್ನು ಸಂಪಾದಿಸಬೇಕಿತ್ತು. ನೀನು ಅದನ್ನು ಮಾಡಲಿಲ್ಲ ! ಈಗ ಅವನು ನಿನ್ನನ್ನು ಎದುರಿಸಲು ಬರುವಷ್ಟರಲ್ಲಿ

ನೀನು ಹಾಗಾಗಲೂ ಶಕ್ಯವಿಲ್ಲ !! ಇದು ಸತ್ಯ, ನಿನಗೀಗಿರುವುದು ಒಂದೇ ದಾರಿ ........

ಇಲ್ವಲ : "ಏನು ಅದು ಗುರುಗಳೇ !"

ಶುಕ್ರ : "ಅಗಸ್ತ್ಯನ ಪಾದಗಳಲ್ಲಿ ಶರಣಾಗು; ತಪ್ಪಾಯಿತೆಂದು ಹೇಳು, ಅವನಿಗೆ ಬೇಕಾದುದನ್ನು ಕೊಟ್ಟು ತೃಪ್ತಿಪಡಿಸಿ ಕಳುಹು. ಇಲ್ಲಿ ಗೊಂಡ ಮುಖಂಡರನ್ನು ಕರೆಸಿ ಸತ್ಕರಿಸು. ಉತ್ತರ ಭಾರತದ ಅರಸರಲ್ಲಿ ಉತ್ತಮ ರಾಯಭಾರಿಗಳನ್ನು ಕಳುಹು. ಅಗಸ್ತ್ಯ ಈಸಲ ಹೇಗಾದರೂ ಇಲ್ಲಿಂದ ಕಾಲುತೆಗೆದರೆ, ಮುಂದೆ, ನೀನು ಬಲಾಢ್ಯನಾದಾಗ ಪ್ರತೀಕಾರ ಮಾಡುವೆಯಂತೆ ! ಅಗಸ್ತ್ಯ ಶಿಥಿಲನಾಗುವವರೆಗೂ ಕಾಲ ಕಾಯಬೇಕು. ತಪಸ್ವಿಗಳಲ್ಲೂ ಲೋಪದೋಷಗಳು ಪ್ರವೇಶಿಸುವುದುಂಟು. ಅದು ಆದ ಹೊರತು ನಿನ್ನನ್ನೇನೂ ಮಾಡಲಾರೆ. ಈಗ ಸಂಧಿಯೇ ನಿನಗೆ ದಾರಿ."

ಇಲ್ವಲ : (ನಿರಾಸೆ, ಕ್ರೋಧ. ಗುರು ಕೈಬಿಟ್ಟ, ಕೈಕೊಟ್ಟ ಎಂಬ ದ್ರೋಹ ಭಾವಗಳಿಂದ ಗುಡಗುಡಿಸುತ್ತಾನೆ !) "ಗುರುವೇ ! ಈ ನೀತಿ ಬೋಧೆಯನ್ನು ನಿಮ್ಮಿಂದ ನಿರೀಕ್ಷಿಸಲು ನಾನು ಈವರೆಗೆ ನಿಮ್ಮ ಶಿಷ್ಯ ನಾಗಿರಬೇಕಿತ್ತೇ ? ಬುದ್ಧಿವಂತನಾದ ಆಚಾರ್ಯ, ಅಸಾಧ್ಯವಾದುದನ್ನೂ ಸಾಧ್ಯ ಮಾಡುತ್ತಾನೆ !"

ಶುಕ್ರ : "ಮೂರ್ಖ ! ದೇವತೆಗಳೂ ಹಿಂದೆ ಸಂಧಿ ಮಾಡಿ ಕೊಂಡರೆಂದು ಅರಿಯೆಯಾ ? ಸಂದರ್ಭವನ್ನು ಕಾಲ ಸೃಷ್ಟಿಸುತ್ತದೆ. ನಾನೂ ಅಲ್ಲ. ನೀನು ಅಲ್ಲ !"

ಇಲ್ವಲ : "ಆದರೆ ಸಮಯಸಾಧಕತೆಯನ್ನು ಸೃಷ್ಟಿಸುವರಾರು,

ಗುರುವರ್ಯರೇ ? ಈಗ ನೀವು ಬೋಧಿಸುತ್ತಿರುವುದು ಶುಕ್ರನೀತಿಯೋ, ಸಮಯಸಾಧಕ ನೀತಿಯೋ ?"

ಶುಕ್ರ : (ಕೋಪಗೊಂಡರೂ. ಶಾಂತ ಮುದ್ರೆಯಿಂದ) "ಅದನ್ನು ಕಾಲವೇ ಉತ್ತರಿಸುತ್ತದೆ. ಕಾಯ್ದು ನೋಡು" ಎನ್ನುತ್ತಾ ಅಂತರ್ಧಾನ ನಾಗುತ್ತಾನೆ !

ಶುಕ್ರ ಹೀಗೆ ದಿಢೀರನೆ ಅಂತರ್ಧಾನನಾಗಬಹುದೆಂಬುದನ್ನು ನಿರೀಕ್ಷಿಸಿರದ ಇಲ್ವಲ "ಆಚಾರ್ಯ, ಆಚಾರ್ಯ, ತಪ್ಪಾಯಿತು, ಕ್ಷಮಿಸಿ; ನನ್ನನ್ನು ಕೈಬಿಡಬೇಡಿ" ಎನ್ನುತ್ತಾ ಗುರುಮನೆಯನ್ನೆಲ್ಲ ಹುಡುಕಾಡುತ್ತಾನೆ.

ಶಂಡಾಮರ್ಕರು ಒಳಗಿಂದ ಬಂದು, ನಡೆದುದನ್ನೆಲ್ಲ ಅರಿತು. "ಆದುದಾಯಿತು ! ನಾವಿದ್ದೇವೆ. ಚಿಂತಿಸಬೇಡ" ಎಂದು ಸಮಾಧಾನ ಮಾಡುತ್ತಾರೆ.

ಭಾರವಾದ ಹೃದಯದಿಂದ ಇಲ್ವಲ ಅರಮನೆಗೆ ಮರಳುತ್ತಾನೆ

—o—

# ೧೮ ದ್ರಮಿಡದೇಶದಲ್ಲಿ ಅಗಸ್ತ್ಯರಾಯಭಾರಿಗಳು !

ಗೊಂಡರೊಡನೆ, ವೇಗಶಾಲೀ ಕುದುರೆಗಳನ್ನು ಹತ್ತಿ ಹೊರಟ ಸೋಮಶ್ರವ ಮತ್ತು ಚಾಕ್ರಾಯಣರು ಎರಡು ಮೂರು ದಿನಗಳಲ್ಲಿ ಗೊಂಡಾರಣ್ಯದ ಗಡಿಯನ್ನು ದಾಟಿ ವಿಶಾಲವಾದ ಬಯಲು ಸೀಮೆಗೆ ಬಂದು ಸೇರಿದರು ! ಅದು ಇಲ್ವಲನ ರಾಜ್ಯವಾಗಿದ್ದು ಅದರಲ್ಲಿ ಹೇಗೋ ಹಾಯ್ದು ಹೋಗಲೇ ಬೇಕಾಗಿತ್ತು. ಕೃಷ್ಣಾನದಿಯನ್ನು ಎಲ್ಲಾದರೊಂದು ಕಡೆ ದಾಟುವುದು ಅನಿವಾರ್ಯವೂ ಆಗಿತ್ತು. ಅದರ ತಟದಲ್ಲೇ ಎಲ್ಲೋ ಇಲ್ವಲನ ರಾಜಧಾನಿ, ಮಣಿಮತೀಪುರಿಯೂ ಇತ್ತೆಂದು ಅವರೆಲ್ಲ ಕೇಳಿ ದ್ದರು. ಈಗ ಅವರು ಅದರ ಸಮೀಪಕ್ಕೇ ಬಂದೂ ಬಿಟ್ಟಿದ್ದರು. ಇಲ್ವಲನ ರಾಜ್ಯದ ನೇರ ದಕ್ಷಿಣದತ್ತಣ ಗಡಿಯಲ್ಲೇ ಕಿಷ್ಕಿಂಧೆಯ ಅರಸು ಋಕ್ಷರಜಸ್ಸಿನ ರಾಜ್ಯದ ಗಡಿಯೂ ಆರಂಭವಾಗುವುದಿತ್ತು. ಅದರೊಳ ಗಿಂದ ಹಾಯ್ದು ದ್ರಮಿಡ ದೇಶಕ್ಕೆ ಅದರ ಅಂದಿನ ರಾಜಧಾನಿಯಾಗಿದ್ದ ಕಾಂಚೀ ಪಟ್ಟಣಕ್ಕೆ ಹೋಗುವುದು ಬಲುದೂರವಾಗಿತ್ತು. ಕುದುರೆಗಳೂ ದಣಿದಿದ್ದವು !

ಬಯಲು ಸೀಮೆಯಲ್ಲಿ ಅವರು ಬಂದಿಳಿದಿದ್ದ ಸ್ಥಳದ ಸಮೀಪದ ದಲ್ಲಿ ಒಂದು ಹಳ್ಳಿಯಿತ್ತು. ಗೊಂಡರೂ, ಚಾಕ್ರಾಯಣ ಸೋಮ ಶ್ರವರೂ ವೇಷಗಳನ್ನು ಬದಲಿಸಿ. ಇಲ್ವಲನ ರಾಜಭಟರಂತೆ ವೇಷ ಧರಿಸಿ ದರು. ಆ ಹಳ್ಳಿಗೆ ರಾಜಭಟರು ಬಂದು ಹೋದುದನ್ನು ಕಂಡು ಚಾಕ್ರಾಯಣನಿಗೆ ಈ ಉಪಾಯ ಹೊಳೆದಿತ್ತು. ಅವರೂ ಅದೇ ವೇಷ ದಲ್ಲಿ ಕುದುರೆಗಳ ಮೇಲೆ ಹೊರಟಾಗ ಆ ಹಳ್ಳಿಯಲ್ಲಿ ಯಾರೂ ಅವರನ್ನು ಸಂಶಯದಿಂದ ನೋಡಲಿಲ್ಲ !

ಊರಿನ ಚಾವಡಿಗೆ ಹೋಗಿ, ತಾವು ರಾಜಭಟರೆಂದೂ, ತಮ್ಮ ಕುದುರೆಗಳು ದಣಿದಿವೆಯೆಂದೂ, ಅವುಗಳನ್ನು ಅಲ್ಲೇ ಕೊಂಚದಿನ ಬಿಟ್ಟು ಬೇರೆ ಕುದುರೆಗಳನ್ನು ಏರಿ ಆಗ್ನೇಯದತ್ತ ಅಗತ್ಯ ರಾಜಕಾರ್ಯದ ಮೇಲೆ ಹೋಗುವುದಿದೆಯೆಂದೂ, ಗೊಂಡಭಾಷೆಯಲ್ಲಿ ಹೇಳಿದಾಗ, ಚಾವಡಿಯ ಮೇಲ್ವಿಚಾರಕನಿಗೆ ಯಾವ ಅನುಮಾನವೂ ಬಸಲಿಲ್ಲ! ಇಲ್ವಲನ ಸೈನ್ಯ ದಲ್ಲಿ ಗೊಂಡರೂ ಇದ್ದರಷ್ಟೆ! ಬೇರೆ ಒಳ್ಳೆಯ ಕುದುರೆಗಳು ಬೇಗನೇ ದೊರೆತವು! ಅಲ್ಲಿ ಕೊಂಚ ವಿಶ್ರಾಂತಿ ಪಡೆದು ಉಣಿಸನ್ನೂ ಕಟ್ಟಿಕೊಂಡು ಮೂವರೂ ಮುಂದೆ ನಡೆದು, ಕೃಷ್ಣೆಯನ್ನು ಸುಲಭವಾಗಿ ದಾಟುವ ಸ್ಥಳವನ್ನು (ಹಾಯುಗಡವನ್ನು) ವಿಚಾರಿಸುತ್ತಾ ಅದರ ದಡದಲ್ಲೆ ನಡೆ ದರು. ಮಣಿಮತೀಪುರಿಯು ಅವರು ಬಂದಿದ್ದ ಸ್ಥಳಕ್ಕೆ ಪಶ್ಚಿಮದಲ್ಲೇ ಎಲ್ಲೋ ಆಗಿ ಹೋಯಿತೆಂದೂ ಅದರೊಳಗೆ ಹಾಯಬೇಕಾದ ಪ್ರಮೇಯ ವಿಲ್ಲವೆಂದೂ ಅರಿತು ಅವರಿಗೆ ದೊಡ್ಡದೊಂದು ಆತಂಕವೇ ನಿವಾರಣೆ ಯಾಗಿತ್ತು.

ಮತ್ತೊಂದು ಹಗಲೂ ರಾತ್ರೀ ಪಯಣಿಸಿದ ಮೇಲೆ ಚಾಕ್ರಾಯಣ ನಿಗೆ ಒಂದು ಒಳ್ಳೆಯ ದೃಶ್ಯ ಕಣ್ಣಿಗೆ ಬಿತ್ತು. ಕೃಷ್ಣೆಯು ಗಂಭೀರವಾಗಿ, ಸಣ್ಣದಾಗಿ ಹರಿಯುತ್ತಿದ್ದ ಜಾಗ ಅದು. ಮಳೆಗಾಲ ಕಳೆದು ಶರತ್ಕಾಲ ಬಂದಿದ್ದರಿಂದ ನದಿಯಲ್ಲಿ ಬಹಳ ನೀರಿರಲಿಲ್ಲವೆಂದರೂ ಕುದುರೆಗಳು ಹಾಯುವಂತಿರಲಿಲ್ಲ. ಕೃಷ್ಣೆಯ ಎರಡೂ ಸೀಳುಗಳೂ ಕೂಡಿದ್ದ ಒಟ್ಟು ಪ್ರವಾಹ ಬೇರೆ! ಅಲ್ಲಿ ಒಬ್ಬ ಅಂಬಿಗ ಬೃಹದಾಕಾರದ ದೋಣಿಯಲ್ಲಿ ವರ್ತಕನೊಬ್ಬನ ಸರಕುಗಳನ್ನೂ, ಕುದುರೆಗಳನ್ನೂ, ಸವಾರರನ್ನೂ ಆಗ ತಾನೇ ದಕ್ಷಿಣದ ದಡದಿಂದ ಉತ್ತರದ ದಡಕ್ಕೆ ತಲುಪಿಸಿದ್ದನ್ನು ಕಂಡೇ ಚಾಕ್ರಾಯಣನ ಎದೆ ಸಂತಸದಿಂದ ಉಬ್ಬಿತ್ತು.

ವರ್ತಕ ಸಾಮಾನುಗಳನ್ನು ಕುದುರೆಯ ಮೇಲೆ ಹೇರಿಕೊಂಡು

ತಾವು ಬಂದ ಕಡೆಗೆ ಹೊರಟ ಕೂಡಲೇ ಸೋಮಶ್ರವ ಗೊಂಡ ಭಟನನ್ನು ಆ ದೋಣಿಯುವನತ್ತ ಕಳುಹಿ ತಮ್ಮನ್ನೂ ತಮ್ಮ ಕುದುರೆಗಳನ್ನೂ ಧಾಟಿ ಸುವಂತೆ ರಾಜಭಟನಿಗುಚಿತವಾದ ರೀತಿಯಲ್ಲಿ ಆಜ್ಞಾಪಿಸಿದ! ಎರಡು ಚಿನ್ನದ ಮೊಹರುಗಳನ್ನು ತೋರಿಸಿದ! (ವಿದರ್ಭದ ಮುತ್ತಿಗೆಯಲ್ಲಿ ಸೋತ ಇಲ್ವಲನ ಸೈನ್ಯದ ಕಡೆಯಿಂದ ಅಗಸ್ತ್ಯ ಸೈನ್ಯ ಅಪಾರ ಧನ ಸಂಪತ್ತನ್ನು ಪಡೆದಿದ್ದುದೂ, ಉತ್ತರದ ಕಡೆಯಿಂದಲೂ ಸೈನ್ಯಕ್ಕೆ ಅಷ್ಟಿಷ್ಟು ಹಣಕಾಸು ದೊರೆತದ್ದೂ ನೆನೆಪಿರಲಿ.)

ದೋಣಿ ಬೇಗನೆ ಕುದುರೆಗಳನ್ನೂ ಸವಾರರನ್ನೂ ಅತ್ತ ಧಾಟಿಸಿತು. (ಚಿನ್ನದ ನಾಣ್ಯಗಳು ಅಂಬಿಗನಿಗೆ ಕೈಸೇರಿದವು.)

ಮುಂದೆ ದಾರಿ ಕಠಿಣವಾಗಲಿಲ್ಲ! ಗಂಗಾಸಾಗರ ತೀರದತ್ತ ಕುದುರೆಗಳು ಮಿಂಚಿನ ವೇಗದಲ್ಲಿ ಹಾಯುತ್ತಾ, ಅಲ್ಲಲ್ಲಿ ಹಳ್ಳಿಗಳಲ್ಲಿ ಸವಾರರು, ಅವಶ್ಯ ಬಿದ್ದೆಡೆ, ವಿಶ್ರಮಿಸಿಕೊಂಡು, ಆಹಾರ ಪಡೆಯುತ್ತಾ, ಕ್ಷೀರನದಿಯನ್ನೂ (ಈಗಿನ ಪಾಲಾರ್) ಸ್ತ್ರೀನದಿಯನ್ನು (ಪೆನ್ನಾರ್; ತಮಿಳಿನಲ್ಲಿ ಪೆಣ್ ಆರ್ ಎನ್ನುತ್ತಾರೆ!) ಧಾಟಿತು. ಈ ನದಿಗಳಲ್ಲಿ ಬಹಳ ನೀರೇ ಇರಲಿಲ್ಲ. ಇವರೆಡೂ ನದಿಗಳನ್ನು ಹಾಯುತ್ತಾ ಪಶ್ಚಿಮಕ್ಕೆ ಒಂದು ಪರ್ವತ ಶ್ರೇಣಿಯನ್ನು ಸವಾರರು ಕಂಡರು! ದಾರಿ ಹೋಕರು "ಅದೇ ವಾರಾಹಗಿರಿ!" ಎಂದರು. ಸಮೀಪದಲ್ಲಿ ಒಂದು ಶಿವಕ್ಷೇತ್ರ ವಿರುವುದನ್ನೂ, ಇವು ಪ್ರಸಿದ್ಧ ಯಾತ್ರಾಸ್ಥಳಗಳೆಂಬುದನ್ನು ಅರಿತು, ದರ್ಶನಕ್ಕೆ ವೇಳೆ ಇರದೆ, ಸವಾರರು ಮತ್ತೆ ನಾಲ್ಕುದಿನ ಪಯಣಿಸಿ, ಕಾಂಚೀನಗರಿಯ ಹೊರವಳಯಕ್ಕೆ ಬಂದರು.

ಅಗಸ್ತ್ಯಪೂರ್ವಕಾಲದಿಂದಿಲೂ ಮುಕ್ತಿಕ್ಷೇತ್ರಗಳಲ್ಲೊಂದೆಂದು ಪ್ರಸಿದ್ಧಿ ಪಡೆದಿದ್ದ ಆ ನಗರಿಯ ಪಶ್ಚಿಮದಲ್ಲಿ ಏಕಾಮ್ರೇಶ್ವರನ ಆಲ

ಯವೂ, ಪೂರ್ವದಲ್ಲಿ ವರದವಿಷ್ಣುವಿನ ಆಲಯವೂ, ಈಶಾನ್ಯದಲ್ಲಿ ಒಂದು ಶಾಕ್ತಪೀಠವೂ ಇದ್ದು, ನಗರಿಯ ಪಶ್ಚಿಮ ಭಾಗದಲ್ಲೇ ಕುಮಾರ ಪರ್ಮದೊರೆಯ ಸೊಗಸಾದ ಅರಮನೆಯೂ ಇದ್ದಿತು. ಎತ್ತರ ವಾದ ಕೋಟೆ, ಅಗಲವೂ ಆಳವೂ ಆದ ಕಂದಕಗಳು, ಕೋಟೆಯ ಎತ್ತರದ ಶಿಖರಗಳಲ್ಲಿ ಬಂಗಾರದ ಹೊದ್ದಿಕೆಯ ಕಲಶಗಳಿಂದ ಸುತ್ತು ವರೆದಿದ್ದ ಆ ನಗರಿ ಅನ್ವರ್ಥವಾಗಿಯೇ **ಕಾಂಚೀ** (ಸ್ತ್ರೀಯರು ನಡುವಿಗೆ ಧರಿಸುವ ಒಡ್ಯಾಣವೆಂಬ ಚಿನ್ನದ ಡಾಬು) ಎನಿಸಿತ್ತು. ಪ್ರಧಾನ ದ್ವಾರ ಪಶ್ಚಿಮಕ್ಕೇ ಇದ್ದು ಬಲಾಢ್ಯರಾದ ಕಾವಲುಗಾರರು ಅದನ್ನು ಚೆನ್ನಾಗಿ ಪರಿರಕ್ಷಿಸುತ್ತಿದ್ದರು. ಕೋಟೆಯೊಳಗೆ ಹೋಗಿ ಬರುವ ಜನರನ್ನು ದೂರದಿಂದ ನೋಡುತ್ತಾ ಸೋಮಶ್ರವ ಎರಡು ಮೂರು ಗಂಟೆಯ ಕಾಲ ಕಳೆದು, ಒಳಗೆ ತಾವು ಪ್ರವೇಶಿಸುವುದು ಹೇಗೆಂದು ಚಿಂತಿಸಿದ.

"ಬ್ರಾಹ್ಮಣರು" ಒಳಗೆ ಹೋಗಿ ಬರುವುದನ್ನು ಯಾರೂ ತಡೆಯದೇ ಇದ್ದುದು ಅವನ ಸೂಕ್ಷ್ಮದೃಷ್ಟಿಗೆ ಬಿದ್ದಿತು! ಶೈವ ಬ್ರಾಹ್ಮಣರು! ಹಣೆಯಲ್ಲಿ ಬೆಳ್ಳಿಯಂತಹ ಮೂರುಗೆರೆ ವಿಭೂತಿಯನ್ನು ಧರಿಸಿ, ಮೈಯೆಲ್ಲಾ ಭಸ್ಮಾಲಂಕೃತವಾಗಿ, ಕೊರಳಲ್ಲಿ ರುದ್ರಾಕ್ಷಮಾಲೆ ಧರಿಸಿ, ತೋಳು, ಮಣಿಕಟ್ಟುಗಳಲ್ಲಿ ರುದ್ರಾಕ್ಷಿಗಳನ್ನು ಧರಿಸಿದ್ದವರಿಗೆ ಯಾವ ಅಡತಡೆಯೂ ಇಲ್ಲದ್ದು ಅವನಿಗೂ ಒಂದುಪಾಯ ಸೂಚಿಸಿತು! ಆದರೆ ಹಣೆಯ ಮೇಲುಗಡೆ, ತಲೆಯ ಮುಂದುಗಡೆ ಕೊಂಚ ಶಿಖೆಯನ್ನು ಬೋಳಿಸಿಕೊಂಡು, ಉಳಿದದ್ದನ್ನು ಹಿಂದಿನ ಕೊರಳವರೆಗೆ ಬರುವಂತೆ ದೊಡ್ಡ ಗಂಟುಗಳನ್ನು ಕಟ್ಟಿ ಬಿಟ್ಟುಕೊಂಡಿದ್ದ ಈ ಬ್ರಾಹ್ಮಣರು ಭಿನ್ನ ರಾಗಿದ್ದರೆ ? ಹೆಗಲ ಮೇಲೆ ಯಜ್ಞೋಪವೀತವೂ ಇದ್ದಂತಿರಲಿಲ್ಲ!! "ಇವರೆಂಥ ಬ್ರಾಹ್ಮಣರು ?" ಎಂದು ಸೋಮಶ್ರವ ಚಿಂತಿಸಿದ; ತಾವು ತಲೆಯ ಕೂದಲನ್ನೆಲ್ಲ ಮೇಲೆತ್ತಿಕಟ್ಟಿ, ಮುಂದೆ ಬೋಳಿಸಿದ್ದವರು ಯಜ್ಞೋಪವೀತಧಾರಿಗಳು! ವ್ಯಾಘ್ರಾಜಿನವನ್ನು ಹೊದ್ದು ನಾರುಮಡಿ

ಯನ್ನು ಮುಂಡಿಯಮೇಲೆ ಕಚ್ಚೆಯಂತೆ ಎತ್ತಿಕಟ್ಟಿದ್ದ ತಮ್ಮ ವೇಷವೂ ಈ ಶೈವಬ್ರಾಹ್ಮಣರದ್ದೂ ಭಿನ್ನವಾಗಿದ್ದವು. ಉತ್ತರದ ಅವರು ಮೈಯ್ಯೆಲ್ಲಾ ಯಜ್ಞಭಸ್ಮದಿಂದ ಲೇಪಿಸಿಕೊಂಡಿದ್ದರಿಂದ ಒಂದು ಬಗೆಯ ಸಾಮ್ಯ ಕಾಣುತ್ತಿದ್ದರೂ, ಹಣೆಯಲ್ಲಿ ಅದರ ಮೇಲೆ ತುಳಸೀ ಮೃತ್ತಿಕೆ ಯನ್ನು ( ಅದು ದೊರೆಯದಿದ್ದಾಗ ಯಾವುದೇ ಶುದ್ಧ ಮಣ್ಣನ್ನು ) ಊರ್ಧ್ವ ಪುಂಡ್ರದಂತೆ ಧರಿಸುತ್ತಿದ್ದು, ದಣಿದು ಬೆವರಿದಾಗ ಅದು ಕಾಣುತ್ತಲೇ ಇರಲಿಲ್ಲ !

ಹೇಗಾದರಾಗಲೀ, ಈ ಬ್ರಾಹ್ಮಣರನ್ನು ಆಶ್ರಯಿಸಿದಲ್ಲದೆ ಒಳಗೆ ಹೋಗುವುದು ಕಷ್ಟವೆಂದೂ. ಒಂದು ವೇಳೆ ಹಾಗೆ ಹೋದರೂ ಕಾರ್ಯಸಿದ್ಧಿ ಆಗಲಾರದೆಂದೂ ಚಾಕ್ರಾಯಣನೂ ಸೋಮಶ್ರವಸೂ ಆಲೋಚಿಸಿ, ಒಂದು ತೀರ್ಮಾನಕ್ಕೆ ಬಂದರು ಗೊಂಡರು ಕುದುರೆ ಗಳನ್ನು ಕೊಂಚ ಹಿಂದಕ್ಕೇ ಒಯ್ದು, ಬದಿಯ ಹಳ್ಳಿಯಲ್ಲಿ ಆಹಾರ ಪಡೆದು, ಅಲ್ಲೇ ತೋಟವೊಂದರಲ್ಲಿ ವಿಶ್ರಾಂತಿ ಪಡೆಯುತ್ತಿರಬೇಕೆಂದೂ, ತಾವು ಶೈವ ಬ್ರಾಹ್ಮಣರನ್ನು ಆಶ್ರಯಿಸಿ, ಒಂದೆರಡು ದಿನಗಳಲ್ಲಿ ರಾಜ ಕಾರ್ಯ ಮುಗಿಸಿ ಅಲ್ಲಿಗೆ ವಾಪಸ್ಸು ಬಂದು ಸೇರುವುದೆಂದೂ ಒಪ್ಪಂದವಾಗಿ, ಗೊಂಡರು ಹಿಂದಿರುಗಿದರು.

ಕೋಟೆಯ ಆಚೆ ಒಂದು ಸುಂದರ ತೋಟವಿತ್ತು. ಅದರಲ್ಲಿ ಸ್ನಾನಮಾಡಿ, ವೇಷಗಳನ್ನು ಸರಿಪಡಿಸಿಕೊಂಡು ಕೋಟೆಯ ಬಳಿ ಬರುವುದೆಂದು ಯೋಚಿಸಿ, ಚಾಕ್ರಾಯಣನೂ ಸೋಮಶ್ರವನೂ ಕೊಳದ ಬಳಿ ಬಂದರು !

ಆ ಕೊಳದಲ್ಲಿ ಒಬ್ಬ ಸಂನ್ಯಾಸಿ ಸ್ನಾನ ಮಾಡುತ್ತಿದ್ದರು ! ಅವರ ಶಿಷ್ಯರಿಬ್ಬರು ದಡದಲ್ಲಿರುತ್ತಾ ಜಪಶೀಲರಾಗಿದ್ದರು ! ಅವರೂ ಶೈವ ಬ್ರಾಹ್ಮಣರೇ ಎಂಬುದನ್ನು ಅವರ ವೇಷ ಹೇಳಿತ್ತು. ಸೋಮಶ್ರವನೂ

ಅಲ್ಲಿ ಬಂದಿದ್ದನ್ನು ಅವರೂ ಗಮನಿಸಿ "ಯಾರಿವರು ?" ಎಂಬಂತೆ ಒಬ್ಬರೊಬ್ಬರ ಮುಖವನ್ನು ನೋಡಿಕೊಂಡರು !

ಇವರಿಗೆ ಸಂಸ್ಕೃತ ಬರುವುದೋ ಇಲ್ಲವೋ ಎಂದು ಪರೀಕ್ಷಿಸಲು ಚಾಕ್ರಾಯಣ ಸೋಮಶ್ರವನೊಡನೆ ಸಂಸ್ಕೃತದಲ್ಲಿ ಮಾತನಾಡಲಾರಂಭಿಸಿ, "ಏತೇ ಶೈವಬ್ರಾಹ್ಮಣಾ ಇವ ದೃಶ್ಯನ್ತೇ ! ಕುತ್ರತ್ಯಾಃ ಇತಿ ನ ಜ್ಞಾಯತೇ !! ಪರನ್ತು ಯಜ್ಞೋಪವೀತರಹಿತಾಃ !!! ತೇಜಸ್ವಿನಃ ಏತೇ ಮಹಾಭಾಗಾಃ ಯಾತ್ರಾರ್ಥಿನಃ ಭವೇಯುಃ ! ಏತೇಷಾಂ ಸಹಾಯಂ ಕಿಂಚಿತ್ ಲಭ್ಯತೇ ಚೇತ್, ಅಸ್ಮಾಕಮಪಿ ಶಿವದರ್ಶನಂ ಸುಲಭಂ ಸ್ಯಾತ್, ಉಪರಿ ರಾಜದರ್ಶನಂ ಚ," ಎಂದು ಹೇಳಿದ.

(ಇದರರ್ಥ : "ಇವರು ಶೈವಬ್ರಾಹ್ಮಣರಂತೆ ಕಾಣುತ್ತಾರೆ. ಎಲ್ಲಿಯವರೆಂದು ತಿಳಿಯದು. ಆದರೆ ಯಜ್ಞೋಪವೀತ ಇಲ್ಲದವರು. ತೇಜಸ್ವಿಗಳಾದ ಈ ಮಹಾಶಯರು ಯಾತ್ರಾರ್ಥಿಗಳೇ ಇರಬಹುದು ! ಇವರ ಸಹಾಯ ಕೊಂಚ ದೊರೆತರೆ, ನಮಗೂ ಶಿವದರ್ಶನವು ಸುಲಭವಾದೀತು, ಆಮೇಲೆ ರಾಜದರ್ಶನವೂ ಸಹ !" ಎಂದು.)

ಈ ಮಾತುಗಳ ಅರ್ಥವನ್ನು ಸುಲಭವಾಗಿ ಗ್ರಹಿಸಿದ ಆ ಶಿಷ್ಯರಲ್ಲೊಬ್ಬ ಅವರನ್ನು ನೋಡಿ ತಾನೇ ಮಾತಾಡಿದ. "ಆಗಚ್ಛನ್ತು ಭವನ್ತಃ ! ಅಸ್ಮಾಕಂ ಪ್ರತಿ ಯತ್ ಭವದ್ಭಿಃ ಉಕ್ತಂ ತತ್ಸರ್ವಂ ಸತ್ಯಮೇವ ! ಶಿವದರ್ಶನೇ ಚ, ರಾಜದರ್ಶನೇಚ ಯದವಶ್ಯಂ ಸಾಹ್ಯಂ ತತ್ ಸುತರಾಂ ಲಭ್ಯತೇ ! ಚಿಂತಾ ನ ಖಲು ಕರ್ತವ್ಯಾ !" ಎಂದು ಉತ್ತರಿಸಿದ.

(ಅರ್ಥ : "ಮಹಾನುಭಾವರೇ, ಬನ್ನಿ ! ನೀವು ನಮ್ಮ ಬಗೆಗೆ ಹೇಳಿದುದೆಲ್ಲ ಸತ್ಯ ! ಶಿವದರ್ಶನ ವಿಷಯದಲ್ಲೂ, ರಾಜದರ್ಶನ

ವಿಷಯದಲ್ಲೂ, ಯಾವುದು ಅವಶ್ಯ ಸಹಾಯವಾಗುವುದೋ ಅದು ನಮ್ಮ ಕಡೆಯಿಂದ ಖಂಡಿತ ಸಿಗುವುದು. ಚಿಂತೆ ಬೇಡ" ಎಂದು.)

ಸೋಮಶ್ರವ, ಚಾಕ್ರಾಯಣರು ಅವರನ್ನು ಸಮೀಪಿಸಿದರು "ಯಾರು ತಾವು" ಎಂದು ಅವರು ಕೇಳಿದಾಗ ತಾವು ಉತ್ತರದೇಶದ ಯಾತ್ರಿಕರೆಂದೂ, ಈ ದುರ್ಗಮ ದಕ್ಷಿಣದತ್ತ ಸಾಹಸಪಟ್ಟು ಯಾತ್ರಿಗ ಳಾಗಿ ಬಂದಿರುವುದೆಂದೂ, ತಮ್ಮ ಯಾತ್ರೆ ಹೇಗೂ ಸಫಲವಾದರೆ ಮಾರ್ಗಶ್ರಮವೂ ಮರೆಯುವುದೆಂದೂ, ತಾವು ದಂಡಕಾರಣ್ಯದಲ್ಲಿ ಹಾದು ಬಂದ ಬಗೆಯನ್ನೂ, ಇತರ ಉಪಯುಕ್ತ ವಿಷಯಗಳನ್ನೂ ಹೇಳಿ, ಅವರಿಗೆ ನಂಬಿಕೆಯುಂಟಾಗುವಂತೆ ವರ್ತಿಸಿದರು.

ಯಾತ್ರಿಗಳು ತಾವು ಅದೇ ದ್ರಮಿಡದೇಶದವರೆಂದೂ, ತಮ್ಮ ಗುರುಗಳೂ ಅಲ್ಲಿ ಶಿವಗುರುವಿನ ದರ್ಶನಕ್ಕೆ ಬಂದಿರುವರೆಂದೂ ಹೇಳಿ, ಉತ್ತರಾಪಥದ ಶಿವಾಲಯಗಳ ಬಗೆಗೆ, ಅದರಲ್ಲಿ ಉಜ್ಜಯಿನಿಯ ದೇವಾಲಯ, ಸೌರಾಷ್ಟ್ರದ ಸೋಮೇಶ್ವರಾಲಯಾದಿಗಳ ಬಗೆಗೆ, ಕುತೂಹಲ ತೋರಿಸಿ, ಹೀಗೆ ಇಬ್ಬರ ಸಖ್ಯವೂ ಯಾವ ಅಡೆತಡೆಯೂ ಇಲ್ಲದೆ ಬೆಳೆಯಿತು. ತಮ್ಮ ಗುರುಗಳು ಈಗ ಸ್ನಾನದಲ್ಲಿರುವವರು ಮೌನ ವ್ರತಿಗಳೆಂದೂ, ಅವರಿಗೆ ಮೌನಗುರುಗಳೆಂದೇ ವ್ಯವಹಾರವೆಂದೂ, ಅಲ್ಲಿ ನಾಲ್ಕಾರು ದಿನ ತಾವು ಇರುವುದಾಗಿಯೂ ಸಹ ಹೇಳಿದರು.

ಚಾಕ್ರಾಯಣನೂ ಸೋಮಶ್ರವನೂ ಅಲ್ಲೇ ಸ್ನಾನಾಹ್ನಿಕಗಳನ್ನು ಮುಗಿಸಿ, ಆ ಶೈವ ಬ್ರಾಹ್ಮಣರೂ ಮೌನಗುರುವೂ ಸಿದ್ಧರಾಗುವ ವೇಳೆಗೆ ತಾವೂ ಸಿದ್ಧರಾದರು. ಮೌನಗುರುವು ಶಿಷ್ಯರಿಂದ ಅವರ ಬಗೆಗೆ ತಿಳಿದು ತಾವು ಸಂತುಷ್ಟರಾದುದನ್ನು ತಮ್ಮ ಕಂಗಳಿಂದಲೇ ತೋರಿಸಿದರು. ಎಲ್ಲರೂ ಕೋಟೆಯ ದ್ವಾರದತ್ತ ನಡೆದರು. ದ್ವಾರಪಾಲಕರು ಯಾರನ್ನೂ ತಡೆಯಲಿಲ್ಲವಾದರೂ ಸೋಮಶ್ರವ ಚಾಕ್ರಾಯಣರನ್ನು ಅನುಮಾನ

ದಿಂದ ನೋಡಿ "ಯಾರಿವರು ?" ಎಂಬಂತೆ ಕಂಗಳಲ್ಲೇ ಮೌನಗುರುವಿನ ಶಿಷ್ಯರನ್ನು ಪ್ರಶ್ನಿಸಿದರು. ಅವರು "ಇವರು ಉತ್ತರ ಭಾರತೀಯರು. ನಮ್ಮವರೇ. ಇಲ್ಲಿಗೆ ಯಾತ್ರಾರ್ಥಿಗಳಾಗಿ ಬಂದಿರುವರು" ಎಂದು ದ್ರಮಿಡ ಭಾಷೆಯಲ್ಲಿ ಹೇಳಿದಾಗ ಆ ಪ್ರಶ್ನೆ ಅಲ್ಲಿ ಬಗೆಹರಿದು, ಕೆಲಸ ಸುಗಮ ವಾಯಿತು.

ಎಲ್ಲರೂ ಶಿವಗುರುಗಳ ಮಠಕ್ಕೆ ಹೋಗಿ ಸೇರಿದರು. ತುಂಬಾ ವಿಶಾಲವಾದ ತೋಟದೊಳಗೆ ಭವ್ಯಾಕಾರದ ದೇಗುಲದಂತಹ ಕಲ್ಲಿನ ಕಟ್ಟಡದಲ್ಲಿ ಮಠ ಇತ್ತು, ಸುತ್ತಲೂ ತೆಂಗು, ಬಾಳೆ, ಬಿಲ್ವ, ಕಣಗಲೇ ಮುಂತಾದ ವೃಕ್ಷಗಳೂ, ಪುಷ್ಪದ ಗಿಡಗಳೂ ಹಸಿರಾಗಿ ಬೆಳೆದು, ಅವಕ್ಕೆಲ್ಲ ಬೇಕಾದ ನೀರನ್ನು ಕಪಿಲೆ ಭಾವಿಗಳಿಂದ ಶಿಷ್ಯರು ಹಾಯಿಸುತ್ತಿದ್ದರು. ಮಠದ ಏಕಾಂತತೆ ವಾಚಾಮಗೋಚರವಾದ ಅನುಭವವನ್ನು ಎಂಥ ನಾಸ್ತಿಕನಲ್ಲೂ ಮೂಡಿಸುವಂತಿತ್ತು !

ಶಿವಗುರುಗಳು ಪ್ರಾಯಃ ಐವತ್ತು ದಾಟಿದ್ದ, ಕಾಷಾಯಧಾರೀ ಸನ್ಯಾಸಿಗಳು. ತಲೆಯನ್ನು ಪೂರಾ ಮುಂಡನಮಾಡಿಸಿ ಕೊಂಡಿದ್ದ ಅವರ ವೇಷಭೂಷಣಗಳು ಮೌನಗುರುವಿನ ವೇಷದಂತೆಯೇ ಇದ್ದವು. ಶಿಷ್ಯರೂ ಹಾಗೇ ಕಾಣುತ್ತಿದ್ದರು. ಅವರಿಗೆ ಆಗಂತುಕರ ಪರಿಚಯ ಮಾಡಿಸಲಾಯಿತು. ಅವರಾಡುತ್ತಿದ್ದ ದ್ರಮಿಡಭಾಷೆಯು ಆಗಿನ ರೂಪ, ಹೆಚ್ಚು ಸಂಸ್ಕೃತವನ್ನು ಹೋಲುವ, ಇಂದಿನ ತಮಿಳಿಗೆ ಮೂಲ ರೂಪವಾದ, ಒಂದು ಸುಂದರ ಭಾಷೆ. ಹಾವಭಾವಗಳಿಂದಲೂ ಅರೆಬರೆಕೆ ಸಂಸ್ಕೃತಶಬ್ದಗಳಿಂದಲೂ ಅವರಾಡುತ್ತಿದ್ದುದು ಅಗಸ್ತ್ಯ ಶಿಷ್ಯರಿಗೂ ಅಷ್ಟಿಷ್ಟು ಅರ್ಥವಾಗುತ್ತಿತ್ತು.

ಶಿವಗುರುಗಳು ಆಗಂತುಕರನ್ನು ಸಂಸ್ಕೃತಭಾಷೆಯಲ್ಲೇ ಅನು ಗ್ರಹಿಸಿ, ಅವರು ಎಲ್ಲಿಯವರು, ಏಕೆ ಅಲ್ಲಿ ಬಂದರೆಂಬುದನ್ನೆಲ್ಲಾ

ವಿಚಾರಿಸಿ ತಿಳಿದು, ತಮ್ಮೊಡನೆ ಬೇಕಾದಷ್ಟು ದಿನ ಅವರು ಇರಬಹು ದೆಂದೂ, ಊರನ್ನೆಲ್ಲ ಸುತ್ತಿ ನೋಡಿ, ದೇವಾಲಯಗಳನ್ನು ಸಂದರ್ಶಿಸಿ, ಮುಂದೆ ಹೋಗಬಹುದೆಂದೂ ಬಹು ಗಂಭೀರ ಭಾಷೆಯಲ್ಲಿ ಅನುಗ್ರಹ ಮಾಡಿದರು.

* * *

ರಾತ್ರಿ ಮಠದಲ್ಲಿ ವಿಶ್ರಾಂತರಾದ ಅಗಸ್ತ್ಯಶಿಷ್ಯರಿಗೆ ಅಚ್ಚರಿ ಕಾದಿತ್ತು. ನಿದ್ರೆಬಾರದ ಮಠದ ಹಿರಿಯ ಶಿಷ್ಯರು ನಾಲ್ಕೈದು ಜನ ಜಗಲಿಯಮೇಲೆ ಹೀಗೆ ಮಾತಾಡುತ್ತಿದ್ದರು.

ಒಬ್ಬ : "ಈ ವಾರ ಉತ್ತರದವರೇ ಬಹಳ ಜನ ಇಲ್ಲಿ ಬಂದಂತಾಯ್ತು. ಎಂಟು ದಿನದ ಹಿಂದೆ ಇಲ್ವಲನ ತಮ್ಮನಂತೆ—ವಾತಾಪಿ ಎಂಬ ರಾಜಕುಮಾರ ಬಂದಿದ್ದ ! ಯಾರೋ ಅಗಸ್ತ್ಯನೆಂಬ ಮಾಯಾ ವಿಯಂತೆ ! ದಕ್ಷಿಣದತ್ತ ದಂಡೆತ್ತಿ ಬರುತ್ತಿರುವನಂತೆ ! ಇನ್ನು ಈ ದೇವಾಲಯಗಳೂ ಮಠ ಮಾನ್ಯಗಳೂ ಉಳಿಯುವದಿಲ್ಲವಂತೆ ! ನಮ್ಮ ಅರಸು ಇಲ್ವಲದೊರೆಯ ಜೊತೆ ಕೈಗೂಡಿಸಿದ ಹೊರತು ಈ ಉತ್ತರದವರು ದಕ್ಷಿಣದವರನ್ನು ಜೀವಸಹಿತ ಬಿಡಲಾರರಂತೆ ! ಈಗ ಯಾರೋ ಈ ಇಬ್ಬರು ಉತ್ತರದ ಶೈವರೂ ಇತ್ತ ಬಂದಿದ್ದಾರೆ, ಪ್ರಾಯಃ ಇಲ್ವಲನ ಕಡೆಯವರಿರಲಾರರು ! ವೇಷಭೂಷಣ ನೋಡಿದರೆ ಬ್ರಾಹ್ಮಣರೆಂದರೂ, ನಮ್ಮಂತೆ ಅಲ್ಲ ! ಭಸ್ಮಧಾರಣ ಒಂದು ನಮಗೆ ಸಾಮಾನ್ಯವಾದರೂ, ಇವರು ಯಜ್ಞೋಪವೀತ ಧರಿಸಿದ್ದಾರೆ. ತಲೆಯಲ್ಲಿ ಜಟೆ ಧರಿಸಿದ್ದಾರೆ. ಇವರು ಆ ಅಗಸ್ತ್ಯನನ್ನು ನೋಡಿರಲು ಸಾಧ್ಯ ! ಇದೇ ವಾರವೇ ಇವರೂ ಬರಬೇಕೆ ?"

ಮತ್ತೊಬ್ಬ : "ಆ ಅಗಸ್ತ್ಯ ವಿಂಧ್ಯಪರ್ವತವನ್ನೇ ಕೆಡವಿದ ನಂತೆ ! ಶಿವದರ್ಶನ ಅವನಿಗಾಗಿದೆಯಂತೆ ! ಅಪಾರ ತಪಸ್ಸು ಅವನಿ

ಗುಂಟಂತೆ, ಇದೆಲ್ಲ ಇದ್ದವನು ಮಾಯಾವಿಯೋ ಎಂದಿಟ್ಟುಕೊಂಡರೂ ನಮ್ಮನ್ನು ಏಕೆ ಹಿಂಸಿಸಬೇಕು ? ಅವನಿತ್ತ ಏಕೆ ದಂಡುಗೂಡಿಸಿಕೊಂಡು ಬರಬೇಕು ?"

ಮಗದೊಬ್ಬ : "ಉತ್ತರ ಭಾರತದ ರಾಜಕೀಯ ನಮಗೇನು ಗೊತ್ತು ? ಪ್ರಸಿದ್ಧನಾದ ಸಹಸ್ರಾರ್ಜುನನನ್ನು ಪರಶುರಾಮರು ಕೊಂದರಲ್ಲ ! ನಮಗೇನು ನಷ್ಟವಾಯಿತು ? ಜಮದಗ್ನಿಗಳ ಆಶ್ರಮದ ಗೋವುಗಳನ್ನು ಆ ದೊರೆ ಕೊಲ್ಲಬಹುದೇ ? ಅದಕ್ಕೆ ಪ್ರತೀಕಾರವನ್ನು ಆತ ಮಾಡಿದ ! ಹಾಗೇ ಇಲ್ವಲನಿಗೂ ಅಗಸ್ತ್ಯನಿಗೂ ಏಕೆ ವೈರವಿದೆಯೋ ಯಾರು ಬಲ್ಲರು ?"

ಒಬ್ಬ : "ಅಂತೂ ಆ ವಾತಾಪಿ ಏನೂ ಉತ್ತರ ಪಡೆಯದೆಯೇ ಇಲ್ಲಿಂದ ಪಾಂಡ್ಯನಾಡಿಗೆ ಹೊರಟ ! ನಮ್ಮ ಅರಸು 'ಯೋಚಿಸಿ ಉತ್ತರಿಸುವೆವು' ಎಂದದ್ದೇ ಸರಿ. ಆದರೆ, ವಾತಾಪಿ ಮತ್ತೆ ಇನ್ನೊಂದು ವಾರದಲ್ಲಿ ಇತ್ತ ಬಂದಾನು. ನಮ್ಮವರ ಉತ್ತರ ಸಿದ್ಧ ವಾಗಿರಬೇಡವೇ ?"

ಇನ್ನೊಬ್ಬ : "ಯೋಚಿಸುವುದಕ್ಕೇನಿದೆ ? ಅಗಸ್ತ್ಯನೂ ಒಂದು ರೀತಿಯ ಬ್ರಾಹ್ಮಣ. ನಾವು ಇನ್ನೊಂದು ರೀತಿಯ ಬ್ರಾಹ್ಮಣರು ! ಪೂಜಾ ರೀತಿ ಬೇರೆ ಇರಬಹುದು. ಆದರೆ ಸಾಮ್ಯವಿದೆ ! ಇಲ್ವಲ ದೈವ ದ್ವೇಷಿ.''

ಮಗದೊಬ್ಬ ; "ಹೇಗೆನ್ನುವೆ, ?"

ಇನ್ನೊಬ್ಬ : "ನಾನು ನೋಡಿಲ್ಲ ! ಇತ್ತ ಬಂದ ಬ್ರಾಹ್ಮಣರು ಹೇಳಿದುದನ್ನು ಕೇಳಿದ್ದೇವೆ. ಇಲ್ವಲ ಬ್ರಾಹ್ಮಣ ನಾಟಕವನ್ನು ಚೆನ್ನಾಗಿ ಆಡುತ್ತಿರುವನಂತೆ ! ಔತಣ, ಉತ್ಸವ, ಹಬ್ಬಗಳಲ್ಲಿ ಸಹಸ್ರ ಸಂಖ್ಯೆಯ

ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಕೈತುಂಬ ಹೊನ್ನು ಕೊಟ್ಟು, ಭೂದಾನ, ಗೋದಾನಗಳನ್ನು ಮಾಡುತ್ತಾ, ಭೋಜನದಲ್ಲಿ ವಿಷ ಹಾಕಿಸಿ, ಅಕಸ್ಮಿಕವೆಂಬಂತೆ ಅವರನ್ನೆಲ್ಲ ಕೊಲ್ಲಿಸುತ್ತಿರುವನಂತೆ! ಅಲ್ಲಿ ಉಂಡು ಬಂದವರು ಕೂಡಲೇ ಸಾಯದವರಾದರೂ, ಏನಾದರೊಂದು ರೋಗ ಹತ್ತಿ ಹತ್ತಾರು ದಿನಗಳಲ್ಲಿ ವಿಕೃತರಾಗಿ, ನಿಧಾನವಾಗಿ ಸಾಯುತ್ತಾರಂತೆ! ಅವನ ತಾಯಿ ತಂದೆಯರ ಶ್ರಾದ್ಧಕ್ಕೆ ನೂರಾರು ನಿಮಂತ್ರಿತರನ್ನು ಕರೆಸಿ, ಅವರಿಗೆ ಹೊತ್ತುಹೋಗಲಾರದಷ್ಟು ಹೊನ್ನು ಕೊಡುವ ಆಸೆ ತೋರಿಸಿ, ಪೂತರಾದ ನಿಷ್ಠ ಬ್ರಾಹ್ಮಣರನ್ನು ನರಮಾಂಸ ಬಡಿಸಿ ವಂಚಿಸಿ, ಸಾಯಿಸುತ್ತಿದ್ದಾನಂತೆ!"

ಒಬ್ಬ : "ಇದೇನು ಮಾತು? ಶ್ರಾದ್ಧದಲ್ಲಿ ಮಾಂಸ ಬಡಿಸುವುದುಂಟೇ?"

ಇನ್ನೊಬ್ಬ : "ಅದು ಉತ್ತರದವರ ಪದ್ಧತಿ ಇರಬಹುದು."

ಮಗದೊಬ್ಬ : "ಹಾಗಾದರೆ ಇಲ್ವಲನೂ ಮಾಯಾವಿಯೋ?"

ಒಬ್ಬ : "ಯಾರು ಮಾಯಾವಿಗಳಾದರೆ ಯಾರಿಗೆ ಲಾಭ, ಯಾರಿಗೆ ನಷ್ಟ? ನಮ್ಮಷ್ಟಕ್ಕೆ ನಾವಿದ್ದರೆ ಆಯಿತಲ್ಲ!"

ಇನ್ನೊಬ್ಬ : "ಮಹಾರಾಯಾ! ಅವರು ನಮ್ಮನ್ನು ಹಾಗೆ ಇರಲು ಬಿಟ್ಟಿರಲ್ಲವೆ?"

ಮಗದೊಬ್ಬ : "ಹಾಗಾದರೆ ಏನು ಮಾಡಬೇಕೆನ್ನುವೆ?

ಮಗದೊಬ್ಬ : "ನನ್ನ ಅಭಿಪ್ರಾಯ ಇದು! ಗುರುಗಳೂ ಇದನ್ನೇ ಒಪ್ಪಿರುವಂತಿದೆ. ಯಾರು ನಮಗೆ ನಮ್ಮ ದೇವಾಲಯ ಪೂಜೆ, ಪುರ, ನಮ್ಮ ಜೀವನ ರೀತಿ, ಮೌಲ್ಯಗಳಿಗೆ ರಕ್ಷಣೆ ಒದಗಿಸು

ವರೋ ಅವರನ್ನೇ ಬೆಂಬಲಿಸುವುದು. ಅರಸು ನಮ್ಮ ಗುರುಗಳನ್ನು ಕರೆಸಿ ಸಲಹೆ ಕೇಳದೇ ಇರಲಾರರು ! ಕೇಳಿದಾಗ ಇದನ್ನೇ ಹೇಳಿ ಬಿಡು ವುದು ! ! ಇದರಲ್ಲಿ ಯಾವ ವಂಚನೆಯು ರಾಜಕೀಯವೂ ಇಲ್ಲ ! ಸ್ವಾತ್ಮರಕ್ಷೆ ! ಸ್ವದೇಶ ರಕ್ಷೆ !! ಸ್ವಧರ್ಮ ರಕ್ಷೆ !!! ಇಲ್ವಲನಂತೂ ವಂಚಕ, ಕೊಲೆಗಾರ ಎಂಬುದನ್ನು ನೂರಾರು ಬ್ರಾಹ್ಮಣರು ಇತ್ತ ಓಡಿ ಬಂದು ಹೇಳಿರುವುದನ್ನು ನಾನೇ ಕೇಳಿದ್ದೇನೆ."

ಒಬ್ಬ : "ಆದರೂ ಪರೀಕ್ಷಿಸಬೇಡವೆ ?"

ಇನ್ನೊಬ್ಬ : "ಅಯ್ಯಾ ! ಮೇಧಾವೀ ! ಕೆಲವೊಂದು ವಿಷಯ ಗಳನ್ನು ಪರೀಕ್ಷಿಸಲಾಗುವುದಿಲ್ಲ. ಬಹು ಜನ ಹೇಳಿದ್ದನ್ನು ನಂಬ ಬೇಕಾಗುತ್ತದೆ ! ಸಿಡಿಲು ಹೊಡೆದರೆ ಸಾಯುವರೆಂಬುದನ್ನು ಸಿಡಿಲನ್ನು ಪರೀಕ್ಷಿಸಿ ನಿಶ್ಚಯಿಸುವುದುಂಟೋ ? ಸತ್ತು ಬಿದ್ದವರನ್ನು ಕಂಡರೆ ಸಾಲದೇ ? ಅಗ್ನಿ ಸುಡುತ್ತದೆಂಬುದನ್ನು ಅದರಲ್ಲಿ ಕೈಯ್ಯಿಟ್ಟೇ ನೋಡು ವವರುಂಟೋ ?"

ಮಗದೊಬ್ಬ : "ಈ ಮಾತು ಆ ಅಗಸ್ತ್ಯನಿಗೂ ಅನ್ವಯವಲ್ಲವೇ?"

ಇನ್ನೊಬ್ಬ : "ಆಗಲಿ ! ಅಗಸ್ತ್ಯ ಶಿಷ್ಯರಾದರೂ ಈವರೆಗೆ ಇತ್ತ ಬಂದಿಲ್ಲ ! ಬಂದಾಗ ಕೇಳಿ, ಯೋಚಿಸಿ, ನೀನೇ ತೀರ್ಮಾನಿಸಿ ಕೊಳ್ಳುವೆಯಂತೆ !"

ಒಬ್ಬ : "ಅಷ್ಟರಲ್ಲಿ ಈ ವಾತಾಪಿ ಇತ್ತ ಬಂದರೆ ?"

ಇನ್ನೊಬ್ಬ : "ವಾತಾಪಿಯೂ ಬಂದಾನು ! ಅಗಸ್ತ್ಯನೇ ಬಂದಾನು !! ವಿಂಧ್ಯನನ್ನೇ ಕೆಡವಿದವನಿಗೆ [illegible] ಅಸಾಧ್ಯ ? [illegible]ದರೂ ಅವನೂ ಶಿವಭಕ್ತನೇ ! ಅವನಿತ್ತ ಬಂದರೆ ನಾವಾಗ [illegible] ಆದೀ ತೆಂದು ನನ್ನ ಹೃದಯ ಹೇಳುತ್ತದೆ.

ಮಗದೊಬ್ಬ : "ನಿನ್ನ ಹೃದಯ ಏನು ಹೇಳಿದರೇನು ? ರಾಜ ಹೃದಯ ಹಾಗೆ ಹೇಳಬೇಡವೆ ?"

ಇನ್ನೊಬ್ಬ : "ಗುರುಹೃದಯ ಹೇಳಿದಂತೆ ರಾಜಹೃದಯ ಕೇಳಿಯೇ ಕೇಳುತ್ತದೆ !! ಗುರುವಿರುವುದೇ ಅದಕ್ಕೆ. ರಾಜನಿಗೆ ಸರಿಯಾದ ಮಾರ್ಗ ತೋರಿಸಲು !"

ಒಬ್ಬ : "ಆಗಲಿ ! ಆಗ ಗುರುವಿಗೂ ಸರಿಯಾದ ಮಾಹಿತಿಕೊಟ್ಟು, ಅವರು ರಾಜನಿಗೆ ಆಗಸ್ತ್ಯನ ಬಗೆಗೆ ಸರಿಯಾಗಿ ಹೇಳುವಂತೆ ಮಾಡಬಲ್ಲ-ವರಾರು ?"

ಇನ್ನೊಬ್ಬ : " ಒಳ್ಳೆಯ ಶಿವಭಕ್ತನಯ್ಯಾ ! ಶಿವ ಪ್ರೇರಿಪಿಸಿದ್ದನ್ನಲ್ಲವೇ ನಮ್ಮ ಗುರು ಆವರಿಗೆ ಹೇಳುವುದು ?"

ಮಗದೊಬ್ಬ : "ಒಂದು ವಿಚಾರ ! ಇಲ್ಲಿ ಯಾರೋ ಇಬ್ಬರು ಉತ್ತರದವರು ಬಂದಿದ್ದಾರಲ್ಲ ! ಅವರನ್ನು ಅಗಸ್ತ್ಯರ ಬಗೆಗೆ ಕೇಳೋಣ. ಪ್ರಾಯಶಃ ಅವರು ಅವನನ್ನು ಕಂಡಿದ್ದಾರು ; ಇಲ್ವಲನ ಬಗೆಗೂ ತಿಳಿದಿದ್ದಾರು !"

ಒಬ್ಬ : "ಯಾರೋ ಯಾತ್ರಿಕರಾಗಿ ಬಂದವರಿಗೆ ನಮ್ಮೂರಿನ ರಾಜಕೀಯ ಏಕೆ ? ಅವರ ದಾರಿಯಲ್ಲಿ ಅವರು ಹೋಗಲಿ, ಬಿಡೋಣ! ಪಾಪ ! ದಣಿದು ಮಲಗಿದ್ದಾರೆ !"

ಇನ್ನೊಬ್ಬ : "ಮಹಾಶಯನೇ ! ನಾವು ಕೇಳಿದ ವಾರ್ತೆ ನಿಜವಾಗಿದ್ದರೆ ಆಗ ನಿಮ್ಮೂರ ರಾಜಕೀಯ, ನಮ್ಮೂರ ರಾಜಕೀಯ ಎಂಬುದಿರುವುದಿಲ್ಲ ! ಎಲ್ಲರೂ ಒಟ್ಟಾಗಿಯೇ ಬದುಕುವ, ಅಥವಾ ಸಾಯುವ ಕಾಲ ಇದು !"

ಮತ್ತೊಬ್ಬ : "ಏನು ಅದು ವಾರ್ತೆ ?"

ಇನ್ನೊಬ್ಬ : "ಆಗಲೇ ಹೇಳಿದನಲ್ಲ ! ಒಂದು, ಅಗಸ್ತ್ಯನೇ ದಂಡೆತ್ತಿ ಬಂದು ನಮ್ಮನ್ನು ಕೊಲ್ಲುವುದು ! ಇನ್ನೊಂದು, ಇಲ್ವಲನಿಗೆ ನಮ್ಮ ಅರಸು ಸಹಾಯಮಾಡಲಿಲ್ಲವೆಂದು ಕೋಪಗೊಂಡು ಅವನೇ ದಂಡೆತ್ತಿ ಬಂದು ನಮ್ಮನ್ನು ಮುಗಿಸುವುದು ! ಅದಕ್ಕೇ ನಾನು ಹೇಳಿದ್ದು ! ನಾವೀಗ ಒಟ್ಟಾಗಿ ಸಾಯಲಿದ್ದೇವೆ, ಅಥವಾ ಬದುಕಲಿದ್ದೇವೆ - ಎಂದು !"

ಒಬ್ಬ : "ಮಹಾರಾಯ ! ರಾತ್ರಿಯಂತೂ ಈಗ ನಿದ್ರೆ ಮಾಡಗೊಡದೆ ಸಾಯಿಸುತ್ತಿರುವೆ ! ಬೆಳಿಗ್ಗೆ ಅಗಸ್ತ್ಯನನ್ನೇ ಕರೆಸುವೆಯೋ, ಇಲ್ವಲನನ್ನೋ ನೋಡೋಣ ! ಮೊದಲು ಮಲಗು !"

ಇನ್ನೊಬ್ಬ : "ಗುರುಗಳು ನಾಳೆ ನಮ್ಮನ್ನೇನಾದರು ಸಲಹೆ ಕೇಳಿದರೆ ಹೇಳುವ ಸ್ಥಿತಿಯಲ್ಲಿರಬೇಡವೇ, ಬೃಹಸ್ಪತಿಯೇ ?"

ಮಗದೊಬ್ಬ : "ಬೃಹಸ್ಪತಿಯೆಂದಬಾರು ?"

ಇನ್ನೊಬ್ಬ : "ಏನಿರಯ್ಯಾ ! ನಿಮಗೆ ಪುರಾಣಶ್ರವಣವನ್ನೂ ಮಾಡಿಸಬೇಕೋ ? ಬೃಹಸ್ಪತಿ ಎಂದರೆ ದೇವತೆಗಳ ಗುರು ! ...ಅಂದ ಹಾಗೆ ! ... ಇನ್ನೊಂದು ವಾರ್ತೆಯೂ ಉಂಟು ... ಮೊನ್ನೆ ಬಂದಿದ್ದ ಇನ್ನೆರಡು ಉತ್ತರದ ಯಾತ್ರಿಕರು .... ಅದನ್ನು ಕುರಿತು ಮಾತಾಡುತ್ತಿದ್ದರು ಕೇಳಲಿಲ್ಲವೆ ? ಶುಕ್ರಾಚಾರ್ಯರು ಅಸುರರ ಗುರುವಂತೆ ! ಇಲ್ವಲನಿಗೆ ಸ್ವಯಂ ಪುರೋಹಿತರಾಗಿದ್ದ ಅವರು ಕೋಪಗೊಂಡು ಇಲ್ವಲನ ಆಸ್ಥಾನ ತೊರೆದು ಹೊದರಂತೆ !"

ಸೋಮಶ್ರವ ಆ ಕತ್ತಲೆಯಲ್ಲಿ ಮೆಲ್ಲನೆ ಚಾಕ್ರಾಯಣನ ಮೈ ಮುಟ್ಟಿ "ಕೇಳಿದೆಯೊ?" ಎಂದು ಪಿಸು ಮಾತಾಡಿದ ! "ಹೌದು"

ಎಂಬಂತೆ ಚಾಕ್ರಾಯಣ ತಲೆ ಆಡಿಸಿದ ! ಇಲ್ವಲನ ಊರನ್ನು ಸ್ಪರ್ಶಿಸ
ದೆಯೇ, ಎಲ್ಲೂ ನಿಲ್ಲದೆಯೇ ಹಗಲು ರಾತ್ರಿ ಪ್ರಯಾಣಮಾಡಿ ತಾವು
ಇಲ್ಲಿಗೆ ಬರುವುದರೊಳಗೇ ಇಲ್ವಲನ ಅರಮನೆಯಲ್ಲಿ ಶುಕ್ರನು ಸಭಾತ್ಯಾಗ
ಮಾಡಿದ ಈ ಸಮಾಚಾರ ಇತ್ತ ಬರುತ್ತದೆಯೆಂದರೆ, ಅತ್ತಣಿಂದ
ಬಂದವರಿಗೆ ಬೇರೊಂದು ನೇರ, ಕಡಿಮೆ ದೂರದ ದಾರಿ ಇರಬೇಕು !
ಎರಡನೆಯದಾಗಿ ಇಲ್ವಲನ ವೈರಿಗಳು ಯಾರೋ ಇತ್ತ ಬಂದಿರಬೇಕು ! !
ಅವರಿಗೆ ಇಲ್ವಲನ ಸಮಾಚಾರಗಳೂ ತಿಳಿದಿರಬೇಕು ಎಂದರೆ, ಅವರು ಅರ
ಮನೆಗೆ ಅತಿ ನಿಕಟವಾದ ಗೂಢಚಾರರ ಸಂಪರ್ಕ ಹೊಂದಿರಬೇಕು ! ! !
ಯಾರವರು ?

"ಇನ್ನೊಬ್ಬ" ಹೇಳಿದ ಸಮಾಚಾರ ಕೇಳಿ, ಶಯನ ಭಂಗಿಯಲ್ಲಿ
ಮಲಗಿ ನಿದ್ರೆಬಾರದೇ ಮಾತಾಡುತ್ತಿದ್ದ ಶೈವಬ್ರಾಹ್ಮಣರೆಲ್ಲರೂ ಧಿಗ್ಗನೆ
ಎದ್ದು ಕುಳಿತು "ಏನೆಂದೆ ?" ಎಂದು ಏಕಕಾಲಕ್ಕೇ ಕೇಳಿದರು.

* * *

ಸೋಮಶ್ರವನೂ ಚಾಕ್ರಾಯಣನೂ ಉಷಃಕಾಲಕ್ಕೆದ್ದು ಮಠದ
ಕೊಳದಲ್ಲಿ ಸ್ನಾನಾಹ್ನೀಕಗಳಿಗಾಗಿ ಹೊರಟರು. ಅವರು ಅದರ ದಡಕ್ಕೆ
ಬರುವಷ್ಟರೊಳಗೇ ಮೌನಗುರುವೂ ಅವರ ಶಿಷ್ಯರೂ ಸ್ನಾನಮುಗಿಸಿ
ಶಿವಮಂತ್ರ ಜಪ ತತ್ಪರರಾಗಿ ಕುಳಿತದ್ದನ್ನು ಕಂಡು ವಿಸ್ಮಿತರಾದರು !
"ಏನಯ್ಯ ! ದಕ್ಷಿಣದವರನ್ನೆಲ್ಲ ರಾಕ್ಷಸ ದಿಕ್ಕಿನವರೆಂದು ಒಂದೇ ಮಾತಿನಲ್ಲಿ
ಉತ್ತರದ ನಾವು ಎತ್ತಿ ಎಸೆಯುತ್ತೇವೆ ! ಇಲ್ಲೂ ದೈವಭಕ್ತರು ಉಂಟ
ಲ್ಲವೆ ? ನೋಡು ? ನಮ್ಮ ಯಾವ ನಿಷ್ಠೆಗೆ ಇವರು ಕಡಿಮೆ ? ಹಾಗೆ
ನೋಡಿದರೆ ಹೆಚ್ಚೇ ಎನ್ನಬೇಕು !" ಎಂದು ಚಾಕ್ರಾಯಣ ಮಿತ್ರನಿಗೆ
ಹೇಳಿದ. ಮೆಲ್ಲನೆ ಇಬ್ಬರೂ ನೀರಲ್ಲಿಳಿದು ಸ್ನಾನ ಮುಗಿಸಿ ಮೈಗೆಲ್ಲ

ಭಸ್ಮ ಪೂಸಿಕೊಂಡು, ಅಗಸ್ತ್ಯ ದೃಷ್ಟವಾದ ಮಂತ್ರಗಳನ್ನೂ ಇತರ ಸಾಂದರ್ಭಿಕ ಮಂತ್ರಗಳನ್ನೂ ಬ್ರಹ್ಮಯಜ್ಞ ಕ್ರಮದಲ್ಲಿ ಪಠಿಸುತ್ತಾ, ಸಂಧ್ಯಾವಂದನೆಗೆ ಕುಳ್ಳಿರುವಷ್ಟರಲ್ಲಿ, ಮೌನಗುರುವೂ ಅವನ ಶಿಷ್ಯರೂ ಕಿವಿ ಅರಳಿಸಿ ಅರಳಿಸಿ ಆ ಮಂತ್ರಗಳನ್ನು ಶ್ರದ್ಧೆಯಿಂದ ಆಲಿಸುತ್ತಿದ್ದುದನ್ನು ಸೋಮಶ್ರವ ಗಮನಿಸಿದ ! "ಇದೂ ಅನುಕೂಲಕ್ಕೇ ಆಯಿತು ! ಉಪಯೋಗಕ್ಕೆ ಬರುತ್ತದೆ" ಎಂದುಕೊಂಡು, ಏನನ್ನೂ ಗಮನಿಸದವನಂತೆ, ತನ್ನ ಜಪದಲ್ಲಿ ಮುಂದುವರಿದ.

ಅಷ್ಟರಲ್ಲಿ ಮಠದ ಶಿಷ್ಯರು ಗುಂಪಾಗಿ ಹೊರಹೊರಟು "ಮಠದ ಆನೆಗೆ ಪ್ರಜ್ಞೆ ತಪ್ಪಿದೆಯಂತೆ ! ಅಯ್ಯೋ ! ಏನುಮಾಡುವುದು ?" ಎಂದು ಅಸಹಾಯಕರಾಗಿ ಚೀರುತ್ತಾ, ಮಠದ ಈಶಾನ್ಯ ಮೂಲೆಯ ಆನೆ ಕರೋಟಿಗೆ ಓಡಿದರು !

ಸೂರ್ಯ ಉದಿಸುತ್ತಾ ಬಂದಿದ್ದ ! ದೊಡ್ಡ ಗುಂಪೇ ಬಂದು ಆ ಪ್ರಜ್ಞಾಶೂನ್ಯವಾದ ಆನೆಯ ಸುತ್ತ ಸೇರಿತ್ತು. ಸ್ವಯಂ ಶಿವಗುರುಗಳೇ ಅತ್ತ ಬಂದರು ! ಮೌನಗುರುವೂ ಅಲ್ಲಿಗೆ ನಿಧಾನವಾಗಿ ಬಂದರು. ಸ್ವಲ್ಪ ಹೊತ್ತಿನಲ್ಲಿ ರಾಜವೈದ್ಯನೂ ಅಲ್ಲಿಗೆ ಬಂದ. ಪರೀಕ್ಷಿಸಿ, ನಾನಾ ಚಿಕಿತ್ಸೆಗಳನ್ನು ಮಾಡುವ ವೇಳೆಗೆ, ಆನೆ, ಹೊಟ್ಟೆಯುಬ್ಬರಿಸಿ, ಉಸಿರಾಡುವುದೂ ಕಷ್ಟವೆನಿಸಿ, ಚಿತ್ರಹಿಂಸೆ ಪಡುತ್ತಿತ್ತು. ಹೊರಳಾಡಲೂ ಶಕ್ತಿಯಿಲ್ಲದೆ ಸೊಂಡಿಲನ್ನು ವಿಕಾರವಾಗಿ ಸುತ್ತುತ್ತಾ, ನೋಡುವವರ ಹೃದಯ ಒಡೆಯುವಂತೆ ಘೀಂಕರಿಸುತ್ತಿತ್ತು. ಶಿವಗುರುಗಳು ಕಣ್ಣಲ್ಲಿ ನೀರು ಮಿಡಿಯುತ್ತಾ, "ಶಿವಾ ! ಶಿವಾ !! ನಿನಗೇನಾಯಿತು ! ನಮ್ಮನ್ನಗಲಿ ಹೊರಟೆಯಾ ?" ಎನ್ನುತ್ತಾ ಆನೆಯ ಅಂಕಿತನಾಮವನ್ನು ಕರೆಯುತ್ತಾ, ನಿಸ್ಸಹಾಯಕರಾಗಿ ಅಳಲಾರಂಭಿಸಿದರು. ಯಾರಿಗೂ ಏನೂ ಮಾಡಲು ತೋರಲಿಲ್ಲ !

ವರದವಿಷ್ಣು ಆಲಯದಿಂದ ವೈಖಾನಸ ದೀಕ್ಷಿತರೊಬ್ಬರು ಬಂದರು ! ತಲೆಯಲ್ಲಿ ಜಟೆಯನ್ನು ಧರಿಸಿ, ಗಡ್ಡ ಮೀಸೆಗಳನ್ನು ಬೋಳಿಸದೇ ದೀಕ್ಷೆ ಬಿಟ್ಟಿದ್ದ ವೈಷ್ಣವ ಮುನಿಗಳು ಅವರು. ಹಣೆಯಲ್ಲಿ ಬಿಳಿಯ ನಾಮಗಳ ಮಧ್ಯೆ ಕೆಂಪು ನಾಮವೊಂದೂ ಸೇರಿ, ಅವು ಅವರ ಹಣೆಯನ್ನೆಲ್ಲ ಆವರಿಸಿ, "ಇವರೇನು ಶ್ವೇತ ದ್ವೀಪದಿಂದ ಬಂದರೋ !" ಎಂಬಂತೆ ಕಾಣುತ್ತಿದ್ದರು. ಅವರೂ ನಾನಾ ಮಂತ್ರಗಳನ್ನುಚ್ಚರಿಸಿ, ತೀರ್ಥ ಪ್ರೋಕ್ಷಣೆ ಮಾಡಿದರು ! ಆನೆಯ ರೋಗ ಯಾವುದಕ್ಕೂ ಬಗ್ಗಲಿಲ್ಲ !

ಸೋಮಶ್ರವ, ಮೌನಗುರುಗಳ ಶಿಷ್ಯನೊಬ್ಬನಿಗೆ "ನಾನೊಂದು ಚಿಕಿತ್ಸೆ ಮಾಡಲೇ ?" ಎಂದು ಸಂಸ್ಕೃತದಲ್ಲಿ ಕೇಳಿದ !

ಎಲ್ಲರೂ ಚಕಿತರಾದರು ! "ಏಕಾಗಬಾರದು ? ಅವಶ್ಯವಾಗಿ ಪ್ರಯತ್ನಿಸಿ ! " ಎಂದು ಶಿವಗುರು ಸಂಸ್ಕೃತದಲ್ಲೇ ಹೇಳಿದರು.

ಸೋಮಶ್ರವ ಅಗಸ್ತ್ಯದತ್ತವಾದ ಭಸ್ಮವನ್ನು ಜೋಳಿಗೆಯಿಂದ ಹೊರತೆಗೆದು, ಆನೆಯ ಎದೆಗೆ, ಮೈಗೆ, ಕಾಲುಗಳಿಗೆ, ಸೊಂಡಿಲಿಗೆ ಪೂಸಿ, ಕಣ್ಮುಚ್ಚಿದ ! ಕೆಲವು ಹೊತ್ತಿನಲ್ಲಿ "ಆನೆಗೆ ವಿಷ ಪ್ರಯೋಗವಾಗಿದೆ" ಎಂದವನೇ, ಅಗಸ್ತ್ಯ ದೃಷ್ಟವಾದ ವಿಷಾಪಹಾರ ಮಂತ್ರವನ್ನು ಜಪಿಸಿದ !

**ಸೂರ್ಯೇ ವಿಷಮಾಸಜಾಮಿ ದೃತಿಂ**
**ಸುರಾವತೋ ಗೃಹೇ ।**
**ಸೋ ಚಿನ್ನು ನ ಮರಾತಿ ನೋ ವಯಂ**
**ಮರಾಮ ! ಆರೇ ! ಅಸ್ಯ ಯೋಜನಂ**
**ಹರಿಷ್ಠಾ ಮಧು ! ತ್ವಾ ಮಧುಲಾ ಚಕಾರ !! ॥**

(ಇದು ಈಗಿನ ಋಗ್ವೇದ ಸಂಹಿತೆಯಲ್ಲಿ 1-191-8 ರಲ್ಲಿ ಬರುತ್ತದೆ. ಇನ್ನೂ ಮೂರು ಮಂತ್ರಗಳೂ ಅಲ್ಲಿ ಉಂಟು.)

ಇದರರ್ಥ : "ವಿಷಹರನಾದ ಸೂರ್ಯನಲ್ಲಿ ಇದೋ ! ಈ ವಿಷವನ್ನು ಸೇರಿಸುತ್ತಿದ್ದೇನೆ. ಇದರಿಂದ ಸೂರ್ಯನಿಗೇನೂ ಅಪಾಯವಿಲ್ಲ ! ಅವನ ಅನುಗ್ರಹದಿಂದ ನಮಗೂ ಮರಣದ ಭೀತಿಯಿಲ್ಲ ! ಹೇಗೆಂದರೆ ಹೆಂಡವನ್ನು ತಯಾರಿಸುವವನು ತನ್ನ ಮನೆಯಲ್ಲಿ ಆ ಸುರೆಯಿಂದ ಚರ್ಮದ ಚೀಲಗಳನ್ನು ತುಂಬಿ ಸೂರ್ಯನ ಬಿಸಿಲಿಗೆ ಇಟ್ಟರೆ, ಆ ಹೆಂಡವು ಸೂರ್ಯನನ್ನು ಬಾಧಿಸಲಾರದಷ್ಟೆ ? ಆ ಸುರಾವ್ಯಾಪಾರಸ್ಥನಾದರೂ ತಾನದನ್ನು ಪಾನಮಾಡದಿರುವುದರಿಂದ ಸಾಯಲಾರ ! ಹಾಗೆ ಈ ಸೂರ್ಯನು, ಇಕೋ ! ಈ ವಿಷದಿಂದ ನನ್ನನ್ನು ಪಾರು ಮಾಡಿದ ! ಎಲ್ಲೈ ವಿಷವೇ ? ಹೀಗೆ, ನನ್ನ ಮಧುವಿದ್ಯೆಯು ವಿಷವಾದ ನಿನ್ನನ್ನು ಅಮೃತವನ್ನಾಗಿಸಿಬಿಟ್ಟಿತು !" ಎಂದು.

ಜಪಿಸುತ್ತಾ, ಕೈಚಿಟಿಕೆ ಹಾಕುತ್ತಾ, ಆನೆಯ ಆ ದೊಡ್ಡ ಮೈಯ್ಯನ್ನು ಎಲ್ಲೆಡೆ ತಡವಲಾರಂಭಿಸಿದ. ಆನೆಯು ಘೀಂಕಾರ ನಿಲ್ಲುತ್ತಾ ಬಂದಿತು. ಕೊನೆಯಲ್ಲಿ ಅರ್ಧಂಬರ್ಧ ಏಳಲು ಹೋಗಿ ಆನೆಯು ವಾಂತಿ ಮಾಡಿತು ! ರಕ್ತದೊಡನೆ, ಒಂದು ಗಟ್ಟಿ ಪದಾರ್ಥವೂ ಅದರಲ್ಲಿ ಹೊರ ಬಂದಿತ್ತು !

ಅದನ್ನು ಶಿವಗುರುವಿಗೆ ಸೋಮಶ್ರವ ತೋರಿಸಿ "ತಪಸ್ವಿಗಳೇ ! ಇದೋ ನೋಡಿ, ಆನೆ ತಿಂದಿದ್ದ ವಿಷ !" ಎಂದು ಹೇಳಿ, ತಾನೂ ಚಾಕ್ರಾಯಣನೂ ಮತ್ತೆ ಕೊಳದ ಬಳಿಗೆ ಹೋಗಲು ಅಡಿಯಿಟ್ಟರು ! ಶಿವಗುರು ಅವನನ್ನು ನಿಲ್ಲಿಸಿ; "ಈ ಅದ್ಭುತವಿದ್ಯೆ ನಿನಗೆ ಹೇಗೆ ಬಂದಿತು ? ನೀನಾರು ? ಇಲ್ಲೇಕೆ ಬಂದೆ ? ಆನೆಗೆ ವಿಷ ಹಾಕಿದವರಾರು ? " ಎಂದು ಒಂದೇ ಸಮನೆ ಪ್ರಶ್ನೆ ಹಾಕಿದರು. ಎಲ್ಲರೂ ಸೋಮಶ್ರವನನ್ನು

ಉತ್ಸುಕತೆಯಿಂದ ನೋಡಲಾರಂಭಿಸಿದ್ದರು. ಆವಸು ಚಾಕ್ರಾಯಣನ ಮುಖನೋಡಿದ. ಸನ್ನೆ ತಿಳಿದು ಹೀಗೆಂದ : "ನಾವು ಅಗಸ್ತ್ಯ ಶಿಷ್ಯರು.''

"ಅಗಸ್ತ್ಯ" ಎಂದೊಡನೆಯೇ, ರಾತ್ರಿ ಮಾತಾಡುತ್ತಿದ್ದ ಆ ಶಿಷ್ಯರು ಅಲ್ಲೇ ಇದ್ದವರಿಗೆ ವಿದ್ಯುತ್ ಸಂಚಾರವಾದಂತಾಯಿತು !

"ತಮ್ಮನ್ನು ಕಾಣಲೆಂದೇ ಇತ್ತ ಬಂದೆವು. ಗುರ್ವಾಜ್ಞೆ ! ವಿಷ ಹಾಕಿದವರನ್ನು ತೋರಿಸಬಲ್ಲೆವು" ಎಂದ ಸೋಮಶ್ರವಸನ್ನು ಭಯಭಕ್ತಿಯಿಂದ ಒಳಗೆ ಕರೆದೊಯ್ದು ಶಿವಗುರು ಒಂದು ರಹಸ್ಯ ಸಭೆ ಸೇರಿಸಿದರು!

—o—

## ೧೯. ಸಮರ್ಥ ರಾಯಭಾರ !

ಆ ರಹಸ್ಯ ಸಭೆ ಶಿವಗುರುಗಳ ಮಠದ ಒಳಾಂಗಣದಲ್ಲಿ ನಡೆಯಿತು. ಗುರುಗಳ ನಾಲ್ವರು ಆಪ್ತರು, ಚಾಕ್ರಾಯಣ, ಸೋಮಶ್ರವ, ಮತ್ತು ಗುರುಗಳು ಅಲ್ಲಿ ಸೇರಿದ್ದರು.

ಅಗಸ್ತ್ಯ ಶಿಷ್ಯರೆಂದು ತಮ್ಮನ್ನು ಕರೆದುಕೊಂಡುದನ್ನು ಕೇಳಿ ವೈಖಾನಸ ದೀಕ್ಷಿತರಿಗೂ ಕುತೂಹಲವೆನಿಸಿದರೂ,'ಬನ್ನಿ' ಎಂದು ಶಿವಗುರುಗಳೇ ಕರೆದರೂ ದೀಕ್ಷಿತರು "ಪೂಜೆಗೆ ತಡವಾಗುತ್ತದೆ" ಎಂಬ ಕಾರಣ ಕೊಟ್ಟು ಹೊರಟೇ ಬಿಟ್ಟರು !

ಆ ದಿನಗಳಲ್ಲಿ (ಈ ದಿನಗಳಲ್ಲೂ ಸಹ !) ವೈಷ್ಣವರು ಶಿವಾಲಯ, ಶೈವ ಮಠಮಠಗಳಿಗೆ ಹೋಗುವುದೂ, ಶೈವರು ವೈಷ್ಣವಾಲಯ, ವೈಷ್ಣವ ಮಠ, ಆಶ್ರಮಗಳಿಗೆ ಹೋಗಿ ಬರುವುದೂ ಬಹಳವಾಗಿ ರೂಢಿಯಲ್ಲೇ ಇರಲಿಲ್ಲ. ಏನಾದರೊಂದು ಬದುಕು ಸಾವಿನ ಪ್ರಶ್ನೆಯೋ, ಮಾನವೀಯ ಸಮಸ್ಯೆಯೋ ಎದ್ದಾಗ ಇಬ್ಬರೂ ಕೂಡುತ್ತಿದ್ದರು. (ವೈಮನಸ್ಯ, ವೈಷಮ್ಯಗಳು ಆಮೇಲಿನ ಕಾಲದವು.) ಆ ಆನೆಯ ಸಾಯುವಂತಿದ್ದ ಸ್ಥಿತಿ ಆ ವೈಷ್ಣವ ಮುನಿಗಳನ್ನು ಅಲ್ಲಿ ಕರೆತಂದಿತ್ತು.

ಸಭೆ ಸೇರಿತು. ಚಾಕ್ರಾಯಣ ಗುರುಗಳ ಆ ನಾಲ್ವರು ಆಪ್ತರನ್ನು ನಿಟ್ಟಿಸಿ ನೋಡಿದ ! ಧ್ವನಿಗಳನ್ನು ಆಲಿಸಿದ. "ರಾತ್ರಿ ಜಗಲಿಯ ಮೇಲೆ ಮಾತಾಡುತ್ತಿದ್ದವರೇ ಇವರು" ಎಂದು ಖಾತ್ರಿ ಅಯಿತು. ಶಿವಗುರುಗಳೇ ಮಾತಾಡಲಾರಂಭಿಸಿದರು. ಚಾಕ್ರಾಯಣನೂ ಸೋಮಶ್ರವನೂ ತಮ್ಮ ಹೆಸರುಗಳನ್ನು ಹೇಳಿ ಪರಿಚಯಿಸಿಕೊಂಡರು. ಆಪ್ತರು ತಮ್ಮನ್ನು ವೇಲಾಯುಧ, ಶಿವಕುಮಾರ, ಪೊನ್ನಂಬಲಂ, ಸಭಾಪತಿ ಎಂದು ಪರಿಚಯಿಸಿಕೊಂಡರು.

ಶಿವಗುರು : "ಉತ್ತರದ ಮಿತ್ರರೇ ! ನಮ್ಮ ಆನೆಯನ್ನು ಬದುಕಿಸಿ ಉಪಕಾರ ಮಾಡಿದಿರಿ. ಬಹಳ ಸಂತೋಷ ಮತ್ತು ನಮ್ಮ ಕೃತಜ್ಞತೆಗಳು. ಆನೆಗ ವಿಷ ಹಾಕಿದವರಾರೆಂದು ಹೇಳುತ್ತೇವೆಂದಿರಿ. ಹೇಳುವಿರಾ !"

ಚಾಕ್ರಾಯಣ : "ಹೇಳುವುದಲ್ಲ, ಗುರುಗಳೇ ! ನೀವೇ ನೋಡ ಬಹುದು" ಎನ್ನುತ್ತಾ, ಅಗಸ್ತ್ಯರು ಕೊಟ್ಟಿದ್ದ ಭಸ್ಮದ ಕೊಂಚವನ್ನು ಅವರ ಕೈಗಿತ್ತು "ಇದು ಅಂಜನದಂತೆಯೂ ಕಾರ್ಯ ಮಾಡಬಲ್ಲುದು. ಕಣ್ಣುಮುಚ್ಚಿ, ರೆಪ್ಪೆಗೆ ಇದನ್ನು ಪೂಸಿಕೊಂಡು ನಿಮ್ಮ ಮಠದ ಎಲ್ಲ ಶಿಷ್ಯರನ್ನೂ ಆಳುಕಾಳಗಳನ್ನೂ, ಎಲ್ಲ ಪರಿವಾರವನ್ನೂ ವೀಕ್ಷಿಸಿ. ನಿಮಗೆ ಸಾಕ್ಷಿಯಾಗಿ ಇನ್ನೊಬ್ಬರನ್ನೂ ಕೂಡಿಸಿಕೊಳ್ಳಿ. ಎಲ್ಲರ ಕಂಗಳೂ ಒಂದೇ ಸತ್ಯ ಹೇಳಿದರೆಮಾತ್ರ ನಂಬಬಹುದು." ಎಂದು ಹೇಳಿ, ಶಿಷ್ಯರಿಬ್ಬರಿಗೂ ಕೊಟ್ಟರು.

ಗುರುಗಳೂ. ವೇಲಾಯುಧನೂ. ಸಭಾಪತಿಯೂ ಭಸ್ಮವನ್ನು ಕಂಗಳ ರೆಪ್ಪೆಗಳಿಗೆ ಪೂಸಿಕೊಂಡು. ಯಾರಿಗೂ ತಿಳಿಸದಂತೆ, ಮಠದ ಎಲ್ಲ ಕೋಣೆಗಳನ್ನೂ. ಬಯಲನ್ನೂ, ಅಲ್ಲಲ್ಲಿ ಕೆಲಸ ಮಾಡುತ್ತಿದ್ದ ನಾನಾ ಪರಿಚಾರಕರನ್ನೂ. ಶಿಷ್ಯವರ್ಗದವರನ್ನೂ ಪರಿಶೀಲಿಸುತ್ತಾ ಒಂದು ಸುತ್ತು ಸುತ್ತಿ ಬಂದರು. ಎಲ್ಲೂ ಯಾವ ವಿಶೇಷವೂ ಬಹುಕಾಲ ಕಾಣ ಬರಲಿಲ್ಲ ! ಗುರುಶಿಷ್ಯರಿಗೆ ಕುತೂಹಲ ಹೆಚ್ಚಿತು !! ಪ್ರತಿದಿನವೂ ಇಂಥ ಉಸ್ತುವಾರಿಯ ವೀಕ್ಷಣೆ ಗುರುಗಳಿಂದ ನಡೆಯುತ್ತಲೇ ಇದ್ದುದ ರಿಂದ ಯಾರಿಗೂ ಯಾವ ಅನುಮಾನವೂ ಬರಲೂ ಇಲ್ಲ.

ಪಾಕಶಾಲೆಗೆ ಬಂದಾಗ ಒಂದು ಚಮತ್ಕಾರ ನಡೆಯಿತು ! ಹತ್ತಾರು ಜನ ದಷ್ಟಪುಷ್ಟರಾದ ಅಡಿಗೆಯವರು ಅಲ್ಲಿ ಕೆಲಸ ಮಾಡುತ್ತಿದ್ದರು.

ದೊಡ್ಡ ಅನ್ನದ ಪಾತ್ರೆಯನ್ನು ಇಬ್ಬರು ಅನಾಮತ್ತಾಗಿ ಎತ್ತಿ ಗಂಜಿ ಬಸಿಯುತ್ತಿದ್ದರು ! ಇನ್ನೊಬ್ಬ ಕಡಾಯಿಯಲ್ಲಿ ಏನೋ ಸಿಹಿಯನ್ನು ಕೆದಕುತ್ತಿದ್ದ. ಹಲವರು ನಾನಾ ಬಗೆಯ ಕಾಯಿಪಲ್ಲೆಗಳನ್ನು ಹೆಚ್ಚು ತ್ತಿದ್ದರು. ಒಬ್ಬ ಹುಣಸೇಹಣ್ಣನ್ನು ಪಾತ್ರೆಯಲ್ಲಿ ಕಿವುಚಿ, ರಸ ಮಾಡುತ್ತಿದ್ದ. ಇಬ್ಬರು ಪಾತ್ರೆಗಳನ್ನು ತೊಳೆದು ಶುದ್ಧಿ ಮಾಡುತ್ತಿದ್ದರು. ಇನ್ನೊಬ್ಬ ಕಸಗುಡಿಸುತ್ತಿದ್ದ. ಹೊಗೆಯೊಂದು ಕಡೆ ಆವರಿಸಿತ್ತು. ಅಕ್ಕಿ ತೊಳೆದ ನೀರನ್ನು ಒಬ್ಬ ಹೆಗಲಮೇಲೆ ಎತ್ತಿ ದೊಡ್ಡ ಪಾತ್ರೆಯಲ್ಲಿ ಆಶ್ರಮದ ಗೋವುಗಳಿಗಾಗಿ ಒಯ್ಯುತ್ತಿದ್ದ. ಆನೆಗಾಗಿ ಹುರುಳಿಯನ್ನು ಒಬ್ಬ ಬೇಯಿಸುತ್ತಿದ್ದ. ಹೀಗೆ ನಾನಾ ಕೆಲಸಗಳು ನಾಗಿದ್ದವು ಅಲ್ಲಿ.

ಶಿವಗುರುಗಳ ಕಣ್ಣಿನ ಭಸ್ಮಲೇಪ ತನ್ನ ಕೆಲಸ ಮಾಡಿ, ಆನೆಗೆ ಹುರುಳೀ ಬೇಯಿಸುತ್ತಿದ್ದವನನ್ನೂ, ಅಕ್ಕಿ ತೊಳೆದ ನೀರನ್ನು ಒಯ್ಯುತ್ತಿದ್ದವನನ್ನೂ, ರಾಕ್ಷಸನ ವೇಷ ಭೂಷಣಗಳಲ್ಲಿ ತೋರಿಸಿತು ! ಕಿಠಾರನೆ ಕಿರುಚಿಕೊಳ್ಳುವುದೊಂದು ಬಾಕಿ–ಅಷ್ಟು ಗಾಬರಿಯೂ, ಆಶ್ಚರ್ಯಕರವೂ ಆದ ಆ ಸಂಗತಿಯನ್ನು ಅವರು ನಂಬಬೇಕೋ ಬೇಡವೋ ಎಂಬಂತೆ ಹಿಂಬಾಲಿಸಿದ್ದ ಶಿಷ್ಯರ ಮುಖಗಳನ್ನು ನೋಡಿದರು ! ಅವರು ಕಿರಿಚಿಕೊಂಡೇ ಬಿಟ್ಟರು !! "ಅಲ್ಲಿ, ಅಲ್ಲಿ!....'' ಎನ್ನುತ್ತಾ ಆ ಇಬ್ಬರ ಕಡೆ ಕೈ ಮಾಡಿ ತೋರಿಸಿ ಮೂರ್ಛಿತರೂ ಆದರು !

ಗುರುಗಳು ಸಂಯಮ ತಂದುಕೊಂಡು "ಇವರನ್ನು ನಮ್ಮ ಹಿಂದೆ ಕರೆತನ್ನಿ, ಜೋಕೆ !" ಎಂದು ಹಿರಿಯ ಭಟ್ಟರಿಗೆ ಹೇಳಿ ಮುಂದೆ ಹೊರಟರು !

ಮೂರ್ಛಿತರಿಗೆ ಶೈತ್ಯೋಪಚಾರ ಮಾಡಿ, ಅವರಿಗೆ ಪ್ರಜ್ಞೆ ಬಂದು ಅವರನ್ನು ನಿಧಾನವಾಗಿ ಮಠದ ಏಕಾಂತ ಶಾಲೆಗೆ ಕರೆತರುವ ವೇಳೆಗೆ ಶಿವಗುರುಗಳು ಮನಸ್ಸಿನ ಸ್ವಾಸ್ಥ್ಯವನ್ನು ತಂದುಕೊಂಡು ವಿಚಾರಣೆಗೆ

ಸಿದ್ಧರಾಗಿದ್ದರು. ಚಾಕ್ರಾಯಣ, ಸೋಮಶ್ರವರು ಮುಸಿನಗುತ್ತಾ ಮುಂದಿನ ತಮಾಷೆಯನ್ನು ನೋಡಲು ಕಾದಿದ್ದರು.

ವಿಚಾರಣೆ, ನಡೆದು, ಮುಗಿಯಿತು. ಅಡುಗೆಯ ಮನೆಗೆ ಸೇರಿದ್ದ ಆ ಅನುಮಾನಾಸ್ಪದ ವ್ಯಕ್ತಿಗಳು ವಾತಾಪಿಯೊಡನೆ ಹೋದವಾರವಷ್ಟೇ ಅಲ್ಲಿಗೆ ಬಂದವರೆಂದೂ, ಶಿವಗುರುಗಳ ಮಠದಲ್ಲಿ ಹೇಗಾದರೂ ಭೀತಿ ಯುಂಟು ಮಾಡಿ, ಸಾಧ್ಯವಾದರೆ ಅರಮನೆಯಲ್ಲೂ ಹೊಕ್ಕು ಭಯದ ವಾತಾವರಣ ಕೂಡಿಸಿ "ಇದೆಲ್ಲ ಆಗಸ್ತ್ಯನ ಮಾಯೆ" ಎಂಬ ಭ್ರಮೆ ತರಿಸಿ, ಇವರನ್ನೆಲ್ಲ ಇಲ್ವಲನತ್ತ ಹೊರಳಿಸುವುದು ತಮ್ಮ ತಂತ್ರವಾಗಿತ್ತೆಂದೂ ಅವರು ಪ್ರಕಟವಾಗಿಯೇ ಒಪ್ಪಿಕೊಂಡರು ! ಅವರನ್ನು ಬಂಧಿಸಿ "ನಾವು ಹೇಳಿದಾಗ ಅರಮನೆಗೆ ಕರೆತನ್ನಿ" ಎಂದು ಹೇಳಿ, ಅನ್ನಾಹಾರ ನಿರಾಕರಿಸಿ ಕತ್ತಲೇ ಕೋಣೆಯಲ್ಲಿ ಕೂಡಿ ಹಾಕಲಾಯಿತು. !

ಸಭೆ ಮುಂದುವರೆಯಿತು ! ಅಗಸ್ತ್ಯರ ಬಗೆಗೆ, ಅವರ ಚಾರಿತ್ರ್ಯದ ಬಗೆಗೆ, ಶಕ್ತಿಯ ಬಗೆಗೆ, ಲೋಕದೃಷ್ಟಿಯ ಬಗೆಗೆ ಸಹಸ್ರ ಉಪನ್ಯಾಸ ಗಳನ್ನು ಮಾಡಿದ್ದರೂ ಆಗದ ಕೆಲಸವನ್ನು ಆ ಆನೆ ಅಂದು ಸಮರ್ಥವಾಗಿ ಮೂಡಿಸಿತ್ತು! ಆಗಿಂದಾಗಲೇ ಅಗಸ್ತ್ಯರ ಭೇಟಿಗೆ ಆಸೆ ಪಡುವವರಂತೆ ಶಿವಗುರುಗಳು ಏನೇನೋ ಹೇಳಿದರು.

ತಮಗೆ ಔತ್ತರೇಯರ ಬಗೆಗೆ ಕೆಲವು ಸಂದೇಹಗಳಿರುವುದಾಗಿಯೂ ಅವು ಪರಂಪರೆಯಿಂದ ಬಂದುವಾಗಿಯೂ, ವೇದ, ಮಂತ್ರ, ಪೂಜಾವಿಧಿ, ಮಾಯಾವಿದ್ಯೆ, ಸಂಸ್ಕೃತ, ಆರ್ಯ-ದ್ರಾವಿಡ, ಗೃಹಸ್ಥಾಶ್ರಮ–ಸಂನ್ಯಾಸ, ಶೈವ-ವೈಷ್ಣವ–ಎಂಬೀ ಪ್ರಕಾರಗಳಲ್ಲಿ ವಿಚಾರ ವಿನಿಮಯ ಆಗುವುದೊಳ್ಳೆ ಯದೆಂದೂ, ಇಲ್ವಲನ ಬಗೆಗೆ ಇನ್ನೂ ತಿಳಿಯುವುದಿರುವಂತೆಯೇ ಅಗಸ್ತ್ಯರ ದಕ್ಷಿಣ ಯಾತ್ರೆಯ ಬಗೆಗೂ, ಅವರ "ಸೈನ್ಯ"ದ ಬಗೆಗೂ ಹೆಚ್ಚು ಅರಿವು

ತಮ್ಮ ರಾಜ್ಯದವರಿಗೆ ಆಗುವುದಿದೆಯೆಂದೂ ಶಿವಗುರುಗಳು ಮನಃ
ಪೂರ್ವಕವಾಗಿ, ಕಳಕಳಿಯಿಂದ ಹೇಳಿದರು.

ಸೋಮಶ್ರವಸೂ ಚಾಕ್ರಾಯಣನೂ ಅದಕ್ಕೆ ಸಂಮ್ಮತಿಸಿ, ತಮಗೆ
ತಿಳಿದ ಉತ್ತರಗಳನ್ನು ತಾವು ಹೇಳುವುದಾಗಿಯೂ, ಇದಕ್ಕಾಗಿ ಒಂದು
ಪ್ರಬುದ್ಧರ ಸಭೆ ರಾಜರ ಅರಮನೆಯಲ್ಲೇ ನಡೆದರೆ ಒಳ್ಳೆಯದೆಂದೂ,
ಅಲ್ಲಿಗೆ ದ್ರಮಿಡದೇಶದ ಧಾರ್ಮಿಕ ಮುಖಂಡರೂ, ಸೇನಾಪತಿಗಳೂ,
ಮಂತ್ರಿಗಳೂ, ಶಿವಗುರುಗಳೂ, ವೈಖಾನಸದೀಕ್ಷಿತರೂ ಬಂದು ಸಭೆ
ಯನ್ನು ಫಲಪ್ರದವಾಗಿ ನಡೆಸಿಕೊಡಬೇಕೆಂದೂ, ಇದರ ಫಲವಾಗಿ ದೊರೆ
ಗಳು ಶಿವಗುರುಗಳೂ ಮುಂದೆ ಯಾರಿಗೆ ರಾಜ್ಯದ ಬಲವನ್ನು ತೋರ
ಬೇಕೆಂದು ತೀರ್ಮಾನಿಸಿಕೊಳ್ಳಬಹುದೆಂದೂ, ನಿರ್ಣಯವು ನ್ಯಾಯಯುತ
ವಾಗಿರಬೇಕಾದರೆ ಇಂಥ ಸಹಚಿಂತನೆ ಇಂದೋ ನಾಳೆಯೋ ಅತ್ಯವಶ್ಯ
ವೆಂದೂ ಮನಂಬುಗುವಂತೆ ಹೇಳಿದರು.

ಆ ಮಧ್ಯಾಹ್ನವೇ ಸ್ವಯಂ ಶಿವಗುರುಗಳೇ ಅರಮನೆಗೆ ತಮ್ಮ
ಆಪ್ತರನ್ನು ಕಳುಹಿ. "ಮುಖ್ಯ ಕಾರ್ಯವಿದೆ. ಗುರುಗಳು ತಮ್ಮನ್ನು
ಕಾಣಬರಲಿದ್ದಾರೆ. ಸಮಯ ಸೂಚಿಸಬೇಕು." ಎಂದು ಹೇಳಿ ಕಳುಹಿ
ದರು. "ಈಗಲೇ ಬರಬಹುದು" ಎಂಬ ಉತ್ತರ ಕೇಳಿ ಶಿವಗುರುಗಳು
ಆಪ್ತರೊಡನೆ, ಸಕಲರಾಜ ಮರ್ಯಾದೆಗಳೊಡನೆ ಅರಮನೆಗೆ ಧಾವಿಸಿ, ಅರಸ
ರೊಡನೆ ಏಕಾಂತವಾಗಿ ಮಾತನ್ನಾಡಿ, ಆ ಪ್ರಬುದ್ಧರ ಸಭೆ, ಅದೇ ರಾತ್ರಿ
ಚಂದ್ರೋದಯ ನಂತರ ಅರಮನೆಯ ಉಪ್ಪರಿಗೆಯ ಮೇಲೆ ಏಕಾಂತ
ವಾಗಿ ನಡೆಯಬಹುದೆಂದು ನಿಶ್ಚಯಿಸಲಾಯಿತು.

ಉಪ್ಪರಿಗೆಯಲ್ಲಿ ಒಳ್ಳೆಯ ಆಸನವ್ಯವಸ್ಥೆಯೂ ದೀಪ ವ್ಯವಸ್ಥೆಯೂ
ಆದವು. ಬಿಗಿ ಕಾವಲನ್ನಿಡಲಾಗಿತ್ತು. ಸಭಾಸದರೆಲ್ಲ ಮುಂಚಿತವಾಗಿಯೇ

ಆಸೀನರಾಗಿದ್ದರು. ಚಂದ್ರೋದಯಕ್ಕೆ ಸರಿಯಾಗಿ ಅರಸರೂ ದಯ ಮಾಡಿಸಿದರು. ಸಭೆ ಆರಂಭವಾಯಿತು.

ಪ್ರಾರಂಭದಲ್ಲಿ ಶಿವಗುರುಗಳು ಪೀಠಿಕೆ ಹಾಕಿ, ಅಗಸ್ತ್ಯಶಿಷ್ಯರು ಇತ್ತ ಬಂದುದನ್ನೂ, ಬಳಿಗ್ಗೆ ನಡೆದುದನ್ನೂ, ಈ ಸಭೆ ಏಕೆಂಬ ಹಿನ್ನೆಲೆಯನ್ನೂ ಚೆನ್ನಾಗಿ ವಿವರಿಸಿ, ಆಹ್ವಾನಿತರು ನಿರ್ಭಯವಾಗಿ ರಾಜ್ಯದ ಹಿತದ ಸಂಬಂಧದ ಪ್ರಶ್ನೆಗಳನ್ನು ಆ ಶಿಷ್ಯರಿಗೆ ಕೇಳಿ ಸಂದೇಹ ಪರಿಹಾರಗಳನ್ನು ಪಡೆಯಬಹುದೆಂದೂ ಸೂಚಿಸಿದರು. ಮೊದಲು ಪ್ರಶ್ನೆಗಳನ್ನು ಶಿವಗುರುಗಳೇ ಹೀಗೆ ಆರಂಭಿಸಿದರು.

**ಶಿವಗುರು :** "ನಾನು ಉತ್ತರಭಾರತ ಪರ್ಯಟನ ಮಾಡಿದವನಲ್ಲ ! ಆದರೂ ಇಲ್ಲಿನ ಜನ ಪರಂಪರೆಯಿಂದ ಹೇಳುವುದನ್ನು ಇತರರ ಪ್ರತಿನಿಧಿಯಾಗಿ ಕೇಳುತ್ತೇನೆ. ಅಗಸ್ತ್ಯ ಶಿಷ್ಯರೇ ! ಈ ನಮ್ಮ ದಕ್ಷಿಣದವರೆಲ್ಲ ಜನಾಂಗೀಯವಾಗಿ ದ್ರಾವಿಡರೆಂದೂ, ಉತ್ತರದವರೆಲ್ಲ ಆರ್ಯರೆಂದೂ, ಇಬ್ಬರಲ್ಲೂ ಹಿಂದಿನಿಂದಲೂ ವೈರಸ್ಯವೇ ಇದೆಯೆಂದೂ ಹೇಳುತ್ತಾರಲ್ಲ ? ಉತ್ತರದಲ್ಲೂ ಒಂದು ಕಾಲದಲ್ಲೂ ನಾವೇ ವ್ಯಾಪಕವಾಗಿದ್ದೆವೆಂದೂ ನಿಮ್ಮವರ ಕಾಟ-ಉಪದ್ರವದಿಂದ ಬಳಲಿ, ಇತ್ತ ತಳ್ಳಲ್ಪಟ್ಟು ಬರುತ್ತಿದ್ದೇವೆಂದೂ, ಈಗ ಅಗಸ್ತ್ಯರು ಸೈನ್ಯದೊಡನೆ ಬರುತ್ತಿರುವುದು ಇದನ್ನು ಸಮರ್ಥಿಸುತ್ತಿದೆಯೆಂದೂ ಹೇಳುವುದಕ್ಕೆ ಏನು ಆಕ್ಷೇಪ ?"

**ಸೋಮಶ್ರವ :** "ಆಚಾರ್ಯರರೇ ! ಉತ್ತರ-ದಕ್ಷಿಣಗಳು ಕೇವಲ ಕಾಲ್ಪನಿಕ ಪ್ರಾದೇಶಿಕ ಭೇದಗಳು ! ಪಾಂಡ್ಯರಿಗೆ ನೀವೇ ಔತ್ತರೇಯರು! ನಿಮಗೆ ಇಲ್ವಲನ ರಾಜ್ಯ ಉತ್ತರದ್ದು ! ಅದಕ್ಕೆ ವಿದರ್ಭ, ಅಥವಾ ಗೊಂಡಾರಣ್ಯ, ಅಥವಾ ಸಹಸ್ರಾರ್ಜುನನ ರಾಜ್ಯ. ಹೀಗೆ ! ಎಲ್ಲರಿಗೂ ಒಂದೇ ಉತ್ತರ, ಒಂದೇ ದಕ್ಷಿಣ ಎಂಬುದಿಲ್ಲ ! ಅಕ್ಕಪಕ್ಕದ ಅರಸರಲ್ಲಿ ಐಕಮತ್ಯವಿಲ್ಲದಾಗ ಆಕ್ರಮಣಗಳು ಇತಿಹಾಸದಲ್ಲಿ ಆಗಿರುವುದುಂಟು.

ಅದಕ್ಕಿಲ್ಲ ಕಲ್ಪಿತವಾದ "ಒಂದೇ ಉತ್ತರ"ದವರು ಕಾರಣ ಎಂಬುದು ಪಾಮರರನ್ನು ಮಾತ್ರ ವಂಚಿಸುವ ವಿವರಣೆ ಆದೀತು ! ಎರಡನೆಯು ದಾಗಿ ನಿಮ್ಮ ರಾಜ್ಯ ದ್ರವ್ಯ-ದ್ರವಿಣಸಂಪತ್ತನ್ನುಳ್ಳದ್ದೆಂಬ ಅರ್ಥದಲ್ಲಿ ದ್ರಮಿಡ-ದ್ರವಿಡ ಎನ್ನಿಸಿದೆಯೋ ಹೊರತು, ಇದೇ ಒಂದು ಬೇರೆ ಜನಾಂಗ ಬುಡಕಟ್ಟು ಎಂದಲ್ಲ !"

**ದೊರೆ :** "ಆದರೆ ಉತ್ತರವನ್ನು ಏಕೆ ಆರ್ಯಾವರ್ತ ಎನ್ನು ತ್ತೀರಿ ?"

**ಚಾಕ್ರಾಯಣ :** "ಪ್ರಭು ! ಆರ್ಯ ಎಂಬುದು 'ಸಂಸ್ಕಾರ ಸಂಪನ್ನ' ಎಂಬರ್ಥದ ಶಬ್ದ ! ಉತ್ತರದಲ್ಲೂ ಅಸಂಸ್ಕೃತರು ಆಗಲೂ ಈಗಲೂ ಉಂಟು. ನಾಗಾವರ್ತ, ರಾಕ್ಷಸಾವರ್ತ, ಎಂಬಂತೆ ಭಿನ್ನ ರೀತಿಯ ನಂಬಿಗೆ, ಆಚಾರ, ವಿಚಾರಗಳ ಜನರಿಗಿಂತ ಇವರು ಬೇರೆ ಎಂದು ನಿರ್ದೇಶಿಸಲು, ಆರ್ಯಸಂಸ್ಕಾರಕ್ಕೆ ಒಳಪಟ್ಟವರನ್ನೆಲ್ಲ ಗುರುತಿಸಲು ಆ ಹೆಸರು ಬಂದಿರಲು ಸಾಕು. ಅದು ಆಕ್ರಮಣಕಾರೀ ಹೆಸರೇ ನಲ್ಲ. "

**ಗುರು :** "ಈ ಅರ್ಥದಲ್ಲಿ ಈಗ ನಾವೂ ಆರ್ಯಾವರ್ತದವರಾಗಲು ಬರುವುದೇ ?"

**ಚಾಕ್ರಾಯಣ ;** "ಖಂಡಿತ, ಆಚಾರ್ಯ! ಅದು ಸಾಧ್ಯವೆಂಬು ದನ್ನು ತೋರಿಸಲೆಂದೇ ನಮ್ಮ ಗುರುಗಳು ಇತ್ತ ಸಾಂಸ್ಕೃತಿಕ ಏಕೀಕರಣದ ಗುರಿಯಿಂದಲೇ ಬರುತ್ತಿದ್ದಾರೆ. ಅವರ ಸೈನ್ಯದ ಇತಿಹಾಸವೇ ಬೇರೆ." ಎನ್ನುತ್ತಾ ಸಹಸ್ರಾರ್ಜುನ ಪರಶುರಾಮರ ಕೈಯಿಂದ ಮಡಿದ ಬಗೆ ಯನ್ನೂ, ಇಲ್ವಲನ ದುರುದ್ದೇಶ್ಯದ ವಿರುದ್ಧ ಉತ್ತರದ ಅರಸರ ಸಂಘ ಟನೆಗೆ ಅಗಸ್ತ್ಯರೇ ಕಾರ್ಯಕ್ರಮ ಎತ್ತಿಕೊಳ್ಳಬೇಕಾದ ನಿರ್ಬಂಧದ ಪ್ರಸಂಗ ವನ್ನೂ, ಆ ಅರಸರೂ ಹೆದರಿ. ಕಚ್ಚಾಡಿ, ಸಾಯುತ್ತಿದ್ದ ಪರಿಸ್ಥಿತಿ

ಯನ್ನೂ, ಈಗ ಇಲ್ವಲನ ದಮನ ಅತ್ಯಗತ್ಯವೆಂಬುದನ್ನೂ, ಅವನ ಪ್ರಕಟ-ಅಪ್ರಕಟ ಉದ್ದೇಶ್ಯಗಳನ್ನೂ, ಅವನ ಬಲವನ್ನೂ, ಮಾಯಾ ರೀತಿಗಳನ್ನೂ ದೀರ್ಘವಾಗಿ ಚಾಕ್ರಾಯಣನೂ ಸೋಮಶ್ರವನೂ ವಿವರಿಸಿದರು. ನಡು ನಡುವೆ ಕೇಳಿದ ಪ್ರಶ್ನೆಗಳಿಗೂ ಉತ್ತರಿಸಿದರು.

**ದೊರೆ :** "ಹಾಗಾದರೆ ಈ ಕಾರ್ಯವನ್ನು ನಮಗೇ ಬಿಟ್ಟು, ಈ ಪ್ರಚಂಡ ಸೈನ್ಯವನ್ನು ನಮ್ಮ ವಶಕ್ಕೇ ಕೊಟ್ಟು, ಅಗಸ್ತ್ಯರು, ನಮ್ಮ ಹಿತಚಿಂತಕರಾಗಿಯೇ ಉಳಿಯಬಹುದಲ್ಲ ? ಅವರಿಗೆ ಈ ಕ್ಷತ್ರಿಯರ ಪಾಡೇಕೆ ?"

ಸೋಮಶ್ರವನೂ ಚಾಕ್ರಾಯಣನೂ ಒಡನೆಯೇ ಗಟ್ಟಿಯಾಗಿ ನಕ್ಕರು ! ಚಾಕ್ರಾಯಣ ಮುಂದುವರಿದ.

**ಚಾಕ್ರಾಯಣ :** "ಪ್ರಭು ! ಈ ಮಾತನ್ನು ಆಡಬಲ್ಲ ಒಬ್ಬ ಅರಸ ಈ ವರೆಗೆ ನಮ್ಮ ಗುರುಗಳಿಗೆ ದೊರೆತಿರಲಿಲ್ಲ ! ಈಗ ತಾವು ಹಾಗೆಂದದ್ದೂ, ಈ ಮುಂದಾಳುತನ ವಹಿಸಿಕೊಳ್ಳುವ ಸಾಮರ್ಥ್ಯ ತಮಗಿರುವುದೂ, ಅಗಸ್ತ್ಯರ ಮಾರ್ಗದರ್ಶನಕ್ಕೆ ತಾವು ಒಪ್ಪಿರುವುದೂ ನಮ್ಮ ಭಾಗ್ಯ. ನಮ್ಮ ಗುರುಗಳ ಯಾತ್ರೆಯು ಸಫಲವಾದೀತೆಂಬುದರ ಶುಭ ಸೂಚನೆಯೇ ಇದು ! ಉತ್ತರದ ಅರಸರಾರೂ ಹೀಗೆ .... ಹೀಗೆ ಚಿಂತಿಸಲಿಲ್ಲ ! ಅತ್ತ ಇಲ್ವಲ ದಂಡೆತ್ತಿ ಹೋಗಿದ್ದರೆ ಅದು ಬೇರೆಯೇ ಏಕೀಕರಣ ಆಗುತ್ತಿತ್ತು! ಏಕೀಕರಣ ಸಾಂಸ್ಕೃತಿಕವಾಗಿ ಆಗಬೇಕಾದರೆ, ಮೊದಲು ಆ ವಿಶಾಲ ಸಂಸ್ಕೃತಿಯ ಲಕ್ಷಣಗಳನ್ನು ಗುರುತಿಸಿಕೊಂಡು, ತರ್ಕಬದ್ಧವಾಗಿ ನಿರೂಪಿಸಿ, ಅದಕ್ಕೆ ಬದ್ಧವಾಗಿ, ಸಣ್ಣ ಪುಟ್ಟ ಪ್ರಾದೇಶಿಕ, ಕಾಲಾನುಗುಣ ಭೇದಗಳಿಗೆ ಅಲ್ಲಿ ಅವಕಾಶ ನೀಡಬೇಕು. ಅದು ಏಕರೂಪಕರಣವಲ್ಲ ! ಇಲ್ವಲನ ಸಂಸ್ಕೃತಿ ಇಂಥದ್ದಾಗಲಾರದು ! ಆ ರೀತಿಯ ಏಕೀಕರಣ ರಾಷ್ಟ್ರಕ್ಕೆ ಒಳ್ಳೆಯದಲ್ಲ !"

**ಶಿವಗುರು :** "ನೀವು ಹೇಳುವುದು ತುಂಬಾ ಸಮಂಜಸವಾಗಿದೆ. ಹಾಗಾದರೆ ನಮ್ಮ ರೀತಿಯಲ್ಲೇ ಉತ್ತರವೂ ನಮ್ಮೊಡನೆ ಬೆರೆತು ಏಕೀಕರಣ ಏಕಾಗಬಾರದು ?"

**ಸೋಮಶ್ರವ :** "ಏಕೀಕರಣ ಆದಮೇಲೆ 'ನಮ್ಮ ರೀತಿ' 'ನಿಮ್ಮ ರೀತಿ' ಎಂಬ ಭೇದಕ್ಕೆ ಅವಕಾಶ ವಿರುವುದಿಲ್ಲ, ಆಚಾರ್ಯರೆ ! ಈಗ ನೋಡಿ ನೀವು ಶಿವಾರಾಧಕರು ! ಹೌದೇ ? ಉತ್ತರದಲ್ಲಿ 'ನಿಮ್ಮ'ವರಿಲ್ಲವೇ ?"

**ಗುರು :** "ಅವರೆಲ್ಲ ಆರ್ಯರು, ವೈಷ್ಣವರು, ವೈದಿಕರು ಎಂಬ ಪ್ರಚಾರವಿದೆಯಲ್ಲ ?"

**ಚಾಕ್ರಾಯಣ :** "ಅದು ನಿರಾಧಾರ ! ಉದಾಹರಣೆಗೆ ಉಜ್ಜೈನಿಯು ಶಿವಕ್ಷೇತ್ರವಲ್ಲವೆ ? ಪ್ರಭಾಸದ ಸೋಮನಾಥ ಕ್ಷೇತ್ರವೋ? ಹಿಮಾಲಯದ ಕೈಲಾಸವೇ ಶಿವಭೂಮಿ ಅಲ್ಲವೇ, ಕೇದಾರ ಎಂಥದು ? ಹಾಗೇ, ದಕ್ಷಿಣವೆಲ್ಲ ಶೈವರದ್ದೆಂದಾರೆ, ಈ ದೀಕ್ಷಿತರು ಇಲ್ಲೇಕೆ ಇದ್ದಾರೆ ? ನಿಮ್ಮ ಊರಿನಲ್ಲಿ ವರದವಿಷ್ಣುದೇವಾಲಯ ಇರುವಂತೆ ಇತರ ದಕ್ಷಿಣದ ಊರುಗಳಲ್ಲೂ ವೈಷ್ಣವಾಲಯಗಳು ಇಲ್ಲವೇ ?"

**ದೀಕ್ಷಿತರು :** "ನಾವೂ ಉತ್ತರದಿಂದಲೇ ಬಂದವರು ಎಂದು ಇಲ್ಲಿನವರು ಹೇಳುತ್ತಾರಲ್ಲ !"

**ಸೋಮಶ್ರವ :** "ನಾವು ಇಲ್ಲಿರುವ ತನಕ ನಾವೂ ದಕ್ಷಿಣದವರೇ, ನೀವೂ ಸಹ ! ನಿಮ್ಮದು ಆಗಮ ಪದ್ಧತಿ. ಶಿವಗುರುಗಳು ಶೈವಾಗಮದವರು. ಆಗಮಗಳು ವೇದಗಳಷ್ಟೇ ಪ್ರಾಚೀನ. ಇವು ಉತ್ತರದಲ್ಲೂ ಪ್ರಚಾರವುಂಟು. ವೇದ ದಕ್ಷಿಣದಲ್ಲೂ ಉಂಟು. ಸಂಸ್ಕೃತವೂ ಅಷ್ಟೆ ! ನೋಡಿ. ನೀವೂ. ಅರಸರೂ, ಈ ಮೌನಗುರುವೂ ಅವರ ಶಿಷ್ಯರೂ ಎಲ್ಲರೂ ಸಂಸ್ಕೃತ ಬಲ್ಲಿರಿ ! ಉತ್ತರದ ಭಾಷೆ ಎಂದು ನೀವು ಬಿಟ್ಟಿಗು

ವಿರಾ ? ಅಲ್ಲಿ ಹೆಚ್ಚು ಪ್ರಚಲಿತವಿದ್ದಮಾತ್ರದಿಂದ ನಿಮಗೇಕೆ ಅಗ್ರಾಹ್ಯ ಆಗಲಿಲ್ಲ ?”

**ದೊರೆ :** “ಹಾಗಾದರೆ ನಮ್ಮ ಭಾಷೆಯನ್ನು ಉತ್ತರದವರೇಕೆ ಮಾನ್ಯ ಮಾಡಲಿಲ್ಲ ? ಆಡುತ್ತಿಲ್ಲ ?”

**ಚಾಕ್ರಾಯಣ :** “ಯಾವುದೇ ಭಾಷೆ ಸರ್ವ ಮಾನ್ಯತೆ ಪಡೆಯು ವುದು ಅವರ ಗ್ರಂಥಗಳ ವಿಚಾರದ ಎತ್ತರ, ವ್ಯಾಪ್ತಿ ಸೂಕ್ತತೆ, ಪ್ರಸ್ತುತ ತೆಗಳಿಂದ ! ಆಗಮಗಳ ವಿಚಾರಕ್ಕೆ ಮೋಹಗೊಂಡ ನೀವು ಸಂಸ್ಕೃತ ಕಲಿತಿರಿ ! ಅಂಥ ವಿಚಾರಗಳು ದ್ರವಿಡಭಾಷೆಯಲ್ಲೂ ಬಂದರೆ ಉತ್ತರದವರೂ ಅವಶ್ಯವಾಗಿ ಕಲಿಯುತ್ತಾರೆ ! ನೀವು ಉತ್ತರವನ್ನೇ ಕಂಡಿಲ್ಲ ಎನ್ನುತ್ತೀರಿ ! ಯಾರದು ತಪ್ಪು ? ದ್ರವಿಡಭಾಷೆಗೆ ಈಗ ಒಂದು ಸಾಮಾನ್ಯ ವ್ಯಾಕರಣ ಸಹ ಇಲ್ಲ ! ಅದನ್ನೂ ಅಗಸ್ತ್ಯರೇ ಬರೆಯು ಬೇಕೆಂದು ತೋರುತ್ತದೆ !”

ದೊರೆ ಮತ್ತು ಶಿವಗುರುಗಳು ಮುಖ ನೋಡಿಕೊಂಡರು ! ಚಾಕ್ರಾಯಣ ಮುಂದುವರೆದ.

**ಚಾಕ್ರಾಯಣ :** “ಇಲ್ವಲನಂಥ ಅಸುರ, ಸಂಸ್ಕೃತದಲ್ಲಿ ಅಮೃತ ಮಥವನ್ನು ಕುರಿತು ಮಹಾಕಾವ್ಯವನ್ನು ಬರೆದಿರುವನೆಂದರೆ ನಂಬು ತ್ತೀರಾ ? ದುಷ್ಟನೊಬ್ಬನಿಗೆ ಸಂಸ್ಕೃತ ಕಲಿಯುವ ಅವಶ್ಯಕತೆ ಏನಿತ್ತು ? ಅವನು ವೇದಾಧ್ಯಯನವನ್ನು ಮಾಡಿರುವನೆಂದರೆ ಯಾರಿಗಾದರೂ ನಂಬಿಗೆ ಬರುವುದೇ ?

**ಶಿವಗುರು :** “ನಾವೂ ಬ್ರಾಹ್ಮಣರೆಂದು ನೀವು ಒಪ್ಪಬಹುದೇ ?”

**ಸೋಮಶ್ರವ :** “ಭಿನ್ನ ಆಚಾರದ ಬ್ರಾಹ್ಮಣರು ನೀವು ಅಷ್ಟೆ ! ಬ್ರಹ್ಮವೆಂದರೆ ದೇವರು. ಅದನ್ನೊಪ್ಪಿದವರೆಲ್ಲ ಬ್ರಾಹ್ಮಣರೇ !”

**ಗುರು :** "ಹಾಗಾದರೆ ನಮಗೇಕೆ ಯಜ್ಞೋಪವೀತವಿಲ್ಲ ?"

**ಸೋಮ :** " ಈ ಪ್ರಶ್ನೆಗೆ ನೀವೇ ಉತ್ತರಿಸಬೇಕು ! ನಾನಲ್ಲ ! ಜೀವನವೇ ಒಂದು ಯಜ್ಞವೆಂಬುದನ್ನು ನೆನೆಪಿಸಲು ಅದು ಸಂಕೇತ. ಯಾಗಗಳನ್ನು ಆಚರಿಸುವ ರೀತಿ ನೀತಿ ನಿಮ್ಮಲ್ಲೂ ಉಂಟಾಗಿ, ಆ ಪ್ರಜ್ಞೆಯನ್ನು ಉಳಿಸಿಕೊಳ್ಳುವಾಗ ಅದು ಬೇಕಾಗುತ್ತದೆ. ಪ್ರಜ್ಞೆ ಮರೆತರೆ ಯಾವ ಸಂಕೇತವೂ ಬರಿಯ ಭಾರವೇ ಆಗುತ್ತದೆ."

**ಗುರು :** "ನಮ್ಮ ಆರಾಧ್ಯ ದೈವವಾದ ಶಿವನನ್ನು 'ಯಜ್ಞಧ್ವಂಸಿ' ಎಂದೂ ನಿಮ್ಮ ಪುರಾಣಗಳೂ ಹೇಳುತ್ತವೆ ! ಅಂದ ಮೇಲೆ ನಾವು ಯಜ್ಞಗಳನ್ನು ಬಿಟ್ಟೆವು ಎಂದು ತೋರುತ್ತದೆ ! ಯಜ್ಞದಲ್ಲಿ ಪಶು ಹಿಂಸೆ ಇದೆ ! ಅಲ್ಲಿ ವ್ಯರ್ಥವಾಗಿ ಪದಾರ್ಥಗಳನ್ನು ಬಳಸುತ್ತಾರೆ, ಎನ್ನುತ್ತಾರಲ್ಲ ? "

**ಸೋಮ :** " ಶಿವ ಯಜ್ಞಧ್ವಂಸಿ ಆದುದು ಆ ಅರ್ಥದಲ್ಲಿ ಅಲ್ಲ ! ಶಿವನಿಗೆ ಅನ್ವಯವಿಲ್ಲದ ಯಜ್ಞ ಅಪೂರ್ಣ. ಅದು ದಕ್ಷಪ್ರಜಾಪತಿಯ ರೀತಿಯ ಅತಿರೇಕ ! ಶಿವ ಲಯದೇವತೆ ! ಜೀವನದಲ್ಲಿ ಸೃಷ್ಟಿ ಎಷ್ಟು ಮುಖ್ಯವೋ ಲಯವೂ ಅಷ್ಟೇ ಮುಖ್ಯ. ಅದು ಜೀವನ ಸತ್ಯವೂ ಹೌದು. ಯಾರೂ ಸಾಯದ ಜೀವನ ಎಂಬುದಿಲ್ಲ. ಹುಟ್ಟು ಸಾವುಗಳ ನಡುವೆ ನಡೆಯುವ ಜೀವನ ಯಜ್ಞಕ್ಕೆ ಆದಿಯೂ ಉಂಟು, ಅಂತ್ಯವೂ ಉಂಟು. ಅಂತ್ಯವಿಲ್ಲದುದನ್ನು ದಕ್ಷ ಮಾಡ ಹೊರಟ ! ಶಿವ ಅದನ್ನು ಕೆಡಿಸಿದ ! ನೀವು ಮಾಡಿದ್ದರೂ ಅಷ್ಟೇ ಆಗುತ್ತಿತ್ತು ! ಇನ್ನು ಹಿಂಸೆಯ ವಿಷಯ. ಈಗ ನೀವು ನಮ್ಮೊಡನೆ ಮಾತಾಡುತ್ತಿದ್ದೀರಿ. ನಾವಾಗಿ ಇಷ್ಟಪಟ್ಟಾಗ ಇಲ್ಲಿ ನಮಗೆ ಹಿಂಸೆಯಿಲ್ಲ ! ನಿಮ್ಮ ಬಲಾತ್ಕಾರಕ್ಕಾಗಿ ಆಗಿದ್ದರೆ ಹಿಂಸೆ."

**ಗುರು :** ''ಅದಲ್ಲ ನಾನು ಹೇಳಿದ್ದು ! ಪಶುವಧೆ !''

**ಚಾಕ್ರಾಯಣ :** "ಜೀವನವೆಲ್ಲ ಪಶುವಧೆಯೇ, ಗುರುಗಳೇ! ನಾನೂ ನೀವೂ ಈ ಎಲ್ಲರೂ ಒಂದೊಂದು ಯಾಗಕ್ಕೆ ಪಶುಗಳೇ ಆಗಿದ್ದೇವೆ. ಅದೂ ಒಂದು ಭಾಗ್ಯ. ಉತ್ತಮ ಪಶುವಾಗಿ, ಇಷ್ಟವಾದ ಕಾರ್ಯದಲ್ಲಿ ವಿನಿಯುಕ್ತವಾಗಿ ಪ್ರಾಣಾರ್ಪಣೆ ಮಾಡುವುದು! ವೈದಿಕ ಯಾಗದಲ್ಲಿ ನಡೆಯುವುದು ಒಂದು ಸಾಂಕೇತಿಕ ಕ್ರಿಯೆ! ಇದನ್ನು ಸ್ಪಷ್ಟವಾಗಿ ಹೇಳುವ ವೇದಮಂತ್ರಗಳೇ ಇವೆ. ಸಂಕೇತದ ಅರ್ಥ ತಿಳಿದವನಿಗೆ, ಆ ಆಚರಣೆಯಲ್ಲಿ ಆಕ್ಷೇಪವಿರುವುದಿಲ್ಲ! ತಿಳಿದ ಮೇಲೆ ಆ ಆಚರಣೆ ಅವನ ನೆನೆಪಿಗೆ ದಿನಾ ಬೇಕಾಗಲೂಲಾರದು! ನಾವು ಉಣ್ಣುವ ಅನ್ನವೆಲ್ಲ ಒಂದು ರೀತಿಯಲ್ಲಿ ಹಿಂಸಾಮಯವೇ ಆದರೆ ಯಾರನ್ನು ದೂರಬೇಕು? ಸಸ್ಯ, ಅನ್ನ, ನೀರು, ಹಾಲು, ಗಾಳಿ ಎಲ್ಲ ಜೀವಮಯವೇ! **ಜೀವೋ ಜೀವಸ್ಯ ಜೀವನಂ** ಎಂಬುದು ಈಶ್ವರ ಸೃಷ್ಟಿಯ ನಿಯಮ!"

**ದೊರೆ :** "ಉತ್ತರದ ಋಷಿಗಳು ಮಾಂಸಾಹಾರಿಗಳೆನ್ನುವರಲ್ಲ?"

**ಸೋಮ :** "ಮಾಂಸವೆಂಬುದು ಯಾವುದೇ ವಸ್ತುವಿನ ಮೃದು ಭಾಗಕ್ಕೆ ಹೆಸರು. ಹಣ್ಣಿನ ಭಾಗಗಳಿಗೂ ಆ ಹೆಸರುಂಟು! ಎರಡನೆಯದಾಗಿ ಸಾತ್ವಿಕಾಹಾರ ದೊರೆಯದಾಗ ಯಾವ ಆಹಾರವೂ ವರ್ಜ್ಯವಲ್ಲ ಎಂದು ಶಾಸ್ತ್ರವೇ ಹೇಳುತ್ತದೆ. ಹಿಂದಿನವರ ಉದಾಹರಣೆಗಳೂ ಉಂಟು! ಈ ದಕ್ಷಿಣದಲ್ಲಿ ಮಾಂಸಾಹಾರಿಗಳಿಲ್ಲವೇ? ಮದ್ಯಪಾನ ಸಸ್ಯಹಾರವೋ, ಮಾಂಸಾಹಾರವೋ? ಸ್ವೀಕಾರಯೋಗ್ಯವಾದುದನ್ನು "ಆಪ್ರಿಯತೇ– ಇತಿ ಆಹಾರಃ" ಎನ್ನುತ್ತಾರೆ! ತಿನ್ನಬಾರದ್ದಕ್ಕೆ ಅದು ಹೆಸರಲ್ಲ. ದೇವತೆಗಳ ಅರ್ಪಣೆಗೆ ಯೋಗ್ಯವೆನಿಸಿದರೆ ಅದೇ "ಮೇಧ್ಯ". ಅಲ್ಲವಾದುದು "ಅಮೇಧ್ಯ"! ಶಿವನ ಹೆಸರಲ್ಲಿ ಭೂತಬಲಿ ಕೊಡುವ ಶೈವರೂ, ನರಬಲಿ ಕೊಡುವ ಕಾಪಾಲಿಕರೂ ನಿಮ್ಮ ದಕ್ಷಿಣದಲ್ಲಿ ಇದ್ದಾರಲ್ಲ! ಋಷಿಗಳ ಕಾರ್ಯವನ್ನು ಇವರಾರಾದರೂ ಮಾಡಿರುವರೇ?"

ಚಾಕ್ರಾಯಣ ತನ್ನ ಮಿತ್ರ ಪ್ರಿಯವ್ರತ, ಕಾಪಾಲಿಕನ ಕೈಲಿ ಸಿಕ್ಕಿ ಹಾಕಿಕೊಂಡದ್ದನ್ನೂ, ತಾನು ಬಿಡಿಸಿ ತಂದುದನ್ನೂ ಹೇಳಿ ವಿವರಿಸಿದ. ಮುಂದುವರೆದು ಹೀಗೆಂದ.

**ಚಾಕ್ರಾಯಣ :** "ಧರ್ಮದ, ದೇವರ, ಹೆಸರಿನಲ್ಲಿ ಅತಿರೇಕಗಳು ಎಷ್ಟೋ ಉಂಟು ! ದಕ್ಷಿಣದಲ್ಲೂ, ಉತ್ತರದಲ್ಲೂ ಸಹ. ಅವು ಏನಿದ್ದರೂ ಅತಿರೇಕಗಳೇ ವಿನಾ, ಅವೇ ಧರ್ಮ ಎನಿಸುವುದಿಲ್ಲ. ಸಾವಿರ ಸಾವಿರ ಜನರು ಒಂದು ದುರಾಚಾರವನ್ನು ಮಾನ್ಯಮಾಡಿದ್ದರಿಂದ ಅದು ಸದಾಚಾರ ಆಗಿ ಬಿಡುವುದಿಲ್ಲ ! ಕಡಿಮೆ ಸಂಖ್ಯೆಯ ಜನರಷ್ಟೇ ಒಂದನ್ನು ಆಚರಿಸಿದ ಮಾತ್ರದಿಂದ ಪ್ರಾದೇಶಿಕ ಧರ್ಮವೂ, ಕಂದಾಚಾರವೂ ಆಗಿ ಹೋಗುವುದಿಲ್ಲ. ಕೆಲವರು ಅಗ್ನಿಯನ್ನು ತಲೆಯ ಮೇಲಿಟ್ಟು ಪೂಜಿಸುತ್ತಾರೆ. ಕೆಲವರು ಕಾಲ ಕೆಳಗೆ ಹಾಕಿ ತುಳಿಯುತ್ತಾರೆ. ಏನೆನ್ನಬೇಕು ?"

**ಗುರು :** "ನೀವು ಮೈಗೆ ಪೂಸುವುದು ಭಸ್ಮವೆಂದ ಮೇಲೆ ನೀವೂ ಶೈವರೆನ್ನಲು ಏನಡ್ಡಿ ?"

**ಸೋಮಶ್ರವ :** "ಗುರುಗಳೇ ಅದು ಯಜ್ಞ ಶೇಷವಾದ ಭಸ್ಮ ! ಶವ ಭಸ್ಮವಲ್ಲ ! ನಾವು ಅಗ್ನಿಯ ಉಪಾಸಕರು. ಅವನೇ ರುದ್ರ–ಶಿವ ಎಂದು ವೇದಗಳು ಕೊಂಡಾಡುತ್ತವೆ. ಜೀವರಾಶಿಗಳು ಹುಟ್ಟುವುದೂ ಅಗ್ನಿಯಲ್ಲಿ, ಸತ್ತು ಸಂಸ್ಕಾರ ಹೊಂದುವುದೂ ಅಗ್ನಿಯಲ್ಲಿ ಎಂಬುದು ವೇದದ ದರ್ಶನ. ಸುಡುವ ಅಗ್ನಿಯೇ ರುದ್ರ. ಅವನ ಪ್ರಸಾದವೇ ಭಸ್ಮ ! ಜೀವನವೇ ಯಜ್ಞವೆಂದಾಗ, ಅದು ಮುಗಿದ ಮೇಲೆ ಉಳಿಯುವುದೆಲ್ಲ ರುದ್ರ-ಅಗ್ನಿಯ ಪ್ರಸಾದ. ಅದೇ ಶ್ಮಶಾನ ಎನ್ನುವುದು ಒಂದು ದೃಷ್ಟಿ. ಅದು ಪುನಃಸೃಷ್ಟಿಯ ವೇದಿಕೆ ಎಂಬುದು ಇನ್ನೊಂದು ದೃಷ್ಟಿ. ಅಗ್ನಿಯನ್ನು ಪರ್ಯಾಯದಲ್ಲಿ ಒಪ್ಪಿದವರೆಲ್ಲರೂ ವೈದಿಕರೇ ! "

**ಗುರು ;** "ಹಾಗಾದರೆ ಅಂತ್ಯ ಸಂಸ್ಕಾರ ಕ್ರಮಗಳಲ್ಲಿ ಭೇದವೇಕೆ?"

**ಸೋಮಶ್ರವ :** "ಅದು ಕಾಲದೇಶ ಭೇದಗಳಿಂದ ಉಂಟಾದುದು. ಭೂಮಿಯೂ ಒಂದು ಅಗ್ನಿಯೇ ! ಮಣ್ಣು ಒಂದು ರೀತಿ ಭಸ್ಮವೇ ! ಭೂಮಿಯನ್ನು ತಾಯಿ ಎಂದಂತೆ, ಅಗ್ನಿಯನ್ನೂ ಮಂತ್ರಗಳು ತಾಯಿ, ತಂದೆ ಎಂದು ಕೊಂಡಾಡಿವೆ. ಸತ್ತವರನ್ನು ಯಾರೂ ಇಟ್ಟುಕೊಳ್ಳಲು ಬರುವುದಿಲ್ಲ. ಕಳುಹುವ ವಿಧಾನದಲ್ಲಿ ಮಾತ್ರ ವ್ಯತ್ಯಾಸ !"

**ಗುರು ;** "ನೀವಿಬ್ಬರೂ ವಾಚಾಳಿಗಳು ! ಕೇಳಿದ್ದಕ್ಕೆಲ್ಲಾ ಏನಾದರೂ ಹೇಳಿ ಬಾಯಿ ಮುಚ್ಚಿಸುತ್ತೀರಿ !"

**ಚಾಕ್ರಾಯಣ :** "ಗುರುವೇ ! ಇದು ಮಾತಲ್ಲ! ನಾವು ಹೇಳಿದ್ದು ಸಮಂಜಸವೋ ಅಲ್ಲವೋ ಎಂಬುದನ್ನು ನೀವೇ ತೀರ್ಮಾನಿಸಬೇಕು. ಸರಿ ಎಂದರೆ ಅದನ್ನು ಶಿಷ್ಯರಲ್ಲಿ ಪ್ರಚುರಿಸಬೇಕು ! ತಪ್ಪೆಂದರೆ, ಇಲ್ಲೇ ಖಂಡಿಸಿ ! ಹೊಸ ವಿಚಾರಗಳು ಉದಿಸಲಿ, ಜಗತ್ತಿಗೆ ಕಲ್ಯಾಣವಾಗಲಿ !"

**ದೊರೆ ;** "ಋಷಿಗಳಲ್ಲಿ ಏಕೆ ಸಂನ್ಯಾಸ ಪದ್ಧತಿ ಇಲ್ಲ ?"

**ಸೋಮಶ್ರವ :** "ಇದೆ ! ಆದರೆ ಅದರ ಹೊರ ರೀತಿ ಬೇರೆಯದು. ಈ ವಿಚಾರಕ್ಕೆ ನಮ್ಮ ಗುರುಗಳೇ ನಿಮಗೆ ಮುಂದೆ ಸಮರ್ಪಕ ಉತ್ತರ ಹೇಳಿಯಾರು ! "

**ದೊರೆ :** "ಉತ್ತರದಲ್ಲೇಕೆ ನಮ್ಮಂತೆ ದೊಡ್ಡ ಗುಡಿಗಳಿಲ್ಲ?"

**ಚಾಕ್ರಾಯಣ :** "ಹಾಗೆಂದವರಾರು ? ಸಂಚಾರ ಮಾಡದವರ ಮಾತು ಇದು ! ಈ ದೀಕ್ಷಿತರನ್ನೇ ನೋಡಿ ! ಈ ವೈಖಾನಸರು ಎಲ್ಲಿ

ಯುವರು ? ಅವರ ಮೂಲ ಪುರುಷ ಶಾಂಡಿಲ್ಯರು ಎಲ್ಲಿಯುವರು ? ಯಾಗ ಯಜ್ಞಗಳು ಸಾಮಾನ್ಯರಿಗೆ ಎಟುಕದಾದಾಗ ಆಲಯ ಪೂಜಾ ಪದ್ಧತಿ ಬಂದಿತು. ಎಲ್ಲ ಯುಗಗಳಲ್ಲೂ ಎಲ್ಲವೂ ಉಂಟು. ಪ್ರಾಚುರ್ಯದ ಪ್ರಮಾಣ ಬೇರೆ. ಹಿಮಾಲಯವೇ ಶಿವಾಲಯ ಎಂದಾಗ, ಅದಕ್ಕಿಂತ ದೊಡ್ಡ ಗುಡಿ ಉಂಟೋ ?"

ರಾತ್ರಿ ಬಹಳ ಹೊತ್ತಾಯಿತು. ಬಹಳ ಸ್ನೇಹಮಯ ವಾತಾವರಣದಲ್ಲಿ ಚರ್ಚೆ ನಡೆದು, ಶಿವಗುರುಗಳೂ ದೊರೆಯೂ ಸಂತುಷ್ಟರಾಗಿ, ಅಗಸ್ತ್ಯರನ್ನು ಸ್ವಾಗತಿಸಲು ಉತ್ಸುಕರಾದಂತೆ ಕಾಣಬಂದರು.

**ದೊರೆ :** "ಈಗ ವಾತಾಪಿಗೆ ಏನು ಹೇಳುವುದು ? ಅವನು ಇಂದೋ ನಾಳೆಯೋ ಇತ್ತ ಬಂದಾನು. ಇಲ್ವಲ ಇಷ್ಟು ದುಷ್ಟನೆಂಬುದು ನಮಗೆ ತಿಳಿದಿರಲಿಲ್ಲ!"

ಸೋಮಶ್ರವ ದೊರೆಯ ಹತ್ತಿರ ಹೋಗಿ ಅವನ ಕಿವಿಯಲ್ಲಿ ಕೆಲವು ಮಾತುಗಳನ್ನು ಉಸುರಿದ. ದೊರೆಯ ಮುಖ ಅರಳಿತು ! "ಅದೇ ಸರಿ,'' ಎಂದು ದೊರೆ ಅನುಮೋದಿಸಿದ.

ತಾವು ಹೊರಡುವುದಾಗಿ ಹೇಳಿದ ಅಗಸ್ತ್ಯಶಿಷ್ಯರಿಗೆ, ದೊರೆ ; "ವಾತಾಪಿ ಬರುವವರೆಗೆ ಇಲ್ಲೇ ರಹಸ್ಯವಾಗಿದ್ದು, ಸಂದರ್ಭ ನೋಡಿಕೊಂಡು ಹೊರಡಬಹುದು. ಸಮೀಪದ ಮಾರ್ಗವನ್ನೂ ತೋರಿಸುತ್ತೇವೆ. ವಾತಾಪಿ ಊರು ಮುಟ್ಟುವುದರೊಳಗೆ ನೀವೂ ಅಗಸ್ತ್ಯರನ್ನು ಕೂಡಿಕೊಳ್ಳಬಹುದು." ಎಂದು ಸೂಚಿಸಿದ. ಅದನ್ನೊಪ್ಪಿ ಅಲ್ಲೇ ಉಳಿದ ಶಿಷ್ಯರು ಮರು ದಿನ ಊರನ್ನೆಲ್ಲ ಸುತ್ತಿ ನೋಡಿ, ಅದರ ಸೊಬಗಿಗೆ, ಅಲ್ಲಿನ ದೇವಾಲಯಗಳ ವೈಭವಕ್ಕೆ, ಮರುಳಾಗಿ, ಜನರ ಶಾಂತಪ್ರಿಯತೆ, ಉತ್ಸವ ಪ್ರಿಯತೆಗಳನ್ನು ಮೆಚ್ಚಿದರು.

*     *     *

ಮರುದಿನ ಸಂಜೆಗೆ ವಾತಾಪಿ ಬಂದ ! ಅವನ ಮುಖಮುದ್ರೆಯಿಂದಲೇ ಅವನು ಪಾಂಡ್ಯ ದೊರೆಯನ್ನು ಒಡಂಬಡಿಸಿ ಬಂದಿರುವನೆಂಬುದು, ಆ ವಿಜಯ ಸಮಾಚಾರದ ಹಿಗ್ಗಿನಿಂದ ಕಣ್ಣರಳಿ, ಅವನ ಠೀವಿ ಹೆಚ್ಚಾದುದರಿಂದಲೇ ಊಹ್ಯವಾಗಿತ್ತು. ದೀಕ್ಷಿತರ ಮನೆಯ ಗವಾಕ್ಷದಿಂದ ಸೋಮಶ್ರವ ಚಾಕ್ರಾಯಣರು ಅದನ್ನು ಚೆನ್ನಾಗಿ ಗಮನಿಸಿದರು. ವಾತಾಪಿಯ ಸಂದರ್ಶನ ಅದೇ ಅವರಿಗೆ ಮೊದಲಾಗಿತ್ತು ! ಅವನು ಕುದುರೆಯ ಲಗಾಮನ್ನು ಹಿಡಿದ ರೀತಿ, ಅದನ್ನು ಓಡಿಸುತ್ತಿದ್ದ ವೈಖರಿಗಳಿಂದಲೇ ಅವನ ಗರ್ವ ತಿಳಿಯುತ್ತಿತ್ತು!

ಅರಮನೆಯಲ್ಲಿ ಅವನಿಗೆ ಸ್ವಾಗತ, ಬಿಡಾರ ನಡೆಯಿತು. ಅದೇ ರಾತ್ರಿ ಸಭೆ ಸೇರಿತು. ಗುಪ್ತವೇಷದಲ್ಲಿ ಅಗಸ್ತ್ಯ ಶಿಷ್ಯರೂ ಅಲ್ಲಿದ್ದರು. ವಾತಾಪಿ, ದೊರೆಯ ನಿಲುವೇನೆಂದು ಅಟ್ಟಹಾಸದಿಂದ ಪ್ರಶ್ನಿಸಿದ. ದೊರೆ ಗಂಭೀರ ಭಾಷೆಯಲ್ಲಿ ಉತ್ತರಿಸಿದ. "ಇಲ್ವಲ ಮಹಾರಾಜರು ನಮ್ಮನ್ನು ಆಹ್ವಾನಿಸಿರುವುದು ರಾಷ್ಟ್ರದ ಸಾಂಸ್ಕೃತಿಕ ಸಮಗ್ರತೆಯ ರಕ್ಷಣೆಯ ವಿಷಯಕ್ಕಾಗಿ. ನಮ್ಮ ಸೈನ್ಯ ಈ ಸೇವೆಗೆ ಸಿದ್ಧವಾಗಿದೆ. ಇನ್ನೊಂದು ವಾರದೊಳಗೋ, ಹತ್ತು ದಿನದಲ್ಲೋ ಸೈನ್ಯ ಹೊರಟು ಮಣಿಮತೀಪುರಿಯ ಬಳಿ ಬರುವುದು. ಅಗಸ್ತ್ಯಸೈನ್ಯಕ್ಕೆ ಪಾಠಕಲಿಸೋಣ. ಚಿಂತೆ ಬಿಡಿ !"

ವಾತಾಪಿ ಹಿಗ್ಗಿದ ! ಪಾಂಡ್ಯ ಸೇನೆಯೂ ತಮ್ಮನ್ನು ಕೂಡಿಕೊಳ್ಳುವುದೆಂದು ಹೇಳಿದ. ಮರುದಿನ ಪ್ರಾತಃಕಾಲ ವಾತಾಪಿಯೂ ಅವನ ಪುಟ್ಟ ಸೇನೆಯೂ ಇಲ್ವಲನ ರಾಜಧಾನಿಗೆ ಹೊರಟು ನಿಂತರು.

ರಾಜ ಅವರಿಗೆ ಬೀಳ್ಕೊಟ್ಟ. ಇನ್ನೇನು ವಾತಾಪಿ ಕುದುರೆಯ ಮೇಲೇರಿದ ಎನ್ನುವಾಗ ದೊರೆ ಹೇಳಿದ; "ರಾಜಕುಮಾರ ! ನಿನ

ಗೊಂದು ಪುಟ್ಟ ಕಾಣಿಕೆ ! ನಮ್ಮವರ ಅಡಿಗೆಯ ರುಚಿಯನ್ನು ನಿಮ್ಮ ಮಹಾರಾಜರು ನೋಡಲೆಂದು ಈ ಅಡಿಗೆಯವರಿಬ್ಬರನ್ನು ನಿಮ್ಮ ವಶಕ್ಕೆ ಒಪ್ಪಿಸುತ್ತಿದ್ದೇನೆ." ಎನ್ನುತ್ತಾ, ಆನೆಗೆ ವಿಷ ಹಾಕಿದ ಅವನ ಇಬ್ಬರು ಅನುಚರರನ್ನೂ ಒಪ್ಪಿಸಿದ !

ವಾತಾಪಿಗೆ ಅಚ್ಚರಿ ಆಯ್ತು! "ತನ್ನವರೆಂದು ದೊರೆ ಹೇಗೆ ಪತ್ತೆ ಹಚ್ಚಿದ ? ಇವರು ಎಲ್ಲಿ ಸಿಕ್ಕಿ ಬಿದ್ದರು ? ದ್ರಮಿಡ ದೊರೆ ಇವರನ್ನೇಕೆ ಉಳಿಸಿದ ?" ಎಂಬ ಉತ್ತರ ಸಿಗದ ಪ್ರಶ್ನೆಗಳ ಸರಮಾಲೆಯೇ ಅವನ ಮನದಲ್ಲಿ ಎದ್ದರೂ, ಏನನ್ನೂ ಕೇಳುವಂತಿರಲಿಲ್ಲ !

ಕೋಪವನ್ನೂ, ಅಪಮಾನವನ್ನೂ, ನಿರಾಸೆಯನ್ನು ನುಂಗಿಕೊಂಡು, ದೊರೆಯನ್ನೊಮ್ಮೆ ದುರುಗುಟ್ಟಿ ನೋಡಿದ ! ಅವನ ಸೇನಾ ಸಹಾಯದ ಮಾತು ನಿಜವೋ, ವ್ಯಂಗ್ಯವೋ ಎಂಬುದೂ ತಿಳಿಯದೆ, ಚಿಂತಿಸುತ್ತಾ ಕುದುರೆಯ ಬೆನ್ನು ತಟ್ಟಿದ.

ಆರೇಳು ಹರಿದಾರಿ ಹೋದ ಮೇಲೆ, ಆ ಅಡಿಗೆಯ ವೇಷದ ತನ್ನವರನ್ನು ಕರೆಸಿ, "ಕೆಲಸ ಕೆಡಿಸಿದ ಸ್ವಾಮಿ ದ್ರೋಹಿಗಳೇ ! ನಿಮಗಿದು ಬಹುಮಾನ" ಎನ್ನುತ್ತಾ ನಿರ್ದಾಕ್ಷಿಣ್ಯವಾಗಿ ಅವರನ್ನು ಕೊಂದು ಮರಕ್ಕೆ ಆ ಹೆಣಗಳನ್ನು ಕಟ್ಟಿಸಿದ !

ದ್ರಮಿಡ ದೇಶದ ದೊರೆಯ ಗುಪ್ತಚಾರರು ಈ ಸಮಾಚಾರವನ್ನು ಬಂದು ಅರುಹಿದರು ! ಇಲ್ವಲನ ಉದ್ದೇಶ್ಯ ಪೂರ್ಣವಾಗಿ ಬಹಿರಂಗವಾಯಿತು ! ಅಗಸ್ತ್ಯರ ರಾಯಭಾರಿಗಳು ವಿಜಯ ಶಾಲಿಗಳಾಗಿದ್ದರು.

—೦—

# ೨೦ ಮೃತಸಂಜೀವಿನೀ !

ಅಗಸ್ತ್ಯಶಿಷ್ಯರು ಕುಮಾರವರ್ಮನ ಅಪ್ಪಣೆಯನ್ನು ಪಡೆದು, ಶಿವಗುರುವನ್ನು ಬೀಳ್ಕೊಂಡು ಕಾಂಚೀ ಪುರಿಯ ಕೋಟೆಯಿಂದ ಹೊರ ಬಂದಾಗ, ಗೊಂಡಭಟರು ಕುದುರೆಗಳನ್ನು ಸಿದ್ಧಪಡಿಸಿದರು. ದೊರೆಯ ಗುಪ್ತಚರರು ಜೊತೆಗೆ ಬಂದು ಅಗಸ್ತ್ಯರು ಬೀಡು ಬಿಟ್ಟಿದ್ದ ಜಾಗಕ್ಕೆ ಬೇಗ ಸೇರಬಹುದಾದ ರಹಸ್ಯ ಮಾರ್ಗವನ್ನು ತೋರಿಸುತ್ತಾ ಕೆಲವೇ ದಿನಗಳಲ್ಲಿ ಅಗಸ್ತ್ಯರನ್ನು ಕೂಡಿಕೊಂಡರು. ಶಿಷ್ಯರು ಮಾಡಿಕೊಂಡು ಬಂದುದನ್ನೆಲ್ಲ ಕೇಳಿ ಅಗಸ್ತ್ಯರು ಪರಮಸಂತುಷ್ಟರಾಗಿ, ಕುಮಾರವರ್ಮನಿಗೆ ಒಂದು ಓಲೆಯನ್ನು ಬರೆದು ಕೊಟ್ಟು ಅವನು ಏನು ಮಾಡಬೇಕೆಂಬುದನ್ನು ಸೂಚಿಸಿ ಕಳುಹಿದರು. ಕಾಂಚೀ ಭಟರು ತಾವು ಬಂದ ದಾರಿಗೆ ತೆರಳಿದರು. ಅಗಸ್ತ್ಯರು ಆ ಭಟರನ್ನು ಸರಿಯಾಗಿ ಗೌರವಿಸುವುದನ್ನು ಮರೆಯಲಿಲ್ಲ.

*     *     *

ವಾತಾಪಿ ಮಣಿಮತೀಪುರಿಯನ್ನು ಸೇರಿ ಇಲ್ವಲನಿಗೆ ನಡೆದುದನ್ನೆಲ್ಲ ತಿಳಿಸಿದ. ಕುಮಾರವರ್ಮ ಏಕೆ ಹಿಂದೆ ಮುಂದೆ ನೋಡಿದನೆಂಬುದನ್ನು ಇಲ್ವಲ ಅರಿಯಲು ಸಮರ್ಥನಾಗದೇ, "ಅಂತೂ ಸಹಾಯಕ್ಕೆ ಒಪ್ಪಿದರಲ್ಲ ! ಅದೇ ಸಾಕು" ಎಂದು ಸಂತೋಷ ಪಟ್ಟುಕೊಂಡ ! ವಾತಾಪಿ ಅಲ್ಲಿ ಆನೆಗೆ ಭಟರಿಂದ ವೇಷಾಂತರದಲ್ಲಿ ವಿಷಪ್ರಯೋಗ ಮಾಡಿದ್ದು ಹೇಗೆ ಬಹಿರಂಗವಾಯಿತೆಂಬುದು ರಹಸ್ಯವಾಗಿಯೇ ಉಳಿಯಿತು ! "ಧೂರ್ತನಾದ ಅಗಸ್ತ್ಯನೋ, ಅವನ ವಿದ್ಯೆ ತಿಳಿದ ಅವನ ಶಿಷ್ಯನೋ ಅಲ್ಲಿಗೆ ಬಂದಿದ್ದ ಹೊರತು ಇದು ಬಹಿರಂಗವಾಗುವುದಲ್ಲ

ಅದು ಸಾಧ್ಯವೇ ಇಲ್ಲ! ಆದರೆ ಅಗಸ್ತ್ಯ ಇನ್ನೂ ಗೊಂಡಾರಣ್ಯವನ್ನೇ ಘಾಟಿಲ್ಲ! ನಮ್ಮ ರಾಜಧಾನಿಗೆ ಇನ್ನೂ ಐದಾರು ದಿನಗಳ ಪ್ರಯಾಣ ದೂರದಲ್ಲಿದ್ದಾನೆ! ಆದರೆ ಇದು ಹೇಗಾಯಿತು ?" ಎಂದು ಬಹುವಾಗಿ ಚಿಂತಿಸಿದ! ಉತ್ತರ ಹೊಳೆಯುಲಿಲ್ಲ,

ಇನ್ನು ವೇಳೆ ಬಹಳ ಉಳಿಯುಲಿಲ್ಲ! ಪಾಂಡ್ಯದ ಅರಸನಿಗೂ ದ್ರವಿಡನಿಗೂ ಓಲೆ ಬರೆಸಿ "ಈಗಲೇ ಮಣಿಮತಿಪುರಿಯ ಸಹಾಯಕ್ಕೆ ಬರಬೇಕು" ಎಂದು, ದೂತರ ಕೈಲಿ ಪತ್ರವನ್ನು ಕಳುಹಿಸಿದ. ದೂತರು ಹೊರಟರು!

ಅದನ್ನೆಲ್ಲ ಅಗಸ್ತ್ಯಗೂಢಚಾರರು ಅಂದೇ ಅಗಸ್ತ್ಯರಿಗೆ ತಿಳಿಸಿದರು!

* * *

ಅಗಸ್ತ್ಯರು ಚಾಕ್ರಾಯಣ, ಸೋಮಶ್ರವ ಮತ್ತಿತರ ಆಪ್ತ ಶಿಷ್ಯ ರೊಡನೆ ಕೊನೆಯ ಮಂತ್ರಾಲೋಚನಾಸಭೆ ನಡೆಸಿದರು ಲೋಪಾ ಮುದ್ರೆಯೂ ಅಲ್ಲಿದ್ದಳು. ಇಲ್ವಲನ ಊರನ್ನು ಮುತ್ತಿಗೆ ಹಾಕಿ ಹಿಡಿಯಬೇಕೇ? ಇಲ್ವಲನಿಗೆ ಅತಿಥಿಯೋ ಅಭ್ಯಾಗತರೋ ಆಗಿ ತಾವು ಹೋಗಿ ಉಪಾಯದಿಂದ ಅವನನ್ನು ಮುಗಿಸಬೇಕೇ? ಅವನನ್ನೇ ಇಲ್ಲಿಗೆ ಬರಹೇಳಿ ಕಾರ್ಯಸಾಧಿಸಬೇಕೇ? ಇಲ್ವಲನಲ್ಲಿ ಈಗ ಶುಕ್ರ ಇಲ್ಲ! ಅವನಲ್ಲಿ ಉಳಿದಿರುವ ಸಾಧನಗಳೇನು? ಸೈನ್ಯವೆಷ್ಟು? ಅವನ ತಂತ್ರ ಏನಿರಬಹುದು? ಸನ್ನಾಹ ಏನು? ಅವನ ಕೋಟೆಯ ಶಕ್ತಿ ಎಂಥದು? ವಾತಾಪಿಯ ಸಾಮರ್ಥ್ಯ ಎಂಥದು? ಸೈನ್ಯದ ನಿಷ್ಠೆ ಎಂಥದು? ಎಂಬೀ ವಿಚಾರಗಳನ್ನು ಬಹು ಹೊತ್ತು ಚರ್ಚಿಸಿದರು. ಕಾಂಚಿಯಿಂದ ಚಾಕ್ರಾಯಣ ಬಹಳ ಉಪಯುಕ್ತ ಮಾಹಿತಿಗಳನ್ನು ತಂದಿದ್ದ. ಶುಕ್ರ ಇಲ್ವಲನನ್ನು ತ್ಯಜಿಸಿದ್ದು ಅಂಥ ವಿಷಯ ಗಳಲ್ಲಿ ಬಹು ಮುಖ್ಯವಾಗಿತ್ತು!

ಶುಕ್ರಪುತ್ರರೇನೋ ಅಲ್ಲೇ ಉಳಿದಿದ್ದರು. ಶುಕ್ರ ಎಲ್ಲಿಗೆ ಹೋದ ? ಇಲ್ವಲನಿಗೆ ಇನ್ನು ಸೋಲಲು ಬಹಕಾಲ ಇಲ್ಲವೆಂದು ತಿಳಿದೇ ಅಲ್ಲವೆ ಶುಕ್ರ ಅವನ ಕೈ ಬಿಟ್ಟದ್ದು ! ಆಚಾರ್ಯ ಹೀನನಾದ ಇಲ್ವಲ, ಇನ್ನು ಅಗಸ್ತ್ಯರಿಗೆ ದೊರೆತಂತೆಯೇ !

ವಾತಾಪಿ ಬಹಳ ಉಪಾಯಗಾರ ! ಶಾಂಬರ ವಿದ್ಯೆಗಳಲ್ಲಿ ಹಲವು ಅವನ ಕೈ ಸೇರಿವೆ ! ಆದರೂ ಅವನನ್ನೂ ಸದೆಬಡಿಯಬಹುದು. 'ಇಬ್ಬರಿಗೂ ಇತ್ತ ಧೈರ್ಯ ಬಲವೂ ಇಲ್ಲ ! ಅತ್ತ ಗುರು ಬಲವೂ ಇಲ್ಲ' ಎಂದು ಅಗಸ್ತ್ಯರು ನಿಟ್ಟುಸಿರು ಬಿಟ್ಟರು. ಸೈನ್ಯಬಲ ಮಾತ್ರ ಅಲ್ಲಿ ಬಹಳವಿತ್ತು ! ಅಗಸ್ತ್ಯ ಸೈನ್ಯಕ್ಕೆ ಪ್ರಾಯಃ ಎರಡು ಪಟ್ಟು ಇದ್ದಿರಬೇಕು ! ಈಗಲೇ ಅದರೊಡನೆ ಕಾದಾಡುವುದು ಸರಿಯಲ್ಲ. ಉಪಾಯ ಮಾಡಿಯೇ ಕೋಟೆಯನ್ನು ಪ್ರವೇಶಿಸಬೇಕು ಎಂದು ಅಗಸ್ತ್ಯರು ಎಂದುಕೊಂಡರು. ಇಲ್ವಲನ ಬ್ರಾಹ್ಮಣ್ಯವನ್ನು ಸ್ವಯಂ ತಾವೇ ಪರೀಕ್ಷಿಸುವುದಾಗಿ ಹೇಳಿದ್ದರಲ್ಲವೇ ? ಆ ನೆಪ ಈಗ ಸಾಕು ! ಸೈನ್ಯ ದೂರದಲ್ಲೇ ಇರಲಿ. ಋಷಿಪತ್ನಿಯರೂ ಸುರಕ್ಷಿತವಾಗಿ ಹತ್ತಾರು ಗಾವುದ ದೂರದಲ್ಲೇ ಇರುವುದು ಒಳ್ಳೆಯದು ! ಕಪಟಿಯಾದ ಇಲ್ವಲನಿಗೆ ತಮ್ಮ ನಗರ ಪ್ರವೇಶ ವಿಷಯದಲ್ಲಿ ಸಂಶಯ ಮೂಡದಂತೆ ನೋಡಿಕೊಳ್ಳಬೇಕು. ಸೈನ್ಯವನ್ನು ದಕ್ಷಿಣದತ್ತ ಒಯ್ಯುತ್ತಿರುವುದಾಗಿ ಸಬೂಬು ಹೇಳಬೇಕು. ಆಕಸ್ಮಿಕವಾಗಿ ಸಿಕ್ಕ ಇವನ ಊರನ್ನು, ಅವನಿಗೆ ಕೊಟ್ಟ ಮಾತನ್ನು ನೆರವೇರಿಸಲೆಂದು ಮಾತ್ರ ತಾವು ಪ್ರವೇಶಿಸುತ್ತಿರುವುದಾಗಿ ಹೇಳಬೇಕು. ಒಳಹೊಕ್ಕು ಕಾಲಕಾಯಬೇಕು ! ಎಲ್ಲಕ್ಕಿಂತ ಮುಂಚೆ ದೇವತೆಗಳ ಪ್ರಸಾದವನ್ನು ಸಂಪಾದಿಸಬೇಕು.

ಹೀಗೆ ನಿಶ್ಚಯಿಸಿದ ಅಗಸ್ತ್ಯರು ಸ್ನಾನ ಮಾಡಿ ಸಾಯಂ ಸಂಧ್ಯೆ ಮುಗಿಸಿ, ಅಗ್ನಿಹೋತ್ರವನ್ನೂ ಮಾಡಿ, ಯೋಗ ಸಮಾಧಿಯಲ್ಲಿ ಕುಳಿತು

ಅಶ್ವಿನೀ ದೇವತೆಗಳನ್ನು ಧ್ಯಾನಿಸಿದರು. ಕಮಲದ ಹೂ ಮಾಲೆಗಳನ್ನು ಧರಿಸಿ, ಕೈಯಲ್ಲಿ ಬಂಗಾರದ ಚಾವಟಿಗಳನ್ನು ಹಿಡಿದು ವೇಗವಾಗಿ ಓಡುವ ಹೇಸರಗತ್ತೆಗಳ ಮೇಲೆ ಕುಳಿತು ದೇವತೆಗಳು ಅವರ ಮಾನಸಾಕಾಶದಲ್ಲಿ ಪ್ರತ್ಯಕ್ಷರಾದರು.

**ಅಶ್ವಿನಿಗಳು :** "ಮಹರ್ಷಿಗೆ ಏನು ಚಿಂತೆ ?"

**ಅಗಸ್ತ್ಯ :** "ನಿಮಗೆ ಗೋಚರವಾಗದ ನನ್ನ ಚಿಂತೆಯೂ ಉಂಟೋ ? ಪ್ರಭುಗಳೇ ! ಈ ಇಲ್ವಲನಿಗೆ ಮೃತಸಂಜೀವನೀ ವಿದ್ಯೆ ತಿಳಿದಿದೆಯಂತೆ ! ಅದರಿಂದೇನು ಅನರ್ಥ ಮಾಡುವನೋ ಏನೋ ! ನಾನೂ, ನನ್ನ ಶಿಷ್ಯರೂ ಅವನ ಊರೊಳಕ್ಕೆ ಹೊರಟಿದ್ದೇವೆ. ಅವನ ಮೃತ್ಯುದವಡೆಯಲ್ಲಿ ಸಿಕ್ಕಿ ಹಾಕಿಕೊಳ್ಳುವ ಮುಂಚೆ. ಅವನಿಗೆ ವಶವಾದ ಆ ವಿದ್ಯೆಯನ್ನು ನೀವು ನನಗೆ ಉಪದೇಶಿಸಿದರೆ, ನನ್ನ ಕಾರ್ಯ ಸಫಲ! "

**ಅಶ್ವಿನಿಗಳು :** "ಮಹರ್ಷೇ ! ಅಮೃತಪಾನ ಮಾಡಿದ ನಾವು ಕಂಡುಕೊಂಡ ಮೃತಸಂಜೀವಿನೀ ವಿದ್ಯೆಯೇ ಬೇರೆ ! ಮರ್ತ್ಯರಾದ ಈ ಅಸುರರು ಕಂಡು ಹಿಡಿದ ಆ ಮೃತಸಂಜೀವಿನಿಯೇ ಬೇರೆ ! ನಮ್ಮದು ಶಾಶ್ವತ ಫಲಕೊಡುವ ದೈವೀ ವಿದ್ಯೆ! ನಿನಗೆ ಅದು ಮಧುವಿದ್ಯೆಯ ರೂಪದಲ್ಲಿ ಈಗ ಸಾಕ್ಷಾತ್ಕಾರವೂ ಆಗಿದೆ. ನಾವು ಅದನ್ನು ದಧ್ಯಜ್ ಆಥರ್ವಣನಿಂದ ಪಡೆದೆವಷ್ಟೆ! ಯಾವ ವಸ್ತುವೂ ಕಾಲದಲ್ಲಿ ವಿವರ್ತನೆ ಹೊಂದದೆ ಇದ್ದಂತೆಯೇ ಇರುವುದು ಶಕ್ಯವಿಲ್ಲ. ಇದು ಕರ್ಮ ಲೋಕ, ಈ ಮರ್ತ್ಯಲೋಕ ! ಕಾಲಾಧೀನವಾಗದೇ ಒಬ್ಬರು ಇದ್ದ ಹಾಗೇ ಇರಬಯಸುವುದು ಆಸುರೀ ಭಾವದಿಂದ ಮಾತ್ರ! ಕಾಲವಶ ವಾಗಿಯೂ ಒಂದು ವಸ್ತುವು, ಆತ್ಯಂತಿಕ ವಿನಾಶಹೊಂದದೆ, ರೂಪಾಂತರ ದಲ್ಲಿ ನಿರಂತರವಾಗಿರುತ್ತಾ, ಯಜ್ಞತತ್ತ್ವದ ಹೃದಯದಲ್ಲಿ ಶಾಶ್ವತ ವಾಗಿರಬಹುದೆಂಬ ಗುಟ್ಟನ್ನು ಮೊದಲು ಸಂಪಾದಿಸಿದವನು ಈ ಅಥರ್ವ

ದಧೀಚ! ಆಯುರ್ವೇದಶಾಸ್ತ್ರದಲ್ಲಿ ಅದರ ಒಂದಂಶವುಂಟು. ಈ ಗುಟ್ಟನ್ನು ಬಹಿರಂಗಪಡಿಸಿದವನಿಗೆ "ತಲೆ ಬಿದ್ದು ಹೋಗಲಿ'' ಎಂಬ ನಿಯಮವಿದ್ದು, ದಧೀಚನು, ಮೊದಲೇ ಕುದುರೆಯ ತಲೆಯನ್ನು ಧರಿಸಿಯೇ ನಮಗೆ ಅದನ್ನು ಹೇಳಿಕೊಟ್ಟ! ಬಿದ್ದ ತಲೆಯನ್ನು ತೆಗೆದು ನಾವು ಅವನ ಮೊದಲಿನ ತಲೆಯನ್ನೇ ಅಲ್ಲಿ ಅವನೇ ಹೇಳಿಕೊಟ್ಟ ವಿದ್ಯೆಯಿಂದ ಕೂಡಿಸಿದೆವು! ಇದೊಂದು ರೀತಿಯ "ಹಯಗ್ರೀವ ವಿದ್ಯೆ"! ನಿನಗೆ ಅದು ಸಾಕ್ಷಾತ್ಕಾರ ಹೇಗೊ ಆಗಿದೆ. ಆದರೆ ಇಲ್ವಲನಲ್ಲಿರುವುದು ಅದಲ್ಲ! ಅದರಿಂದ ಅವನು ಏನೂ ಮಾಯಾ ಮಂತ್ರ ಮಾಡಲು ಶಕ್ಯವಿಲ್ಲ! ಆ ಗುಟ್ಟು ದೇವಗುರು ಬೃಹಸ್ಪತಿಗೆ ತಿಳಿದಿದೆ. ಅವನನ್ನು ಪ್ರಾರ್ಥಿಸು."

**ಅಗಸ್ತ್ಯ :** "ದೇವಗುರುವಿಗೆ ಅದು ಹೇಗೆ ಪ್ರಾಪ್ತವಾಯಿತು?"

**ಅಶ್ವಿನಿಗಳು :** "ಅದು ಶುಕ್ರನ ಮಾಯಾ ವಿದ್ಯೆ! ಒಬ್ಬನನ್ನು ಸಂಹರಿಸಿ, ಅವನನ್ನು ಮತ್ತೆ ಜೀವಂತವಾಗಿ ಬದುಕಿಸುವ ಈ ವಿದ್ಯೆ ಪ್ರಕೃತಿ ನಿಯಮಕ್ಕೆ ವಿರುದ್ಧ! ಶುಕ್ರ ಈ ಮಾಯೆಯನ್ನಾಶ್ರಯಿಸಿ, ಅಸುರ ಸೈನ್ಯದಲ್ಲಿ ಸತ್ತ ಎಲ್ಲರನ್ನೂ ಬದುಕಿಸುತ್ತಾ, ಆ ಸೈನ್ಯವೇ ಅಳಿಯದಂತೆ ಮಾಡಿಬಿಟ್ಟ! ಬಲಿಚಕ್ರವರ್ತಿಗೆ ಇದು ವಶವಾಗಿದ್ದೇ ನಾವೆಲ್ಲ ಸೋತು ಓಡಿದ್ದು! ಅಮೃತ ಮಥನ ಕಾಲದಲ್ಲಿ ಅಸುರರಿಗೆ ಅದು ದಕ್ಕಲಿಲ್ಲವೆಂಬ ಅಸೂಯೆಯಿಂದ ಶುಕ್ರ ಈ ಮಾಯೆಯನ್ನು ನಿರ್ಮಿಸಿದ! ಆದರೆ ಇದೊಂದು ಪ್ರತಿಕೃತಿಯೇ ಹೊರತು ಶಾಶ್ವತವಿದ್ಯೆಯಲ್ಲ! ಆದರೂ ಇದರ ಉಪದ್ರವವನ್ನು ನಿವಾರಿಸಲು ದೇವ ಗುರುವು ತನ್ನ ಪುತ್ರನಾದ ಕಚನನ್ನು ಶುಕ್ರನಲ್ಲಿ ವಿದ್ಯಾಭ್ಯಾಸಕ್ಕಾಗಿ ಕಳುಹಿದ. ಕಚ ಅದನ್ನು ಗ್ರಹಿಸಿ ಬಂದ ಕಥೆ ಹೀಗೆ" ಎನ್ನುತ್ತಾ ಅಶ್ವಿನಿಗಳು ಅದನ್ನು ವಿವರಿಸಿದರು. ಅದರ ಸಂಗ್ರಹ ಹೀಗೆ :

* * *

ಆಗ ಶುಕ್ರ, ವೃಷಪರ್ವನೆಂಬ ಅಸುರ ದೊರೆಗೆ ಪುರೋಹಿತನಾಗಿದ್ದ ಕಾಲ! ಶುಕ್ರನ ಈ 'ವಿದ್ಯಾ' ಪ್ರಯೋಗದಿಂದ ಅಜೇಯರಾದ ಅಸುರರು ಬಗೆಬಗೆಯಿಂದ ದೇವತೆಗಳನ್ನು ಹಿಂಸಿಸಿದರು. ಉಪದ್ರವ ತಾಳಲಾರದೆ, ದೇವತೆಗಳು ಬೃಹಸ್ಪತಿಯನ್ನಾಯಿಸಿದರು. ಬೃಹಸ್ಪತಿ ಧ್ಯಾನಾಸಕ್ತನಾಗಿ ನಡೆದುದನ್ನರಿತ! ಶುಕ್ರನ ಆ ವಿದ್ಯೆಯನ್ನು ಉಪಾಯದಿಂದ ಅರಿತು ಬರಲು ತನ್ನ ಜ್ಯೇಷ್ಠ ಪುತ್ರ, ಕಚನೆಂಬುವವನನ್ನು ಶುಕ್ರನಲ್ಲಿ ಗುರುಕುಲವಾಸಮಾಡಿ ಅದನ್ನರಿತುಬರಲು ಕಳುಹಿದ! ಕಚ, ಧೀರನಾಗಿ ಹೊರಟು ಶುಕ್ರನ ಗುರುಕುಲವನ್ನು ಸೇರಿದ.

ಶುಕ್ರನಿಗೂ ಬೃಹಸ್ಪತಿಗೂ ಸ್ಪರ್ಧೆಯಿದ್ದು ಒಬ್ಬರ ಶಕ್ತಿಯನ್ನು ಮುರಿಯಲು ಇನ್ನೊಬ್ಬರು ಯತ್ನಿಸುತ್ತಿದ್ದರೂ ಇಬ್ಬರೂ ಒಂದೇ ವಂಶದ ಬ್ರಾಹ್ಮಣರಾಗಿದ್ದರು! ಇಬ್ಬರೂ ಭೃಗ್ವಾಂಗೀರಸ ಗೋತ್ರದವರು! ಗುರುಕುಲಕ್ಕೆ ಬಂದು ಗುರುವಾದವನ್ನು ಮುಟ್ಟಿ "ವಿದ್ಯೆಯನ್ನು ಕೊಡಿ" ಎಂದು ಕೇಳಿದವನಿಗೆ ಆ ಕಾಲದಲ್ಲಿ ನಿರಾಕರಿಸುವಂತೆ ಇರಲಿಲ್ಲ. ಅದು ಯುಗಧರ್ಮ. ಹಾಗೆ ನಿರಾಕರಿಸಲು ಶುಕ್ರನಿಗೆ ಕಾರಣಗಳೂ ಇರಲಿಲ್ಲ. ಇವನು ಯಾವ ವಿದ್ಯೆಗಾಗಿ ಬಂದನೆಂಬುದೂ ಶುಕ್ರನಿಗೆ ತಿಳಿಯಲಿಲ್ಲ! ಕಚ ಬಾಯಿಬಿಟ್ಟು ಹೇಳಲೂ ಇಲ್ಲ!! ಅದು ಬೃಹಸ್ಪತಿ ವಂಶದ ಬುದ್ಧಿವಂತ್ತತೆ!

ಶುಕ್ರನಿಗೆ ದೇವಯಾನೀ ಎಂಬ ಸುಂದರ, ಯೌವನಸ್ಥೆಯಾದ ಕನ್ಯೆ ಇದ್ದಳು! ಕಚ ಅವಳಿಗೆ ರೂಪದಿಂದ, ಗುಣದಿಂದ, ಬುದ್ಧಿಯಿಂದ ಬಹು ಪ್ರಿಯನಾದ. ಈ ಸಹಾಯ ದೊರೆತ ಮೇಲೆ ಕೇಳುವುದೇನು? ಕಚ ಶುಕ್ರನಿಗೂ ಬಲು ಪ್ರಿಯನೇ ಆದ. ಹೀಗೆ ಐದು (ನೂರು) ವರ್ಷಗಳು

ಗುರುಕುಲದಲ್ಲಿ ಉರುಳಿದರೂ ಕಚನಿಗೆ ಯಾವ ವಿದ್ಯೋಪದೇಶವೂ ಆಗ ಲಿಲ್ಲ! ದನ ಮೇಯಿಸುವುದು, ಗುರುವಿನ ಬಟ್ಟೆ ಬಗೆಯುವುದು, ಗುರು ಮನೆಯ ಕಸ ಗುಡಿಸುವುದು—ಇದೇ ಮೊದಲಾದ ಶುಶ್ರೂಷೆಗಳನ್ನು ಬಹುಶ್ರದ್ಧೆಯಿಂದ ಕಚ ಮಾಡಿದ್ದ, ಒಂದು ದಿನ ವಿದ್ಯೆ ದೊರೆತೇ ದೊರೆ ಯುವುದೆಂಬ ಆಸೆಯಿಂದ !

ಆ ದಿನ ಸಮೀಪಿಸಲು ಬುದ್ಧಿಹೀನರಾದ ಅಸುರರೇ ಕಾರಣ ರಾದರು ! ಅದು ಹೀಗೆ. ಒಂದು ದಿನ ತಮ್ಮ ಹಗೆಯಾದ ಬೃಹ ಸ್ಪತಿಯ ಪುತ್ರನು, ತಮ್ಮ ಗುರುವಿನ ಆಶ್ರಮದಲ್ಲಿ ಅಷ್ಟು ದೀರ್ಘ ಕಾಲ ವಾಸಮಾಡಿದುದರಿಂದ ತಮಗೆ ಕೇಡುಂಟೆಂದು ಅಸುರರು ಲೆಕ್ಕ ಹಾಕಿ ದರು. ಕಾಡಿನಲ್ಲಿ ಶುಕ್ರನ ದನಗಳನ್ನು ಮೇಯಿಸುತ್ತಿದ್ದ ಕಚನನ್ನು ಕೊಂದು, ಕಡಿದು, ಚೂರುಚೂರು ಮಾಡಿ ಕಾಡಿನ ತೋಳಗಳಿಗೆ ಆಹಾರ ವನ್ನಾಗಿ ಎಸೆದರು ! ಎಷ್ಟೊಂದು ಕಾಡು ಪ್ರಾಣಿಗಳು ಆ ದೇಹವನ್ನು ತಿಂದವೋ ? ಯಾರು ಬಲ್ಲರು ?

ಸಂಜೆ ಸೂರ್ಯ ಮುಳುಗುತ್ತಾ ಗೋವುಗಳು ಎಂದಿನಂತೆ ಜಾಡು ಹಿಡಿದು ಶುಕ್ರಾಶ್ರಮವನ್ನು ಸೇರಿಕೊಂಡವು. ಕಚ ಬಾರದುದನ್ನು ಕಂಡು ದೇವಯಾನೀ ಅಳಲಾರಂಭಿಸಿದಳು. "ಅವನಿಗೇನೋ ಆಗಿದೆ ! ತಾನೇ ಸತ್ತಿರಬೇಕು ! ಇಲ್ಲವಾದರೆ ಯಾರೋ ಕೊಂದಿರಬೇಕು !" ಎಂದು.

ಶುಕ್ರ ಜ್ಞಾನದೃಷ್ಟಿಯಿಂದ ನಡೆದುದನ್ನು ತಿಳಿದ. ಪುತ್ರೀಮೋಹ ಅವನನ್ನೂ ದಿಕ್ಕು ತಪ್ಪಿಸಿತು ! ಮೃತಸಂಜೀವನೀ ಮಂತ್ರವನ್ನು ಜಪಿಸಿ, ಕಾಡಿನತ್ತ ಕೈ ಮಾಡಿ "ಕಚ ! ಎಲ್ಲಿರುವೆಯಪ್ಪಾ ! ಬಾ ! ಬೇಗ ಇಲ್ಲಿಗೆ ಬಾ !" ಎಂದು ಕರೆದ.

ಕರೆದುದೇ ತಡ ! ಕಚನ ದೇಹದ ಯಾವ ಯಾವ ಚೂರು, ಭಾಗಗಳನ್ನು ಯಾವಯಾವ ತೋಳಗಳು ತಿಂದಿದ್ದವೋ, ಆ ಪ್ರಾಣಿಗಳ

ಶರೀರವನ್ನು ಸೀಳಿಕೊಂಡು ಆ ಭಾಗಗಳು ಹೊರಬಂದು, ಒಂದಾಗಿ, ಕಚ, ಓಡೋಡುತ್ತಾ ಆಶ್ರಮಕ್ಕೆ ಆರೋಗ್ಯವಾಗಿ ಬಂದು ಸೇರಿದ !

ದೇವಯಾನಿಗೆ ಸಂತೋಷವಾಯಿತ್ತು! ಶುಕ್ರ ಏನು ಮಾಡಿದ ನೆಂಬುದು ಅವಳಿಗೆ ತಿಳಿಯಲೇ ಇಲ್ಲ! "ಯಾಕಿಷ್ಟು ತಡ ಮಾಡಿದೆ?" ಎಂದು ಕಚನನ್ನು ಕೇಳಿದಳು. ನಡೆದುದೇನೆಂದು ತಿಳಿದ ಕಚ "ಸಮಿತ್ತು, ದರ್ಭೆ ತರುವುದು ಹೊತ್ತಾಯಿತು" ಎಂದಿಷ್ಟೇ ಉತ್ತರಿಸಿದ! ದನಗಳು ಮೇಯುತ್ತಿದ್ದಾಗ ತಾನು ಒಂದು ಮರದಡಿಯಲ್ಲಿ ವಿಶ್ರಾಂತನಾದುದು, ಅಸುರರು ಬಂದು ಅವನನ್ನೆಬ್ಬಿಸಿದುದು, ನೀರಾರೆಂದು ಕೇಳಿದುದು, ಇವನ ಉತ್ತರ ಕೇಳಿ ಅವರು ಅವನನ್ನು ಕೊಂದು, ಮಾಂಸವನ್ನು ಚೂರು ಚೂರು ಮಾಡಿ ತೋಳಗಳಿಗೆ ಹಾಕಿದುದು, ಶರೀರವಿಲ್ಲದೆ ತಾನು ಪರಿತಪಿಸಿದುದು. ಇದೆಲ್ಲ ಕಚನಿಗೆ ಚೆನ್ನಾಗಿ ನೆನೆಪಿತ್ತು !

ಇನ್ನೊಮ್ಮೆ ದೇವಯಾನಿಗೆಂದೇ ಹೂ ತರಲು ಕಾಡಿಗೆ ಹೋದ ಕಚನನ್ನು ಅಸುರರು ಮತ್ತೆ ಕೊಂದು ಚೂರು ಚೂರು ಮಾಡಿ ಸಮುದ್ರದ ನೀರಲ್ಲಿ ಸೇರಿಸಿ ಬಿಡುತ್ತಾರೆ! ವನದಿಂದ ಬಾರದ ಅವನ ಬಗ್ಗೆ ಚಿಂತಿಸಿ ದೇವಯಾನೀ ಮತ್ತೆ ಶುಕ್ರನಲ್ಲಿ ಹೋಗಿ ಅಳುತ್ತಾಳೆ. ಶುಕ್ರ ಮತ್ತೆ ಕಚನನ್ನು ಬದುಕಿಸಿ ತರುತ್ತಾನೆ. ನಡೆದುದನ್ನು ಕೇಳಿ ಶುಕ್ರ ಬೇಸರಗೊಳ್ಳುತ್ತಾನೆ.

ಕಚ ಮತ್ತೆ ಬದುಕಿ ಬಂದುದನ್ನು ತಿಳಿದು ಕ್ರುದ್ಧರಾದ ಅಸುರರು. ಈ ಬಾರಿ ಮತ್ತೆ ಅವನನ್ನು ಕೊಂದು, ಸುಟ್ಟು, ಅವನ ಶವಭಸ್ಮವನ್ನು ಶುಕ್ರ ದಿನಾ ಕುಡಿಯುತ್ತಿದ್ದ ಸುರೆಯಲ್ಲಿ ಸೇರಿಸಿ ಅವನಿಗೇ ಪ್ರಾಶನ ಮಾಡಿಸಿಬಿಡುತ್ತಾರೆ! ತಿಳಿಯದ ಶುಕ್ರ ಅದನ್ನು ಕುಡಿದೂ ಬಿಡುತ್ತಾನೆ! ಮತ್ತೆ ಕಚನನ್ನು ಕಾಣದ ದೇವಯಾನೀ ಅಳುತ್ತಾಳೆ.

ಶುಕ್ರನಿಗೆ ಏನಾಯಿತೆಂದು ತಿಳಿದು, ಈ ಬಾರಿ, ನಿರುಪಾಯನಾಗಿ ದೇವಯಾನಿಗೆ ಹೇಳುತ್ತಾನೆ: "ಮಗಳೇ ! ಕಚ, ನಿಜವಾಗಿ ಸತ್ತು ಹೋದ ನಮ್ಮ ! ಎರಡು ಸಲ ನಾನು ಉಳಿಸಿಯೂ ಹೀಗಾಯಿತು. ಈಗೇನು ಮಾಡಲಿ ? ಇನ್ನು ಇವನು ಬದುಕಿ ಬರಲು ಸಾಧ್ಯವಿಲ್ಲ." ಎಂದು ಬಿಡುತ್ತಾನೆ. ದೇವಯಾನೀ ಕಚನ ಗುಣಗಣಗಳನ್ನೇ ನೆನೆಯುತ್ತಾ ಅಳುತ್ತಾ ತಂದೆಯನ್ನು ಪೀಡಿಸುತ್ತಾಳೆ. "ಹೇಗಾದರೂ ಅವನನ್ನು ಕರೆದು ತಾ" ಎಂದು. ಅಸುರರ ನಡೆವಳಿಕೆಯಿಂದ ಶುಕ್ರನಿಗೂ ಕೋಪ ಬರುತ್ತದೆ.

ಶುಕ್ರನ ಹೊಟ್ಟೆ ಸೇರಿದ ಕಚ ಅಲ್ಲಿಂದಲೇ ಗುರುವಿಗೆ ಅಭಿವಂದಿಸಿ ಹೀಗೆನ್ನುತ್ತಾನೆ. "ಗುರುವೇ ! ನಿಮ್ಮ ಅನುಗ್ರಹದಿಂದ ನನಗೆ ಜ್ಞಾನವೂ ನೆನೆಪಿನ ಶಕ್ತಿಯೂ ಚೆನ್ನಾಗಿವೆ. ನಿಮ್ಮ ಪ್ರಸಾದದಿಂದಲೇ ಈ ಯಾತನೆಯನ್ನೆಲ್ಲ ಸಹಿಸಬಲ್ಲವನಾಗಿದ್ದೇನೆ. ಅಸುರರು ನಿಮ್ಮ ಸುರಾಪಾನ ಪಾತ್ರೆಯಲ್ಲಿಯೇ ನನ್ನ ಬೂದಿ ಸೇರಿಸಿ ನಿಮಗೆ ಕುಡಿಸಿದರು ! ಗುರುವರ್ಯ! ನಿಮಗೆ ಬ್ರಾಹ್ಮೀ ಮಾಯೆಯೂ, ಈ ಆಸುರೀಮಾಯೆಯೂ ವಶವಾಗಿವೆ. ನಿಮ್ಮನ್ನು ಮೀರಬಲ್ಲವರಾರು ?" ಎಂದು ಗುರುಸ್ತುತಿ ಮಾಡುತ್ತಾನೆ.

ಪ್ರೀತನಾದ ಶುಕ್ರ ಮಗಳನ್ನು ಕೇಳುತ್ತಾನೆ, "ಮಗಳೇ, ನಿನಗೆ ಕಚ ಬದುಕಿ ಬರಬೇಕಾದರೆ, ನಾನು ಸಾಯಬೇಕಾಗುತ್ತದೆ ! ಬೇರೆ ದಾರಿ ಇಲ್ಲ."

ದೇವಯಾನೀ ಹೇಳುತ್ತಾಳೆ. "ಅಪ್ಪಾ! ನೀವೂ ಸಾಯದೇ, ಕಚನೂ ಬದುಕಿ ಬರುವ ಉಪಾಯ ನಿಮಗೆ ಗೊತ್ತಿದೆ ! ಯಾರು ಸತ್ತರೂ ನಾನಂತೂ ಬದುಕಿರಲಾರೆ" ಎಂದು.

ಶುಕ್ರ ಮಗಳ ಕಚಪ್ರೀತಿಗೆ ಮೆಚ್ಚಿ, ಕಚನಿಗೆ ಹೇಳುತ್ತಾನೆ. "ಕಚನೇ! ನೀನು ಇಂದ್ರನಲ್ಲ ಎಂದು ತಿಳಿದು ಈ ಮಾತನ್ನಾಡುತ್ತಿರುವೆನು!

ನೀನು ಬ್ರಾಹ್ಮಣನಾಗಿಲ್ಲದಿದ್ದರೆ ನಾನು ನಿನ್ನನ್ನು ಬದುಕಿಸುತ್ತಲೂ ಇರಲಿಲ್ಲ. ಇಕೋ, ಈ ಮೃತಸಂಜೀವಿನೀ ವಿದ್ಯೆಯನ್ನು ನಿನಗೆ ಉಪ ದೇಶಿಸುತ್ತೇನೆ. ಗ್ರಹಿಸು. ಆಮೇಲೆ ನಿನ್ನನ್ನು ಹೆಸರು ಹಿಡಿದು ಕರೆದು ವಿದ್ಯಾಶಕ್ತಿಯಿಂದ 'ಬಾ' ಎಂದು ಕರೆಯುತ್ತೇನೆ. ನೀನು ಹೊರಗೆ ಬರುವೆ. ನಾನು ಸಾಯುತ್ತೇನೆ. ಆಗ ನೀನು ಈ ವಿದ್ಯೆಯ ಸಹಾಯ ದಿಂದ ಮತ್ತೆ ನನ್ನನ್ನು ಬದುಕಿಸು.'' ಎಂದು.

ಅದು ಹಾಗೇ ಆಗುತ್ತದೆ. ಕಚ, ಮೃತಸಂಜೀವನೀ ವಿದ್ಯೆಯನ್ನು ಪಡೆದ ಬಗೆ ಇದು. ಆದರೆ ಬದುಕಿ ಬಂದ ಕಚನನ್ನು ದೇವಯಾನಿಯು ವಿವಾಹಕ್ಕೆಂದು ನಿರ್ಬಂಧಿಸಲು, ಕಚ ಅದನ್ನು ನಿರಾಕರಿಸುತ್ತಾನೆ. ಶುಕ್ರನ ಉದರದಿಂದ ಬದುಕಿ ಬಂದ ಅವನು ಅವಳಿಗೆ 'ಸೋದರ' ಎಂದು ಹೇಳಿ, ವಿಹಾಹಕ್ಕೆ ಒಪ್ಪದಾಗ ದೇವಯಾನಿಗೆ ಕೋಪ ಬಂದು "ನೀನು ಕಲಿತ ವಿದ್ಯೆ ನಿನಗೆ ಸಿದ್ಧಿಸದಿರಲಿ" ಎಂದು ಶಾಪ ಕೊಡುತ್ತಾಳೆ.

ಕಚ ಹೇಳುತ್ತಾನೆ. "ಈ ಶಾಪಕ್ಕೆ ಗುರುಗಳ ಸಂಮ್ಮತಿ ಇಲ್ಲ. ನಿನ್ನ ಶಾವ ತಟ್ಟಲಾರದು. ಆದರೂ ನಾನೇ ಅದನ್ನು ಗೌರವಿಸುತ್ತೇನೆ. ನನಗೆ ಅದು ಸಿದ್ಧಿಸದಿದ್ದರೂ, ನನ್ನ ಕೈಲಿ ಉಪದೇಶ ಪಡೆದವನಿಗೆ ಅದು ಸಿದ್ಧಿಸಿಯೇ ತೀರುತ್ತದೆ!"

ದೇವಲೋಕಕ್ಕೆ ಮರಳಿದ ಕಚ ಅದನ್ನು ತಂದೆಯಲ್ಲಿ ಗೌಪ್ಯವಾಗಿ ಟ್ಟಿದ್ದಾನೆ. ಆದುದರಿಂದ ಅಗಸ್ತ್ಯರು ಈಗ ದೇವಗುರುವಿನಿಂದ ಅದನ್ನು ಪಡೆಯಬಹುದೆಂದು ಹೇಳಿ ಅಂತರ್ಧಾನರಾದರು.

* * *

ಅಗಸ್ತ್ಯರ ಹೃದಯವ್ಯೋಮದಲ್ಲಿ ದೇವಗುರು ಕಾಣಿಸಿಕೊಂಡರು.

**ಬೃಹಸ್ಪತಿ :** "ವತ್ಸ! ನೀನು ನನ್ನನ್ನು ಕರೆದ ಕಾರಣ ತಿಳಿಯಿತು ! ಇಕೋ, ಹಿಡಿ, ಈ ವಿದ್ಯೆಯನ್ನು ನಿನಗೆ ಉಪದೇಶಿಸುತ್ತೇನೆ." ಎಂದು ಹೇಳಿ ಬಲಗಿವಿಯಲ್ಲಿ ಮಂತ್ರೋಪದೇಶ ಮಾಡಿ, ಇಲ್ವಲ ಉದ್ದೇಶ್ಯ ಮಾಡಿದ್ದನ್ನು ಸೂಚಿಸಿ, ಅಂತರ್ಧಾನನಾಗುತ್ತಾನೆ.

* * *

ಸೂರ್ಯೋದಯವಾಯಿತು. ಅಗಸ್ತ್ಯರು ಅತಿಪ್ರಸನ್ನರಾಗಿ ಕಂಡು ಬಂದರು. ಸೋಮಶ್ರವ, ಚಾಕ್ರಾಯಣರನ್ನು ಕರೆದು ಹೇಳಿದರು.

"ಉಪಾಯ ಹುಡುಕಿದ್ದೇನೆ ! ನಾವೇ ಮಿತಪರಿವಾರರಾಗಿ ಇಲ್ವಲನ ಊರೊಳಕ್ಕೆ ಹೋಗೋಣ ! ನನ್ನ ಪತ್ನಿ ಹೇಗೂ ಕ್ಷತ್ರಿಯ ವರ್ಣದವಳು. ಅವಳು ಸಂತಾನವನ್ನು ಬಯಸಿದ್ದಾಳೆ. ನಾನೋ ಬ್ರಾಹ್ಮಣ ! ಕ್ಷತ್ರಿಯಳಿಗುಚಿತವಾದ ರೀತಿಯಲ್ಲಿ ಅವಳನ್ನು ತೃಪ್ತಿಪಡಿಸಿ, ಒಂದು ಸುಂದರ ಶಯ್ಯಾಗೃಹ, ಅವಳಿಗಷ್ಟು ಆಭರಣಗಳು, ಒಳ್ಳೆಯ ಉಡಿಗೆಗಳು, ಮಂಚ, ರಾಜಾರ್ಹ ಭೋಗಗಳನ್ನು ಸಂಪಾದಿಸಬೇಕಾಗಿದೆ. ಈ ಇಲ್ವಲನಲ್ಲಿ ಹಣವುಂಟು ! ಬ್ರಾಹ್ಮಣನಿಗೆ ಬೇಡಲು ಯೋಗ್ಯತೆಯೂ ಅಧಿಕಾರವೂ ಉಂಟು ! ಕೇಳಿ ಬರುತ್ತೇನೆ."

ಚಾಕ್ರಾಯಣ ಚಿಂತಿಸಿದ; "ಇದು ಕಪಟೋಪಾಯವೇ ಇರಬೇಕು ! ವಿರಕ್ತರೂ, ಸೃಷ್ಟಿಸಾಮರ್ಥ್ಯವುಳ್ಳವರೂ ಆದ ಗುರುಗಳು ಇಲ್ವಲನಲ್ಲಿ ಭಿಕ್ಷೆ ಬೇಡುವುದೆಂದರೇನು ?"

ಅದು ಅಸಂಭಾವ್ಯವಾಗಿ ತೋರಿ ಮುಸಿನಗಲಾರಂಭಿಸಿದ ! ಸೋಮಶ್ರವನೂ ಸಹ ! ಲೋಪಾಮುದ್ರೆ ನಾಚಿಕೆಯಿಂದ "ನಾನೇನು ಈ ಭೋಗಗಳಿಗೆ ಆಸೆ ಪಟ್ಟಿದ್ದೇನೇ ?'' ಎಂದು ಕೇಳಿದಳು.

**ಅಗಸ್ತ್ಯರು :** "ಪ್ರಿಯೆ ! ನೀನು ಸಂತಾನವನ್ನು ಕೇಳಿದೆ. ನನ್ನ ಪಿತೃಗಳೂ ಅದಕ್ಕೆ ಒತ್ತಾಯಿಸಿದರು ! ಯಾವುದನ್ನೂ ಸರಿಯಾಗಿ ಮಾಡಬೇಕು. ಅಗಸ್ತ್ಯನಿಗೆ ಯಾವುದೂ ಅಚ್ಚುಕಟ್ಟಾಗಿಯೇ ಆಗಬೇಕು. ನಿನಗೆ ಹುಟ್ಟುವ ಮಗ ನಾಳೆ ನನ್ನನ್ನು ಹಂಗಿಸಬಾರದು ! 'ನನ್ನ ತಾಯಿಗೆ ಒಂದು ಬಂಗಾರದ ಮಂಚ ಕೊಡಿಸಲು ನಿನಗೆ ಅಂದು ಯೋಗ್ಯತೆ ಇರಲಿಲ್ಲ' ಎಂದಿರಬಾರದು; ಹೌದೆ ? ಬರೀ ಬಂಗಾರದ ಮಂಚವಾದರೆ ಸಾಕೆ ? ಹರಕುಬಟ್ಟೆ ಉಟ್ಟು ಬಂಗಾರದ ಮಂಚದಲ್ಲಿ ಮಲಗಿ ಮಕ್ಕಳನ್ನು ಹಡೆದರೆ ಏನು ಭಾಗ್ಯ ? ಆ ಬಂಗಾರದ ಮಂಚದಲ್ಲಿ ಮಲಗುವುದಾದರೆ, ಬೆಳ್ಳಿಯ ಅರಮನೆಯೂ ಇರಬೇಕು, ಆಳು ಕಾಳುಗಳೂ ಇರಬೇಕು ! ರಾಜಭೋಗ ಯಾವುದಕ್ಕೂ ಕೊರತೆ ಇರಬಾರದು ! ನೀನೆಷ್ಟಾದರೂ ರಾಜಪುತ್ರಿ ! ಸಂತಾನ ಬಯಸಿದವಳು ನೀನು ! ನಾನಲ್ಲ ! ಆಮೇಲೆ ಈ ಹರಕುಗಡ್ಡದ ಬೊಜ್ಜುಮೈಯ, ಕೃಷ್ಣಾಜಿನ ಹೊದ್ದ, ನಾರುಮಡಿಯುಟ್ಟು ಒರಟು ಬ್ರಾಹ್ಮಣದೇಹದೊಡನೆ ಸೇರಿದರೆ ನಿನಗೆ ಅಸಹ್ಯವಾಗಬಾರದಲ್ಲ ! ನಾಳೆ ನನ್ನ ಮಗ ನನ್ನನ್ನು ದೂಷಿಸಬಾರದು ! ಪ್ರಿಯೇ ! ನೀನೆಂದಂತೆ ಗೃಹಸ್ಥಾಶ್ರಮ ಬ್ರಹ್ಮಚರ್ಯಕ್ಕಿಂತ ಹಿರಿದೆಂದೇ ಭಾವಿಸೋಣ. ಗೃಹಸ್ಥನಿಗೆ ಭೋಗ, ವಿಹಿತವೇ ಹೊರತು ನಿಷಿದ್ಧವಲ್ಲ !! ಆದುದರಿಂದ ಈ ಭೋಗಕ್ಕೆ ಬೇಕಾದ ವೆಚ್ಚವನ್ನು ಸಂಪಾದಿಸುವುದು ನನ್ನ ಮೊದಲ ಕರ್ತವ್ಯ ! ಆ ಮೇಲೆ ತಪಸ್ಸಿನಿಂದ ಯುವಕನೂ, ರೂಪಸಂಪನ್ನನೂ, ಭೂಷಣಭೂಷಿತನೂ, ಆಗಿ ನಿನ್ನನ್ನು ತೃಪ್ತಿ ಪಡಿಸುತ್ತೇನೆ, ಪ್ರಾಜಾಪತ್ಯೇಷ್ಟಿಯಿಂದ ಹುಟ್ಟುವ ಮೊದಲ ಮಗನೇ ಮಾತ್ರ ವಂಶೋದ್ಧಾರಕ, ಧರ್ಮಪ್ರಜೆ. ಉಳಿದವರು ಕಾಮ್ಯಸಿದ್ಧರು. ನಮಗೆ ಒಂದೇ ಸಂತಾನವುಂಟು ! ಹುಟ್ಟಿದ ಮರುಗಳಿಗೆಯಲ್ಲೇ ಐಶ್ವರ್ಯವನ್ನೆಲ್ಲ ದಾನಮಾಡಿಬಿಡೋಣ. ನನ್ನ ಮಗ ಆ ಮೇಲೆ ಕಾಡಿನಿಂದ ಸಮಿತ್ತನ್ನು ತಂದೇ ಜೀವಿಸಿ 'ಇಧ್ಮವಾಹ'ನೆಂದು ಹೆಸರು ಪಡೆಯಲಿ, ನಾನಂತೂ ಅವನಿಗೆ "ದೃಢಸ್ಯು" ಎಂದೇ ಹೆಸರಿಡುತ್ತೇನೆ."

ಲೋಪಾಮುದ್ರೆ ಹೊಟ್ಟೆ ಬಿರಿಯುವಂತೆ ನಕ್ಕಳು ! ಅಗಸ್ತ್ಯರ ಈ ಸೂಕ್ಷ್ಮ ಹಾಸ್ಯ ಪ್ರಜ್ಞೆ ಅವಳಿಗೆ ಅಚ್ಚರಿಯನ್ನೂ ತಂದಿತ್ತು ! ಯಾವಾಗಲೂ ದೇವತೆಗಳ ಧ್ಯಾನ, ವಿಶಾಲರಾಜಕಾರಣ, ಲೋಕಸಂಚಾರ, ಉಪಾಸನೆಗಳಲ್ಲೇ ದೇಹ ಸವೆಸಿದ್ದವರಿಗೆ ಈ ದಿನ ಏಕೆ ಈ ಹಾಸ್ಯ ಪ್ರವೃತ್ತಿ ? ಎಂದು ಚಿಂತಿಸಿ, ಇದರಲ್ಲೂ ದೇವಕಾರ್ಯ ಇರಬೇಕೆಂದು ಕೊಂಡರೂ ತಾನೂ ಹಾಸ್ಯದಲ್ಲಿ ಭಾಗಿಯಾಗಲು ಹೀಗೆಂದಳು :

ಲೋಪಾ : "ಆರ್ಯರೇ ! ಉತ್ತರ ದೇಶದ ಅರಸುಗಳ ಸಹವಾಸ ನಿಮ್ಮ ಬುದ್ಧಿಯನ್ನು ಕೆಡಿಸಿತೋ ? ನಾನು ಕನಸಿನಲ್ಲೂ ಬಯಸದ ಭೋಗವಸ್ತುಗಳನ್ನು ಬಲಾತ್ಕಾರವಾಗಿ ತಂದು ನನ್ನನ್ನು ನಿಗ್ರಹಿಸಲು ಉಪಾಯ ಇದಲ್ಲ ತಾನೆ ?"

ಅಗಸ್ತ್ಯ : "ಛೆ, ಛೆ ! ಮಗ ಹುಟ್ಟಿದರೆ ಆಯಿತು ! ನೀನುಂಟು, ಅವನುಂಟು ! ನಿನ್ನನ್ನು ಮೂದಲಿಸಲು ನನಗೆ ಆಗೆಲ್ಲಿಯ ವೇಳೆ ?"

ಲೋಪಾ ; "ಮಗನ ಜವಾಬ್ದಾರಿ ನಿಮಗೆ ಆಗ ಇರುವುದಿಲ್ಲವೆ?"

ಅಗಸ್ತ್ಯ : "ನೋಡಿದೆಯಾ ? ಹೆಂಡತಿಯ ಜವಾಬ್ದಾರಿಯನ್ನು ಬಲಾತ್ಕಾರವಾಗಿ ನನಗೆ ತಲೆಗೆ ಶಾಶ್ವತವಾಗಿ ಕಟ್ಟುವ ಜಾಣತನ ಇದು, ಅಲ್ಲವೇ ?"

ಲೋಪಾ : "ಬಂಗಾರದ ಮಂಚವನ್ನು ಬಲಾತ್ಕಾರವಾಗಿ ನನ್ನ ತಲೆಗೆ ಕಟ್ಟುವವರ ಜಾಣತನಕ್ಕೆ ಏನೆನ್ನಲೇಕು ?"

* * *

ಅಗಸ್ತ್ಯರು ಆ ದೊಡ್ಡ ಸೈನ್ಯವನ್ನು ಅಲ್ಲಿಯೇ ಹತ್ತು ಹರಿದಾರಿ ದೂರದಲ್ಲಿ ಸಂನ್ನದ್ಧವಾಗಿ ನಿಲ್ಲಿಸಿ, ಪ್ರಿಯವ್ರತನನ್ನು ಅದರ ರಕ್ಷೆಗೂ,

ಶಿಸ್ತಿಗೂ ಹೊಣೆಗಾರನನ್ನಾಗಿ ನಿಲ್ಲಿಸಿ, ತಾವು ಸೂಚನೆ ಕಳುಹಿದೊಡನೆಯೇ ಸೈನ್ಯವು ಮಣಿಮತೀಪುರಿಯನ್ನು ಮತ್ತೆ ಸೇರಬೇಕೆಂದೂ, ಗೊಂಡರ, ಭಿಲ್ಲರ ಸೈನ್ಯ ಈಶಾನ್ಯದಲ್ಲೂ, ತಮ್ಮದು ಉತ್ತರ ಮತ್ತು ವಾಯುವ್ಯ ಭಾಗದಲ್ಲೂ ಮತ್ತೆ ಬಂದು ನಿಲ್ಲಬೇಕೆಂದೂ, ಇದು ಯಾವಾಗ ಎಂಬ ಸನ್ನೆಯನ್ನು ಲೋಪಾಮುದ್ರೆ ತಿಳಿಸುವಳೆಂದೂ ಹೇಳಿ, ಐನೂರು ಆಪ್ತ ಶಿಷ್ಯರೊಡನೆ ಮಣಿಮತೀಪುರಿಯ ಕೋಟೆಯ ಪಶ್ಚಿಮ ದ್ವಾರದತ್ತ ಹೊರಟರು!

ಅಲ್ಲಿ ನಡೆಯುತ್ತಾ, ಕೋಟೆ ಸಮೀಪಿಸುತ್ತಾ, ಅವರು ಕಂಡದ್ದನ್ನು ಅವರೇ ನಂಬದಾದರು! ಸ್ವಯಂ ಇಲ್ವಲನೇ ವಾತಾಪಿಯೊಡನೆ ಮಿತ ಪರಿವಾರದೊಡನೆ ಅಲ್ಲಿ ಕೈಯಲ್ಲಿ ಅರ್ಘ್ಯಪಾದ್ಯ ಹಿಡಿದು ಕಾದು ನಿಂತಿದ್ದ!

**ಅಗಸ್ತ್ಯ** : "ದೊರೆಯೇ! ನಾನು ಬರುವುದು ನಿನಗೆ ಮೊದಲೇ ತಿಳಿದಿರಬೇಕು."

**ಇಲ್ವಲ** : "ಪ್ರಭು, ಮೂರು ಲೋಕಗಳನ್ನೂ ಸೃಷ್ಟಿಸಿ ಆಳಿಸ ಬಲ್ಲ ಒಬ್ಬ ಮಹಾನುಭಾವ ನನ್ನ ಗುಡಿಸಿಲಿಗೆ ಬರುತ್ತಾನೆಂದರೆ, ನನಗೆ ತಿಳಿಯದಿರಲು ಸಾಧ್ಯವೇ! ಇಂದು ನನ್ನ ಜನ್ಮ ಸಾರ್ಥಕವಾಯಿತು!"

**ಅಗಸ್ತ್ಯ** : "ಈ ಉಪಚಾರೋಕ್ತಿ ಏನೂ ಬೇಡ! ನಾನೀಗ ಯಾಚಕನಾಗಿ ಬಂದಿದ್ದೇನೆ.

**ಇಲ್ವಲ** : "ವಿಜಯಾರ್ಥಿಯಾಗಿ ಅಲ್ಲವೋ ?" (ನಗುತ್ತಾನೆ.)

**ಅಗಸ್ತ್ಯ** : "ನಾನು ಕೇಳಿದ್ದನ್ನು ನೀನು ಕೊಟ್ಟರೆ ಆಗ ವಿಜಯ ನನ್ನದೂ ನಿನ್ನದೂ ಇಬ್ಬರದೂ ಆಗುವುದು."

**ಇಲ್ವಲ** : "ಗುರುವೇ ? ತಾವು ಕೇಳಿದ್ದನ್ನು ಕೊಟ್ಟರೆ ನಿಮಗೆ ಮಾತ್ರ ವಿಜಯ ! ತಾವು ಕೇಳದುದನ್ನೂ ಕೊಟ್ಟರೆ ನನಗೂ ವಿಜಯ !"

**ಅಗಸ್ತ್ಯ :** (ಆವನ ಕಪಟಕ್ಕೆ ಮೆಚ್ಚಿ) "ನಾನು ಕೇಳಿದುದನ್ನು ಕೊಟ್ಟರೆ ನಾನದನ್ನು ಸ್ವೀಕರಿಸಬೇಕಾದ ನಿರ್ಬಂಧವೇನಿಲ್ಲ, ಅಲ್ಲವೇ ?"

**ಇಲ್ವಲ :** "ಪ್ರೀತಿಯಿಂದ ಕೊಟ್ಟುದನ್ನು ನಿರಾಕರಿಸಬಾರದು !"

**ಅಗಸ್ತ್ಯ :** "ಬ್ರಾಹ್ಮಣನಿಗೆ ತೃಪ್ತಿ ಇರಬೇಕು ! ವಾಮನ ಮೂರು ಹೆಜ್ಜೆ ಭೂಮಿಯನ್ನೇ ಮಾತ್ರ ಕೇಳಿದ. ಹೆಚ್ಚು ಕೊಡುತ್ತೇನೆಂದರೆ ಬಲಿಗೆ ಆ ಮೂರನ್ನೇ ಕೊಡಲಾಗಲಿಲ್ಲ ! ಹೌದೇ ?"

**ಇಲ್ವಲ :** "ಈಗ ತಾವು ತ್ರಿವಿಕ್ರಮ ಭಾವದಿಂದ ಬಂದಿರುವಂತಿದೆ! ನಾನು ಬಲಿಯಾದರೂ ಸಾರ್ಥಕವೇ !!"

**ಅಗಸ್ತ್ಯ :** "ಅನುಗ್ರಹ ನಿಗ್ರಹವಾಗುವುದೂ, ನಿಗ್ರಹ ಅನುಗ್ರಹ ವಾಗುವುದೂ ಇಬ್ಬರ ಕೈಲೂ ಇದೆ."

**ಇಲ್ವಲ :** "ಇದು ಬೆದರಿಕೆಯೋ, ಆಶೀರ್ವಾದವೋ ?"

**ಅಗಸ್ತ್ಯ :** "ನೀನೇ ಚಿಂತಿಸು" ಎನ್ನುತ್ತಾ ಅರ್ಘ್ಯಪಾದ್ಯ ಸ್ವೀಕರಿಸಿದರು. ಇಲ್ವಲ ತಮ್ಮನೊಡನೆ ಮಹರ್ಷಿಗೆ ಸಾಷ್ಟಾಂಗ ಹಾಕಿದ.

ಮಹರ್ಷಿಯ ನಗರ ಪ್ರದಕ್ಷಿಣೆಗೆ ಇಲ್ವಲ ಬಂಗಾರದ ಪಲ್ಲಕ್ಕಿಯನ್ನೇ ತರಿಸಿದ್ದ. ಸ್ವಯಂ ತಾನೂ ಹೊರಲೂ ಸಿದ್ಧನಿದ್ದ.

ಪಾದಯಾತ್ರೆಯ ವ್ರತವನ್ನು ತಿಳಿಸಿ ಅಗಸ್ತ್ಯರು ಅದನ್ನು ನಿರಾಕರಿಸಿದರು. ಊರು ಸುತ್ತುತ್ತಾ ಅದರ ವೈಭವಕ್ಕೆ ಅಗಸ್ತ್ಯರು ಬೆರಗಾದರು. ಮಾಳಿಗೆಗಳ ಸೌಂದರ್ಯ, ಭವ್ಯತೆ, ಬೀದಿಗಳ ಸ್ವಚ್ಛತೆ, ನಗರದ ಶ್ರೀಮಂತಿಕೆ, ಸಭ್ಯತೆಗಳಿಗೆ ಖುಷಿ ಮಾರು ಹೋದರು. "ನಾಸ್ತಿಕನಿಗೆ ದೇವಳುಹೀಗೆ ಒಲಿಯುವುದೇ ?" ಎಂದೂ ಅಚ್ಚರಿಯಾಯಿತು.

ಬಿಡಾರದಲ್ಲಿ ಅಗಸ್ತ್ಯರೂ ಅವರ ಐನೂರು ಶಿಷ್ಯರೂ "ರಾತ್ರಿ ಆಹಾರ ವಿಲ್ಲ" ಎಂಬ ಕಾರಣ ಕೊಟ್ಟು ಉಪಾಹಾರವನ್ನು ನಿರಾಕರಿಸಿದರು.

ಚಾಕ್ರಾಯಣ ಬಿಡಾರದ ರಚನೆಯನ್ನೂ, ಅಲ್ಲಿ ಕೃತ್ರಿಮಗಳು ಉಂಟೋ ಹೇಗೋ ಎಂಬುದನ್ನೂ ಜಾಣ್ಮೆಯಿಂದ ಪರೀಕ್ಷಿಸಿದ.

ಸೋಮಶ್ರವ ಭಸ್ಮದ ಸಹಾಯದಿಂದ ಮಾಯೆಗಳನ್ನೂ ಪರೀಕ್ಷಿಸಿದ.

* * *

ರಾತ್ರಿ ಇಲ್ವಲ ನಿದ್ರಿಸಲಿಲ್ಲ! ತಮ್ಮನೊಡನೆ ಅಗಸ್ತ್ಯನಿಗ್ರಹಕ್ಕೆ ಉಪಾಯಗಳನ್ನು ಹುಡುಕಿದ. ಬಹು ದಿನ ಮಹರ್ಷಿಯನ್ನು ತನ್ನ ಅರಮನೆಯಲ್ಲಿ ಇಟ್ಟುಕೊಳ್ಳುವಂತೆ ಇಲ್ಲ. ತನ್ನ ಸ್ವಭಾವವನ್ನೇ ಪರಿ ವರ್ತಿಸುವ ಸಾತ್ವಿಕ ಮೂರ್ತಿ! ಅವನ ಮೇಲೆ ತನಗೆ ಸೇಡು, ದ್ವೇಷ, ಹೋಗಿ ಬಿಡುವಂತಾದರೆ ಏನು ಮಾಡುವುದು ? ಹಾಗಾಗಗೊಡ ಬಾರದು !

ನಾಳೆಯೇ ಅಗಸ್ತ್ಯನನ್ನೂ ಶಿಷ್ಯರನ್ನೂ ಮೊದಲು ಮುಗಿಸಬೇಕು ! ಆಮೇಲೆ ದೂರದ ಆ ಅವನ ಸೈನ್ಯವನ್ನೂ ಸಹ! ಆಮೇಲೆ ಲೋಪಾ ಮುದ್ರೆಯನ್ನು ಒಂದು ಕೈ ವಿಚಾರಿಸಿಕೊಳ್ಳಬೇಕು ! ಅಷ್ಟರಲ್ಲಿ ದ್ರಮಿಡ, ಪಾಂಡ್ಯ ಸೈನ್ಯಗಳೂ ಬಂದು ಸೇರುತ್ತವೆ. ಅಗಸ್ತ್ಯನ ಕಥೆ ಮುಗಿದರೆ, ಉಳಿದ ಋಷಿಗಳು ನೊಣಗಳಂತೆ! ಅವರೆಲ್ಲ ಮುಗಿದರೆ, ತಾನೇ ಭಾರತದ ಚಕ್ರವರ್ತಿ ! ಆ ಭಾಗ್ಯ ಬೇಗ ತನಗೆ ಸಿಗಬೇಕು. ಹೀಗೆ ಇಲ್ವಲ ಕನಸು ಕಂಡ !

ವಾತಾಪಿಯನ್ನು ಕರೆಸಿ ನಾಳೆ ಏನೇನು ಮಾಡಬೇಕೆಂಬುದನ್ನೂ ಇಬ್ಬರೂ ಆಲೋಚಿಸಿದರು ! "ಬ್ರಾಹ್ಮಣ ವಿಷಪ್ರಯೋಗಕ್ಕೆ ಬಗ್ಗ

ಲಾರ ! ಮಂತ್ರ ಶಕ್ತಿ ಅವನಿಗುಂಟು ! ಅವನು ಯಾಚಕನಾಗಿ ಬಂದಿದ್ದಾನೆ ! ಕೇಳಿದ್ದನ್ನು ಕೊಟ್ಟು ಧರ್ಮದ ಇಕ್ಕಟ್ಟಿನಲ್ಲಿ ಸಿಕ್ಕಿಸಿಕೊಳ್ಳುತ್ತೇನೆ. ಆಮೇಲೆ ಅವನನ್ನು ಕೊಲ್ಲುವ ಮಹಾಭಾಗ್ಯ ನಿನ್ನದೇ ! ಹೆದರಬೇಡ. ನಾಳೆಯೇ ಮೃತಸಂಜೀವಿನೀ ಪ್ರಯೋಗ !" ಎಂದು ತಮ್ಮನನ್ನು ಆಶೀರ್ವದಿಸಿ ಕಳುಹಿದ.

ವಾತಾಪಿಗೆ ಭಯವಾಯಿತು ! ಅದೇ ತನ್ನ ಜೀವನದ ಕೊನೆಯ ರಾತ್ರಿ ಎಂಬುದನ್ನು ಅವನ ಸುಪ್ತಮಾನಸ ಒತ್ತಿ ಹೇಳಿತು ! ರಾತ್ರಿ ಪೊರಳಾಡಿದ ! ನಿದ್ರೆ ಹೇಗೆ ಬಂದೀತು ?



## ೨೧ ವಾತಾಪೇ ! ಜೀರ್ಣೋ ಭವ !!

ಬೆಳಗಾಯಿತು ! ಅದು ಲೋಕಕ್ಕೇ ಒಂದು ವಿಶಿಷ್ಟವಾದ ಬೆಳಕಿನ ದಿನವಾಗುವುದನ್ನೂ ದೇವತೆಗಳು ಬಯಸಿದ್ದರು. ವಾತಾಪಿಗೆ ಅದೇ ಕೊನೆಯ ಸೂರ್ಯೋದಯ ಕಾಣುವ ಯೋಗವೂ ಆಗಿತ್ತು! ಇಲ್ವಲನ ನಿರಂತರ ರಾತ್ರಿಗಳ ಮುನ್ನಾ ಸೂರ್ಯೋದಯವೂ ಅದೇ !

ಅಗಸ್ತ್ಯರಿಗೂ ಪರಿವಾರಕ್ಕೂ ರಾತ್ರಿ ಹೇಗೆ ಕಳೆಯಿತೆಂದು ವಿಚಾರಿಸಲು, ಸೂರ್ಯೋದಯಕ್ಕೂ ಕೊಂಚ ಪೂರ್ವದಲ್ಲೇ ಇಲ್ವಲ ಮಿತ ಪರಿವಾರದೊಡನೆ ಬಂದಿದ್ದ. ಮಹರ್ಷಿ ಜಪ ಮುಗಿಸುವವರೆಗೆ ಕಾಯಬೇಕಾಯಿತು ! ಆಮೇಲೆ ಪ್ರಣಾಮ, ಕುಶಲಪ್ರಶ್ನೆಗಳೆಲ್ಲ ಮುಗಿದುವು.

**ಇಲ್ವಲ :** ''ಮಹರ್ಷೇ ! ಇಷ್ಟು ದೂರ ನನ್ನ ಮನೆಗೆ ತಾವು ನಡೆದು ಬಂದ ಉದ್ದೇಶ್ಯವನ್ನು ನಾನು ಕೇಳಬಹುದೇ ? ನನಗೆ ಸಾಧ್ಯವಾದಲ್ಲಿ ತಮ್ಮ ಮನೋರಥವನ್ನು ಈಡೇರಿಸಲು ಯತ್ನಿಸುತ್ತೇನೆ.''

**ಅಗಸ್ತ್ಯ :** ''ನಿನಗಾಗದುದನ್ನು ನಾನು ಹೇಗೆ ಕೇಳಲಿ ? ನಾನೀಗ ಅರ್ಥಾರ್ಥಿಯಾಗಿ ಬಂದಿರುವೆ !'' ಇಲ್ವಲನಿಗೆ ಅಚ್ಚರಿಯಾಯ್ತು ! ಇಷ್ಟು ತುಚ್ಛ ಉದ್ದೇಶ್ಯದಿಂದ ಮಹರ್ಷಿ ಇಲ್ಲಿಗೆ ಬಂದನೆಂಬುದನ್ನು ಅವನ ಹೃದಯ ಒಪ್ಪಲಿಲ್ಲ ! ಏನೋ ಮರ್ಮ ಇರಬೇಕು, ತಾನೇ ಮುಂದೆ ತಿಳಿದೀತು, ಎಂದುಕೊಂಡು ಮುಂದುವರೆಸಿದ.

**ಇಲ್ವಲ :** ''ಅದಕ್ಕೇನು! ಯಥೇಷ್ಟವಾಗಿ ತಾವು ಒಯ್ಯಬಹುದು. ಆದರೆ ಒಂದು ಸಂದೇಹ ! ಉತ್ತರ ಭಾರತವನ್ನೆಲ್ಲ ಸಮಗ್ರವಾಗಿ ಪರ್ಯಟನೆ ಮಾಡಿ ಬಂದವರಿಗೆ, ದೇವತೆಗಳೊಡನೆಯೇ ಸಂಭಾಷಿಸಬಲ್ಲವರಿಗೆ,

ಕುಬೇರನನ್ನೇ ಕರೆಸುವ ಶಕ್ತಿ ಇರುವವರಿಗೆ, ಅಲ್ಲಿಲ್ಲ ಬಿಟ್ಟು ಈ 'ಪಾಪೀ, ಆರ್ಯವಿರೋಧೀ' ಎಂದು ಪಟ್ಟ ಹೊತ್ತ ಇಲ್ವಲನ ಹಣದ ಮೇಲೆಯೇ ಏಕೆ ಕಣ್ಣಾಗಿದೆಯೋ ತಿಳಿಯಲಿಲ್ಲ !"

**ಅಗಸ್ತ್ಯ :** "ದೊರೆಯೇ ! ಇದರಲ್ಲಿ ಮುಚ್ಚುಮರೆ ಏನಿಲ್ಲ. ಉತ್ತರ ಭಾರತ ಈಗ ಪರಶುರಾಮರ ಕ್ರಾಂತಿಯಿಂದ ತತ್ತರಿಸಿ ಹೋಗಿದೆ ! ಪ್ರತಿಯೊಂದು ರಾಜ್ಯದ ಅರಸನೂ ಹೊಸಬ. ಆರ್ಥಿಕ ಪರಿಸ್ಥಿತಿ ಏರುಪೇರಾಗಿದೆ. ನಾನೇ ಕಣ್ಣಿಂದ ಕಂಡು ಬಂದ ಸಂಗತಿ ಇದು ! ನೊಂದವರನ್ನೇ ಮತ್ತೆ ನೋಯಿಸುವುದು ಅಗಸ್ತ್ಯನಿಗೆ ಇಷ್ಟವಿಲ್ಲ !"

**ಇಲ್ವಲ :** "ಈಗ ತಾವು ಕೇಳಲು ಬಂದ ಹಣ ಆ ರಾಜ್ಯಗಳ ಪುನರುಪಸ್ಥಾನೆಗೋ ? **ಅಥವಾ** ಯಾವುದಾದರೂ ಯಜ್ಞಯಾಗಗಳಿಗೋ ಮತ್ಯಾವ ಲೋಕಕಲ್ಯಾಣ ಕಾರ್ಯಕ್ಕೋ ?"

**ಅಗಸ್ತ್ಯ :** "ಒಬ್ಬರ ಪುನರುಪಸ್ಥಾಪನೆಗೆಂದು ಇನ್ನೊಬ್ಬರನ್ನು ದುರವಸ್ಥೆಗೆ ತಳ್ಳುವ ಆರ್ಥಿಕ ನೀತಿಗೆ ಅಗಸ್ತ್ಯ ವಿರೋಧಿಯಾಗಿದ್ದಾನೆ ! ಯಜ್ಞಯಾಗಗಳಿಗೆ ಆ ಆ ಆಶ್ರಮದ ವ್ಯವಸ್ಥೆಗಳೇ ಇವೆ. ಯಾರಾದರೂ ಸ್ವಯಂ ಪ್ರೇರಣೆಯಿಂದ ಕೊಟ್ಟರೆ ಅದು ಬೇರೆ ಮಾತು ! ಲೋಕಕಲ್ಯಾಣದ ಬಹುಪಾಲು ಜವಾಬುದಾರಿ. ಆ ಆ ಪ್ರಾಂತಗಳ ಅರಸರ ಹೊಣೆ. ವಿರಕ್ತರಾದ ಋಷಿಗಳಿಗೆ ಈ ಯಾವ ಕಾರಣಕ್ಕೂ ಯಾರ ಹಣವೂ ಬೇಡ !"

ಅಗಸ್ತ್ಯರು ಇನ್ಯಾವುದೋ ವಿಷಯವನ್ನು ಬೇಕೆಂದೇ ತನಗೆ ತಿಳಿಸಲು ತನ್ನ ಸಾಮಾನ್ಯಪ್ರಶ್ನೆಗೆ ಈ ವಿಶೇಷಪೀಠಿಕೆಯನ್ನು ಹಾಕುತ್ತಿರುವರೆಂಬುದು ಇಲ್ವಲನಿಗೆ, ಮನವರಿಕೆಯಾಯಿತು ! ಕುತೂಹಲವೂ ಹೆಚ್ಚಿತು !

ಇಲ್ವಲ : "ತಾವು ವಿರಕ್ತರೆನ್ನುತ್ತೀರಿ ! ಯಾಗಕ್ಕೆ ಹಣ ಅಲ್ಲ ಎನ್ನುತ್ತೀರಿ, ಉತ್ತರದವರಿಗೆ ದಾನಕ್ಕೂ ಅಲ್ಲವೆನ್ನುತೀರಿ ! ಹಾಗಾದರೆ ಸೈನ್ಯ ಕಟ್ಟಲಿಕ್ಕಾಗಿಯೇ ಇದುವೋ ?"

**ಅಗಸ್ತ್ಯ :** "ಅಗಸ್ತ್ಯನ ಸೈನ್ಯ ಸ್ವಯಂಸಿದ್ಧವಾದದ್ದು; ಸ್ವಯಂ ಸೇವಕರ ರೀತಿ ಅದರದ್ದು! ಒಂದು ಬಿಡಿಗಾಸೂ ಅದಕ್ಕೆ ಖರ್ಚಿಲ್ಲ ! ಅಗಸ್ತ್ಯನಿಗೆ ಹಣಬೇಕಾದದ್ದು ಸ್ವಂತ ಖರ್ಚಿಗೆ !!"

**ಇಲ್ವಲ :** "ತಿಳಿಯುತ್ತಿಲ್ಲ, ಪ್ರಭು !"

**ಅಗಸ್ತ್ಯ :** "ನಾನು ವಿದರ್ಭರಾಜಕುಮಾರಿಯನ್ನು ಕೈ ಹಿಡಿಯಬೇಕಾಗಿ ಬಂದ ಸಂದರ್ಭ ಲೋಕಕ್ಕೇ ತಿಳಿದಿದೆ. ನಾನೋ ಗೊಡ್ಡು ತಾಪಸ ! ಅವಳೋ ಸುಖದಲ್ಲಿ ಬೆಳೆದ ರಾಜಪುತ್ರಿ! ಕೊಂಚ ದಿನವಾದರೂ ಅವಳು ಭೋಗಗಳನ್ನು ನನ್ನ ದೆಸೆಯಿಂದ ಅನುಭವಿಸಲಿ ಎಂದು ನನ್ನ ಮನ ಹೇಳುತ್ತಿದೆ. ಅವಳ ಪ್ರಾರ್ಥನೆ ಇದಲ್ಲ. ನಾನೇ ಹಾಗೆ ಬಯಸುತ್ತೇನೆ. ಬ್ರಾಹ್ಮಣನಾದ ನನಗೆ ಪ್ರತಿಗ್ರಹಧರ್ಮ ಯುಕ್ತವಿದೆ. ನೀನೋ ಕೊಡುಗೈದಾನಿ ಎಂದು ಪ್ರಸಿದ್ಧನಿರುವೆ. ನನ್ನನ್ನು ಆಹ್ವಾನಿಸಿಯೂ ಇದ್ದೆ. ಇತ್ತ ಬರುವ ಅವಕಾಶ ಬಂದು, ಈಗ ಕೇಳುತ್ತಿದ್ದೇನೆ."

ಇಲ್ವಲನಿಗೆ ಈ ನೇರ ಪ್ರಾರ್ಥನೆಯಿಂದ ಸೋಜಿಗವಾಯಿತು ಇವರಲ್ಲೇನೂ ಕಪಟವಿಲ್ಲವೇ ? ಎಂದು ಬಹಳ ಯೋಚಿಸಿದ ! ಹಣಕ್ಕೆ ಕೊರತೆ ಏನೂ ಇರಲಿಲ್ಲ: ರಾಜ್ಯ ಸಂಪತ್ ಸಮೃದ್ಧವಿತ್ತು! ಜನ ದುಡಿಮೆಗಾರರೂ ಇದ್ದು ಕಾಲಕಾಲಕ್ಕೆ ತೆರಿಗೆಗಳನ್ನು ಕಟ್ಟುತ್ತಿದ್ದರು. ನಾಲ್ಕಾರು ವರ್ಷಗಳಷ್ಟು ಕಾಲದ ತೆರಿಗೆಗಳನ್ನು ಮುಂಗಡವಾಗಿಯೇ ಪಡೆದು ಆಪತ್ ನಿಧಿಯನ್ನು ಶೇಖರಿಸಿಡುವುದು ಇಲ್ವಲನ ಪದ್ಧತಿಯಿತ್ತು. ಅದು ಶಂಬರಾಸುರ ಹಾಕಿ ಕೊಟ್ಟ ರೀತಿ ಇತ್ತು, ಅವನ ಸರ್ಕಾರ ಜನರಲ್ಲೇ ಸಾಲ ಕೇಳುವ ಸ್ಥಿತಿಯಲ್ಲಿರಲಿಲ್ಲ ! ಆದರೂ ಪ್ರಶ್ನಿಸಿದ.

**ಇಲ್ವಲ :** "ಗುರುವೇ, ಗಂಡು ತಪಸ್ಸಿನ, ವೀರ ಮಹರ್ಷಿಗಳೂ ವಿರಕ್ತರೂ ಆದ ತಾವು ಈಗ ಬಂಗಾರದ ಮಂಚವನ್ನು ಬಯಸಿದಿರೆಂಬುದು ನನ್ನ ಹೃದಯ ಅರಿಯುವ ವಿಷಯವಲ್ಲ !"

**ಅಗಸ್ತ್ಯ :** "ಅದು ನನ್ನ ಪತ್ನಿಗಾಗಿ ! ಬಂಗಾರದ ಮಂಚವೆಂದು ನಾನು ಬಾಯಿಬಿಟ್ಟು ಹೇಳದೆಯೂ ನಿನಗೆ ತಿಳಿಯಿತೆಂದರೆ, ಅದು ತಪಸ್ಸಾಗಲಿ, ಮಾಯೆಯಾಗಲಿ, ಏನಾದರಾಗಲಿ, ಮೆಚ್ಚುವ ವಿಷಯ. ಅದು ನನಗೆ ದೊರೆಯುವಂತಾದರೆ ಸಂತೋಷ ! ಇಲ್ಲವೆಂದರೆ ಪ್ರಯಾಣ ಮುಂದುವರೆಸುತ್ತೇನೆ."

ಇಲ್ವಲ ತುಂಬಾ ಸಂತೋಷಪಟ್ಟ! ಮಹರ್ಷಿಯನ್ನು ಈಗ ಇಕ್ಕಟ್ಟಿನಲ್ಲಿ ಸಿಕ್ಕಿಸಿಕೊಳ್ಳಲು ಸುಲಭವಾದ ತಂತ್ರವನ್ನು ದೈವವೇ ತನ್ನತ್ತ ತಂದದ್ದಕ್ಕೆ ಮೆಚ್ಚಿದ. ಕ್ಷಣಕಾಲ ಚಿಂತಿಸಿದ. ಹೀಗೆಂದ ;

**ಇಲ್ವಲ :** "ಗುರುವರ್ಯ ! ಇಂದು ಹೇಗೂ ನನ್ನ ತಂದೆಯ ಶ್ರಾದ್ಧ ದಿನ ! ತಾವು ಅಭ್ಯಾಗತರಾಗಿಯೇ ಬಂದುದು ನನಗೂ ಸಂತೋಷ. ಪಿತೃಸ್ಥಾನದಲ್ಲೇ ತಾವು ಇದ್ದು ಅನುಗ್ರಹಿಸುವುದಾದರೆ, ತಾವು ನಿರೀಕ್ಷಿಸುವುದಕ್ಕಿಂತ ಹೆಚ್ಚು ಧನವನ್ನು ತಮ್ಮ ಪಾದಕಾಣಿಕೆಯಾಗಿ ಅರ್ಪಿಸುತ್ತೇನೆ.

ಅಗಸ್ತ್ಯರು ಇದನ್ನು ನಿರೀಕ್ಷಿಸುತ್ತಿದ್ದರು! ತಲೆ ಎತ್ತಿ ಇಲ್ವಲನನ್ನು ದಿಟ್ಟಿಸಿ ನೋಡಿದರು !! ಇಲ್ವಲ ಗಾಬರಿ ಆದ !

**ಅಗಸ್ತ್ಯ :** "ನನ್ನದೊಂದು ವ್ರತ. ನೀನದಕ್ಕೆ ಸಿದ್ಧನಾದರೆ, ನಿನ್ನ ಕೋರಿಕೆ ನೆರವೇರಿಸಲು ನಾನೂ ಸಿದ್ಧ !"

**ಇಲ್ವಲ ;** "ಅಪ್ಪಣೆಯಾಗಲಿ."

**ಅಗಸ್ತ್ಯ :** "ಶ್ರಾದ್ಧಾರ್ಹ ವಸ್ತುಗಳಲ್ಲಿ ನಾನು ಏನನ್ನು ಬಯಸು ತ್ತೇನೋ, ಅದನ್ನು ತೃಪ್ತನಾಗುವ ತನಕ ನನಗೆ ಬಡಿಸಬೇಕು ! ಇಲ್ಲವೆನ್ನ ಬಾರದು !''

**ಇಲ್ವಲ :** "ಈ ಸಾಮಾನ್ಯ ಶ್ರಾದ್ಧನಿಯಮ ನನಗೆ ಗೊತ್ತು, ಗುರುಗಳೇ ! ನಾನು ಸಿದ್ಧ."

**ಅಗಸ್ತ್ಯ ;** ''ಎರಡನೆಯದಾಗಿ, ಶ್ರಾದ್ಧ ಮುಗಿಯುವ ತನಕ ನೀನು ಶ್ರಾದ್ಧ ಭೂಮಿಯನ್ನು ಬಿಟ್ಟು ಹೋಗಕೂಡದು."

**ಇಲ್ವಲ ;** ''ಆಗಲಿ ! ನನ್ನದೂ ಒಂದು ನಿಯಮವುಂಟು ! ಪೂರ್ವಕಾಲದ ಶ್ರಾದ್ಧಗಳ ರೀತಿಯ ಮುಖ್ಯ ಕಲ್ಪದಂತೆಯೇ ಇಲ್ಲಿ ಎಲ್ಲವೂ ಮಾಂಸಾಹಾರವೇ ಆಗಿರುತ್ತದೆ. ತಾವು ಬೇಸರಿಸದೇ ತೃಪ್ತ ರಾಗುವತನಕ ಉಂಡು ಹರಸಬೇಕು. ತಮ್ಮ ಎಲ್ಲ ಶಿಷ್ಯರೂ ಅದರಲ್ಲಿ ಅನ್ವಯಿಸಬೇಕು !"

**ಅಗಸ್ತ್ಯ :** "ಮಾಂಸಾಹಾರವೋ, ಮೀನಾಹಾರವೋ ಯಾವುದಾದ ರಾಗಲಿ ! ಆದರೆ ನನ್ನ ಎಲ್ಲ ಶಿಷ್ಯರೂ ಹೇಗೆ ಅನ್ವಯಿಸಲು ಸಾಧ್ಯ ? ಇದು ಸಂತರ್ಪಣೆಯಲ್ಲವಲ್ಲ ? '

**ಇಲ್ವಲ :** ''ವಿಶ್ವೇದೇವಸ್ಥಾನದಲ್ಲಿ ಇಬ್ಬರು, ಪಿತೃಸ್ಥಾನಗಳಲ್ಲಿ ಮೂವರು–ತಾವೇ ಪ್ರಧಾನರು–ಉಳಿದವರೆಲ್ಲ ವಿಷ್ಣುಸ್ಥಾನದಲ್ಲಿರಲು ಯಾವ ಅಭ್ಯಂತರವೂ ಇಲ್ಲ, ಹೌದೆ !"

**ಅಗಸ್ತ್ಯ :** '''ಭೇಷ್ ! ನಿನಗೆ ಶಾಸ್ತ್ರಜ್ಞಾನ ಚೆನ್ನಾಗಿದೆ. ನಿನ್ನಂತೆ ನಾನೂ ಎಲ್ಲಾದರೂ ಪುರೋಹಿತನಾಗಿದ್ದರೆ ಚೆನ್ನಾಗಿರುತ್ತಿತ್ತು !''

**ಇಲ್ವಲ ;** "ನನ್ನ ಬ್ರಾಹ್ಮಣ್ಯಶ್ರದ್ಧೆಗೆ ಇದು ಬಹುಮಾನೋಕ್ತಿಯೋ !''

**ಅಗಸ್ತ್ಯ** : ''ಹಾಗೇ ತಿಳಿ ! ಇದೋ, ಎಲ್ಲರೂ ಮಾಧ್ಯಾಹ್ನಿಕ ಸ್ನಾನವಾದನಂತರ ಬಂದು ಸೇರುತ್ತೇವೆ. ಎಲ್ಲ ಚೆನ್ನಾಗಿ ವ್ಯವಸ್ಥೆಯಾಗಲಿ ! ಎಲ್ಲೂ ಒಂದು ಲೋಪ ಇಡಬಾರದು ! ಏನು ಲೋಪ ಕಂಡರೂ ಅಗಸ್ತ್ಯ ಎದ್ದು ಹೋಗಿಬಿಡುತ್ತಾನೆ, ಶ್ರಾದ್ಧ ಕೆಟ್ಟು ಹೋಗುತ್ತದೆ !''

**ಇಲ್ವಲ** : "ಹಾಗಾದರೆ ತಮ್ಮ ಶಿಷ್ಯರೊಬ್ಬರು ಎಲ್ಲ ಮೇಲ್ವಿಚಾರಣೆಯನ್ನು ತಾವೇ ನೋಡಲಿ. ನನ್ನ ಯಾವ ಅಭ್ಯಂತರವೂ ಇಲ್ಲ!"

"ಪ್ರಾಣಿ ಈಗ ಬೋನಿನಲ್ಲಿ ಸಿಕ್ಕು ಬಿತ್ತು !'' ಎಂದು ಅಗಸ್ತ್ಯರು ಸಂತುಷ್ಟರಾದರು ! ಅದೇ ಮಾತನ್ನು ಮನದಲ್ಲಿ ಹೇಳಿಕೊಂಡು ಇಲ್ವಲನೂ ಸಂತುಷ್ಟನಾದ !

ಸೋಮಶ್ರವನನನ್ನು ಮಹರ್ಷಿ ಶ್ರಾದ್ಧದ ಉಸ್ತುವಾರಿಗೆ ನಿಯಮಿಸಿದ. ಬಹು ಪ್ರೀತಿಯ ಆ ತಮ್ಮನಿಗೆ ಅಗಸ್ತ್ಯರು ಅಂದು ವಿಶೇಷವಾದ ಅದೃಶ್ಯಾಂಜನವೊಂದನ್ನಿತ್ತು, ''ಇದಂ ಭೋಜನ ಪಾತ್ರಾಸನಂ" ಎಂದು ಕರೆಯುವತನಕ ನೀನು ಅಡಿಗೆಯ ಮನೆಯಲ್ಲೂ, ಇತರ ಗೂಢ ಪ್ರದೇಶಗಳಲ್ಲೂ ಯಾರ ಕಣ್ಣಿಗೂ ಬೀಳದೆ ಅಲ್ಲಿ ಯಾವ ಯಾವ ಪದಾರ್ಥಗಳನ್ನು ಹೇಗೆ ತಯಾರಿಸುತ್ತಾರೆಂಬುದನ್ನು ರಹಸ್ಯವಾಗಿ ನೋಡಿ ನನಗೆ ತಿಳಿಸು. ನರಮಾಂಸ ಉಂಟೇ ಎಂಬುದನ್ನು ವಿಶೇಷವಾಗಿ ಗಮನಿಸು. ಕೈಬೆರಳುಗಳ ಎಣಿಕೆಯಲ್ಲಿ ನನಗೆ ಸೂಕ್ಷ್ಮವಾಗಿ ತಿಳಿಸುವ ಸಂಜ್ಞೆಯನ್ನು ಗಮನದಲ್ಲಿಡು. ನರಮಾಂಸವೇ ಆದರೆ"ಹತ್ತು ಬೆರಳು"ಗಳನ್ನು ತೋರಿಸು. ಉಳಿದವಾದರೆ ಬೇರೆ ಉಪಯೋಗಿಸು. ಇಲ್ವಲನನ್ನು ಬಿಟ್ಟು ಕದಲಬೇಡ. ನಿನ್ನ ಸಹಾಯಕ್ಕೆ ಬೇಕಾದರೆ ಚಾಕ್ರಾಯಣನನ್ನೂ ಉಪಯೋಗಿಸಿಕೋ ! ಅವನನ್ನು ವಾತಾಪಿಯ ಬೆನ್ನಿಗೆ ಕಟ್ಟಿದ್ದೇನೆ. ಅವನಿಗೂ ಅದೃಶ್ಯಾಂಜನ ಪ್ರಯೋಗಕ್ಕೆ ಏರ್ಪಡಿಸಿದ್ದೇನೆ. ಇಬ್ಬರಿಗೂ ಆಪತ್ಕಾಲ

ಬಂದರೆ ಈ ಮೂಲಾಯನ, ದಾರ್ಭಿ ಇವರಿದ್ದಾರೆ. ನಾನೇ ಇದ್ದೇನೆ. ಭಸ್ಮದ ಸಹಾಯದಿಂದ ಮಾಯೆಗಳನ್ನೆಲ್ಲ ಶೋಧಿಸು" ಎಂದು ಹೇಳಿದವರೇ, ಪ್ರಾತರಾಹ್ನಿಕಗಳನ್ನು ಅಗ್ನಿಹೋತ್ರಾದಿಗಳನ್ನು ಮುಗಿಸಿ. ಧ್ಯಾನಯೋಗದಲ್ಲಿ ಮಹರ್ಷಿ ಕುಳಿತರು ! ಮಹಾದೇವ ಶಂಕರನನ್ನು ನೆನೆಯಲು, ಮಹಾರುದ್ರದೇವ ಪ್ರತ್ಯಕ್ಷನಾದ !!

* * *

**ರುದ್ರ :** "ರಾಕ್ಷಸಪುರಿಯಲ್ಲಿ ಮಹರ್ಷಿ ನನ್ನನ್ನು ನೆನೆಸಿದ್ದೇಕೆ?"

**ಅಗಸ್ತ್ಯ :** "ಪ್ರಭು ! ದೇವತೆಗಳ ಸವಾಲಾಗಿಯೂ. ಸಕಲ ಲೋಕಹಿತಕ್ಕಾಗಿಯೂ ವಿಷವನ್ನೇ ಕುಡಿದು ಜೀರ್ಣಿಸಿಕೊಂಡ ಮಹಾಪುರುಷ ನೀನು ! ಹೇ ನೀಲಗ್ರೀವ ! ಪ್ರಕಟಚೋರರಾದ ತಸ್ಕರರಿಗೂ ಅಪ್ರಟಚೋರರಾದ ಸ್ತೇನರಿಗೂ ವಂಚಕನಾಗಿ ನೀನು ಲೋಕೋಪದ್ರವಗಳನ್ನು ನಿವಾರಿಸುವ ಲಯಕರ್ತಾ ! ಇಂದು ನೀನು ನನ್ನಲ್ಲಿ ಆವಿರ್ಭವಿಸಿ, ಈ ಚೋರದ್ವಯರೀತಿಯನ್ನೂ ಜೀರ್ಣಿಸಿಕೊಳ್ಳಬೇಕು ! ಇಲ್ಲಿ ವಿಷಪ್ರಯೋಗ ಸಂಭವ ಉಂಟು ! ಮಾಯಾಪ್ರಯೋಗ ಸಂಭವವೂ ಉಂಟು ! ನರಮಾಂಸವನ್ನು ನನಗೆ ಬಡಿಸುವ ಸಂಭವ ಉಂಟು. ಅಗಸ್ತ್ಯ ಎಷ್ಟಾದರೂ ಮಾನವ. ಅವನಿಗೆ ಯಾವ ದೋಷವೂ ತಟ್ಟದಂತೆ, ಯಾವ ಶಾಸ್ತ್ರಾತಿಕ್ರಮವೂ ಇಲ್ಲಿ ಆಗದಂತೆ ಇಲ್ಲಿನ ಅನಿಷ್ಟಸಂಭವಗಳನ್ನು ನಿವಾರಣೆ ಮಾಡುವುದು ಈಗ ನಿನ್ನ ಕರ್ತವ್ಯ ! ಇಲ್ವಲನ ಮಾಯೆಗಳು ಇನ್ನು ನಡೆಯದಂತೆ ನಿನ್ನ ಗಣಗಳಿಗೆ ಆಜ್ಞಾಪಿಸು ! ಶುಕ್ರೋಪದಿಷ್ಟವಾದ ಇವನ 'ಮೃತಸಂಜೀವಿನೀ' ವಿದ್ಯೆ ಇನ್ನು ಇಲ್ಲಿ ಕಾರ್ಯಕರವಾಗದಂತೆ ನಿಯಂತ್ರಿಸು. ಇದು ಈಗ ಶ್ರಾದ್ಧಭೂಮಿ ! ಇನ್ನು ಇದು ರುದ್ರಭೂಮಿ ಸಹ ಆಗಲಿದೆ ! ಯಾರಿಗೆಂದು ನಿಷ್ಕರ್ಷಿಸುವವನು ನೀನೇ !

ಋಷಿ ಪತ್ನಿಯರ ಮಾನವನ್ನೂ, ನಮ್ಮ ಸೇನೆಯನ್ನು ರಕ್ಷಿಸುವುದೂ ನಿನ್ನ ಭಾರ. ಅಗಸ್ತ್ಯನಿಂದ ಆರಬ್ಧವಾದ ಈ ಅಸುರಸಂಹಾರ ಕಾರ್ಯ ಇನ್ನು ನಿನಗಿಷ್ಟವಿಲ್ಲದಿದ್ದರೆ, ಅವನನ್ನೇ ಸಂಹರಿಸು. ನಿನ್ನ ಕೆಲಸವನ್ನು ಇನ್ನು ನೀನೇ ಮಾಡಿಕೋ" ಎನ್ನುತ್ತಾ ರುದ್ರಾಧ್ಯಾಯವನ್ನು ಪಠಿಸುತ್ತಾರೆ, ಸುಪ್ರೀತನಾದ ರುದ್ರದೇವ ಹೇಳುತ್ತಾನೆ.

**ರುದ್ರ :** "ವತ್ಸ ! ನಿನ್ನ ಊಹೆಗಳೆಲ್ಲ ನಿಜ ! ಇಂದು ಇದು ರುದ್ರ ಭೂಮಿಯಾಗಲಿದೆ – ಇಲ್ವಲನಿಗೆ, ವಾತಾಪಿಗೆ, ಅಸುರರಿಗೆ ! ನರಮಾಂಸ ನಿನ್ನ ಭೋಜ್ಯಾಸನದಲ್ಲಿ, ಭೋಜನ ಪಾತ್ರೆಯಲ್ಲಿ ಬಡಿಸಿಯಾರು ! ಅದು ನಿನಗೆ ಬೇರೆಯೇ ಆಹಾರವಾಗುತ್ತದೆ ! ಇಲ್ಲಿ ಇನ್ನು ಮೃತಸಂಜೀವಿನೀ ನಡೆಯದು ! ನಿನಗೂ ನಿನ್ನವರಿಗೂ ಏನೂ ಕೇಡಿಲ್ಲ. ನಿನ್ನ ಗೂಢ ಚಾರರು ಎಲ್ಲವನ್ನೂ ನೋಡುತ್ತಿದ್ದಾರೆ. ಎಲ್ಲ ಕ್ಷೇಮದಲ್ಲಿ ಮುಗಿಯುತ್ತದೆ. ! ನಾನು ಇನ್ನು ನಿನ್ನಲ್ಲೇ, ಈ ಮಾರಣಹೋಮ ಮುಗಿಯುವ ತನಕ ಆವೇಶಹೊಂದಿರುತ್ತೇನೆ. ನಾನು ಹೇಳಬೇಕಾದುದನ್ನೆಲ್ಲ ನಿನ್ನ ಬಾಯಿಂದಲೇ ಹೇಳಿಸುತ್ತೇನೆ. ಇಲ್ವಲನ ಪಾಪಕರ್ಮಾರ್ಥ ಫಲ ತುಂಬಿ ಬಂದಿದೆಯೆಂದೇ ಅದಕ್ಕನುಗುಣವಾದ ಪ್ರೇರಣೆಗಳು ಉಂಟಾಗುತ್ತಿವೆ. ಇಂದು ನಿನ್ನ ಜೀವನದಲ್ಲೂ ಕೀರ್ತಿತಂದ ಪ್ರಸಂಗವುಂಟು. ಹೆದರಬೇಡ. ನಾನಿದ್ದೇನೆ. ಮಂಗಳಾನಿ ಭವನ್ತು" ಎಂದು ಹೇಳಿ ರುದ್ರದೇವ ಅಂತರ್ಧಾನನಾದ.

* * *

ಆಹ್ನಿಕಗಳನ್ನೆಲ್ಲ ಬೇಗ ಮುಗಿಸಿ, ಅದೃಶ್ಯಾಂಜನ ಹಾಕಿಕೊಂಡು ಸೋಮಶ್ರವ ಇಲ್ವಲನ ಪಾಕಶಾಲೆಯನ್ನು ಅದೃಶ್ಯನಾಗಿ ಪ್ರವೇಶಿಸಿದ ! ಬಗೆಬಗೆಯ ಮಾಂಸಗಳನ್ನು ಭಟ್ಟರು ಬೇಯಿಸುತ್ತಿದ್ದರು ! ವಾಕರಿಕೆ

ಬರುವ ವಾಸನೆ ಅಲ್ಲಿ ತುಂಬಿತ್ತು ! ಅನುಮಾನಕ್ಕೆ ಎಲ್ಲೂ ಆಸ್ಪದ ವಿರಲಿಲ್ಲ ! ಪಾಕಶಾಲೆಯ ಎಲ್ಲ ಗೋಡೆಗಳೂ ನೆಲವೂ ಚೊಕ್ಕವಾಗಿದ್ದವು. ಮಾಂಸ ಬೇಯಿಸುವ ಜಾಗ ಅದಾಗಿದ್ದರೆ, ಪ್ರಾಣಿಗಳನ್ನು ಕೊಲ್ಲುವ ಜಾಗವೆಲ್ಲಿ ? ಎಂದು ಸೋಮಶ್ರವ ಹುಡುಕಿದ. ಅಡುಗೆಯ ಮನೆಯ ಒಂದು ಮೂಲೆಯಲ್ಲಿ ನೆಲದೊಳಗೆ ಹೋಗಲು ಮೆಟ್ಟಿಲುಗಳಿದ್ದವು ! ಭಟರು ಕಾವಲು ಕಾಯುತ್ತಿದ್ದರು ! ಅಲ್ಲೇನೋ ವಿಶೇಷವಿರಬೇಕೆಂದು ಸೋಮಶ್ರವ ಅಲ್ಲಿಗೆ ಧಾವಿಸಿದ ! ನವಿಲು, ಆವೆ, ಆಡು, ಜಿಂಕೆ, ಎತ್ತು ಮುಂತಾದ ನಾನಾ ಪ್ರಾಣಿಗಳನ್ನು ಭಟರು ನಿರ್ದಯವಾಗಿ ಕೊಲ್ಲುತ್ತಿರುವ ದೃಶ್ಯ ಕಣ್ಣಿಗೆ ಬಿತ್ತು ! ಐನೂರು ಜನರಿಗೆ ಅಡುಗೆ ಎಂದರೆ ಕೇಳಬೇಕೆ ? ನಿಸ್ಸಹಾಯಕರಾದ ಆ ಪ್ರಾಣಿ ಪಕ್ಷಿಗಳು, ಮುಂದೆಬರುವ ಆಪತ್ತುಗಳನ್ನು ಕಾಣದೆ ಸಾಲಾಗಿ ಬಂದು ಸಾಯುತ್ತಿದ್ದುದು ಸೋಮಶ್ರವನಿಗೆ ತಾಳಲಾಗಲಿಲ್ಲ ! ಬಹಿರಂಗವಾಗಿ "ನಿಲ್ಲಿಸಿ" ಎಂದು ಗರ್ಜಿಸಿ ಬಿಡುವಷ್ಟು ಉದ್ವೇಗ ಉದ್ದೇಶ್ಯ ಅವನಿಗೆ ಉಂಟಾಗಿತ್ತು !

ಆ ಪಾತಾಳ ಗೃಹದಲ್ಲಿ ಸೂರ್ಯರಶ್ಮಿಗೆ ಎಲ್ಲೂ ಅವಕಾಶವಿರಲಿಲ್ಲ ! ಹಗಲಲ್ಲೂ ಅಲ್ಲಲ್ಲಿ ಪಂಜುಗಳ ಬೆಳಕು ಇರುತ್ತಾ, ರಾತ್ರಿ – ಹಗಲುಗಳ ವ್ಯತ್ಯಾಸವೇ ತಿಳಿಯದಂತೆ, ಅದು ಯಮಲೋಕದಂತೆ ಕಾಣುತ್ತಿತ್ತು. ಕೋಡಿಯಾಗಿ ಹರಿದು ಬಂದ ಪ್ರಾಣಿಗಳ ರಕ್ತಗಳನ್ನು–ಕಾಲುವೆಗಳಿಂದ– ನಾನಾ ಪಾತ್ರೆಗಳಲ್ಲಿ ಶೇಖರಿಸಿಡಲಾಗಿತ್ತು ! ಇಲ್ಲಿ ಇನ್ನೇನೂ ವಿಶೇಷ ಗಾಣದೆ, ಸೋಮಶ್ರವ, ಅದೃಶ್ಯನಾಗಿ ಇಲ್ವಲನ ಅರಮನೆಗೆ ನಡೆದ. ಅಂತಃಪುರದಲ್ಲಿ, ಸಭಾಸ್ಥಾನದಲ್ಲಿ, ಏಕಾಂತ ಗೃಹದಲ್ಲಿ, ಎಲ್ಲೂ ಅವನನ್ನು ಕಾಣದೆ, ಸ್ನಾನಗೃಹದಲ್ಲಿ ಎಲ್ಲಾದರೂ ಇರುವನೋ ಎಂದು ಕಾಣಲು ಹೋದ. ಸ್ನಾನ ಗೃಹದಲ್ಲಿ ಇಲ್ವಲನ ಉಡುಪುಗಳನ್ನು ಕಳಚಿ ಒಂದೆಡೆ ಇಡಲಾಗಿತ್ತು ! ಇಲ್ಲೇ ಎಲ್ಲೋ ಇದ್ದಾನೆಂದು ಭಾವಿಸಿ, ಅಲ್ಲಿನ ವಾಪೀ, ಕೂಪ, ಸ್ನಾನದ ತೊಟ್ಟಿಗಳನ್ನೆಲ್ಲ ಸೋಮಶ್ರವ ಪರೀಕ್ಷಿಸಿದ ! ಎಲ್ಲೂ

ಇಲ್ವಲ ಇಲ್ಲ ! ಮುಂದೆ ನಡೆಯುತ್ತಾ ಒಂದು ಸುರಂಗದ ಹಾದಿ ತೆರೆದಿದ್ದು ಗೋಚರವಾಯಿತು. ಮೂರು ಮಾರಿಗೆ ಪಂಜುಗಳು ಉರಿಯು ತ್ತಿದ್ದುದರಿಂದ ಅಲ್ಲಿಗೆ ಆಗತಾನೇ ದೊರೆ ಬಂದಿದ್ದು ತಿಳಿದು. ಋಷಿ, ಮುಂದುವರೆದ. ಆ ಸುರಂಗ ಬಹಳ ಉದ್ದವಾಗಿದ್ದು ಒಂದು ನೆಲ ಮಾಳಿಗೆಯ ಕೋಣೆಯಲ್ಲಿ ಮುಕ್ತಾಯವಾಯಿತು ! ಅಲ್ಲಿ ವಾತಾಪಿ ಅಣ್ಣನಿಗಾಗಿ ಎಂಬಂತೆ ಕಾಯುತ್ತ ಕುಳಿತಿದ್ದ ! ಇಲ್ವಲನೂ ಅಲ್ಲಿಗೆ ಆಗತಾನೇ ಬಂದಿದ್ದು, ಸೋಮಶ್ರವ ತಡಮಾಡದೇ ಬಂದುದಕ್ಕೆ ಸಂತಸ ಗೊಂಡ ! ಆ ಕತ್ತಲಕೋಣೆ ಎಲ್ಲಿ ಮುಗಿಯುವುದೆಂಬ ಕುತೂಹಲದಿಂದ ಸೋಮಶ್ರವ ಬೇಗನೆ ಸುತ್ತ ಓಡಾಡಿ ನೋಡಿದ ! ಅದರಾಚೆಗೆ ಎರಡು ವಿಸ್ತಾರವಾದ ಶಾಲೆಗಳಿದ್ದು ಬೀಗಮುದ್ರೆಗಳನ್ನು ಅವಕ್ಕೆ ಹಾಕಲಾಗಿತ್ತು. ಇವೇನು ಭೋಜನಶಾಲೆಗಳೋ, ವಧಸ್ಥಾನಗಳೋ, ಪೀಡಾಸ್ಥಾನಗಳೋ. ಎಂದು ಚಿಂತಿಸಿ, ಹಿಂದಿರುಗಿ ನೋಡಿದ. ಅಣ್ಣ ತಮ್ಮಂದಿರಲ್ಲಿ ಮಾತು ಆರಂಭವಾದುದನ್ನು ಕಂಡು ಹಿಂದೆ ನಡೆದು ರಹಸ್ಯವಾಗಿ ಆಲಿಸಲಾರಂಭಿ ಸಿದ. ಆ ಶಾಲೆಗಳ ಆಚೆಗೇ ಅವನು ಹಿಂದೆ ನೋಡಿದ್ದ ಪಾಕಶಾಲೆ ! ಇಲ್ಲಿ ಯಾವುದೇ ಪದಾರ್ಥವನ್ನು ರಹಸ್ಯವಾಗಿ ಸೃಷ್ಟಿಸಿಟ್ಟು, ಅದು ಭೋಜನ ಶಾಲೆಗೆ ರಹಸ್ಯವಾಗಿ ಸೇರಲು ವ್ಯವಸ್ಥೆ ಇರಬೇಕು ! ಆಂ ! ಅದೇನೆಂದು ಸೋಮಶ್ರವ ಊಹಿಸಿದ. ಅಷ್ಟರಲ್ಲಿ ಮಾತು ಹೀಗೆ ಕೇಳಿಸಿತು!

**ವಾತಾಪಿ :** "ಅಣ್ಣ ! ನಾನು ಇನ್ನೆಷ್ಟುಸಲ ಮೇಷಾವತಾರ ( ಆಡಿನರೂಪ ) ತಳೆಯಬೇಕು ? ಇನ್ನೆಷ್ಟು ಋಷಿಗಳನ್ನು ನಾನು ಸಾಯಿಸಬೇಕು ? ಈ ಹೇಡಿತನದ ಹೋರಾಟಕ್ಕೆ ನಾನು ನಾಚುತ್ತೇನೆ. ಗಾಳಿಗಿಂತ ವೇಗವಾಗಿ ಚಲನ ಬಲ್ಲವನೆಂಬರ್ಥದ ಹೆಸರಿನ ನಾನು ಒಬ್ಬ ಯೋಧನಾಗಿ ಹೋರಾಡಲು ಇಚ್ಛಿಸುವುದು ತಪ್ಪೆ !"

**ಇಲ್ವಲ :** "ಮೂರ್ಖರಂತೆ ಮಾತಾಡಬೇಡ ! ನಾವೀಗ ಹೋರಾ ಡುತ್ತಿರುವುದು ಹೇಡಿಗಳಾದ ಋಷಿಗಳೊಡನೆ ಎಂಬುದನ್ನು ಮರೆಯ

ಬೇಡ ! ರಾಕ್ಷಸ ಮಾಯೆಗಳಲ್ಲಿ ಇದಕ್ಕಿಂತ ಉತ್ತಮವಾದುದು ಬೇರೆ ಇಲ್ಲ ! ಇಂದು ನಿರ್ಣಾಯಕ ದಿನ ! ಆ ಅಗಸ್ತ್ಯನೂ ಅವನ ಅನುಚರರೂ ಮುಗಿದರೆ, ಮುಂದೆ ಎಲ್ಲವೂ ಪ್ರಕಟ ಯುದ್ಧವೇ !"

**ವಾತಾಪಿ :** "ನನಗೇಕೋ ಇಂದು ಭಯವೆನಿಸುತ್ತದೆ, ಅಣ್ಣ ! ಅಗಸ್ತ್ಯನ ಜಠರ ಸೇರಿದ ನಾನು ಮತ್ತೆ ಬರುವೆನೋ ಇಲ್ಲವೋ ! ನಿನ್ನ ಮೃತಸಂಜೀವಿನೀ ವಿದ್ಯೆ ದೋಷರಹಿತವಾಗಿದ್ದರೆ ಬೇರಾರನ್ನಾದರೂ ಪಶುವಾಗಿಸಬಾರದೇ ? ನಾನೇ ಬೇಕೆ ?"

**ಇಲ್ವಲ :** "ಶುಕ್ರಾಚಾರ್ಯನು ನಿಯಮಿಸಿದುದನ್ನೇ ನಾನು ಮಾಡುತ್ತಿರುವೆ. ಈ ವಿದ್ಯೆ ಮೂರನೆಯವರಿಗೆ ತಿಳಿಯಬಾರದು !"

**ವಾತಾಪಿ :** "ಅಣ್ಣ, ಹಾಗಾದರೆ ಇಂದು ನೀನೇ ಪಶುವಾಗು ! ನಾನೇ ಶ್ರಾದ್ಧ ಮಾಡುತ್ತೇನೆ !"

**ಇಲ್ವಲ ;** "ಇದೇ ಅಸುರೀಬುದ್ಧಿ, ನೋಡು ! ಶ್ರಾದ್ಧಕರ್ತಾ ನಾನಲ್ಲವೇ ? ಅಣ್ಣ ಇರುವಾಗ ನೀನು ಹೇಗೆ ಶ್ರಾದ್ಧ ಮಾಡುವೆ ? ಅಗಸ್ತ್ಯನಿಗೆ ಸಂಶಯ ಬರಬಾರದು. ಬೇಗ ಸಿದ್ಧನಾಗು."

ವಿಧಿಯಿಲ್ಲದೆ, ವಾತಾಪಿ ಅಲ್ಲಿನ ಆಸನದಲ್ಲಿ ಕುಳಿತ ! ಇಲ್ವಲ ಏನೇನೋ ಮಂತ್ರಗಳನ್ನು ಪಠಿಸಿ, ಅವನ ಮೇಲೆ ತೀರ್ಥ ಎರಚಿದ; ಕುಂಕುಮ ಎರಚಿದ; ಧೂಪ ಹಾಕಿದ; .... ಎರಡು ಸಲ, ಮೂರು ಸಲ ಅದೇ ಮಾಡಿದ .... !

ಮೈ ಬೆವರಲಾರಂಭಿಸಿತು ! ಮಂತ್ರ ಕೆಲಸ ಮಾಡಲಿಲ್ಲ ! ಏನು ಮಾಡಿದರೂ ತಮ್ಮ ಅಂದು ಆಡು ಆಗಲಿಲ್ಲ ! ಶ್ರಾದ್ಧದಲ್ಲಿ ಆಡಿನ ಮಾಂಸವೇ ಬೇಕಿತ್ತು ! ತಮ್ಮನಿಗೆ ಕೊಲೆಯ ಅರಿವೂ ಆಗಬಾರದಿತ್ತು ! ಆದರೆ ಅಂದು ಮಾಯೆ ವಿಫಲವಾಗಿತ್ತು ! ಆ ಮಾಯಾವೀ ಅಗಸ್ತ್ಯ ಏನೋ ಮಾಡಿರಬೇಕೆಂದು ಕೋಪವೂ ಬರಲಾರಂಭಿಸಿತು !

ಆಲೋಚಿಸಲು ಶುಕ್ರನೂ ಹತ್ತಿರ ಇಲ್ಲ ! ಇದು ಗುರುಶಾಪದ ಫಲ ಇರಬೇಕೆಂದು ಮನಸ್ಸು ನುಡಿಯಿತು. ಯಾರ ಶಾಪವಾದರಾಗಲಿ, ಸಂದರ್ಭವನ್ನು ಕೈಬಿಡಬಾರದು ! ಅಗಸ್ತ್ಯನನ್ನು ಮುಗಿಸಿಯೇ ತೀರ ಬೇಕು ! ತಮ್ಮನೋ ಆಡಾಗುತ್ತಿಲ್ಲ ! ಶ್ರಾದ್ಧಭೋಜನದ ವೇಳೆ ಸಮೀಪಿಸುತ್ತಿದೆ ! ಅಡುಗೆ ಸಿದ್ಧವಿಲ್ಲವೆಂದರೆ ಹೇಗೆ ? ಗುಟ್ಟೊ ಬೇರೆಯವರಿಗೆ ತಿಳಿಯಬಾರದು ! ತಾನು ಶ್ರಾದ್ಧಭೂಮಿಯನ್ನು ಬಿಟ್ಟು ಹೋಗಬಾರದೆಂದು ಆ ಹಾಳು ಋಷಿ ನಿಬಂಧನೆಯನ್ನು ಹಾಕಿದ್ದಾನೆ ! ಸ್ನಾನ ಮಾಡಿಬಂದು ಆ ಮಾಯಾವೀ ತನ್ನನ್ನೇ ಹುಡುಕಿ ಬಂದರೇನು ಗತಿ ? ಮಾಯಾವಿಗೆ ಯಾರ ತಡೆಯುಂಟು ?

ಒಂದು ಉಪಾಯ ಹೊಳೆಯಿತು ! ಹೇಗೂ ತಮ್ಮನನ್ನು ಬದುಕಿಸಿ ತರುವುದಾಗುತ್ತದೆ ! ಆಡಿನ ರೂಪದಲ್ಲಿ ಅವನು ಸಾಯದಿದ್ದರೆ ಬೇಡ ! ಮನುಷ್ಯನಾಗಿಯೇ ಸಾಯಲಿ ! ಒಂದೇ ಒಂದು ಸಲ ಆ ತನ್ನ ಮುದ್ದಿನ ತಮ್ಮ, ಕೊಲೆಯ ಯಾತನೆಯನ್ನು ತನ್ನ ಒಳ್ಳೆಯ ಕೆಲಸಕ್ಕಾಗಿ ತಾಳಿ ಕೊಳ್ಳಲಾರನೇ ? ಒಂದೇ ಸಲಕ್ಕೆ ತಲೆ ಹಾರಿಸಿದರೆ ಮುಗಿಯಿತು ! ಆಮೇಲೆ ಚರ್ಮ ಸುಲಿದು, ಒಂದೊಂದೇ ಅಂಗದ ಮಾಂಸವನ್ನು ಬಿಡಿ ಯಾಗಿ ತೆಗೆದು ಬುಟ್ಟಿಗಳಲ್ಲಿ ಇಟ್ಟು, ಮೂಳೆಗಳನ್ನು ರಹಸ್ಯವಾಗಿ ಶೇಖರಿಸಿಡಬೇಕು. ಅರಮನೆಯಲ್ಲಿ ಬೇರಾರೂ ಇದನ್ನು ನೋಡಬಾರದು ! ಆ ಗುಟ್ಟು ತನ್ನೊಬ್ಬನಿಗೇ ಮೀಸಲು ! ತಮ್ಮ, ನಿಜರೂಪಕ್ಕೆ ವಾಪಸ್ಸು ಬರುವಾಗ ಈ ಮೂಳೆಗಳೂ, ರಕ್ತವೂ ಎಲ್ಲ ಉಪಯೋಗಕ್ಕೆ ಬರಬೇಕಲ್ಲವೆ ?

ಆದರೆ ತಮ್ಮ, ತನ್ನ ರೂಪದಲ್ಲೇ ಸಾಯುವುದಕ್ಕೆ ತಕರಾರು ಮಾಡಿ ದರೆ !! ಅವನು ಅಂದು ಮಾಡಿಯೇ ಮಾಡಿದ್ದ !

**ವಾತಾಪಿ :** "ಅಣ್ಣ ! ತಡಮಾಡುತ್ತಿರುವೆಯೇಕೆ ? ಬೇಗ ಆಡನ್ನಾಗಿ ಮಾಡು !"

ಇಲ್ವಲ ಚಿಂತಿಸುತ್ತಾ ನೆಲನೋಡುತ್ತಾ ನಿರ್ವಿಣ್ಣನಾಗಿ ನಿಲ್ಲುತ್ತಾನೆ. ಆಮೇಲೆ ಮನಸ್ಸು ಗಟ್ಟಿ ಮಾಡಿಕೊಂಡು ಅಗಲವಾದ ಬಾಯುಳ್ಳ ದೊಡ್ಡ ರಾಕ್ಷಸ ಕತ್ತಿಯನ್ನು ಮೇಲೆತ್ತುತ್ತಾನೆ !

ಇಲ್ವಲ ಕಂಗಳನ್ನು ರಾಕ್ಷಸಾಕಾರಕ್ಕೆ ಅಗಲಿಸಿ "ಅಣಕವಾಡು ವೆಯಾ ? ಭ್ರಷ್ಟ !" ಎನ್ನುತ್ತಾ ಬಲಿ ಪೀಠಕ್ಕೆ ತಂದು, ಅವನ ಕೊರಳನ್ನು ಅದರ ಮೇಲೆ ಬಗ್ಗಿಸಿ, ಅಲುಗದಂತೆ ಕೈಗಳನ್ನು ಕಟ್ಟಿ ಹಾಕಿ, ನೊಂಟದ ತನ್ನ ಉತ್ತರೀಯವನ್ನು ಗಟ್ಟಿಯಾಗಿ ಬಿಗಿದುಕೊಂಡು, ಒಂದೇ ಏಟಿಗೆ ರೊಯ್ಯನೇ ಅವನ ತಲೆಯನ್ನು ತುಂಡರಿಸುತ್ತಾನೆ ! ನಾಲಗೆ ಹೊರ ಚಾಚಿ, ಬೆದುರುಕಂಗಳಿಂದ ಆ ತಲೆ ಪುಟಿದೆದ್ದು ಆಳೆತ್ತರಕ್ಕೆ ಚಿಮ್ಮಿ ಮತ್ತೆ ಭೂಮಿಗೆ ತಗುಲಿ ಕುಣಿಯುತ್ತಾ, ಅದರ ಚಿಮ್ಮುವಿಕೆಯು ಎತ್ತರ ಕ್ರಮೇಣ ಕಡಿಮೆಯಾಗುತ್ತಾ ಒಂದು ಮೂಲೆಯಲ್ಲಿ ತೆಪ್ಪನೆ ಮಣ್ಣಲ್ಲಿ ಬಿದ್ದು, ಅದನ್ನೇ ನೋಡುತ್ತಿದ್ದ ಸೋಮಶ್ರವನ ಎದೆ ಒಡೆಯುತ್ತದೆ ! ತನಗೇ ಅರಿವಿಲ್ಲದೆ ಒಂದು ಸಣ್ಣ ಅನುತಾಪದ ಆಕ್ರೋಶ ಅಯ್ಯೋ ! ಎಂದು ಹೊರ ಹೊಮ್ಮಿದ್ದನ್ನು ಕೇಳಿ ಇಲ್ವಲ ಸರಕ್ಕನೆ ಹಿಂದಿರುಗಿ ನೋಡು ತ್ತಾನೆ ! ಹಿಂದೆಂದೂ ಕೇಳಿಬಾರದ ಆ ಶಬ್ದ, ಆ 'ಅಯ್ಯೋ !' ಇಂದೇಕೆ ? ಆ ಪಾತಾಳ ಶಾಲೆಯನ್ನೆಲ್ಲ ಸುತ್ತಿಬರುತ್ತಾನೆ, ಕೈಯಲ್ಲಿ ಪಂಜುಹಿಡಿದು ! ಎಲ್ಲೂ ಏನೂ ಕೇಳಿ ಬರಲಿಲ್ಲ ! ಯಾರೂ ಕಾಣಲೂ ಇಲ್ಲ ! ಇಂದಿನ ಮಾಯೆ ವಿಫಲವಾದುದರ ಪರಿಣಾಮವಾಗಿ ತಾನೇ ಹಾಗೆ ಆಡಿದ್ದಿರಬಹುದೆಂದು ಸಮಾಧಾನ ಪಟ್ಟುಕೊಳ್ಳುತ್ತಾನೆ.

ತಮ್ಮನ ಚರ್ಮ ಸುಲಿಯುತ್ತಾ, ಅವನ ಹೆಂಡತಿಯ ಮುಖ ಮುಂದೆ ಬರುತ್ತದೆ ! ಅಣಕವಾಡುತ್ತದೆ ! ಅಗಸ್ತ್ಯರ ಮುಖ, ಮುಂದೆ ಬಂದು "ಚೆನ್ನಾಗಿ ಸುಲಿ ! ಅಣ್ಣನಿಂದ ತಮ್ಮನ ಜೀವಂತ ಶ್ರಾದ್ಧ ಚೆನ್ನಾಗಿ ಆಗಲಿ "ಎಂದು ಹರಸಿ ಮಾಯವಾಗುತ್ತದೆ, ಶುಕ್ರ ಕಾಣಿಸಿ

ಕೊಂಡು" ಮಾಯೆಗಳು ವಿಫಲವಾದ ಮೇಲೂ ಮಾಡುವ ನಿನ್ನ ಈ ಹಟದ ಕೆಲಸವನ್ನು ಸುಡಬೇಕು !" ಎಂದು ನಿಂದಿಸಿದಂತೆ ಭಾಸವಾಗುತ್ತದೆ. ದೇವತೆಗಳು ಅಟ್ಟಹಾಸದಿಂದ ಅಂತರಿಕ್ಷದಲ್ಲಿ ನಕ್ಕಂತೆ ಭಾಸವಾಗುತ್ತದೆ.

ತಮ್ಮನ ಮಾಂಸವನ್ನೆಲ್ಲ ಬುಟ್ಟಿಗಳಲ್ಲಿ ಶೇಖರಿಸಿಟ್ಟು, ರಕ್ತವನ್ನು ಕೊಡಗಳಲ್ಲಿ ಶೇಖರಿಸಿಟ್ಟು ಇಲ್ವಲ ರಹಸ್ಯದ ಆ ದಾರಿಯಲ್ಲಿ ವಾಪಸ್ಸು ಹೊರಡುವ ಮುಂಚೆ, ಈ ಬದಿಯ ಬೀಗ ಮುದ್ರೆಯನ್ನು ತೆರೆದಿಟ್ಟು ಹೋಗುತ್ತಾನೆ.

ಸೋಮಶ್ರವ ದಿಗ್ಭ್ರಾಂತನಾಗಿ ಇನ್ನೂ ಅಲ್ಲೇ ಕುಳಿತಿದ್ದ ! ಹೊರ ತೆಗೆದ ಬೀಗಮುದ್ರೆಯ ಬಾಗಿಲಿನಿಂದ ಅಡುಗೆಯ ಶಾಲೆಯ ಭಟರು ಬಂದು ಆ ಬುಟ್ಟಿಗಳನ್ನು ಹೊರನಾಗಿಸುತ್ತ, ಅದನ್ನು ಮೂಸಿನೋಡಿ "ಇಂದು ಇದೇನೋ ವಿಚಿತ್ರವಾದಂತಿದೆ ! ಇದು ಆಡಿನ ಮಾಂಸವಲ್ಲ !" ಎಂದು ಆಚ್ಚರಿ ಪಡುತ್ತಾರೆ. "ಯಾರ ಮಾಂಸವಾದರೆ ನಮಗೇನು ? ನಮ್ಮ ಮಾಂಸವಲ್ಲದಿದ್ದರೆ ಸರಿ !" ಎಂದು ಹೇಳಿ ಭಯಂಕರವಾಗಿ ನಕ್ಕು ಅವರು ನಿರ್ಗಮಿಸುತ್ತಾರೆ.

ಸೋಮಶ್ರವ ಅದೃಶ್ಯನಾಗಿ ಹೊರಬಿದ್ದು ಅಗಸ್ತ್ಯರಿಗೆ ವಿವರಿಸಲು ಯತ್ನಿಸಿ, ಬಾಯಿ ಬರದೆ, ನಿಧಾನವಾಗಿ ಹೇಳುತ್ತಾನೆ. ಶಾಂತರಾಗಿ ಆಲಿಸಿದ ಮಹರ್ಷಿ, "ದೈವಚಿತ್ತ !" ಎನ್ನುತ್ತಾರೆ !

* * *

ಶ್ರಾದ್ಧ ಆರಂಭವಾಗುತ್ತದೆ. ಸಂಕಲ್ಪ ಮುಗಿಸಿ, ಆ ಆ ಸ್ಥಾನಗಳಿಗೆ ವಿಶ್ವೇದೇವತೆಗಳನ್ನಾಗಿ, ಪಿತೃಗಳನ್ನಾಗಿ, ವಿಷ್ಣುವನ್ನಾಗಿ ಎಲ್ಲರನ್ನು ವಿಧಿವತ್ತಾಗಿ ಇಲ್ವಲ ನಿಯೋಜಿಸುತ್ತಾನೆ. ಶಂಡಾಮರ್ಕರು ವಿಧಿ ತಪ್ಪದೆ

ಮಂತ್ರ ಹೇಳುತ್ತಾ, ಇಲ್ವಲನ ಪರಿಚಿತ ಹಸ್ತಗಳು ಕರಣಗಳನ್ನು ಚೆನ್ನಾಗಿಯೇ ಮಾಡುತ್ತವೆ. ಹೋಮ ನಡೆದ ಅಗ್ನಿಯಲ್ಲಿ ಮಾಡಬೇಕಾದುದೆಲ್ಲ ಮುಗಿದು ಪಾದಪ್ರಕ್ಷಾಳನಕ್ಕೆ ಬ್ರಾಹ್ಮಣರು ಅರಮನೆಯ ಅಂಗಳಕ್ಕೆ ಬರುತ್ತಾರೆ. ಬಂಗಾರದ ಕೊಡಗಳಲ್ಲಿ ಎಲ್ಲರಿಗೂ ಪ್ರಕ್ಷಾಳನ. ಅವುಗಳನ್ನು ಅವರಿಗೇ ದಾನವಾಗಿ ಕೊಡಲಾಗುತ್ತದೆ! ಕುಡಿಯುವ ನೀರಿಗೂ ಬಂಗಾರದ ಚೊಂಬುಗಳು ದಾನ! ಊಟಕ್ಕೆ ಎಲ್ಲರಿಗೂ ಚಿನ್ನದ ತಟ್ಟೆಗಳು! ಭೋಜನ ಪಾತ್ರಕ್ಕೆ ದರ್ಭಾಸನ ಹಾಸುವ ವೇಳೆಗೆ ಸೋಮಶ್ರವಸೂ ಬಂದು ಸೇರಿಕೊಂಡು ಮಹರ್ಷಿಗೆ ರಹಸ್ಯವಾಗಿ ಹತ್ತೂ ಬೆರಳುಗಳನ್ನು ತೋರಿಸಿದ! ಮಹರ್ಷಿ ಕಣ್ಣರಳಿಸಿ ನೋಡಿ "ಅರ್ಥವಾಯಿತು" ಎಂಬಂತೆ ಸೂಚಿಸಿದ. ಇನ್ನೊಂದು ಬದಿಯಲ್ಲಿ ಚಾಕ್ರಾಯಣ "ವಾತಾಪಿ ಪತ್ತೆ ಇಲ್ಲ!" ಎಂದು ಪಿಸುಮಾತಿನಲ್ಲಿ ಉಸುರಿದ! ಮಹರ್ಷಿ ತಲೆಯಾಡಿಸಿದ!

ಬಡಿಸುವುದು ಪ್ರಾರಂಭವಾಯಿತು! ಪ್ರೋಕ್ಷಣ, ಆಪೋಶನಗಳೆಲ್ಲ ಮುಗಿದು ಭೋಜನ ಆರಂಭವಾಯಿತು! ಬ್ರಾಹ್ಮಣರು ಹೇಗೆ ಅದನ್ನು ಭುಜಿಸುವುದೆಂದು ಹಿಂದೆ ಮುಂದೆ ನೋಡುತ್ತಾ ಅಗಸ್ತ್ಯರನ್ನು ನೋಡಲಾರಂಭಿಸಿದರು! "ವಾತಾಪಿಯನ್ನು ಕರೆ, ದತ್ತ ಬಿಡಲಿ" ಎಂದು ಮಹರ್ಷಿ ಗರ್ಜಿಸಿದ! "ಇಲ್ಲೇ ಬರುತ್ತಾನೆ. ನಮಸ್ಕಾರದ ವೇಳೆಗೆ ಕರೆಯುತ್ತೇನೆ" ಎಂದು ಹೇಳಿ ಇಲ್ವಲ ತಪ್ಪಿಸಿಕೊಂಡ. ಮಹರ್ಷಿ ಸೋಮದೇವತೆಯನ್ನು ಧ್ಯಾನ ಮಾಡಿ "ಅಮೃತಂ ಭವತು" ಎಂದು ಹೇಳಿ ಪ್ರೋಕ್ಷಿಸಿದೊಡನೆಯೇ ಉಳಿದವರೂ ಹಾಗೇ ಮಾಡಿದರು. ಬಡಿಸಿದುದೆಲ್ಲ ಶಾಕಾಹಾರವಾಗಿ ಮಾರ್ಪಾಡಾಯಿತು!

ಇಲ್ವಲ ಇದನ್ನು ನಂಬಲಿಲ್ಲ! ಮೂಲಕಲ್ಪದಂತೆಯೇ ಮಾಡಿದುದನ್ನು ಭುಜಿಸಬೇಕೆಂದು ಮಹರ್ಷಿಗೆ ಬಿನ್ನವಿಸಿದ! "ಬಡಿಸುವುದು

ನಿನ್ನಿಷ್ಟ; ಉಣ್ಣುವುದು ನಮ್ಮ ಇಷ್ಟ ! ಇನ್ನು ಭೋಜನ ಮುಗಿಯುವ ತನಕ ಮೌನ" ಎಂದು ಮಹರ್ಷಿ ಆಜ್ಞೆ ಮಾಡಿದ.

ವಾತಾಪಿಯ ಮಾಂಸವನ್ನು ತುಪ್ಪದಲ್ಲಿ ಕರಿದು ವಡೆಯಂತೆ ಆಕೃತಿ ಮಾಡಿ ಬುಟ್ಟಿಯಲ್ಲಿ ತಂದರು ! ಸೋಮಶ್ರವ ಹತ್ತೂ ಬೆರಳುಗಳನ್ನು ಮತ್ತೆ ತೋರಿದ !!

ಮಹರ್ಷಿ ಬಡಿಸುವವನಿಗೆ ಆ ಬುಟ್ಟಿಯನ್ನು ತನ್ನ ತಟ್ಟೆಯ ಮುಂದೆಯೇ ಇಟ್ಟುಬಿಡುವಂತೆ ಕೈಸನ್ನೆ ಮಾಡಿದ ! ಬಡಿಸುವವನು ಇಲ್ವಲನ ಮುಖ ನೋಡಿದ !! ಇಲ್ವಲ "ಪ್ರಭು ! ಎಲ್ಲರಿಗೂ ಒಂದು ಸಲ ಬಡಿಸಿ ಆಗಿ ಆಮೇಲೆ ಉಳಿದುದೆಲ್ಲವನ್ನೂ ತಮಗೆ ಬಡಿಸ ಲಾಗುವುದು" ಎಂದು ನಮ್ರವಾಗಿ ಸೂಚಿಸಿದ. "ಹಾಗೆ ಮಾಡಿದರೆ ಇಗೋ ಎದ್ದೇ ಬಿಡುತ್ತೇನೆ ! ಕೊಟ್ಟ ಮಾತನ್ನು ನೀನೂ ಮೀರಬಾರದು ! ನಾನು ಮಾತನಾಡುವಂತಿಲ್ಲ ! ನನಗೆ ಪ್ರಿಯವಾದ ಭಕ್ಷ್ಯವನ್ನು ನಾನು ಸಾಕೆನ್ನುವ ತನಕ ನನಗೇ ಬಡಿಸಬೇಕು" ಎಂಬರ್ಥದಲ್ಲಿ ಆಗಸ್ತ್ಯರು ಸನ್ನೆ ಮಾಡಿದರು.

ಆ ಪದಾರ್ಥದ ಬದಲು ಉಳಿದವರಿಗೆ ಬೇರೊಂದನ್ನು ಬಡಿಸಿ, "ಪಂಕ್ತಿಭೇದ" ದೋಷವನ್ನು ವರ್ಜಿಸಿದರೂ, ವಾತಾಪಿಯ ಮಾಂಸವೆಲ್ಲ ಆಗಸ್ತ್ಯರಿಗೇ ಬಡಿಸಲ್ಪಟ್ಟಿತು ! ಆದರೇನು, ಪ್ರೋಕ್ಷಣೆಯ ಮಹಿಮೆ ಯಿಂದ ತಟ್ಟೆ ಮುಟ್ಟಿದೊಡನೆ ಅವೆಲ್ಲ ಉದ್ದಿನವಡೆಗಳಾಗಿ ಮಾರ್ಪಡು ತ್ತಿದ್ದವು !!

ಶ್ರಾದ್ಧ, ವಿಚಿತ್ರದಾರಿಯನ್ನು ಹಿಡಿದುದನ್ನು ಕಂಡು ಇಲ್ವಲನಿಗೆ ಮೊದಲ ಸಲಕ್ಕೆ ನಿಜವಾಗಿ ಭಯವಾಯಿತು ! ತಲೆ ಸುತ್ತಲಾರಂಭ ವಾಯಿತು !

ವಾತಾಪಿಯು ಮಾಂಸ ಏನೂ ಉಳಿಯಲಿಲ್ಲವೆಂಬುದು; ಬುಟ್ಟಿ ಖಾಲಿಯಾದುದರಿಂದ ಅದನ್ನು ಅರಿತು ಮಹರ್ಷಿ ಮುಂದಿನ ವಸ್ತುಗಳನ್ನು ಬಡಿಸಲು ಅನುಮತಿಸಿದ! ಭೋಜನ ಶಾಲೆಯಲ್ಲಿ ಶ್ಮಶಾನಮೌನ ಆವರಿಸಿತ್ತು! ಇಲ್ವಲನ ಹೃದಯ ಬಡಿದುಕೊಳ್ಳುತ್ತಿತ್ತು! "ಮೃತಸಂಜೀವಿನೀ ಮಂತ್ರಕ್ಕೆಕೊಟ್ಟರೆ ? – ಕೊಟ್ಟರೆ ?" ಎಂಬ ಆತಂಕ ಹೆಚ್ಚಾಗುತ್ತಿತ್ತು.

ಬ್ರಾಹ್ಮಣರು ಉಂಡು ಉತ್ತರಾಪೋಶನವೂ ಆಗಿ, ಕೈಕಾಲು ತೊಳೆದು, ತಾಂಬೂಲ ದಕ್ಷಿಣಾ ಸ್ವೀಕಾರಕ್ಕೆ ಕುಳಿತರು ! "ನಿನ್ನಲ್ಲಿರುವ ಐಶ್ವರ್ಯವನ್ನೆಲ್ಲ ದಕ್ಷಿಣೆಯಾಗಿ ಕೊಡು ! ಇಲ್ಲವಾದರೆ ಶ್ರಾದ್ಧ ಕೆಟ್ಟು ಹೋಗುತ್ತದೆ." ಎಂದು ಅಗಸ್ತ್ಯರು ನಿರ್ದಾಕ್ಷಿಣ್ಯದಿಂದ ಕೇಳಿಬಿಟ್ಟರು !

ಇಲ್ವಲ ಯೋಚಿಸಿದ ! "ಇನ್ನೊಂದೇ ಹೆಜ್ಜೆ ಮುಂದೆ, ವಾತಾಪಿ ಹೊರ ಬಂದರೆ, ಅಗಸ್ತ್ಯನಿಗೆ ಕೊಟ್ಟದ್ದೆಲ್ಲ ಮತ್ತೆ ತನ್ನದೇ ಆಗುತ್ತದೆ ! ಈಗ ಎಲ್ಲವನ್ನು ಕೊಟ್ಟರೆ ನಷ್ಟವೇನು ?'' ಎಂದು ಯೋಚಿಸಿ, ಖಜಾನೆಯ ಬೀಗದ ಕೈಯನ್ನೇ ದಕ್ಷಿಣೆಯಾಗಿಟ್ಟುಕೊಟ್ಟ !

"ರಾಜಧಾನಿಯ ಕೋಟೆ ಬಾಗಿಲುಗಳ ಬೀಗದ ಕೈಗಳೂ ಬೇಕು" ಎಂದು ಅಗಸ್ತ್ಯರು ಆಜ್ಞೆ ಇತ್ತರು ! "ನಿನ್ನ ಐಶ್ವರ್ಯದಲ್ಲಿ ಅವು ಸೇರಲಿಲ್ಲವೇ ?" ಎಂದು ಕೇಳಿದರು !

ಇಲ್ವಲ ದಿಟ್ಟತನದಿಂದ "ಅಶ್ವಶಾಲೆ, ಗಜಶಾಲೆ, ರಥಶಾಲೆ, ಸೇನಾ ನಿವೇಶನ, ರಾಜ್ಯಪ್ರಜೆಗಳು, ಭೂಮಿ, ಖನಿಜಗಳು, ನದಿಗಳು ಎಲ್ಲವನ್ನೂ ಕೊಟ್ಟೆ" ಎಂದುಬಿಟ್ಟ.

ಅಗಸ್ತ್ಯರು ಅಕ್ಷತೆಯನ್ನು ಕೈಗೆತ್ತಿಕೊಂಡು, ಬ್ರಾಹ್ಮಣರ ಕೈಗೂ ಅದ ನ್ನೀಯುವಂತೆ ಆಜ್ಞಾಪಿಸಿ, "ಕುಟುಂಬದ ಎಲ್ಲರೊಡನೆ ಬಂದು ನಮಸ್ಕಾರ ಮಾಡು ! ಎಲ್ಲಿ ವಾತಾಪಿ ?" ಎಂದು ಮತ್ತೆ ಕೇಳಿದರು.

ಆ ಗಳಿಗೆಗಾಗಿ ಕಾಯುತ್ತಿದ್ದ ಇಲ್ವಲ, ರಾಕ್ಷಸ ರೀತಿಯಲ್ಲಿ ವಿಕಟ ವಾಗಿ ಗಹಗಹಿಸಿ ನಕ್ಕು, ಮಾತಿನ ಶೈಲಿಯನ್ನೇ ಬದಲುಮಾಡಿ ಎಲ್ಲರನ್ನೂ ಸ್ತಬ್ಧಗೊಳಿಸುತ್ತಾನೆ !

**ಇಲ್ವಲ :** "ಎಲೋ ! ಕಪಟದ ಮಹರ್ಷಿ ! ನನ್ನನ್ನು ವಂಚಿ ಸಲು ಎಷ್ಟು ವರ್ಷ ತಪಸ್ಸು ಮಾಡಿದ್ದೆಯೋ ? ಅದನ್ನೆಲ್ಲ ಈ ಒಂದು ಕ್ಷಣದಲಿ ಮುಗಿಸುತ್ತೇನೆ ! ಈಗ ನೀನು ಸಾಯಲಿರುವೆ ! ನೀನು ಪ್ರೀತಿ ಯಿಂದ ತಿಂದ ಭಕ್ಷಣ ಏನು, ಗೊತ್ತೆ ? ನನ್ನ ತಮ್ಮನ ಮಾಂಸ ! ನರ ಮಾಂಸ !! ಎಲೈ ನರಮಾಂಸ ಭಕ್ಷಕನೇ. ಈಗ ನಿನ್ನ ಆಯುಷ್ಯ ಮುಗಿ ಯಿತು. ನೀನು ತಿಂದದ್ದು ನಿನಗೆ ಮೃತ್ಯುವಾಗುವುದನ್ನು ನೋಡು ತ್ತಿರು."

ಎಂದು ಹೇಳಿದ್ದೇ "ವಾತಾಪಿ ! ಹೊರಕ್ಕೆ ಬಾ ! ವಾತಾಪಿ ! ಹೊರಗೆ ಬಾ" ಎಂದು ಹೇಳಿ ಮೃತಸಂಜೀವಿನಿಯನ್ನು ಜಪಿಸಲು ತೊಡ ಗುತ್ತಾನೆ !.... ಮಂತ್ರ ಮರೆಯುತ್ತದೆ ! ಮತ್ತೆ ಪ್ರಯತ್ನಿಸುತ್ತಾನೆ !... ನೆನಪೇ ಬರುತ್ತಿಲ್ಲ... ತಲೆಸುತ್ತಿ ಕೆಳಗೆ ಬೀಳುವುದರಲ್ಲಿರುವ ಅವನನ್ನು ಸೋಮಶ್ರವ ಚಾಕ್ರಾಯಣರು ಹಿಡಿದು ಕೂರಿಸುತ್ತಾರೆ.

**ಅಗಸ್ತ್ಯ :** "ಮೂರ್ಖ ಅಸುರ ! ನಿನ್ನ ತಮ್ಮ ನನ್ನ ಹೊಟ್ಟೆ ಯಲ್ಲಿ ಇದೋ ಜೀರ್ಣವಾಗುತ್ತಾನೆ, ನೋಡು" ಎನ್ನುತ್ತಾ ಹೊಟ್ಟೆ ಯನ್ನು ಬಲಗೈಯಿಂದ ಸವರಿಕೊಳ್ಳುತ್ತಾ "ವಾತಾಪೇ ! ಜೀರ್ಣೋ ಭವ !!" ಎಂದು ಮೂರುಸಲ ಹೇಳಿ, ಕಮಂಡಲುವಿನ ತೀರ್ಥವನ್ನು ಕುಡಿದು ಗಟ್ಟಿಯಾಗಿ ತೇಗುತ್ತಾರೆ ! ಉಂಡ ಹೊಟ್ಟೆ, ಏನೂ ಉಣ್ಣದ ಸ್ಥಿತಿಗೆ ಬಂದು ಅಗಸ್ತ್ಯರು ಮೇಲೆದ್ದು, ಶಿಷ್ಯರಿಗೆ "ನಡೆಯಿರಿ. ಹೋಗೋಣ" ಎನ್ನುತ್ತಾ ಮೂಲಾಯನನ್ನು ಕರೆದು ಏನೋ ಸನ್ನೆ

ಮಾಡುತ್ತಾರೆ! ಅವನು ಹೊರಗೆ ನಡೆದು ಮಹರ್ಷಿ ತನಗೆ ಮೊದಲೇ ವಹಿಸಿದ್ದ ಕರ್ತವ್ಯವನ್ನು ಮಾಡುತ್ತಾನೆ.

ಚೇತರಿಸಿಕೊಂಡು ಮೇಲೆದ್ದ ಇಲ್ವಲ ಅಗಸ್ತ್ಯರನ್ನು ಬೈಯ್ಯಲು ಆರಂಭಿಸುತ್ತಾನೆ. ಈ ಬೈಗಳಕ್ಕೆ ಎಷ್ಟುದಿನದಿಂದ ಸಿದ್ಧಮಾಡಿ ಕೊಂಡಿದ್ದನೋ ?



## ಇಲ್ವಲನ ಮರಣ ! ಕಾಲಕೇಯರೊಡನೆ ಅಗಸ್ತ್ಯರ ಸೆಣಸಾಟ !

ಹೊರಗೆ ಹೊರಟ ಮಾಲಾಯುಸ ದೂರದ ಅಗಸ್ತ್ಯ ಸೈನ್ಯಕ್ಕೆ ಬೇಗ ಅರಮನೆಯನ್ನು ಬಂದು ಮುತ್ತುವಂತೆ ಶೀಘ್ರವಾದ ಅಶ್ವಾರೋಹಿಗಳ ಕೈಲಿ ಹೇಳಿ ಕಳುಹಿ, ತಾನೇ ಅದರ ಸ್ವಾಗತಕ್ಕೂ ನಿಯೋಜನೆಗೂ ಬದ್ಧನಾಗಿ ನಿಂತ.

ಇಲ್ವಲನ ಸೇನಾಪತಿ, ಮಣಿಗ್ರೀವನಿಗೆ ಎರಡು ದಿನಗಳಿಂದ ಏನೋ ಗುಪ್ತ ಚಿಂತೆ ಹತ್ತಿತ್ತು ! ವಿದರ್ಭದ ಮುತ್ತಿಗೆಯಲ್ಲಿ ವಿಪ್ರಚಿತ್ತಿ ಮತ್ತು ಸೈನ್ಯ ಚೂರ್ಣವಾದುದನ್ನೂ, ಅಗಸ್ತ್ಯ ಸೈನ್ಯದ ಮಾಂತ್ರಿಕ ಸಿದ್ಧಿಯನ್ನೂ ಬಲ್ಲವನಾದ ಅವನಿಗೆ ಅಗಸ್ತ್ಯರು ಐನೂರು ಶಿಷ್ಯರೊಡನೆ ಇಲ್ಲೇ ಅರಮನೆಗೆ ಬಂದದ್ದೂ. ದೊರೆ "ಶ್ರಾದ್ಧದ" ಆಟವಾಡುತ್ತಿದ್ದುದೂ ಸರಿ ತೋರಲಿಲ್ಲ ! ಸಿಂಹದೊಡನೆ ಹುಲ್ಲೆಯ ಸೆಣಸಾಟದಂತೆ. ಆ ಮಹಾ ಮಾಂತ್ರಿಕನ ಕೈಲಿ ಇಲ್ವಲ ಸತ್ತೇ ತೀರುತ್ತಾನೆಂದೂ, ರಾಜ್ಯ ಅನಾಥವಾಗುತ್ತದೆಂದೂ, ವಾತಾಪಿ ಇಷ್ಟು ದಿನ ನಡೆಸಿದ "ಮೃತ ಸಂಜೀವಿನೀ" ನಾಟಕ ಇನ್ನು ನಡೆಯದೆಂದೂ. ಮೊದಲ ದಿನ ರಾತ್ರಿಯೇ ಮಣಿಗ್ರೀವನ ಅಂತರ್‌ವಾಣಿ ನುಡಿಯಿತು. ಹೇಗಾದರಾಗಲಿ ಎಂದು ಮಿತಪರಿವಾರವನ್ನು ಅರಮನೆಯ ರಕ್ಷೆಗೆ ನಿಲ್ಲಿಸಿ, ಉಳಿದ ಸೈನ್ಯವನ್ನು ಶೀಘ್ರವಾಗಿ ಸಮುದ್ರ ತೀರದತ್ತ ಸಾಗಿಸಿ, "ಸಮುದ್ರದಲ್ಲಿ" ಮರೆಸುವ ಮಹಾಸಾಹಸಕ್ಕೆ ಅವನು ಆರಂಭಿಸಿದ್ದ! ಆದರೆ ಮಣಿಮತೀಪುರಿ ಎಲ್ಲಿ ? ಪೂರ್ವ ಸಮುದ್ರವೆಲ್ಲಿ ? ಎಷ್ಟು ದೂರ ? ಆ ಸೈನ್ಯ. ಸೈನ್ಯವಾಗಿ ಯಾರ ಕಣ್ಣಿಗೂ ಬೀಳದಂತೆ ಎಚ್ಚರ ವಹಿಸಿ ಅವನು ಈ ಮೊದಲೇ ಗುಟ್ಟಾಗಿ

ಅವರನ್ನು ವೇಷಾಂತರಗಳಲ್ಲಿ ಆ ಪೂರ್ವ ಕರಾವಳಿಗೆ ಕಳುಹಿಸಲು ಏರ್ಪಾಡೂ ಮಾಡಿದ್ದ. ಅವರ ಆಯುಧಗಳನ್ನೂ ಸಹ. ಇಂದು ಈ ಇಲ್ವಲ-ಅಗಸ್ತ್ಯರ ನೇರ ಸಂಘರ್ಷದ, ದಿನ, ಇಲ್ವಲನಿಗೆ ಸೈನ್ಯ ತುಂಬ ಅವಶ್ಯವಾದ ದಿನ. ಆ ಮಣಿಗ್ರೀವ ಇಲ್ವಲನಿಗೆ ಅವನ ರಾಜ್ಯಕ್ಕೆ, ದೂರ ಬಹುದೂರದಲ್ಲಿದ್ದು, ಪೂರ್ವ ಕರಾವಳಿಯ ಮೀನುಗಾರರೊಡನೆ ನಂಟು ಬೆಳೆಸಿದ್ದ, ಮಾತು ಕತೆ ನಡೆಸುತ್ತಿದ್ದ. ಇನ್ನೂ ಅತ್ತ ಹೋಗಲಾರದ ಸೈನಿಕರು ಎಲ್ಲಿದ್ದರಲ್ಲೇ ಭೂಗತರಾಗಬೇಕೆಂದು ನಿಯಮಿಸಿ. ಹಲವು ತುಕಡಿಗಳ ನಾಯಕರನ್ನು ಅಲ್ಲಿ ಬಿಟ್ಟು ಹೋಗಿದ್ದ. ಸಮರ್ಥನಾದ ಇಲ್ವಲನ ಆ ವಿನಾಶಕಾಲದಲ್ಲಿ. ಆ ಅಂತ್ಯಗಳಿಗೆಗಳಲ್ಲಿ ಇದೊಂದೂ ಅವನ ಗಮನಕ್ಕೇ ಬರಲಿಲ್ಲ ! ಅವನ ತಲೆಯ ತುಂಬ ಅಗಸ್ತ್ಯ, ಅಗಸ್ತ್ಯ, ಮಾಯೆ, "ಮೃತಸಂಜೀವಿನೀ," ಶುಕ್ರಕೋಪ, ಶುಕ್ರಶಾಪ ತುಂಬಿದ್ದವು.

ಇತ್ತ ಕುಮಾರವರ್ಮನ ದ್ರಮಿಡಸೈನ್ಯ ಮಣಿಮತೀಪುರಿಯ ಆಗ್ನೇಯ ಮತ್ತು ದಕ್ಷಿಣದ ಕಡೆಯ ಬಾಗಿಲಗಳನ್ನು ಸುತ್ತಿ ಬಳಸಿ ನಿಂತಿತು ! ಇದರ ಸೂಚನೆ ಅಗಸ್ತ್ಯರಿಗೂ ಬಂದಾಗಿತ್ತು ! ಇಲ್ವಲನ ಸೈನ್ಯ. ಗುಪ್ತವೇಷಾಂತರಗಳಲ್ಲಿ ಸಮುದ್ರ ತೀರದತ್ತ ಹೊರಟ ಸಮಾಚಾರವೂ ದ್ರಮಿಡ ದೊರೆಗೆ ತಲುಪಿ, ಇದು ತನ್ನ ರಾಜ್ಯವನ್ನು ಸೆಣಸುವ ತಂತ್ರವಿರಬಹುದೇ ? ಎಂದು ದೊರೆ ಚಿಂತಾಕಾಂತನಾದ ! ಆದರೆ ಆ ಸೈನ್ಯ, ನೇರವಾಗಿ ಪೂರ್ವದತ್ತ ಸಾಗಿತ್ತೇ ವಿನಾ ಆಗ್ನೇಯದತ್ತ ಅಲ್ಲವೆಂದು ಖಚಿತ ಮಾಡಿಕೊಂಡರೂ, ಆ ಸೈನ್ಯದ ಗುಪ್ತ ಚಲನ ವಲನಗಳ ಅರ್ಥ ಕುಮಾರವರ್ಮನಿಗಾಗಲಿಲ್ಲ ! ಹೇಗಾದರಾಗಲೆಂದು ಸಮರ್ಥ ಗೂಢ ಚಾರರನ್ನು ಅವರ ಹಿಂದೆ ಬಿಟ್ಟ! ಅಗಸ್ತ್ಯರ ಗೂಢಚಾರರು ಆಗಲೇ ಅವರ ಬೆನ್ನಟ್ಟಿದ್ದಾರೆಂಬುದು ಈ ಗೂಢಚಾರರ ಗಮನಕ್ಕೆ ಬಂದು, ಅಗಸ್ತ್ಯರ ಕಾರ್ಯಾಚರಣೆಯ ವೈಖರಿಗೆ ಅವನು ಮನಸೋತು, ಇಬ್ಬರಲ್ಲೂ ಸಹಕಾರ. ತಿಳುವಳಿಕೆಗಳು ಏರ್ಪಟ್ಟವು.

ಇನ್ನೊಂದತ್ತ ಪಾಂಡ್ಯ ದೊರೆಯ ಸೈನ್ಯಗಳೂ ತಲುಪಿ, ಮಣಿಮತೀಪುರಿಯ ನೈಋತ್ಯ ಮತ್ತು ದಕ್ಷಿಣ ಭಾಗಗಳಲ್ಲಿ ದ್ರಮಿಡ ಸೈನ್ಯಗಳನ್ನು ಸೇರಿಕೊಂಡು ನಗರಿಯನ್ನು, ಮುತ್ತಿದ್ದವು. ಇಲ್ವಲನ ನಗರದ ಮತ್ತು ಜನಪದದ ಜನರಿಗೆ ಏನು ನಡೆಯುತ್ತಿದೆಯೆಂಬುದೇ ತಿಳಿಯಲಿಲ್ಲ! "ದೊರೆಯ ಸೈನ್ಯ ಏನು ಮಾಡುತ್ತಿದೆ ? ಹೀಗೆ ರಾಜ್ಯದೊಳಗೆ ನಿರಂತರವಾಗಿ ಹೊರಗಿಂದ ಬರುತ್ತಿರುವ ಈ ಸೈನ್ಯಗಳು ಯಾರವು ? ಏತಕ್ಕಾಗಿ ಬರುತ್ತಿವೆ ? ತಡೆಯುವವರೆಲ್ಲ ಎಲ್ಲಿ ಹೋದರು ?" ಎಂದು ಕೇಳುತ್ತಾ, ಜನತೆ ಕಂಗಾಲಾಯಿತು !

ಇದನ್ನೆಲ್ಲ ಇಲ್ವಲನಿಗೆ ತಿಳಿಸುವ ಬೇಹುಗಾರರೂ ಆ ದಿನ ಮಾಯವಾಗಿದ್ದರು ! "ವಾತಾಪಿ ಇನ್ನು ಹೊರಬರಲಾರ! ಅವನ ಕಥೆ ಮುಗಿಯಿತು !" ಎಂದು ಆಡುಗೆಯ ಜನರು. ನಿಧಾನವಾಗಿ ನಡೆಯುತ್ತಿದ್ದ ಆ ಶ್ರಾದ್ಧದ ಸಂದರ್ಭದಲ್ಲಿ ಕಂಡು ಕೇಳಿದ, ವಿಚಿತ್ರಗಳನ್ನು ತಮತಮಗೆ ಆಡುತ್ತಾ. ಅದು ಊರೆಲ್ಲ ಒಂದೇ ಗಳಿಗೆಯಲ್ಲಿ ಕಾಳ್ಗಿಚ್ಚಿನಂತೆ ಹಬ್ಬಿತ್ತು! ಇದೇನೂ ತಿಳಿಯದೆ. ಎಂದಿನಂತೆ ತಾನು ಸಮರ್ಥನಾಗಿರುವುದಾಗಿಯೇ ಭಾವಿಸಿದ್ದ ಇಲ್ವಲ. ಇಲ್ಲಿ ಅಗಸ್ತ್ಯರನ್ನು ಬೈಯ್ಯುತ್ತಾ, ಬಹುದಿನದ ಒಡಲ ಸಂಕಟವನ್ನು ತೀರಿಸಿಕೊಳ್ಳುತ್ತಾ, ಕಾಲಕಳೆಯುತ್ತಿದ್ದ !

* * *

ಇಲ್ವಲನ ಬೈಗಳ, ನಿರ್ಣಾಯಕ ಕೊನೆಯ ಘಟ್ಟವನ್ನು ತಲುಪಿತ್ತು. ಕಪಟಿಯೂ, ಕುತಂತ್ರಿಯೂ, ಒಳ್ಳೆಯ ನಾಟಕಕಾರನೂ, ಮಾತುಗಾರನೂ ಆಗಿದ್ದ ಇಲ್ವಲನಿಗೆ ಇನ್ನು ತಾನು ಬ್ರಾಹ್ಮಣಪ್ರಿಯನೆಂಬ ನಾಟಕ ಆಡುವುದರಲ್ಲಿ ಅರ್ಥವಿಲ್ಲವೆಂದೂ, ಅದನ್ನಾರೂ ಇನ್ನು ನಂಬಲಾರರೆಂದೂ, ನಂಬಿದರೂ ಇನ್ನು ತನಗೆ ಪ್ರಯೋಜನವಿಲ್ಲವೆಂದೂ ನಿಶ್ಚಯಿಸಿ,

ಪ್ರಕಟವಾಗಿಯೇ ಅಗಸ್ತ್ಯರನ್ನು ಹೀನಾಪಮಾನವಾಗಿ ಬೈಯ್ಯಲಾರಂಭಿಸಿದ !

**ಇಲ್ವಲ :** "ಎಲೋ ಮಾಯಾವೀ ! ಋಷಿವೇಷದ ಸ್ವಾರ್ಥಿ ! ನಿನಗೆ ನನ್ನ ರಾಜ್ಯದ ಮೇಲೆ ಕಣ್ಣಿದ್ದೇ ಈ ಸೈನ್ಯ ತಂದಿರುವೆ, ನೀನೇ ಚಕ್ರವರ್ತಿಯಾಗುವ ಹವಣಿಕೆಯಿಂದ ಉತ್ತರವನ್ನೆಲ್ಲ ಸುತ್ತೆ ಬಂದೆ ! ಸಹಸ್ರಾರ್ಜುನನ ನೆಪ ಮಾಡಿ ಆ ಇನ್ನೊಬ್ಬ ಮಾಯಾವೀ ಉತ್ತರದ ಅರಸರನ್ನೆಲ್ಲ ಕೊಂದ! ನೀನು ಅವರ ಪತ್ನಿಯರನ್ನೆಲ್ಲ ಕೆಡಿಸುವ ಸುವ್ಯವಸ್ಥೆ ಮಾಡಿಟ್ಟು ಬಂದೆ ! ಈಗ ದಕ್ಷಿಣದ ಈ ದಂಡಯಾತ್ರೆ ! ವಿರಕ್ತನೆಂಬ ವೇಷ ! ಮಾಡುವುದು ಮಾಂಸಾಹಾರ ! "ಸಾಂಸ್ಕೃತಿಕ ಏಕೀಕರಣದ" ಈ ನಾಟಕವನ್ನು ಸಾಕು ಮಾಡು ! ಈ ಬ್ರಾಹ್ಮಣ್ಯವನ್ನು ನಿರ್ನಾಮ ಮಾಡಿದ ಹೊರತು ಉಳಿದವರಿಗೆ ನಿಮ್ಮ ಕಪಿಮುಷ್ಟಿಯಿಂದ ತಪ್ಪಿಸಿಕೊಳ್ಳುವದು ಸಾಧ್ಯವಿಲ್ಲವೆಂದೇ ನಾನು ಅದನ್ನು ಅಳಿಸುವ ವ್ರತ ತೊಟ್ಟು; ನಾನಾ ನಾಟಕ ಹೂಡಿದೆ ! ದೇವತೆಗಳನ್ನು ಕಂಡಿರುವೆನೆಂಬ ಜಂಭದ, ಪೊಳ್ಳುಮಾತಿನ ನಿನಗೆ, ನಿನ್ನ ತಂದೆಗೆ, ನನಗೊಂದು ಸಂತಾನವನ್ನು ಕೊಡುವುದು ಸಾಧ್ಯವಾಗಲಿಲ್ಲ ! ವಿದರ್ಭದ ದೊರೆ ನನ್ನ ತಮ್ಮನಿಗೆ ಮಗಳನ್ನು ಕೊಡುವುದನ್ನು ತಪ್ಪಿಸಿ, ನೀನೇ ಉಪಾಯದಿಂದ ಅವಳನ್ನು ಲಪಟಾಯಿಸಿದೆ ! ಹೊಟ್ಟೆಬಾಕನಾದ ನೀನು ನನ್ನ ತಮ್ಮನ ನರಮಾಂಸವನ್ನೇ ಭಕ್ಷಿಸಿದೆ ! ಉಂಡ ಮನೆಗೇ ದ್ರೋಹ ಮಾಡಿದೆ ! ದಾನ ಕೇಳೆಂದರೆ ಮಿತಿಯಿಲ್ಲದೆ ನನ್ನೆಲ್ಲ ಐಶ್ವರವನ್ನೂ ಬೇಡಿ ಪಡೆದೆ! ಬ್ರಾಹ್ಮಣನ ದುರಾಸೆಗೆ ಇದು ಲೋಕ ಸಾಕ್ಷಿಯಲ್ಲವೇ ? ಆಳುಗರ ಮೇಲೆ ಇಷ್ಟು ದ್ವೇಷ ಬೆಳೆಸಿದ ನೀವು ವೈಶ್ಯರನ್ನೂ ಶೂದ್ರರನ್ನೂ ಹಿಂಸಿಸಲಾರಿರಾ ? ನೋಡು, ನನ್ನ ರಾಜ್ಯ ಎಷ್ಟೊಂದು ಸುಭಿಕ್ಷವಾಗಿದೆ ಎಂದು ! ಪ್ರಜಾಪಾಲನೆಯಲ್ಲಿ ನಾನು ಎಷ್ಟು ಅಕ್ಕರೆ ವಹಿಸಿದ್ದೇನೆ, ರಾಜ್ಯ ಸುತ್ತಿ, ಪ್ರಜೆಗಳನ್ನು ಕೇಳಿ ಬಾ !! ನಿರಪರಾಧಿಯೂ, ನನ್ನ ಧರ್ಮದಂತೆ ಇದ್ದು ಲೋಕವನ್ನು ಆಳಬೇಕೆಂಬ ನನ್ನ ನ್ಯಾಯಸಮ್ಮತ ಆಸೆಯ ಮಿತಿ

ಯಲ್ಲಿಯೂ ಇರುವ ನನ್ನನ್ನು ವಂಚಿಸಿ ನೀನೇ ಚಕ್ರವರ್ತಿಯಾಗುವ ಆಸೆ ಇಲ್ಲದಿದ್ದರೆ, ಈ ಅಕ್ರಮಗಳನ್ನೇಕೆ ಮಾಡುತ್ತಿದ್ದೆ ? ನಿನ್ನ ಹಿಂಬಾಲಕರಾದ ಈ ತಿಂಡಿಪೋತರು. ಹೊಟ್ಟೆಬಾಕರು ಭೂಭಾರವಲ್ಲವೆ ? ಈಗಲಾದರೂ ನಿನಗೆ ನಾಚಿಕೆಯುಂಟೆ ?"

ಅಗಸ್ತ್ಯಶಿಷ್ಯರು ಕೋಪಗೊಂಡು ಇಲ್ವಲನನ್ನು ಕೊಲ್ಲಲು ಮುಂದಾದರು ! ಅಗಸ್ತ್ಯರು ಅವರನ್ನು ಹೀಗೆಂದರು ;

**ಅಗಸ್ತ್ಯ** : "ಬುದ್ಧಿಹೀನನಾದ ನಿನ್ನನ್ನು ಕಂಡು ಒಮ್ಮೊಮ್ಮೆ ನನಗೆ ಕನಿಕರ ಬರುತ್ತದೆ. ನಾನು ಬ್ರಾಹ್ಮಣ. ಸಕಲ ಜೀವಿಗಳಿಗೆ ಲೇಸನ್ನೇ ಕೋರಬೇಕಾದುದು ನನ್ನ ಕರ್ತವ್ಯ. 'ಬ್ರಾಹ್ಮಣನೆಂದರೆ ಅರಸನು ದುಷ್ಟನಾದರೂ ಶಿಷ್ಟನಾದರೂ ಪಚ್ಚಿಕೊಳ್ಳದೆ. ಲೋಕಕೆಟ್ಟರೂ ಸುಮ್ಮನಿರುತ್ತಾ, ಆತ್ಮವಂಚಕನಾಗಿರಬೇಕಾದ ಗೊಡ್ಡ, ತಟಸ್ಥ' ಎಂಬ ಕಲ್ಪನೆಯ ದೃಷ್ಟಿಯಿಂದ ನನ್ನನ್ನಳೆಯಬೇಡ ! ಅಗಸ್ತ್ಯನಿಗೆ ಕಾರ್ಯ ಹಚ್ಚಿದವನೇ ನೀನು ಮತ್ತು ನಿನ್ನಂಥ ದುಷ್ಟರಾಜಕಾರಣಿಗಳು ! ಉತ್ತರ ದಕ್ಷಿಣವನ್ನಲ್ಲದೆ, ಅಗಸ್ತ್ಯ, ಹದಿನಾಲ್ಕು ಲೋಕಗಳನ್ನೂ ಈ ವಿಷಯದಲ್ಲಿ ಸುತ್ತಿ ಬಂದಾನು ! ಪರಶುರಾಮರಿಗೆ ಕೆಲಸ ಹಚ್ಚಿದವನೂ ನಿನ್ನಂಥ ಒಬ್ಬ ಸ್ವಾರ್ಥಿ. ಅಧರ್ಮಿ ರಾಜಕಾರಣಿಯೇ ! ಋಷಿ, ಲೋಕವಿರಕ್ತನಲ್ಲ ! ಅವನು ಲೋಕಪ್ರವರ್ತಕ ! ನಾವು ಬಿಟ್ಟದ್ದು ಭೋಗವನ್ನೇ ಹೊರತು ಲೋಕಾಸಕ್ತಿಯನ್ನಲ್ಲ ! ನಮ್ಮ ದೇವತಾ ಉಪಾಸನ, ತಪಸ್ಸು, ತ್ಯಾಗಗಳು ಈ ಲೋಕವನ್ನು ಸರಿಯಾಗಿ ನಡೆಸುವುದಕ್ಕಾಗಿಯೇ ಹೊರತು ಅದನ್ನು ನಾಶಪಡಿಸುವುದಕ್ಕಲ್ಲ. ದೇವರು ಈ ನಿನ್ನ ದುಷ್ಟ ಬುದ್ಧಿಯನ್ನೂ, ದುಷ್ಟರಾಜಕಾರಣವನ್ನೂ ಬೆಳೆಸಲು ನಿನಗೆ ಸಂತಾನ ಬೇರೆ ಕೊಡಬೇಕಾಗಿತ್ತೆ ? ಯಾರಿಗೆ ಏನು ಕೊಡಬೇಕು ಬಿಡಬೇಕು ಎಂಬುದು ಅವನ ಸ್ವಾತಂತ್ರ್ಯದ ವಿಷಯ. ಋಷಿ ಅದರಲ್ಲಿ ಅಡ್ಡ ಪ್ರವೇಶಿಸಲಾರ ! ಇನ್ನು ನಿನ್ನ ತಮ್ಮನನ್ನು ಕೊಂದವನು ನೀನೇ ಹೊರತು ನಾನಲ್ಲ !

(ಆ ಹೊತ್ತಿಗೆ ವಾತಾಪಿಯ ಹೆಂಡತಿಯೂ, ಇಲ್ವಲನ ಹೆಂಡತಿಯೂ ವಾತಾಪಿಯ ಎಂಟು ವರ್ಷದ ಬಾಲಕನೂ ಐದು ವರ್ಷದ ಮಗಳೂ ಅಲ್ಲಿಗೆ ಪರಿವಾರದೊಡನೆ ಬಂದು, ಮಾತು ಕೇಳುತ್ತಿರುತ್ತಾರೆ! ವಾತಾಪಿಯ ಹೆಂಡತಿ, ತನ್ನ ಗಂಡನನ್ನು ಕೊಂದವನು ಅಗಸ್ತ್ಯನಲ್ಲವೆಂದೂ, ಇಲ್ವಲನೇ ಎಂದೂ ತಿಳಿದು ಅಲ್ಲೇ ಮೂರ್ಛಿತಳಾಗುತ್ತಾಳೆ.)

ಅಗಸ್ತ್ಯ, ಇಲ್ವಲರ ಗಮನ ಅತ್ತ ಹರಿಯುತ್ತದೆ. ಇಲ್ವಲ ನಾಚುತ್ತಾನೆ, ತಲೆ ತಗ್ಗಿಸುತ್ತಾನೆ.

**ಅಗಸ್ತ್ಯ** ; ( ಮುಂದುವರೆದು ) "ದುಷ್ಟ ರಾಜಕಾರಣಿಯು, ಹೆಂಡತಿಯನ್ನೂ ಬಲಿಕೊಡುತ್ತಾನೆ, ತಮ್ಮನನ್ನೂ ಮಕ್ಕಳನ್ನೂ ಸಹ ಎಂಬುದಕ್ಕೆ, ಎಲೋ ಸ್ವಾರ್ಥಿ! ನೀನೇ ಉದಾಹರಣೆ! ಅವನನ್ನು ಕೊಂದು,ಬಡಿಸಿ, ನನ್ನನ್ನೂ ನನ್ನ ಐನೂರು ಶಿಷ್ಯರನ್ನೂ ಕೊಲ್ಲಬೇಕೆಂದಿದ್ದೆಯಲ್ಲವೆ? ಅವನನ್ನು ಜೀರ್ಣಿಸಿಕೊಳ್ಳುವ ಶಕ್ತಿ ನನಗೆ ಮಾತ್ರ ಇದ್ದದ್ದರಿಂದ ಅದನ್ನೆಲ್ಲ ನಾನೇ ತಿನ್ನಬೇಕಾಯಿತು! ಹಾಗೂ ಅದನ್ನು ನಾನು ತಪಃಶಕ್ತಿಯಿಂದ ಸಾತ್ವಿಕಾಹಾರವನ್ನಾಗಿ ಪರಿವರ್ತಿಸಿಕೊಂಡೆ! ನೀನೂ ನೋಡಿದೆ! ಸುಳ್ಳು ಅಪಪ್ರಚಾರ ಏಕೆ ನಡೆಸುವೆ? ನಾನು ನಿನ್ನಲ್ಲಿ ಐಶ್ವರ್ಯ ಕೇಳಿದ್ದು ನನಗಾಗಿ ಅಲ್ಲ! ಲೋಕದ ಹಿತಕ್ಕಾಗಿ ಈಗಲೂ ನೀನು ಆರ್ಯಮಾರ್ಗಾವಲಂಬಿಯಾಗಿ, ಲೋಕ ಹಿತಕ್ಕಾಗಿ, ನಿನ್ನನ್ನು ಮುಡಿಪಿಟ್ಟು ಧರ್ಮ ಬಿಡದೆ ನಡೆಯುವೆಯಾದರೆ ಅದನ್ನೆಲ್ಲ ಮತ್ತೆ ನಿನಗೇ ಕೊಡುತ್ತೇನೆ. ಆದರೆ ಆಸುರೀ ಮಾರ್ಗದಲ್ಲಿ ಹೊರಟು ನೆಲೆ ನಿಂತ ನಿನಗೆ ಈ ದುರ್ವಾಸನೆಗಳು ಬಿಡಲಾರವು. ಅರಸು ಆದವನು ಕೆರೆ ಕಟ್ಟೆ ಕಾಲುವೆ ಕಟ್ಟಿಸಿದರೆ ಸಾಲದು. ಜನರ ಭೌತಿಕ ಸುಖಜೀವನವನ್ನು ಅವನು ಉತ್ತಮ ಪಡಿಸಿದರೆ ಸಾಲದು. ಆ ಜನ ಜೀವನದಲ್ಲಿ ಧರ್ಮ ನೆಲೆಸುವಂತೆ ಮಾಡಬೇಕಾದುದೂ ಅವನ ಕರ್ತವ್ಯ! ಶಂಬರಾಸುರ ತನ್ನ

ಆರ್ಥಿಕ ನೀತಿಯಲ್ಲಿ ಕೈ ಬಿಟ್ಟುದು ಇದನ್ನೇ ! ಸುಮ್ಮನೆ ತಿಂದು ಎರಡು ಹೊಟ್ಟೆ ಬೆಳೆಸಿ ಸಾಯುವ ಹಂದಿಗಳಿಗೂ ಮನುಷ್ಯ ಪಶುಗಳಿಗೂ ಏನು ವ್ಯತ್ಯಾಸ? ಮನು ರೀತಿ ಅದಲ್ಲ ! ನಿನ್ನ ರಾಜ್ಯದಲ್ಲಿ ಧರ್ಮ ಬೆಳಿಸಲು ನೀನೇನು ಮಾಡಿರುವೆ ? ನಿನ್ನ ಯಾಗ ಯಜ್ಞದ ನಾಟಕಗಳು ಬ್ರಾಹ್ಮಣ ರನ್ನು ಸಾಮೂಹಿಕವಾಗಿ ಸಾಯಿಸುವುದಕ್ಕಾಗಿಯೇ ಹೊರತು, ಬೇರಾವ ಪುರುಷಾರ್ಥಕ್ಕೂ ಅಲ್ಲವೆಂಬುದನ್ನು ನಿನ್ನ ಪ್ರಜೆಗಳೂ ಬಲ್ಲರು ! ಕೇಳಿ ನೋಡು ! ರಾಜನು ಧರ್ಮಾತೀತನೆನ್ನಬೇಡ ! ಅವನು ಪ್ರಜೆಗಳ ಪ್ರತಿ ನಿಧಿ ಮಾತ್ರವಲ್ಲ ! ದೇವತೆಗಳ, ದೇವರ, ಪ್ರತಿನಿಧಿಯೂ ಹೌದು. ಜನಗಳಿಗೇ ಆ ದೇವತೆಗಳೂ, ದೇವರೂ ಬೇಕಾದರೆ, ಅವರನ್ನು ನಿರಾಕರಿ ಸುವ ರಾಜ ಆಗ ದೇಶದ್ರೋಹಿಯೇ ಆಗುವುದಿಲ್ಲವೆ ? ಶುಕ್ರ, ನಿನಗೆ ಈ ವಿಷಯದಲ್ಲಿ ಬುದ್ಧಿ ಹೇಳಿದನೇ ? ನಿನ್ನನ್ನು ಬಿಟ್ಟೇ ಓಡಿಹೋದ ! ಅವನೀಗ ದೇಶದ್ರೋಹಿ ! ನಾನಲ್ಲ ! ದೇವರು ಎಲ್ಲಿ ಅನ್ನ ಇಟ್ಟಿರು ವನೋ ಅಲ್ಲಿ ಜೀವಿಗಳು ಉಣ್ಣುತ್ತಾರೆ. ನೀನೇ ಅನ್ನಕ್ಕೆಲ್ಲ ಒಡೆಯನೆಂಬ ಭ್ರಾಂತಿಬೇಡ. ನನ್ನಂತಹ ಬ್ರಾಹ್ಮಣ, ದುಷ್ಟ ಅರಸರನ್ನು ದಂಡಿಸು ವುದು ಕರ್ತವ್ಯ. ವೈಶ್ಯ ಶೂದ್ರರು ದಾರಿ ತಪ್ಪಿದರೂ ಅಷ್ಟೆ ! ದುಷ್ಟ ಅಸುರನಾದ ನಿನಗೇಕೆ ಈ ವರ್ಣಗಳ ಗೊಡವೆ ? ಯಾರು ಸಾರ್ವ ಭೌಮನಾಗಬೇಕೆಂದು ತೀರ್ಮಾನಿಸುವವನು ನೀನಲ್ಲ ! ದೇವರು ! ಸಾಮ್ರಾಜ್ಯ ಕಟ್ಟುವುದು ಸ್ವಾರ್ಥದ ಕೋಟೆ ಆಗಬಾರದು; ಅದು ಧರ್ಮದ ಕೋಟೆ, ತ್ಯಾಗತತ್ತ್ವದ ಸಾರ್ವಭೌಮತ್ತ್ವ ಆಗಬೇಕು. ಅದನ್ನು ಆಗಮಾಡಿಸಬೇಕಾದುದು ಬ್ರಾಹ್ಮಣನ ಕರ್ತವ್ಯ ! ನಿನಗಿಂತ ಬಹುಪಾಲು ಹೆಚ್ಚು ಧರ್ಮಾತ್ಮನಾಗಿದ್ದೇ ಬಲಿ ಎಡವಿದ ಕಡೆ. ಬರೀ ಸ್ವಾರ್ಥಿಯಾದ ನೀನು ಹೇಗೆ ಯಶಸ್ವೀ ಆಗುವೆ ? ನಿನ್ನೆಲ್ಲ ಪ್ರಶ್ನೆಗಳಿಗೆ ಉತ್ತರ ಸಿಕ್ಕವೆ, ನೋಡಿಕೋ" ಎಂದು ಅಗಸ್ತ್ಯರು ಉದ್ವೇಗವಿಲ್ಲದೆ, ದೀರ್ಘವಾಗಿಯೇ, ಶಾಂತರಾಗಿ ಉತ್ತರಿಸಿದರು.

ಬೇರೇನೂ ಹೇಳಲು ತೋರದೆ, "ಇವನನ್ನೂ ಈ ಬ್ರಾಹ್ಮಣರನ್ನೂ ಬಂಧಿಸಿ" ಎಂದು ಇಲ್ವಲ ಆಜ್ಞೆ ಮಾಡಿದ! ಅಲ್ಲಿದ್ದ ಕೆಲವೇ ರಾಜಪರಿವಾರದವರಿಗೆ ಪರಿಸ್ಥಿತಿಯು ಅರಿವಿತ್ತು! ಇಲ್ವಲನ ಕಿವಿಯಲ್ಲಿ "ಮಣಿಗ್ರೀವನೂ, ಸೇನೆಯೂ, ಅರಮನೆಯ ರಕ್ಷಕಪಡೆಯೂ, ಎಲ್ಲರೂ ಓಡಿ ಹೋದರು!" ಎಂದು ಒಬ್ಬ ಉಸುರಿದ! ಕಿಡಿಕಿಡಿಯಾದ ಇಲ್ವಲ ಅಗಸ್ತ್ಯರನ್ನು ಕೊಲ್ಲಲು ತನ್ನ ಕತ್ತಿಯನ್ನೇ ಮೇಲೆತ್ತುತ್ತಾನೆ. ಮಹರ್ಷಿ "ಹುಂ"ಕಾರ ಮಾಡಿ, ಆ ಎತ್ತಿದ ಕೈ ಕೆಳಗೇ ಬರದಂತೆ ಸ್ತಂಭಿಸುತ್ತಾನೆ! ಇಲ್ವಲ ಸಿಡಿಗುಟ್ಟಿದಾಗ ಮತ್ತೆ ಮಂತ್ರೋಕ್ತವಾಗಿ ಅಗಸ್ತ್ಯರು "ಹುಂ"ಕಾರ ಮಾಡಿದಾಗ, ರಕ್ತಕಾರುತ್ತಾ ಕೆಳಗೆ ಬಿದ್ದು ಸಾಯುತ್ತಾನೆ! ಆ ವೇಳೆಗೆ ಅಲ್ಲಿಗೆ ಒಳ ಬಂದ ಗೊಂಡರು ಆ ಶರೀರವನ್ನು ಚೂರುಚೂರಾಗಿ ಕತ್ತರಿಸಿ, ನಾಯಿ ನರಿಗಳಿಗೆ ಹಾಕುತ್ತಾರೆ!

ಭಯ ಮೂರ್ಛಿತಳಾದ ರಾಣಿಯನ್ನೂ ವಾತಾಪಿಪತ್ನಿಯನ್ನೂ, ಅಗಸ್ತ್ಯರೂ ಲೋಪಾಮುದ್ರೆ ಮತ್ತಿತರ ಋಷಿಪತ್ನಿಯರೂ ಸಂತೈಸುತ್ತಾರೆ.

ವಾತಾಪಿಯ ಮಗ ಮಣಿಮಂತನಿಗೆ ಅಗಸ್ತ್ಯರು ಮರುದಿನವೇ ಪಟ್ಟಗಟ್ಟುತ್ತಾರೆ!

* * *

ಇಲ್ವಲ ಸತ್ತು ಈಗ ಹನ್ನೆರಡು ವರ್ಷಗಳಾಗಿದೆ! ಅಗಸ್ತ್ಯ ಲೋಪಾಮುದ್ರೆಯರಿಗೆ ಈಗ ಐದು ವರ್ಷದ ಮಗ ಹುಟ್ಟಿ ಬೆಳೆಯುತ್ತಿದ್ದಾನೆ. ಇಧ್ಮವಾಹನೆಂಬ ಹೆಸರಿಗೆ ಸರಿಯಾಗಿ ಅವನು ಅಗಸ್ತ್ಯರ ದಿನನಿತ್ಯದ ಸಮಿತ್ತುಗಳನ್ನು ಶ್ರದ್ಧೆಯಿಂದ ತರುತ್ತಾನೆ. ಕೃಷ್ಣಾನದೀ ತೀರದಲ್ಲಿ ಈಗ ಹೊಸ ಅಗಸ್ತ್ಯಾಶ್ರಮ ಸ್ಥಾಪಿತವಾಗಿರುತ್ತದೆ. ಆ ಗೋದಾವರೀ

ತೀರದ ಪಂಚವಟಿಯ ಆಶ್ರಮವೂ ಈಗ ಮತ್ತೆ ನಿರ್ಮಿತವಾಗಿ, ಅಗಸ್ತ್ಯರು ಅದನ್ನೂ ಚೆನ್ನಾಗಿ ನಡೆಸುತ್ತಿದ್ದಾರೆ. ಆದರೆ ವಿಂಧ್ಯವನ್ನು 'ಮಲಗಿಸಿ' ಇತ್ತ ಬಂದವರು ಮತ್ತೆ ಉತ್ತರಕ್ಕೆ ಹೋಗಿಯೇ ಇಲ್ಲ.

ಅತ್ರಿ, ಗೌತಮ, ಕಣ್ವ, ಭರದ್ವಾಜ, ಆಂಗೀರಸ, ಭೃಗು, ಕುತ್ಸ, ಗರ್ಗ, ವಸಿಷ್ಠ, ಕಶ್ಯಪ ಮೊದಲಾದ ಮಹರ್ಷಿಗಳೆಲ್ಲ ತಂಡತಂಡವಾಗಿ, ನಿರ್ಭೀತರಾಗಿ ಈಗ ದಕ್ಷಿಣದ ನದೀ ದಂಡೆಗಳಲ್ಲಿ ಶಿಷ್ಯರೊಡನೆ ನೆಲೆಸಿ ಆಶ್ರಮಗಳನ್ನು ಮಾಡಿಕೊಂಡು, ಗುರುಕುಲಗಳನ್ನು ಸ್ಥಾಪಿಸಿ, ಅಧ್ಯಯನ ಅಧ್ಯಾಪನೆ ಮಾಡುತ್ತಿದ್ದಾರೆ.

ಕಿಷ್ಕಿಂಧೆಯಲ್ಲಿ ಈಗ ಋಕ್ಷರಜಸ್ಸು ಕಾಲವಾಗಿ ಆವನ ಹಿರಿಯ ಮಗ ವಾಲಿ ರಾಜ್ಯಭಾರ ನಡೆಸುತ್ತಿದ್ದಾನೆ.

ಲಂಕೆಯಲ್ಲಿ ರಾವಣ ಅಧಿಕಾರಕ್ಕೆ ಬಂದಾಗಿದೆ ! ಕುಬೇರನನ್ನು ಅವನು ಉತ್ತರಕ್ಕೆ ಓಡಿಸಿ ಆಗಿದೆ. ದ್ರಮಿಡದೊರೆ ಕುಮಾರ ವರ್ಮ ಮತ್ತು ಪಾಂಡ್ಯ ಅರಸರು—ಸಮುದ್ರ ಮಧ್ಯದಲ್ಲಿ ಅಡಗಿ ಕೊಂಡ ಮಣಿ ಗ್ರೀವ (ಇಲ್ವಲನ ಸೇನಾಪತಿ) ಮತ್ತು ಅವರಿಗೆ ಆಶ್ರಯ ಕೊಟ್ಟ ಅಸುರರು, ಕಾಲಕೇಯರು–ಇವರ ಭಯೋತ್ಪಾದಕ ಚಟುವಟಿಕೆಗಳಿಗೆ ಬಲಿಯಾಗಿದ್ದಾರೆ !

ಅಗಸ್ತ್ಯರು ಅಲ್ಲಿ ರಾಜರ ಪುತ್ರರಿಗೆ ಪಟ್ಟಗಟ್ಟಿ ಈಗ ಕುಮಾರ ವರ್ಮನ ರಾಜಧಾನಿಯ ಬಳಿಯೇ ನೆಲೆನಿಂತಿದ್ದಾರೆ. ಕಾಲಕೇಯರನ್ನು ಹೇಗೆ ನಿಗ್ರಹಿಸಬೇಕೆಂಬ ಚಿಂತೆ ಮಹರ್ಷಿಯನ್ನು ಬಹಳ ಕಾಡುತ್ತದೆ.

*    *    *

ಇಲ್ವಲನನ್ನೂ ವಾತಾಪಿಯನ್ನೂ ಸುಲಭವಾಗಿ ಜೀರ್ಣಿಸಿಕೊಂಡ ಅಗಸ್ತ್ಯರನ್ನು ಈ ಕಾಲಕೇಯರೊಡಗೂಡಿದ ಮಣಿಗ್ರೀವನ ಸೈನ್ಯ ಹನ್ನೆರಡು ವರ್ಷ ಕಾಡಿತೆಂಬುದು ಮಹರ್ಷಿಶಿಷ್ಯರಿಗೆ ಆಶ್ಚರ್ಯಕರವಾಗಿ ಕಂಡಿತು ! ಅವರು ಎಲ್ಲಿರುವರೆಂಬುದೇ ತಿಳಿಯಲಿಲ್ಲ !

ಒಂದು ದಿನ ಅಗಸ್ತ್ಯರು ಕುಶಲನಾದ ಚಾಕ್ರಾಯಣನನ್ನು ಕರೆದು ಹೀಗೆ ಮಾತನಾಡಲಾರಂಭಿಸಿದರು.

**ಅಗಸ್ತ್ಯ :** "ವತ್ಸ ! ಆ ದುಷ್ಟರ ಸುಳಿವೇನಾದರೂ ದೊರೆಯಿತೆ ? ನಾನು ದಕ್ಷಿಣದತ್ತ ಬಂದ ಕಾರ್ಯ ಇನ್ನೂ ಪೂರ್ಣವಾಗದೇ ಮನಸ್ಸು ವ್ಯಗ್ರವಾಗಿದೆ ! ಪೂರ್ವ ತೀರದ ನಾನಾ ಜನಾಂಗಗಳ, ಜಾತಿಗಳ ಜನರೊಡನೆ ನಮ್ಮ ಜನ ಸಂಪರ್ಕ ಬೆಳೆಸಿದ್ದಾರೆಯೆ ? ಅವರ ಭಾಷೆಗಳನ್ನು ಕಲಿತಿದ್ದಾರೆಯೇ ? ಮಾಹಿತಿ ಸಂಗ್ರಹ ಎಷ್ಟಾಗಿದೆ ?''

ಚಾಕ್ರಾಯಣ ನಿಧಾನವಾಗಿ, ವಿಸ್ತಾರವಾಗಿ ಉತ್ತರಿಸಿದ ! ಅದರ ಸಾರಾಂಶ ಹೀಗೆ : ಪೂರ್ವದ ಸಮುದ್ರತೀರದ ಮೀನುಗಾರರು ದಿಢೀರನೆ ಹಣವಂತರಾಗುತ್ತಿದ್ದಾರೆ ! ಸಮುದ್ರದದಂಚಿನ ಗ್ರಾಮಗಳಲ್ಲಿ ಜನ-ಜನರ ನಡುವೆ ಘರ್ಷಣೆಗಳಾಗುತ್ತಿವೆ. ಮೀನುಗಾರರಲ್ಲಿ ಕೆಲವರು ಅಗಸ್ತ್ಯ ಶಿಷ್ಯರ ಸ್ನೇಹವನ್ನು ಒಪ್ಪಿಕೊಂಡು ನಡೆಯುತ್ತಿದ್ದಾರೆ, ಇವರಿಗೂ ಹಾಗೆ ಒಪ್ಪದವರಿಗೂ ಪದೇ ಪದೇ ಜಗಳ ಆಗುತ್ತಿದೆ ! ಕೆಲ ಊರುಗಳಲ್ಲಿ ಸಮುದ್ರತೀರದಲ್ಲಿ–ಸರ್ಪದೇವತೆಗಳನ್ನು ಪೂಜಿಸುವ ಜನಾಂಗದವರೂ ಇದ್ದಾರೆ. ಇವರಿಗೂ ಮೀನುಗಾರರಿಗೂ ಹಳೆಯ ತಲೆಮಾರುಗಳಿಂದ ಹಗೆಯುಂಟು. ನಮ್ಮವರು ಇವರ ಸಖ್ಯ ಬೆಳೆಸಿದ್ದಾರೆ. ಅವರ ಭಾಷೆ, ರೀತಿ ನೀತಿಗಳನ್ನೂ ಅರಿತಿದ್ದಾರೆ. ಕಾಲಕೇಯರೆಂಬುವರು ಮಾತ್ರ ಎಲ್ಲೂ ಕಾಣಬರುವುದಿಲ್ಲ ! ಮಣಿಗ್ರೀವ ಮತ್ತು ಅವನ ಗುಪ್ತ ಸೈನ್ಯದ ನೆಲೆಯ ಬಗೆಗಾಗಲಿ, ಅವರ ಮಾಹಿತಿಯಾಗಲಿ ಏನೂ ತಿಳಿಯದು. ಗ್ರಾಮ

ಗಳಲ್ಲಿ ದನಗಳು, ಕೋಳಿಗಳು, ಆಡುಗಳು ಮಾಯವಾಗುವುದೂ, ಆಹಾರ ಪದಾರ್ಥಗಳು ಕಳವಾಗುತ್ತಿರುವುದೂ ಸಾಮಾನ್ಯವಾದ ಮಾಮೂಲು ಸಮಾಚಾರ !

ಇದನ್ನು ಕೇಳಿದ ಅಗಸ್ತ್ಯರು ಸ್ವಯಂ ಇದನ್ನು ಪತ್ತೆ ಮಾಡಲ ಮುಂದಾಗಿ, ಸಮುದ್ರತೀರಕ್ಕೆ ಚಾಕ್ರಾಯಣ ಮೊದಲಾದ ಆಪ್ತ ರೊಡನೆ ವೇಷಾಂತರದಲ್ಲಿ ಹೊರಟರು !

ಒಂದು ಸಮುದ್ರ ತೀರದ ಗ್ರಾಮಕ್ಕೆ ಬಂದು ವೇಷಾಂತರದಲ್ಲಿ, ಗ್ರಾಮ ಮುಖಂಡರೊಡನೆ – ಅಗಸ್ತ್ಯಶಿಷ್ಯರಿಗೆ ಪೂರ್ವ ಪರಿಚಯವೂ ಸಖ್ಯವೂ ಇದ್ದ ಒಬ್ಬನೊಡನೆ, ಆಗಸ್ತ್ಯರು ಏಕಾಂತವಾಗಿ ಮಾತಾಡಿದರು. ಕಳುವಾದ ಪ್ರಾಣಿಗಳು, ಆಹಾರಗಳು ಎತ್ತ ಹೋಗುತ್ತಿವೆಯೆಂದು ಗ್ರಾಮಮುಖಂಡನು ಗಮನಿಸಿರುವನೇ ? ಎಂದು ಕೇಳಿದರು. "ಸಮುದ್ರ ತೀರದವರೆಗೆ ಹೋಗುತ್ತದೆ ! ಅಲ್ಲಿ ಮಾಯವಾಗುತ್ತದೆ !'' ಎಂದು ಅವನುತ್ತರಿಸಿದ.

ಆ ರಾತ್ರಿ ಅಗಸ್ತ್ಯರು ವರುಣೋಪಾಸನೆ ಮಾಡಿದರು : ವರುಣದೇವ ಕಾಣಿಸಿ ಕೊಂಡ

**ಅಗಸ್ತ್ಯ** : "ವರುಣದೇವ ! ನಿನ್ನ ಅಂಶದಿಂದ ನಾನು ಹುಟ್ಟಿದ್ದಾಗಿ ಹೇಳುವ ಜನ ನನ್ನನ್ನು ಮೈತ್ರಾವರುಣಿ ಎನ್ನುತ್ತಾರೆ ! ನೀನು ನನಗೆ ತಂದೆ ! ನಾನು ನಿನ್ನ ಮಗ ! ಮಗನ ಶತ್ರುಗಳನ್ನು ತಂದೆಯೇ ಸಂರಕ್ಷಿಸಿದರೆ ಹೇಗೆ ?"

**ವರುಣ** : ''ನಾನು ಯಾರನ್ನೂ ಸಂರಕ್ಷಿಸುತ್ತಿಲ್ಲ ! ನಿನ್ನ ಶಿಷ್ಯರು ನಿನ್ನ ವೈರಿಗಳನ್ನು ಸರಿಯಾಗಿ ಹುಡುಕುತ್ತಿಲ್ಲ ! ಅವರಿಲ್ಲದ ಕಡೆಯಲ್ಲಿ ಹುಡುಕಿದರೆ, ಅವರು ಹೇಗೆ ಸಿಗಬೇಕು ? ಪೂರ್ವ ಸಮುದ್ರತೀರ ವಿಚಿತ್ರವಾದದ್ದು ! ಸಮುದ್ರಕ್ಕೆ ಹೊಂದಿಕೊಂಡಂತೆಯೇ ಪಲವೆಡೆ

ಬೆಟ್ಟಗಳೂ ಅವುಗಳೊಳಗೆ ಸಮುದ್ರದಿಂದ ನೇರವಾಗಿ ಪ್ರವೇಶಿಸ ಬಹುದಾದಂತಹ ಗವಿ, ಗುಹೆಗಳೂ ಇವೆ! ಸಮುದ್ರ ತೀರದ ಹಳ್ಳಿಗಳಿಂದ ಅಲ್ಲಿಗೆ ಆಹಾರ ಬರುತ್ತಿದೆ! ಆ ಗವಿಗಳಲ್ಲಿ ಯಾರು ಅಡಗಿರುವರೆಂಬುದನ್ನು ನಿನ್ನ ಶಿಷ್ಯರು ಏಕೆ ಪತ್ತೆ ಮಾಡಲೊಲ್ಲರು? ಗ್ರಾಮದ ಜನರ ಜೊತೆ ನಿಕಟ ಸಂಪರ್ಕವಿಟ್ಟು, ಅವರನ್ನೊಲಿಸಿಕೊಂಡು ಇದನ್ನು ಮಾಡಬೇಡವೇ? ರಾತ್ರಿಯಾದೊಡನೆ ಬೃಹದಾಕಾರದ ಕೆಲವು ಹಡಗುಗಳು ಪೂರ್ವತೀರಕ್ಕೆ ಎಲ್ಲಿಂದ ಬರುತ್ತವೆ? ಹಗಲಾಗುವುದಕ್ಕೆ ಮುಂಚೆಯೇ ವಾಪಸ್ಸು ಹೊರಡುವ ಅವು ಎಲ್ಲಿ ಅಡಗುತ್ತವೆ? ಈ ಹಡಗುಗಳ ಮಾಲಿಕರಾರು? ಅವು ಏನನ್ನು ತರುತ್ತವೆ? ಇವನ್ನೆಲ್ಲ ವರುಣದೇವನೇ ನಿನಗೆ ಹೇಳಬೇಕೆ? ವತ್ಸ! ಸ್ಥಳದ ಜನರ ಸಂಪರ್ಕ ವಿಲ್ಲದೆ, ಅವರ ಒಲವು, ನಂಟು ಹೇಗೆಬೆಳೆಯುತ್ತದೆ,? ಇದನ್ನೆಲ್ಲ ಹೇಗೆ ಪತ್ತೆಮಾಡುವೆ? ಶಿವಗುರುಗಳೊಡನೆ ಮಾತಾಡು. ಒಂದುದಾರಿ ತೆರೆದು ಕೊಳ್ಳುತ್ತದೆ! ತೀರದಲ್ಲಿ ಹಡಗನ್ನು ನಿರ್ಮಿಸುವವರಾರೆಂಬುದನ್ನು ಅರಿತುಕೋ. ದ್ರಮಿಡ ದೊರೆಯ, ಪಾಂಡ್ಯ ಅರಸನ ಸಹಾಯ ಪಡೆ. ಕಾಲಕೇಯರಿಗೆ ಆಯುಷ್ಯ ಮುಗಿಯುತ್ತ ಬಂದಿದೆ. ಸಕಾಲವಿದು. ಬೇಗ ಮಾಡು" ಎಂದು ಹೇಳಿ ವರುಣದೇವ ಅಂತರ್ಧಾನನಾದ.

ಅಗಸ್ತ್ಯರು ಚಕಿತರಾದರು! ಮರುದಿನ ಕುಮಾರವರ್ಮನ ಪುತ್ರ, ಪೊಸದೊರೆಯಾದ ದಂತಿವರ್ಮನ ಸಭೆಗೆ ನಡೆದರು. ಅಲ್ಲಿ ಶಿವಗುರು ಗಳನ್ನೂ ಭೇಟಿಯಾದರು. ಸಮುದ್ರತೀರವಾಸಿಗಳಲ್ಲಿ ಹಲವರು ಶೈವಸಂಪ್ರದಾಯದವರೂ ಆಗಲೇ ಇದ್ದರು. ಅಗಸ್ತ್ಯರು ಮೈಗೆಲ್ಲಾ ಯಜ್ಞಶೇಷವಾದ ಭಸ್ಮವನ್ನು ಲೇಪಿಸುತ್ತಿದ್ದುದರಿಂದ ಅವರೂ ಶೈವ ರೆಂದೇ ಅಲ್ಲಿನವರು ಭಾವಿಸಿ ಗೌರವಿಸಲಾರಂಭಿಸಿದರು. ಶಿವಗುರುಗ ಳೊಡನೆ ಎಲ್ಲಾ ವಿಚಾರವನ್ನೂ ಪೂರ್ತಿ ಹೇಳದೆ, ಅಗಸ್ತ್ಯರು ಪೂರ್ವ ತೀರದ ಹಲವು ಭಾಗಗಳನ್ನು ಅವರೊಡನೆ ಸುತ್ತಿಬರಲು ಆಶಿಸಿದರು!

ದಂತಿವರ್ಮ ಈಗ ಸುಮಾರು ಇಪ್ಪತ್ತೆಂಟೋ ಮೂವತ್ತೋ ವರ್ಷ ವಯಸ್ಸಿನವನು - ತನ್ನ ಸೈನ್ಯವನ್ನು ಗುಪ್ತವೇಷದಲ್ಲಿ ಮಹರ್ಷಿಯ ಸೇವೆಗೆ ಜೊತೆಯಲ್ಲಿ ಕಳುಹಿದ್ದ. ಚಾಕ್ರಾಯಣನ ಸೇನೆಯೂ ಹಾಗೇ ಕೂಡಿಕೊಂಡಿತು !

ಒಂದು ಗ್ರಾಮದಲ್ಲಿ ಕುರಿಯನ್ನು ಕದಿಯುತ್ತಿದ್ದವನೊಬ್ಬ ಸಿಕ್ಕಿ ಬಿದ್ದ ! ಪಕ್ಕದ ಗ್ರಾಮದಲ್ಲಿ ಅದೇ ರಾತ್ರಿ ನಾಲ್ಕು ಎಮ್ಮೆಗಳನ್ನು ಕದಿಯುತ್ತಿದ್ದವನೂ, ಇನ್ನೊಂದು ಹಳ್ಳಿಯಲ್ಲಿ ಆರು ಗೋವುಗಳನ್ನು ಕದಿಯುತ್ತಿದ್ದವನೂ, ಮತ್ತೊಂದರಲ್ಲಿ ದಾಸ್ತಾನಾಗಿದ್ದ ಭತ್ತದ ಚೀಲಗಳನ್ನು ಕದಿಯುತ್ತಿದ್ದವನೂ, ಹೀಗೆ ನಾನಾ ಕಳ್ಳತನದಲ್ಲಿ ಸಿಕ್ಕವರು ಸುಮಾರು ಎಂಬತ್ತು ಜನ ಒಂದೇ ರಾತ್ರಿ ಆ ಹುಣ್ಣಿಮೆಯ ರಾತ್ರಿ ಸಿಕ್ಕಿ ಬಿದ್ದರು ! ಸುಮಾರು ಐವತ್ತು ಹಳ್ಳಿಗಳಲ್ಲಿ ಏಕಕಾಲಕ್ಕೇ ನಡೆಸಿದ ಉಗ್ರ ಶೋಧದ ಪರಿಣಾಮ ಅದಾಗಿತ್ತು.

ಕಳ್ಳರೆಲ್ಲರೂ ಮೀನುಗಾರರೇ ಆಗಿದ್ದರು ! ಕಳ್ಳರಿಗೆ ಸಹಾಯಕರಾಗಿದ್ದವರಲ್ಲಿ ಕೆಲವರು ಶಿವಗುರುಗಳ ಶಿಷ್ಯವರ್ಗದವರೂ, ಸರ್ಪೋಪಾಸಕರೂ, ದೇವೀಉಪಾಸಕರೂ, ಕುಮಾರೋಪಾಸಕರೂ ಇದ್ದರು ! ಶಿವಗುರುಗಳು ಆ ಗ್ರಾಮಗಳ ತಮ್ಮ ಶಿಷ್ಯ ಮುಖಂಡರನ್ನು, ಆ ಆ ಉಪಾಸಕರ ಜನರ ಹಿರಿಯರನ್ನು ಕರೆಸಿ ಅಗಸ್ತ್ಯರ ಮುಂದೆ ನಿಲ್ಲಿಸಿದರು !

ಅಗಸ್ತ್ಯರು ಅವರಿಗೆ ಉಪದೇಶ ಆರಂಭಿಸಿದರು :

**ಅಗಸ್ತ್ಯ** : " ದೇಶಬಾಂಧವರೇ ! ಈ ಕಳ್ಳರಿಗೆ ನೀವೇ ಹೀಗೆ ಸಹಾಯ ಮಾಡಬಹುದೇ ? ಇದರ ಅರ್ಥ ಏನೆಂದು ನಿಮಗೆ ತಿಳಿದಿದೆಯೋ ? ಕದ್ದ ಈ ಮಾಲುಗಳು ಎತ್ತ ಹೋಗುತ್ತಿವೆಯೆಂದು ಬಲ್ಲಿರಾ ? "

**ಒಬ್ಬ ಮುಖಂಡ :** " ಅದೆಲ್ಲ ನಾವರಿಯೆವು ! ನಮಗೆ ಅವರು ಬಹಳ ಪಣ ಕೊಡುತ್ತಾತೆ ! ಹಸಿದ ನಮ್ಮ ದೇಶದ ಬಾಂಧವರೇ ರಹಸ್ಯ ದಲ್ಲಿ ಒಂದು ಕಡೆ ಇರುವುದಾಗಿಯೂ ಉತ್ತರದಿಂದ ವೇಷಾಂತರದಲ್ಲಿ ದಂಡಯಾತ್ರೆ ಬಂದಿರುವ ಒಬ್ಬ ಅಗಸ್ತ್ಯನೆಂಬ ಧೂರ್ತನ ಕಡೆಯುವರೊಡನೆ ಇವರು ಹೋರಾಡುತ್ತಾ, ದೇಶವನ್ನು ಸಂರಕ್ಷಿಸುತ್ತಿರುವುದಾಗಿಯೂ ಇದರಲ್ಲಿ ನಮ್ಮ ನಮ್ಮ ಗ್ರಾಮಗಳ ಸಂರಕ್ಷಣೆಯ ವಿಷಯ ಅಡಗಿರುವು ದಾಗಿಯೂ ಅವರು ಹೇಳುತ್ತಾರೆ. ಅವರು ನಮ್ಮ ಬಾಂಧವರೂ ಹೌದು. ಬಿಟ್ಟರೆ ಹಣ ಹೋಗುತ್ತದೆ ! ಅವರಿಂದ ಕಾಟವೂ ಒದಗುತ್ತದೆ !! ಇತರ ಗ್ರಾಮಸ್ಥರು ನಮಗೆ ಬಹಿಷ್ಕಾರವನ್ನೂ ಹಾಕುತ್ತಾರೆ ! ಈ ದಿನಜಗಳ ದಲ್ಲಿ, ನಮ್ಮ ಕಷ್ಟದಲ್ಲಿ ದಿನಾ ಅರಸರಿಂದಲೋ, ರಾಜಗುರುಗಳಿಂದಲೋ ನಾವು ಸಹಾಯ ಪಡೆಯಲಾಗುತ್ತದೆಯೇ ?"

ಇವನ ದಿಟ್ಟತನಕ್ಕೆ ಮೆಚ್ಚಿ ಅಗಸ್ತ್ಯರು : " 'ಅವರು ಎಂದರೆ ಯಾರು ?" ಎಂದು ಕೇಳಿದರು.

**ಮುಖಂಡ :** "(ಭಯ ಭ್ರಾಂತನಾಗಿ, ಬಾಯಿ ಬಿಡಲು ಹಿಂದೆ ಮುಂದೆ ನೋಡುತ್ತಾನೆ!) ಹೇಗೆ ತಿಳಿಯಬೇಕು ? ನಮ್ಮ ಭಾಷೆಯನ್ನೇ ಆಡುತ್ತಾರೆ ! ನಮ್ಮಂತೆಯೇ ಉಡುಗೆ ತೊಡುಗೆ ಧರಿಸುತ್ತಾರೆ. ಹೇರಳ ಬಂಗಾರ ನಾಣ್ಯಗಳನ್ನು ಕೊಡುತ್ತಾರೆ !"

**ಅಗಸ್ತ್ಯ :** "ಎಲ್ಲಿರುತ್ತಾರೆ?"

**ಮುಖಂಡ :** "ಅದು ನಮಗೆ ಗೊತ್ತಿಲ್ಲ. ಬೆಳದಿಂಗಳು ಚೆನ್ನಾಗಿ ಗಿರುವ ರಾತ್ರಿಗಳಲ್ಲಿ ಹತ್ತಿಪ್ಪತ್ತು ದೊಡ್ಡ ದೋಣಿಗಳು ನಮ್ಮ ಗ್ರಾಮದ ಸಮುದ್ರ ತೀರಕ್ಕೆ ಸರಿರಾತ್ರಿಯಲ್ಲಿ, ಜನ ನಿದ್ರಿಸಿದ ಮೇಲೆ, ಬರುತ್ತವೆ. ನಮ್ಮ ಕೆಲಸ ನಾವು ಮಾಡಿದ ಮೇಲೆ, ಅವು ಮಾಯವಾಗುತ್ತವೆ. !''

**ಅಗಸ್ತ್ಯ :** "ಎಲ್ಲಿಗೆ ?"

**ಮುಖಂಡ ;** "ಹೇಗೆ ಗೊತ್ತು ?"

**ಚಾಕ್ರಾಯಣ :** "ಉಳಿದದ್ದೆಲ್ಲ ಇಷ್ಟು ಚೆನ್ನಾಗಿ ಗೊತ್ತಿರುವ ನಿನಗೆ ಇದೊಂದು ಮಾತ್ರ ಗೊತ್ತಿಲ್ಲವೇ ? ನೀನೇ ಬಾಯಿ ಬಿಡುವೆಯೋ ? ಬಿಡಿಸಬೇಕೋ ?"

**ಮುಖಂಡ :** "ತಿಳಿದದ್ದನ್ನು ಹೇಳಿರುವೆ, ಪ್ರಭು ! ತಿಳಿಯು ದ್ದನ್ನು ಹೇಗೆ ಹೇಳಲಿ ? ನೀವಾಗಿ ಬಾಯಿ ಬಿಡಿಸಿದರೂ ಇಷ್ಟೆ, ನಾವಾಗಿ ಹೇಳಿದರೂ ಇಷ್ಟೆ."

ಅಗಸ್ತ್ಯರು ಶಿವಗುರುಗಳ ಮುಖ ನೋಡುತ್ತಾರೆ! ಅವರು ರಾಜ ಸೇನೆಯ ಮುಖಂಡನ ಮುಖ ನೋಡುತ್ತಾರೆ! ಅವನ ಸನ್ನೆಯಂತೆ ಭಟರು ಬಂದು, ಆ ಗ್ರಾಮಮುಖಂಡನನ್ನು ಹಿಡಿದು, ಒಂದು ದೊಡ್ಡ ಬೊಂಬಿಗೆ ಉದ್ದವಾಗಿ ಬರುವಂತೆ ಕೈಕಾಲು ಸೊಂಟಗಳನ್ನು ಕಟ್ಟಿ, ಕೆಳಗೆ ದೊಡ್ಡ ಬೆಂಕಿಯ ಉರಿ ಹಚ್ಚಿ, ಆ ಕಡೆ ಇಬ್ಬರು ಈ ಕಡೆ ಇಬ್ಬರು ಆ ಬೊಂಬನ್ನು ಹಿಡಿದು, ಹಂದಿಗಳನ್ನು ಸಜೀವವಾಗಿ ಹಿಡಿದು ಸುಡುವಂತೆ, ಸುಡಲು ಎತ್ತುತ್ತಾರೆ ! ಮುಖಂಡನ ಚೀರಾಟ ಗಗನವನ್ನು ಮುಟ್ಟು ತ್ತದೆ ! "ಹೇಳುತ್ತೇನೆ, ಬಿಡಿ'' ಎಂದು ಗೋಗರೆಯುತ್ತಾನೆ. ಭಟರು ಅವನನ್ನು ಕೆಳಗಿಳಿಸುತ್ತಾರೆ. ಚಾಕ್ರಾಯಣ ಬಿಗಿ ಧ್ವನಿಯಲ್ಲಿ ಹೇಳು ತ್ತಾನೆ. " 'ಅವರು' ಎಂದೆಯಲ್ಲ! ಆ ಅವರಿಗಿಂತಲೂ ನಾವು ಹೆಚ್ಚು ಕ್ರೂರಿಗಳೂ ಆಗಬಲ್ಲೆವು, ಬಾಯಿ ಬಿಡದೇ ಹೋದರೆ !! ಬೇಕಾದ ಸಮಾಚಾರವನ್ನೆಲ್ಲ ಸರಿಯಾಗಿ ತಿಳಿಸಿದರೆ ಅವರಿಗಿಂತ ಉದಾರಿಗಳೂ ಆಗ ಬಲ್ಲೆವು. ನೀನೂ ನಮಗೆ ಸಮಾಚಾರ ಕೊಟ್ಟರೆ ಅವರೇನು ಮಾಡು ವರೋ ! ಎಂಬ ಭಯ ನಿನಗೆ ಬೇಡ ! ಅಗಸ್ತ್ಯರ ಹೆಸರನ್ನು ಕೇಳಿರು ವೆಯಾ ?''

ಮುಖಂಡ : "(ಹೆದರಿಕೆಯಿಂದ ಬಾಯಿ, ನಾಲಗೆ ಒಣಗುತ್ತದೆ!) ಹೌದು! ಮಹಾಸ್ವಾಮಿ! ಇಲ್ವಲರಾಜರನ್ನು 'ಹುಂ' ಕಾರದಿಂದ ಮುಗಿಸಿದವರೂ, ವಾತಾಪಿಯನ್ನು ಜೀರ್ಣಿಸಿಕೊಂಡವರೂ ಅವರೇ ಎಂದು ಕೇಳಿ ಬಲ್ಲೆವು! ಅವರೆಲ್ಲಿದ್ದಾರೆ ?"

ಶಾಕಾಯಣ : "ಎಲೋ ಮೂಢ! ಇಲ್ಲಿ ನಿನ್ನೆದುರು ವೇಷಾಂತರದಿಂದ ನಿಂತಿರುವವರೇ ಆ ನಮ್ಮ ಅಗಸ್ತ್ಯರು ! ವಿಂಧ್ಯಪರ್ವತವನ್ನು ರುಳಿಸಿ, ದಕ್ಷಿಣಕ್ಕೆ ದಾರಿ ಮಾಡಿಕೊಂಡವರಿಗೆ, ಈ ಸಮುದ್ರಗಳ್ಳರನ್ನು ಆ—ಪೋಶನ ತೆಗೆದು ಕೊಳ್ಳುವುದು ಕಷ್ಟವೇ ?"

ಮುಖಂಡ ಬೆದರಿ ಸಾಯುವುದರಲ್ಲಿರುತ್ತಾನೆ ! ಅಗಸ್ತ್ಯರೇ ತನ್ನೆದುರು ನಿಂತಿದ್ದಾರೆಂಬುದನ್ನು ಕೇಳಿ ಒಂದು ವಿಚಿತ್ರ ಧೈರ್ಯವೂ ಅವನಿಗೆ ಆಗ ಹುಟ್ಟುತ್ತದೆ.

"ಮಹಾನುಭಾವರೇ ! ಈ ದುಷ್ಟರಿಂದ ಈ ಸಮುದ್ರ ತೀರದ ಬಡಪಾಯಿಗಳನ್ನೂ, ನಿರಪರಾಧೀ ಜನರನ್ನೂ ರಕ್ಷಿಸುವುದಾಗಿ ಮಾತು ಕೊಡಿ, ಎಲ್ಲವನ್ನೂ ಸವಿವರವಾಗಿ ತಿಳಿಸುತ್ತೇನೆ'' ಎನ್ನುತ್ತಾ ಅಳುತ್ತಾನೆ; ಬಂಧನ ಬಿಡಿಸಿದ ಮೇಲೆ ಅಗಸ್ತ್ಯರ ಪಾದಗಳಿಗೆ ಬೀಳುತ್ತಾನೆ.

ಎಲ್ಲರೂ ಗ್ರಾಮದ ಒಂದು ರಹಸ್ಯ ಬೀಡಾರದಲ್ಲಿ ಕುಳಿತ ಮೇಲೆ ಆ ಮುಖಂಡ, ಇತರರೆಲ್ಲರೂ ಹೆದರಿದ್ದ ಆ ಕಳ್ಳರ ಬಗೆಗೆ ಹೇಳುತ್ತಾನೆ. ಇಲ್ವಲನ ಸೇನಾಪತಿಯಂತೆ ! ಮಣಿಗ್ರೀವನಂತೆ ! ದ್ವೀಪಾಂತರಗಳ ದೊರೆಗಳ ಸಹಾಯವನ್ನು ಆಶ್ರಯಿಸಿ ಅವನು ದೊಡ್ಡದೊಡ್ಡ ಹಡಗುಗಳನ್ನು ಸಮುದ್ರ ತೀರಕ್ಕೆ ಬಹು ದೂರದಲ್ಲಿರಿಸಿ, ಅಲ್ಲಿ ತೀರದ ಹಳ್ಳಿಗಳಿಂದ ಬೆದರಿಕೆಗೆ, ಹಣದಾಸೆಗೆ ಬಗ್ಗಿದ, ಮತ್ತು ಅಪಹರಿಸಲ್ಪಟ್ಟ ಯುವ ಮೀನುಗಾರರಿಗೆ, ಇತರ ಜನಾಂಗಗಳ ಯುವಕರಿಗೆ ಸೈನ್ಯ ತರಬೇತಿ ನೀಡುತ್ತಿದ್ದಾ

ನಂತೆ. ಶುಕ್ಲಪಕ್ಷದ ರಾತ್ರಿಗಳು ಸಮೀಪಿಸುತ್ತ ಆ ಹಡಗುಗಳು ಪೂರ್ವ ತೀರವನ್ನು ಸಮೀಪಿಸುತ್ತವೆ! ತಾನೇ ಮುಖಂಡ ಅಂಥ ನಾಲ್ಕಾರನ್ನು ಕಂಡಿದ್ದಾನೆ. ದ್ವೀಪಾಂತರದ ಆ ನಾಯಕರು ಯಮನಂತೆ ಕಾಣುತ್ತಾರೆ! ಕಾಲಶತ್ರು, ಕಾಲನೇಮಿ, ಕಾಲಧ್ವಂಸಿ, ಕಾಲಕಂಟಕ ಎಂಬುವು ಆ ನಾಲ್ವರ ಹೆಸರುಗಳು! ಇನ್ನೂ ಅಂಥ ಎಷ್ಟೊಂದು ನಾಯಕರು ಇರುವರೋ ಗೊತ್ತಿಲ್ಲ. ಬ್ರಹ್ಮದೇಶ (ಈಗಿನ ಬರ್ಮಾ), ಯವದ್ವೀಪ (ಈಗಿನ ಇಂಡೋನೇಸಿಯಾದ ಭಾಗವಾದ ಜಾವಾದ್ವೀಪ) ಸುಮಾತ್ರಾ, ಮಲಯ, ಸಿಂಹಪುರ (ಸಿಂಗಪೂರ) ಮುಂತಾದ ದೂರದೂರದ ದ್ವೀಪಗಳಲ್ಲಿ, ದೇಶ ಗಳಲ್ಲಿ, ಅವರ ಕಡೆಯ ದೊಡ್ಡ ಸೈನ್ಯಗಳೂ ಅರಸರೂ ಇರುವರಂತೆ. ಋಷಿಗಳ ಮಾಂಸ ರುಚಿಯಾಗಿರುವುದೆಂದೂ, ಅಗಸ್ತ್ಯ ಸೈನ್ಯದವರೆಲ್ಲ ಅಂಥ ಋಷಿಗಳೆಂದೂ, ಅವರನ್ನು ಹಿಡಿದು ಕೊಡುವವರಿಗೆ ಭಾರಿ ಬಹುಮಾನ ವುಂಟೆಂದೂ, ಅದಕ್ಕೆ ತರಪೇತಿಯನ್ನು ಈ ಹಡಗುಗಳಲ್ಲಿ ನೀಡಲಾಗುವು ದೆಂದೂ, ಅಲ್ಲಿಗೆ ಜನ, ಆಹಾರ, ಪಶುಪ್ರಾಣಿಗಳನ್ನು ಸಾಗಿಸಲು ದೊಡ್ಡ ದೊಡ್ಡ ದೋಣಿಗಳು ಆಗಾಗ ತೀರಕ್ಕೆ ಬರುವುವೆಂದೂ, ಅವು ಸುಲಭ ವಾಗಿ ದೊರೆತರೆ ತೀರಸ್ಥರು ಸುಖವಾಗಿ ಹಣ ಮಾಡಿಕೊಂಡಿರಬಹು ದೆಂದೂ, ಇಲ್ಲವಾದರೆ ಹಳ್ಳಿಹಳ್ಳಿಗಳೇ ಉರಿದು ಹೋಗುವುದೆಂದೂ, ಯಾರೂ ಅವರನ್ನು ರಕ್ಷಿಸಲಾರರೆಂದೂ ಬೆದರಿಕೆ ಹಾಕುತ್ತಿದ್ದಾರೆಂದೂ ಮುಖಂಡ ವಿವರಿಸಿದ! ಪ್ರತಿಯೊಂದು ಸಮುದ್ರತೀರದ ಹಳ್ಳಿಯಲ್ಲೂ ಇದೇ ನಿಸ್ಸಹಾಯಕ ಸ್ಥಿತಿಯುಂಟೆಂದೂ, ಯಾರೂ ಸುಲಭವಾಗಿ ಬಾಯಿ ಬಿಡುವುದಿಲ್ಲವೆಂದೂ ಸಹ ಹೇಳಿದ.

ಶಿವಗುರುಗಳು ಕೇಳಿದರು; "ನಮ್ಮ ಕುಮಾರವರ್ಮನ ದೊರೆ ಯನ್ನು ಮೋಸದಿಂದ ಕೊಂದವರಾರು?" ಮುಖಂಡ ಹೇಳಿದ: "ಗುರುಗಳೇ! ಈ 'ಅಮರ' ಕಡೆಯವರ ಇನ್ನೊಂದು ಭಾಗ ಈಗ ದೇಶದ ಪ್ರಸಿದ್ಧ ನಗರಗಳಲ್ಲೂ, ಪಟ್ಟಣಗಳಲ್ಲೂ ವ್ಯಾಪಕವಾಗಿ ಹರಡಿ

ಕೊಂಡು, ಸಾಮಾಜಿಕ ಮುಖಂಡರನ್ನು ಅಲ್ಲಲ್ಲಿ ಕೊಲ್ಲುವ ಹವಣಿಕೆಯಲ್ಲಿ ರುತ್ತಾರೆ. ಕೆಲವರು ದೇವೀ ಉಪಾಸಕರ ವೇಷಗಳಲ್ಲೂ, ನಾಗಾರಾಧ ಕರ ವೇಷಗಳಲ್ಲೂ, ಮಾಯಮಂತ್ರ ಮಾಡುವವರ ವೇಷಗಳಲ್ಲೂ ಜನರನ್ನು ವಶೀಕರಿಸಿಕೊಂಡು, ಪ್ರತಿಷ್ಠಿತ ಜನರ ವಸತಿಗಳಲ್ಲೂ, ಸಮಾಜ ದಲ್ಲೂ ಮುಖ್ಯಸ್ಥಾನಗಳನ್ನೂ ಹಿಡಿದಿದ್ದಾರಂತೆ! ಆ ಪೈಕಿ ಒಂದು ಗುಂಪು ಅರಸರನ್ನು ಕೊಂದಿರಬೇಕು! ವಿವರಗಳು ನನಗೆ ಗೊತ್ತಿಲ್ಲ!" ಎಂದು.

ಶಿವಗುರುಗಳು ತಲೆ ಅಲ್ಲಾಡಿಸಿ, 'ಹೌದು' ಎಂಬಂತೆ ನಿಟ್ಟುಸಿರಿಟ್ಟರು! ದೊರೆಗೆ ದೇವಿಯಲ್ಲಿ ಅಪಾರ ಭಕ್ತಿಯಿದ್ದುದನ್ನು ಅರಿತ ಆ ಗುಂಪು, ಯಾವುದೋ ದೂರದ ಗ್ರಾಮದಲ್ಲಿ ವಿಶೇಷವರಪ್ರದಳಾದ, ಜಾಗೃತಳಾದ ದೇವಿಯ ಸಾಂನ್ನಿಧ್ಯವಿರುವುದೆಂಬ ನಂಬಿಕೆ ಹುಟ್ಟಿಸಿ, ಮಡಿಯ, ನಿಯಮಗಳ ಹೆಸರಿನಲ್ಲಿ ಅವರು ಯಾವ ಅಂಗರಕ್ಷಕ ರೊಡನೆಯೂ ಅಲ್ಲಿಗೆ ಬಾರದಂತೆ, ಏಕಾಂತವಾಗಿಯೇ ಬರುವಂತೆ ಮಾಡಿ, ಉಪಾಯದಲ್ಲಿ ಅವರನ್ನು ಅಲ್ಲಿ ಬಲಿಗೊಟ್ಟು "ದೇವಿ ಸಿಟ್ಟಾಗಿರುವಳು" ಎಂದೂ, "ಉತ್ತರದ ವಾಮಾಚಾರಿಗಳು ಯಾರೋ ಈ ಹೇಯಕೃತ್ಯ ವನ್ನೆಸಗಿದರೆಂದು ವದಂತಿ ಹುಟ್ಟಿಸಿದ್ದನ್ನೂ ಶಿವಗುರು ಅಗಸ್ತ್ಯರಿಗೆ ಹೇಳಿದರು!

"ದೊರೆಯಾದವನು, ಮಂತ್ರಿಗಳೊಡನೆ ಆಲೋಚಿಸದೆ, ಹಿರಿಯ ರನ್ನೂ ಗುರುಗಳನ್ನೂ ಕೇಳದೆ ಹೀಗೆ ಮೋಸಕ್ಕೆ ಬಲಿಯಾಗುವುದೇ!" ಎಂದು ಅಗಸ್ತ್ಯರೂ ನಿಟ್ಟುಸಿರಿಟ್ಟರು! ಪಾಂಡ್ಯ ದೊರೆಯೂ ಹಾಗೇ ಸತ್ತದ್ದನ್ನು ಕೇಳಿದ ಮೇಲೆ ಆ ಜಾಲದವರ ತಂತ್ರದಲ್ಲಿ ಕೊಂಚ ಅರಿವು ಅಗಸ್ತ್ಯರಿಗೆ ಏರ್ಪಟ್ಟು, ರಾತ್ರಿ ಇನ್ನಷ್ಟು ವೇಳೆ ಎಲ್ಲರೂ ಚಿಂತಿಸಿ, ಎರಡು ಕಾರ್ಯಾಚರಣೆಯ ಯೋಜನೆಗಳು ರಹಸ್ಯದಲ್ಲಿ ಸಿದ್ಧವಾದವು. ಆಗ ಶಿವ ಗುರುಗಳು ಎದ್ದು ಶಿಬಿರಕ್ಕೆ ಹೊರಟಾಗಿತ್ತು. ನಾಲ್ಕು ಗ್ರಾಮ

ಮುಖಂಡರು, ಚಾಕ್ರಾಯಣ, ಅಗಸ್ತ್ಯ, ದಾರ್ಭಿ, ಮೂಲಾಯನ, ಶಾಂಗರ್ಗರವ ಮತ್ತೊಂದೆರಡು ಶಿಷ್ಯರ ನಡುವೆ ಆ ಯೋಜನೆಗಳು ಗುಟ್ಟಾಗಿದ್ದ, ಬರುವ ಹುಣ್ಣಿಮೆಯಂದು ಒಂದು, ಸಮುದ್ರ ತೀರದಲ್ಲಿ ಕಾರ್ಯಾಚರಣೆಗೆ ಒಳಗಾಗಬೇಕೆಂದೂ, ಮತ್ತೊಂದು, ಅದರ ಮುಂದಿನ ಅಮಾವಾಸ್ಯೆಯೆಂದು ಆಚರಣೆಗೆ ಬರಬೇಕೆಂದೂ ತೀರ್ಮಾನವಾಗಿ, ವಿವರಗಳನ್ನೆಲ್ಲ ಅಗಸ್ತ್ಯರು ಚಾಕ್ರಾಯಣನಿಗೆ ಮಾತ್ರ ದೀರ್ಘವಾಗಿ ತಿಳಿಸಿ, ಉಳಿದ ರಾತ್ರಿಯನ್ನು ಮತ್ತೆ ವರುಣೋಪಾಸನೆಯಲ್ಲಿ ಕಳೆದರು. ಪ್ರತ್ಯಕ್ಷನಾದ ವರುಣ ದೇವತೆ, ಮಹರ್ಷಿಗೆ ಹೀಗೆ ವಚನವಿತ್ತ !

"ವತ್ಸ ! ನಿನ್ನ ಲೋಕಹಿತಕಾರ್ಯದಲ್ಲಿ ನನ್ನ ಪಾಲೂ ಇರುವುದಾದರೆ ನಾನೆಷ್ಟು ಭಾಗ್ಯಶಾಲಿ ! ನನ್ನ ಪಾಶವನ್ನೂ ಯಾರೂ ಮೀರುವಂತಿಲ್ಲ ಎಂದು ನೀನೇ ಕೊಂಡಾಡುವೆ. ಅದರ ಕ್ರೂರತೆಯನ್ನು ಋಷಿಗಳೆಲ್ಲ ಬಲ್ಲರು ! ನನ್ನ ಸಮುದ್ರದ ನೀರೆಲ್ಲ, ಯೋಗಿಯಾದ ನಿನ್ನ ಕೈಯ್ಯಲ್ಲಿ ಒಂದೇ ಒಂದು ಆಚಮನಕ್ಕಾಗುವಷ್ಟು ಅದನ್ನು ಸಂಕ್ಷೇಪಿಸುವ ವಿದ್ಯೆ ಇದು" — (ತೀರ್ಥಸಂಕ್ಷೇಪಮಂತ್ರವನ್ನೂ, ವಿಸರ್ಜನೆಯ ಮಂತ್ರವನ್ನೂ ಉಪದೇಶಿಸುತ್ತಾನೆ.)

ಮಹರ್ಷಿ ಎಚ್ಚೆತ್ತ. ಪೂರ್ವದಲ್ಲಿ ಸೂರ್ಯೋದಯ ಆಗುತ್ತಿತ್ತು. ಶಿವಗುರುಗಳು ಅಗಸ್ತ್ಯ ದರ್ಶನಕ್ಕೆ ಕಾದಿದ್ದರು.

—o—

## ೨೩ ಸಮುದ್ರಕ್ಷೋಭ, ಕಾಲಕೇಯರ ಸಂಹಾರ !

ಮುಂದಿನ ಹುಣ್ಣಿಮೆ ಬಂದಿತು ! ಹಿಂದೆ ವೃತ್ರಾಸುರನನ್ನು ಇಂದ್ರ ಹೀಗೆ ಕೊಂದದ್ದೂ ಒಂದು ಹುಣ್ಣಿಮೆಯ ದಿನವೇ ಎಂದೂ, ಅದರಿಂದಲೇ ಅದಕ್ಕೆ ವೇದದಲ್ಲಿ 'ವಾರ್ತ್ರಘ್ನೀ' ಎಂದು ಹೆಸರು ಬಂದು ದನ್ನೂ ಅಗಸ್ತ್ಯರು ಶಿವಗುರುಗಳಿಗೆ ವಿವರಿಸಿದರು.

ಆ ಗ್ರಾಮದಲ್ಲಿ ರಾತ್ರಿ ವಿಶೇಷ ಜಾನಪದ ಉತ್ಸವವೊಂದು ನಡೆಯಿತು ! ಸರಿರಾತ್ರಿಯವರೆಗೆ ಜನ ಆಡಿ, ಕುಣಿದು, ತಮಟೆ ಮೊದಲಾದ ಭಯಂಕರ ವಾದ್ಯ, ತಾಳ ಮೇಳಗಳಿಗೆ, ತಕ್ಕಂತೆ ನರ್ತಿಸಿ, ಕುಣಿದು, ದಣಿದು ಎಲ್ಲೆಂದರಲ್ಲೇ ಮಲಗಿದ್ದ ಸನ್ನಿವೇಶ ಬಂದಿತ್ತು!

ಅಗಸ್ತ್ಯಶಿಕ್ಷಿತರಾದ ನಾಲ್ವರು ಅಕ್ಕಪಕ್ಕಗಳ ಗ್ರಾಮಗಳ ಮುಖಂಡರು, ಆ ಹಿಂದಿನ ದಿನದ ಚತುರ್ದಶಿಯಂದು, ಅದರ ಮೊದಲ ದಿನ ತ್ರಯೋದಶಿಯಂದು, ಚಂದ್ರೋದಯವಾದ ಮೇಲೆ ಸರಿ ರಾತ್ರಿಯಲ್ಲಿ, ಸಮುದ್ರತೀರಕ್ಕೆ ವಾಡಿಕೆಯಂತೆ, ನಡೆದರು. ಜೊತೆಯಲ್ಲಿ ಬಹು ಸಂಖ್ಯೆಯಲ್ಲಿ ಗೋವುಗಳು, ಎಮ್ಮೆಗಳು, ಆಡುಕುರಿಗಳು, ಮದ್ಯ, ಮಾಂಸ, ವಿವಿಧವಾದ ಅನ್ನಗಳು, ಕಾಲಕೇಯರ ತೃಪ್ತಿಗೆಂದು ಗ್ರಾಮದ ವಯಸ್ಕ ಕನ್ಯೆಯರೂ, ವಿವಾಹಿತ ಯುವ ಸ್ತ್ರೀಯರೂ ಹಿಂಬಾಲಿಸಿದ್ದರು!

ದೊಡ್ಡದಾದ ಹಡಗುಗಳು ಪೂರ್ವ ದಿಗಂತದಿಂದ ಎಲ್ಲಿಂದಲೋ ಕಾಣಿಸಿಕೊಂಡವು ! ಹತ್ತಿರ ಬರುತ್ತಾ ಅವುಗಳೊಳಗಿಂದ ನಾಲ್ಕಾರು

ದೊಡ್ಡ ದೋಣಿಗಳು ಕೆಳಕ್ಕೆ ಸರಿದವು ! ಕಪ್ಪು ಕರಾಳಾಕೃತಿಗಳೂ ಅವು ಗಳೊಡನೆ ! ಸರಸರನೆ ಅವು ತೀರವನ್ನು ತಲುಪಿದವು. ಮುಖಂಡ ಆ ದೋಣಿಯ ನಾಯಕನೊಬ್ಬನಿಗೆ ಹೀಗೆಂದ.

"ಒಡೆಯ! ನಮ್ಮ ಗ್ರಾಮಗಳಿಗೆ ಇನ್ನು ಉಳಿಗಾಲವಿಲ್ಲ ! ಗುಟ್ಟೆಲ್ಲಾ ಬಯಲಾಗಿ ಹೋಗಿದೆ ! ಆ ಋಷಿಯೇ ಇಲ್ಲಿಗೆ ಬಂದು ಬಿಟ್ಟಿದ್ದಾನೆ, ವೇಷಾಂತರದಲ್ಲಿ ! ನಮ್ಮನ್ನು ಹೇಗಾದರೂ ಉಳಿಸಿ."

**ದೋಣಿಯ ನಾಯಕ :** (ಮೈ ಬೆವರುತ್ತದೆ !) "ಏನೆಂದೆ ? ನಮ್ಮ ಮರ್ಮ ಅವನಿಗೆ ಹೇಗೆ ತಿಳಿಯಿತು ? ಈ ಹನ್ನೆರಡೂ ವರ್ಷ ಗುಟ್ಟಾಗಿದ್ದದ್ದು ಈಗಲೇ ಏಕೆ ತಿಳಿಯಬೇಕು ?"

**ಮುಖಂಡ ;** "ಅವನು ಮಾಯಾವೀ ಎಂದು ನೀವೇ ಹೇಳುತ್ತೀ ರಲ್ಲ ! ವಾತಾಪಿ ರಾಜರನ್ನೂ ಇಲ್ವಲ ದೊರೆಯನ್ನು ಜೀರ್ಣಿಸಿಕೊಂಡವ ನಿಗೆ, ಬೆಟ್ಟವನ್ನೇ ಉರುಳಿಸಿದವನಿಗೆ, ಸಮುದ್ರವನ್ನು ಆ ಪೋಶನ ತೆಗೆದು ಕೊಂಡವನಿಗೆ ಯಾವುದು ತಿಳಿಯಲಾರದು ?"

**ನಾಯಕ :** "ಏನೆಂದೆ ? ಆ ಧೂರ್ತ ಸಮುದ್ರವನ್ನು ಆ- ಪೋಶನ ತೆಗೆದುಕೊಳ್ಳುವನಂತೆಯೋ ? ಬೊಗಳು, ನಾವು ಸಮುದ್ರ ದಲ್ಲಿ ಅಡಗಿರುವುದು ಅವನಿಗೆ ಹೇಗೆ ತಿಳಿಯಿತು ?" (ಮೊನಚಾದ ಕತ್ತಿಯ ಮೊನೆಯನ್ನು ಅವನ ಕಂಗಳನ್ನು ತಿವಿದು ಬಿಡುವವನಂತೆ, ಹತ್ತಿರ ತರುತ್ತಾನೆ! )

**ಮುಖಂಡ :** "ಹಾಗೆಂದು ಅವನೂ ಅವನ ನೂರಾರು ಶಿಷ್ಯರೂ ಹೇಳು ತ್ತಾ ಊರಿನ ಅರಳೀ ಕಟ್ಟೆಯ ಮೇಲೆ ಆ ಧೂರ್ತ ಋಷಿ ಕುಳಿತು ಬಿಟ್ಟಿ ದ್ದಾನೆ! ಇದೇನೂ ಗುಟ್ಟಲ್ಲ! ಋಷಿಯ ಸುತ್ತ ಮಾತ್ರ ಅವನ ಶಿಷ್ಯರಾರೂ ಇಲ್ಲ ! ತಲೆ ಮರೆಸಿಕೊಂಡು ಬೇರೆಲ್ಲೋ ಕಾಲಕಾಯುತ್ತಿರಬೇಕು! ನೀವು

ಅಗಸ್ತ್ಯನನ್ನು ಜೀವ ಸಹಿತ ಸೆರೆ ಹಿಡಿಯಬೇಕಾದರೆ ಇದೇ ಒಳ್ಳೆಯ ಅವಕಾಶ! ಇದನ್ನು ಕಳೆದುಕೊಂಡು ಮತ್ತೆ ನಮ್ಮನ್ನು ಪೀಡಿಸ ಬಾರದು. ಆದರೆ ಅವನು ಮಹಾಧೂರ್ತ! ನಿಮ್ಮ ಒಡೆಯರಲ್ಲಿ ಮಾಯಾ ಮಂತ್ರ ಬಲ್ಲವರು, ಸಮರ್ಥರು ಇತ್ತ ಬಂದು ಪ್ರತಿ ಮಾಯೆ ಗಳನ್ನು ಪ್ರಯೋಗಿಸಿ, ಅವನನ್ನು ಅಶಕ್ತನನ್ನಾಗಿಸಿ ಸೆರೆ ಹಿಡಿದರೆ ಸಾಧ್ಯ. ಶಿಷ್ಯರೆಲ್ಲ ಸುತ್ತುಗೂಡಿದ ಮೇಲೆ ಹರನೇ ಬಂದರೂ ಆಗದು!"

ನಾಯಕ ಸುಲಭವಾಗಿ ಇದನ್ನು ನಂಬಲಿಲ್ಲ! ಇದರಲ್ಲೇನೋ ತಂತ್ರವಿದೆ ಎನ್ನಿಸಿತು! ತಾನೇ ಏನನ್ನೂ ನಿಶ್ಚಯಿಸುವಂತಿರಲಿಲ್ಲ! ಮುಖಂಡನನ್ನು ಸೆರೆ ಹಿಡಿಯುವುದಾಗಿಯೂ, ಅವನು ಹೇಳಿದ್ದನ್ನು ತಾನೇ ಪರೀಕ್ಷಿಸುವುದಾಗಿಯೂ, ಸುಳ್ಳಾಗಿದ್ದರೆ ಅವನನ್ನು ಅಲ್ಲೇ ಕೊಲ್ಲು ದದಾಗಿಯೂ ಹೇಳಿ, ಅವನನ್ನು ಅಲ್ಲಿ ಬಂಧಿಸಿಟ್ಟು, ನಾಯಕ ರಹಸ್ಯ ವಾಗಿ ಹಳ್ಳಿಯ ಕಟ್ಟೆಯ ಬಳಿ ಹೋಗಿ ನೋಡಿ ಬರುತ್ತಾನೆ! ಅಗಸ್ತ್ಯರ ತೇಜೋ ಆಕೃತಿ ಅಲ್ಲಿ ತಪಸ್ಸಮಾಧಿಯಲ್ಲಿ ಮುಳುಗಿದ್ದನ್ನು ಕಂಡು "ಋಷಿ ಸಿಕ್ಕಿ ಬಿದ್ದ!" ಎಂದು ಹಿಗ್ಗಿ, ಮತ್ತೆ ಸಮುದ್ರತೀರಕ್ಕೆ ಓಡಿ ಬಂದು, ಮುಖಂಡನನ್ನು ಬಿಡಿಸುತ್ತಾನೆ.

ಏನು ಮಾಡುವುದೆಂದು ತಿಳಿಯದೆ, ನಾಲ್ಕಾರು ದೋಣಿಗಳ ನಾಯಕರೂ ಕಲೆತು ಸಮಾಲೋಚಿಸುತ್ತಾರೆ! ದೊಡ್ಡ ಹಡಗುಗಳಲ್ಲಿನ ತಮ್ಮ ಒಡೆಯರಿಗೆ ತಿಳಿಸಿ ಬರಲು ದೌಡಾಗಿ ಮತ್ತೆ ಸಮುದ್ರದಲ್ಲಿ ತೇಲಿ ಹೋಗುತ್ತಾರೆ.

ಕೊಂಚವೇ ಹೊತ್ತಿನಲ್ಲಿ ಹಡಗುಗಳು ದೋಣಿಗಳನ್ನು ಹಿಂಬಾಲಿ ಸುತ್ತಾ ತೀರಕ್ಕೆ ಬರುತ್ತವೆ. ಕಾಳ ಆಕೃತಿಯ ನೂರಾರು ಯೋಧರು ದೋಣಿಗಳಲ್ಲಿಳಿದು ದಡ ಸೇರುತ್ತಾರೆ, ಮುಖಂಡ ಆವರೆಗೆ ನೋಡಿರ ದಿದ್ದ "ಧಣಿ"ಗಳು ಕೆಲವರು ವಿಶೇಷ ಉಡುಪು, ಆಭರಣಗಳನ್ನು ಧರಿ

ಸಿದ್ಧ, ಹಿಂಬಾಲಕರಿಗೆ, ಸದ್ದಿಲ್ಲದಂತೆ, ಸಂಜ್ಞೆಗಳಲ್ಲಿ ಏನು ಮಾಡಬೇಕೆಂದು ತಿಳಿಸುತ್ತಾರೆ. ನೂರಾರು ಯೋಧರ ಹಿಂದೆ, ಹಡಗಿನಿಂದ ಸಾವಿರ ಸಾವಿರ ಯೋಧರು ಹಿಂಬಾಲಿಸಿ ಬರುವ ತನಕ ಎಲ್ಲರೂ ಕಾಯುತ್ತಾರೆ. ಆ ಮೇಲೆ ಗ್ರಾಮವನ್ನು ಸುತ್ತಲ ಎಲ್ಲ ಕಡೆಗಳಿಂದ ಆವರಿಸಿ ಬರಲು ಹೊಲ, ಗದ್ದೆ, ಗಿಡ ಗಂಟೆಗಳನ್ನೂ, ಪರ್ವತ ಪ್ರದೇಶಗಳನ್ನೂ, ಆಯಕಟ್ಟಿನ ಜಾಗೆಗಳನ್ನೂ ಬಳಸಿ ಬರಲು ಹೊರಡುತ್ತಾರೆ.

"ಧಣಿ"ಗಳೂ, ನಾಯಕರೂ, ಮುಖಂಡರೂ, ನುರಿತ ಕಟ್ಟಾಳು ಗಳು ಕೆಲವರ ಜೊತೆ, ನೇರವಾಗಿ, ಅಗಸ್ತ್ಯರು ಧ್ಯಾನಾಸಕ್ತರಾಗಿ ಕುಳಿತಿದ್ದ ಕಡೆಗೆ ನಿಧಾನವಾಗಿ, ಹೆಜ್ಜೆಯ ಮೇಲ ಹೆಜ್ಜೆಯಿಟ್ಟು ಬರುತ್ತಾರೆ! ಇದೆಲ್ಲ ಆಗುವ ವೇಳೆಗೆ, ಮೂರು ನಾಲ್ಕು ತಾಸು ಕಾಲ ಬೇಕಾಗುತ್ತದೆ!

* * *

ನಂದಿವರ್ಮ ದೊರೆಯ ಸಮುದ್ರ ಸೇನೆ ವೇಗವೇಗವಾಗಿ ಹಡಗು ಗಳಲ್ಲಿ ದಕ್ಷಿಣದತ್ತಕಡೆಯಿಂದ ನೀರ ಮೇಲೆ ವಾಯುವೇಗದಲ್ಲಿ ಧಾವಿಸಿ, ಕಾಲಕೇಯರ ಹಡಗುಗಳು ವಾಪಸ್ಸು ಹೊರಡುವ ಮಾರ್ಗದಲ್ಲಿ, ದೂರದಲ್ಲಿ, ಅಡ್ಡಗಟ್ಟಿ ಸಾಲಾಗಿ "ಶತ್ರು ಸ್ವಾಗತ' ಕೋರಲು ಕಾಯ್ದು ನಿಲ್ಲುತ್ತದೆ! ದ್ರಮಿಡ ದೇಶದ ಭೂಸೈನ್ಯ, ಸಮುದ್ರ ತೀರದಲ್ಲಿ ಸಾಲಾಗಿ ನಿಂತು, ಶತ್ರು ಸೈನ್ಯ ನೀರಿಗೆ ಮರಳದಂತೆ ತಡೆಯಲು ಸಜ್ಜಾಗಿ ನಿಲ್ಲುತ್ತದೆ. ಕಾಡಿನಲ್ಲಿ, ಬೆಟ್ಟಗಳ ಮೇಲೆ, ಹೊಲಗದ್ದೆಗಳನ್ನಾವರಿಸಿ ಬರಲು ಹೊರಟ ಶತ್ರುಯೋಧರು, ಅಲ್ಲಿ ಮೊದಲೇ ಅವರನ್ನು ಎದುರು ನೋಡುತ್ತಾ ರಹಸ್ಯವಾಗಿ, ಅದೃಶ್ಯವಾಗಿ ನಿಂತ ಅಗಸ್ತ್ಯಸೇನೆಯ ಕತ್ತಿಗಳಿಗೆ,ಬಾಣಗಳಿಗೆ ಆಹುತಿಯಾಗುತ್ತಾರೆ! ಎಲ್ಲಿಂದ, ಯಾರು, ತಮ್ಮನ್ನು ಹೀಗೆ ಎದುರಿಸುತ್ತಿದ್ದಾರೆಂಬುದು ತಿಳಿಯುವ ಮೊದಲೇ

ಬಾಣಗಳೊ ಕತ್ತಿಗಳೊ ಅವರನ್ನು ಮುಗಿಸಿದ್ದವು. ದಣಿದು, ಕುಣಿದು, ಕುಡಿದು, "ನಿದ್ರಿಸಿದ್ದ" ಗ್ರಾಮಸ್ಥರೂ, ಅಕ್ಕಪಕ್ಕಗಳ ಹಳ್ಳಿಯವರೂ, ಓಡುತ್ತಿದ್ದ 'ಧಣಿ'ಯ ಕಡೆಯವರನ್ನು ಜೀವಂತ ಹಿಡಿದು ಬಂಧಿಸಿ, ಬೆಳಗಾದೊಡನೆ ಅಗಸ್ತ್ಯರಿಗೆ ಕಾಣಿಕೆ ನೀಡಲು, ಕಟ್ಟಿಹಾಕಿ ಕಾವಲು ಕಾಯುತ್ತಿದ್ದರು. ಗ್ರಾಮಮಹಿಳೆಯರು ತಮ್ಮ ಸೋದರಿಯರ, ಮಾತೆಯರ, ಮಾನಗೆಡಿಸಿದ ರಾಕ್ಷಸರನ್ನು ಅಳಿಸಲು ವೀರಪಣತೊಟ್ಟು ಬಗೆಬಗೆಯಿಂದ ಸಹಕರಿಸಿದ್ದರು. ಹಲವು ಅರಣ್ಯ ಪ್ರದೇಶಗಳಲ್ಲಿ ಗಿಡ ಗಂಟೆಗಳ ನಡುವೆ, ಮರ ಮರಗಳ ನಡುವೆ ತೆಳುವಾದ ಗಟ್ಟಿ ದಾರ ಗಳನ್ನು ಕಟ್ಟಿ, ಮೀನುಗಾರರು, ಕಿತ್ತುಹೋದ ಬಲೆಗಳನ್ನು ಅಲ್ಲಲ್ಲಿ ಕತ್ತಲಲ್ಲಿ ಬಳಸಿ, ನೂರಾರು ಸಮುದ್ರಗಳ್ಳ ಯೋಧರನ್ನು ಹಿಡಿದು ನೆರೆ ಹಾಕಿದ್ದರು !

ಇದಾವುದರ ಪರಿವೆಯೂ ಇಲ್ಲದೆ ಇತ್ತ ಹಡಗಿನ ಧಣಿಗಳೂ, ದೋಣಿಗಳ ನಾಯಕರೂ ಅಲ್ಲಿ ಅಗಸ್ತ್ಯರನ್ನು ಕೊಲ್ಲಲು ಅವರನ್ನು ಬಳಸಿ ನಿಂತಿದ್ದರು !

ಅಗಸ್ತ್ಯರು ಮೆಲ್ಲನೆ ಕಂಗಳನ್ನು ತೆರೆದು ಸುತ್ತನಿಂತಿದ್ದವರನ್ನೊಮ್ಮೆ ನೋಡಿ, ಕಮಂಡಲುವಿನಿಂದ ತೀರ್ಥವನ್ನು ಕೈಗೆ ಹಾಕಿಕೊಂಡು, ವರುಣ ಧ್ಯಾನ ಮಾಡಿ, ಸಮುದ್ರಶಕ್ತಿಯನ್ನು ಅದರಲ್ಲಿ ಆಹ್ವಾನಿಸಿ, ಇನ್ನೇನು ಆಪೋಶನ ತೆಗೆದುಕೊಳ್ಳುವಷ್ಟರಲ್ಲಿ, "ಇವನೇನೋ ಜಾದೂ ಮಾಡು ತ್ತಾನೆ ! ಹಿಡಿಯಿರಿ ! ಕೊಲ್ಲಿರಿ !" ಎಂದು 'ಧಣಿ'ಯೊಬ್ಬ ಆಕ್ರೋಶ ಮಾಡಿದ !

"ಓ ! ಮಣೀಗ್ರೀವ ! ನೀನಿನ್ನೂ ಬದುಕಿರುವೆಯಾ ? ಮಣಿ ಮತೀಪುರದಲ್ಲಿ ನಾನು ಮಾಡಿದ್ದೇನೆಂಬುದನ್ನು ಕಣ್ಣಿಂದ ಕಾಣಲಾಗದ ದುರ್ಭಾಗ್ಯ ನಿನ್ನದಲ್ಲವೆ ? ಚಿಂತೆಯಿಲ್ಲ ! ಮತ್ತೊಮ್ಮೆ ಅಂಥವನ್ನೇ ಇಲ್ಲಿ ಮಾಡಿ ತೋರಿಸುತ್ತೇನೆ, ನೋಡುವೆಯಂತೆ !"

ಎನ್ನುತ್ತಲೇ ಅಗಸ್ತ್ಯರು ತೀರ್ಥಪ್ರಾಶನ ಮಾಡಿಯೇ ಬಿಟ್ಟರು !

* * *

ಸಮುದ್ರತೀರದಲ್ಲಿ ನಿಂತಿದ್ದ ಗ್ರಾಮಸ್ಥರಿಗೂ, ಅಗಸ್ತ್ಯಶಿಷ್ಯರಿಗೂ, ಸಮುದ್ರವು ತೀರವನ್ನು ಬಿಟ್ಟು ಹಿಂದೆ ಹಿಂದೆ ಸರಿಯುವಂತೆ ಕಾಣಲಾರಂಭಿಸಿತು !

ಕೆಲವರು ತಮ್ಮ ಕಂಗಳನ್ನೇ ನಂಬಲಿಲ್ಲ! ಹಲವರು ಮೂರ್ಛಿತರಾದರು ! ಕಿರಿಯರು ಕುಣಿದಾಡಿ ಚಪ್ಪಾಳೆ ಹಾಕಲಾರಂಭಿಸಿದರು.

ಸಮುದ್ರದ ನೆಲ ಕಾಣಲಾರಂಭಿಸುತ್ತಾ, ಭೀಕರ ದೃಶ್ಯವನ್ನು ಅದು ನೋಡುಗರಿಗೆ ನೀಡಲಾರಂಭಿಸಿತು ! ಸತ್ತ ಕೋಟ್ಯಾಂತರ ಜಲಚರ ಪ್ರಾಣಿಗಳ ಅಸ್ಥಿಪಂಜರಗಳು, ನಾನಾ ಆಕೃತಿಯ ಕಲ್ಲುಬಂಡೆಗಳು, ಕೊರೆದ ನೆಲ, ಭಯಂಕರವಾದ ಅದರ ಆಳ ! ಬೃಹದಾಕಾರದ ರಾಕ್ಷಸನ ಬಿಚ್ಚಿದ ದವಡೆಯಂತೆ ಕಂಡ ಆ ದೃಶ್ಯ ಬಹು ಭಯಂಕರವಾಗಿತ್ತು !

ಕೆಲವರು ಭೀತರು ನಡೆದುದನ್ನು ಅಗಸ್ತ್ಯರಿಗೆ ತಿಳಿಸಲು ಓಡಿದರು ! "ಪ್ರಭೂ ! ಸಮುದ್ರ ಬತ್ತುತ್ತಿದೆ, ಹಿಂದೆ ಸರಿಯುತ್ತಿದೆ ! ಏನು ಅನಾಹುತವೋ ತಿಳಿಯಲಿಲ್ಲ !!" ಎಂದು ಒಂದೇ ಉಸಿರಿಗೆ ಹೇಳಿದರು ! ಮಣಿಗ್ರೀವನಿಗೂ ಕಾಲಕೇಯಮುಖಂಡರಿಗೂ ನಂಬುವುದಾಗಲಿಲ್ಲ! ಅವರೂ ಒಂದಷ್ಟು ಹಿಂದೆ ಸರಿದು ಗ್ರಾಮದ ಅಂಚಿನ ಸಮುದ್ರದ ಕಡೆ ಕೊರಳು ಬಾಗಿಸಿ ನೋಡಿದರು ! ಸಮುದ್ರವು ನಿಜವಾಗಿ ಹತ್ತಾರು ಮಾರು ಆಗಲೇ ಹಿಂದೆ ಸರಿದಿದ್ದು, ಅದರ ಅಬ್ಬರ, ಆರ್ಭಟ ವಿಪರೀತವಾಗಿತ್ತು! ಅವರೆಗೆ ತಾನು ಆಕ್ರಮಿಸಿದ್ದ ಸ್ಥಳವನ್ನು ಬಹು ಸಂಕಟದಿಂದ ಬಿಟ್ಟು ಕೊಡುತ್ತಿರುವಂತೆ ಅದು ಶಬ್ದ ಮಾಡುತ್ತಿರುವಂತೆ ಕಾಣುತ್ತಿತ್ತು !

ಕಾಲಕೇಯರಿಗೆ ಈಗ ನಿಜವಾಗಿಯೇ ಭಯವಾಯಿತು ! ತಮ್ಮ ರಹಸ್ಯ ನೆಲೆ, ನಿವಾಸಗಳಿಗೆ ಆಧಾರವಾದ ಸಮುದ್ರವೇ ಹೀಗೆ ಬತ್ತಬಹುದೆಂಬುದನ್ನು ಅವರೆಂದೂ ಕನಸಿನಲ್ಲೂ ಎದುರು ನೋಡಿರಲಿಲ್ಲ ! ತಮ್ಮ ಹಡಗುಗಳ ಕಡೆ ನೋಡಿದರು ! ಅವು ಅಗ್ನಿಗೆ ಆಹುತಿಯಾಗಿ, ಧಿಧೀರನೆ ಮುಗಿಲು ಮುಟ್ಟುವ ಅಗ್ನಿ ಶಿಖೆಗಳಿಂದ ಉರಿಯುತ್ತಿದ್ದವು ! ದಂತಿವರ್ಮನ ಜಹಜುಗಳ ನಾಯಕರು ತಮಗೆ ವಹಿಸಿದ್ದ ಕಾರ್ಯವನ್ನು ಶ್ರದ್ಧೆಯಿಂದ ನಾಜೂಕಿನಿಂದ ಹಾಗೆ ನಿರ್ವಹಿಸಿದ್ದರು !

ಈ ಭಯಾನಕ ದೃಶ್ಯವನ್ನು ಬಾಯಿ ತೆರೆದುಕೊಂಡು ನೋಡುತ್ತಿದ್ದ ಮಣಿಗ್ರೀವ, ಕಾಲಕೇಯ 'ಧಣಿ'ಗಳನ್ನು ಅಗಸ್ತ್ಯ ಶಿಷ್ಯರು ಬಂಧಿಸಿ, ಅವರ ಆಯುಧಗಳನ್ನು ಕಿತ್ತು ಹಾಕಿದ್ದರು !

ಗ್ರಾಮ ಮುಖಂಡರುಗಳೂ, ಮೀನುಗಾರ ಮುಖಂಡರುಗಳೂ, ಅಕ್ಕಪಕ್ಕದ ಗ್ರಾಮಗಳ ನಿರಪರಾಧೀ ಪ್ರಜೆಗಳೂ, ಮಹಿಳೆಯರೂ ಜಾತ್ರೆಯಂತೆ ಅಲ್ಲಿ ನೇರಲಾರಂಭಿಸಿದ್ದರು.

ಸೂರ್ಯೋದಯ ಮೆಲ್ಲನೆ ಆಗುತ್ತಾ ಆಗುತ್ತಾ ಚಂದ್ರಾಸ್ತಮಾನ ಆಗುತ್ತಿತ್ತು ! ಕಾಲಕೇಯರ ಹಡಗುಗಳು ಸುಟ್ಟು ಕರಕಲಾಗಿ, ಭಯಂಕರಾಕೃತಿಯ ರಾಕ್ಷಸನ ಅಸ್ತಿ ಪಂಜರಗಳಂತೆ ಆಕಾಶದ ಹಿನ್ನೆಲೆಯಲ್ಲಿ ಕಾಣುತ್ತಿದ್ದವು. ದಂತಿವರ್ಮನ ಹಡಗುಗಳ ವೀರರು ಜಯಕಾರ ಮಾಡುತ್ತಾ ಹಡಗುಗಳಿಂದಿಳಿದು, ಸಮುದ್ರದ ತಳದ ನೆಲದ ಮೇಲೆ ಕಷ್ಟಪಟ್ಟು ನಡೆಯುತ್ತಾ ಬರುತ್ತಿದ್ದರು.

ಅಲ್ಲಲ್ಲಿ ಅಪಾರ ಸಂಪತ್ತು ಹುದುಗಿರುವ ಲಕ್ಷಣಗಳೂ ಆ ತಳದಲ್ಲಿ ಕಂಡು ಬಂದವು ! ಯಾವ ಯಾವ ಕಡೆ ಹಿಂದೆ ಸರಕಿನ ಹಡಗುಗಳು ಮುಳುಗಿದ್ದವೋ ಅಲ್ಲೆಲ್ಲಾ ಬಂಗಾರ, ಬೆಳ್ಳಿ, ಮುತ್ತು, ಮಾಣಿಕ್ಯ

ಮೊದಲಾದ ವಸ್ತುಗಳೂ, ಸಿದ್ಧಪಡಿಸಿದ ಒಡವೆಗಳೂ ಸಿಕ್ಕವು. ಅಗಸ್ತ್ಯರು ಗ್ರಾಮಗಳ ಬಡ ಜನರಿಗೆಲ್ಲ ಅದನ್ನು ವಿತರಿಸುವಂತೆ ಸೈನ್ಯಕ್ಕೆ ಆಜ್ಞೆ ಮಾಡಿದರು.

ಸಮುದ್ರವೇ ಒಣಗಿದರೆ ತಮ್ಮ ದಿನ ನಿತ್ಯ ಜೀವನವೆನಿಸಿದ ಮೀನು ಗಳನ್ನು ಹಿಡಿಯುವುದೆಲ್ಲಿ ? ಎಂದು ಮೀನುಗಾರರು ಚಿಂತಾಕ್ರಾಂತ ರಾದರು !

ಅಗಸ್ತ್ಯರು ಅವರಿಗೆಲ್ಲ ಸಮಾಧಾನ ಹೇಳಿ, ಇನ್ನೊಂದು ಕೆಲವೇ ದಿನ ಇದನ್ನು ಸಹಿಸಿಕೊಳ್ಳುವಂತೆಯೂ, ಮತ್ತೆ ಅಲ್ಲಿ ನೀರು ಬರುವಂತೆ ತಾವು ಮಾಡುವುದಾಗಿಯೂ ವಾಗ್ದಾನ ಮಾಡಿದರು ! ಅಗಸ್ತ್ಯರ ಶಕ್ತಿಯಲ್ಲಿ ನಂಬಿಕೆಯುಂಟಾದ ಅವರು ಶಾಂತರಾಗಿ ತಂತಮ್ಮ ವಸತಿಗಳಿಗೆ ತೆರಳಿ ದರು !

ಹಿಂದೆ ಭಗೀರಥ ಗಂಗೆಯನ್ನು ಲೋಕಕ್ಕೆ ತರುವ ಮುನ್ನ, ಸಗರ ಪುತ್ರರು ಯಜ್ಞಾಶ್ವವನ್ನು ಹುಡುಕುತ್ತ ಭೂಮಿಯನ್ನೆಲ್ಲ ಅಗೆದಾಗ, ಗಂಗೆಯೂ ಸಾಗರವೂ ಒಣಗಿದ್ದ ದೃಶ್ಯ ಹೇಗಿತ್ತೆಂಬುದನ್ನು ಕಂಡವರು ಆಗ ಇರಲಿಲ್ಲವಷ್ಟೆ! ಆ ದೃಶ್ಯವನ್ನು ಅಗಸ್ತ್ಯರ ಪವಾಡ ಮತ್ತೆ ಇತಿ ಹಾಸಕ್ಕೆ, ನೋಡಲು ತಂದು ಕೊಟ್ಟಿತ್ತು !

ಶಿವಗುರುಗಳಿಗೆ "ಅಗಸ್ತ್ಯರು ಶಿವನ ಅವತಾರವೇ ಇರಬೇಕು !" ಎನಿಸಿ ಮೊದಲ ಸಲ ಸಾಷ್ಟಾಂಗ ಪ್ರಣಾಮವನ್ನು ಹಾಕಿದರು ! ಶಿವಗುರು ಗಳ ಶಿಷ್ಯರು ದೇಶಾದ್ಯಂತ ಹೀಗೆ ಅಗಸ್ತ್ಯರನ್ನು ಗುರುಗಳೆಂದು ಒಪ್ಪಿ ದಂತಾಗಿ, ದ್ರಮಿಡದೇಶಕ್ಕೂ ಅಗಸ್ತ್ಯರಿಗೂ ಶಾಶ್ವತವಾದ ನಂಟು ಏರ್ಪ ಟ್ಟಿತು !

* * *

ನಂದಿ ವರ್ಮಮಹಾರಾಜರ ಅರಮನೆಯ ಸಭಾಂಗಣದಲ್ಲಿ ಅಪರಾಧಿಗಳ ವಿಚಾರಣೆ ನಡೆದು, ಹಿಂದಿನ ದೊರೆಯ ಕೊಲೆಯ ರಹಸ್ಯವೆಲ್ಲ ಬಯಲಾಯಿತು ! ಸಹಸ್ರಾರು ಜನ ಈ ಕೌತುಕವನ್ನು ನೋಡಿದರು. ನಾಡಿನ ಆಕ್ರೋಶವೆಲ್ಲ ಬಂಧಿತರ ಮೇಲೆ ಇದ್ದಿತು ! ಕಾಲಕೇಯರೂ, ಮಣಿಗ್ರೀವನೂ ಮಾತ್ರವಲ್ಲದೆ, ಅವರ ನೂರಾರು ಅನುಚರರನ್ನೂ ಗ್ರಾಮಸ್ಥರು ಹಿಡಿದು ತಂದಿದ್ದರಷ್ಟೆ !

ಎಲ್ಲರಿಗೂ ಮರಣದಂಡನೆ ವಿಧಿಸಲಾಯಿತು ! ಅನ್ನಾಹಾರಗಳಿಲ್ಲದೆ ಅವರು ಸೆರೆಮನೆಯಲ್ಲಿ ಕೊಂಚ ದಿನ ಇರಬೇಕೆಂದೂ, ಸಮುದ್ರದಲ್ಲಿ ಮತ್ತೆ ನೀರು ಬಂದಾಗ, ಅವರನ್ನು ಶಿರಚ್ಛೇದ ಮಾಡಿ, ಹೆಣಗಳನ್ನು ಸಮುದ್ರದಲ್ಲೇ ಎಸೆಯಬೇಕೆಂದೂ, ಇದು ಉಳಿದ ಅವರ ಕಡೆಯವರಿಗೆ ಪಾಠ ಕಲಿಸಲೆಂದೂ ದೊರೆ ಆಣತಿಯಿತ್ತ !

ಸಮುದ್ರದಾಚೆಯ ದ್ವೀಪಗಳ ಅರಸರುಗಳಿಂದ ನಿಧಾನವಾಗಿ ಸಂದೇಶಗಳು ಬರಲಾರಂಭಿಸಿದ್ದವು. ಅಲ್ಲಿಯವರೆಗೆ ಸಮುದ್ರವು ಬತ್ತಿದ್ದು, ಅಗಸ್ತ್ಯ ಶಕ್ತಿಯ ಬಗೆಗೆ ಪ್ರತ್ಯೇಕ ಪ್ರಶಸ್ತಿಗಳನ್ನೂ, ಅವರ ಪವಾಡಗಳ ಬಗೆಗೆ ಮಾಹಿತಿಯನ್ನೂ ಯಾರೂ ಆ ದೇಶದ ರಾಜರಿಗೆ ಕಳುಹಬೇಕಿರಲಿಲ್ಲ ! "ನಮ್ಮಲ್ಲಿ ಉಳಿದಿರುವ, ತಲೆ ಮರೆಸಿಕೊಂಡಿರುವ, ಕಾಲಕೇಯರ ಹಿಂಬಾಲಕರನ್ನು ನಾವೇ ಹಿಡಿದು ಒಪ್ಪಿಸುತ್ತೇವೆ ! ಅಗಸ್ತ್ಯರು ಪ್ರೀತರಾಗಿ, ನಮ್ಮನ್ನು ಅನುಗ್ರಹಿಸಲು ಇತ್ತ ವಿಜಯ ಮಾಡಬೇಕು" ಎಂಬರ್ಥದ ಓಲೆಗಳನ್ನು ಹೊತ್ತು ರಾಯಭಾರಿಗಳು ಕಡಲ ತಳದ ನೆಲದ ಮೇಲೆ ಕುದುರೆಗಳನ್ನೇರಿ, ದಾರಿಮಾಡಿಕೊಂಡು ಬಂದು ಹೀಗೆ ದಂತಿವರ್ಮರಾಜನಿಗೆ ಪ್ರಾರ್ಥನೆ ಸಲ್ಲಿಸಲಾರಂಭಿಸಿದ್ದರು. ಪಾಂಡ್ಯದೊರೆಗೂ ಅಂಥವೇ ಸಂದೇಶಗಳು ಬಂದಿದ್ದವು. ದ್ರವಿಡರ ಕೀರ್ತಿ ದಿಗಂತದ ವರೆಗೆ ಹಬ್ಬಿತ್ತು. ಅಗಸ್ತ್ಯರು ನಕ್ಕು "ಮೊದಲು ಅಪರಾಧಿಗಳನ್ನು ತಂದೊಪ್ಪಿಸಲಿ ! ಆಮೇಲೆ ವಿಜಯ ಯಾತ್ರೆಯ ಮಾತು !" ಎಂದಾಜ್ಞೆ ಮಾಡಿ

ದರು. ದಿನಂ ಪ್ರತಿ ಆ ಅಪರಾಧಿಗಳೂ ತಂದೊಯ್ಯಲ್ಪಟ್ಟು ಪ್ರಮಿಡದ
ಸೆರೆಮನೆಗಳು ಸಾಕಾಗಲಿಲ್ಲ !

*                    *                    *

ಅಮಾವಾಸ್ಯೆ ಬಂದಿತ್ತು! ಅಗಸ್ತ್ಯರ ಎರಡನೆಯ ಯೋಜನೆಯ ಜಾರಿಗೆ ಅದು ಕಾಲವೆಂದು ನಿಗದಿತವಾಗಿತ್ತು. ರಾಜಭಟರು ಮಾರಿಯ ಗುಡಿಗಳ ಮೇಲೆ, ಗ್ರಾಮದೇವತೆಗಳ, ನಾಗಪೂಜಾ ಸ್ಥಳಗಳ ಮೇಲೆ, ಶ್ಮಶಾನಗಳ ಮೇಲೆ, ವಾಮಾಚಾರಗಳು ನಡೆಯುವ ಗುಪ್ತನೆಲೆಗಳ ಮೇಲೆ ರಹಸ್ಯಗೂಢಚಾರರನ್ನೂ, ರಹಸ್ಯ ರಾಜಭಟರ ಕಾವಲುದಳವನ್ನೂ ನಿಯಮಿಸಿ, ಮಾಹಿತಿ ಸಂಗ್ರಹಿಸುತ್ತಾ ಆ ಹದಿನೈದು ದಿನಗಳನ್ನೂ ಸದು ಪಯೋಗ ಮಾಡಿಕೊಂಡಿದ್ದರು !

ಅಮಾವಾಸ್ಯೆಯ ನಡಿ ರಾತ್ರಿಯಲ್ಲಿ ನರಬಲಿ, ಮತ್ತು ನಾನಾ ವಿಧ ಪ್ರಾಣಿಬಲಿಗಳನ್ನು ಕೊಡಲು ಯತ್ನಿಸಿದವರನ್ನೆಲ್ಲ ಬಂಧಿಸಿ, ಆ ದುಷ್ಟ ಪೂಜೆಗಳನ್ನೆಲ್ಲ ನಿಲ್ಲಿಸಿ, ಪೂಜಾರಿಗಳನ್ನೂ, ಊರ ಮುಖಂಡರುಗಳನ್ನೂ ಬಂಧಿಸಿ ದಂತಿವರ್ಮದೊರೆಯ ಮತ್ತು ಅಗಸ್ತ್ಯರ ಎದುರು ನಿಲ್ಲಿಸ ಲಾಯಿತು! ಬೆತ್ತಲೆ ಕುಣಿತ, ದೇವರ ಹೆಸರಿನಲ್ಲಿ ಸೂಳೆಗಾರಿಕೆ, ಜೂಜಾಟ ನಡೆಸುವವರನ್ನೂ, ಮುಗ್ಧಜನರನ್ನು ವಂಚಿಸುವ, ಹಿಂಸಿಸುವ ನಾನಾ ಜಾಲಗಳ ಸಹಸ್ರಾರು ಮಂದಿಯನ್ನೂ, ಭಟರು ತಂದು ರಾಜರ ಮುಂದೆ ನಿಲ್ಲಿಸಿದರು. ನಡೆಯುತ್ತಿರುವುದೇನೆಂದೇ ತಿಳಿಯದ ಆ ಆ ಗ್ರಾಮಗಳ ಜನರು ಕೆರಳಿ, "ದೊರೆ, ನಮ್ಮ ವೈಯುಕ್ತಿಕ ಪೂಜಾ ಆಚರಣೆಗಳಲ್ಲಿ ತಲೆ ಹಾಕುತ್ತಿದ್ದಾನೆ !" ಎಂದು ಆಕ್ರೋಶ ವ್ಯಕ್ತಪಡಿಸಿದರು. ರಾಜ ಭಟರು ಅಂಥವರನ್ನೂ ಬಂಧಿಸಿ, "ನಿಮಗೆ ಅರಮನೆಯಲ್ಲಿ ಉತ್ತರ ಹೇಳು ತ್ತಾರೆ" ಎಂದು, ಅಲ್ಲಿ ಅರಮನೆಗೆ ತಂದಿದ್ದರು !

ಅಮಾವಾಸ್ಯೆಯಾಗಿ ನಾಲ್ಕನೇ ದಿನದಂದು ವಿಚಾರಣೆ ಆರಂಭ ವಾಯಿತು ! ಅಗಸ್ತ್ಯರೂ, ಶಿವಗುರುಗಳೂ ಭದ್ರಾಸನದಲ್ಲಿ, ರಾಜನ ಎಡ ಬಲಗಳಲ್ಲಿ ಕುಳಿತು ಅಪರಾಧಿಗಳ ತಪ್ಪೊಪ್ಪಿಗೆಯನ್ನು ಆಲಿಸಿದರು.

ದಂತಿವರ್ಮ ಗುಡುಗಿದ : "ಹಿಂದಿನ ನಮ್ಮ ಮಹಾರಾಜರು, ಧರ್ಮಪ್ರಭುಗಳು, ಈಗಿಲ್ಲವಾದರೂ ನಾವು ಅವರ ಧರ್ಮಸಿಂಹಾಸನ ದಲ್ಲಿ ಕುಳಿತಿದ್ದೇವೆ. ಅವರು ಕೊಲೆಯಾಗಿ ಹನ್ನೆರಡುವರ್ಷಕ್ಕೂ ಹೆಚ್ಚು ಕಾಲ ಆಗಿದೆ. ಅದಕ್ಕೆ ಕಾರಣರಾದವರು ನಿಮ್ಮಲ್ಲಿ ಇರಲೇಬೇಕು ! ನೀವಾಗಿ ಮುಂದೆ ಬಂದು ಒಪ್ಪಿಕೊಂಡರೆ ಶಿಕ್ಷೆ ಕಡಿಮೆ ಆದೀತು ! ಇಲ್ಲ ವಾದರೆ ಭಯಂಕರ ಶಿಕ್ಷೆ ಕಾದಿದೆ ! ಇಲ್ಲಿ ಅತಿಮಾನುಷ ಶಕ್ತಿಯುಳ್ಳ ಪೂಜ್ಯ ಅಗಸ್ತ್ಯ ಮಹರ್ಷಿಗಳೇ ಸ್ವಯಂ ನಮ್ಮ ಬಳಿ ಇದ್ದಾರೆ ! ಪರ್ವತ ವನ್ನು ಉರುಳಿಸಬಲ್ಲವರೂ, ಸಮುದ್ರವನ್ನು ಆಪೋಶನ ತೆಗೆದುಕೊಳ್ಳ ಬಲ್ಲವರೂ, ರಾಕ್ಷಸರನ್ನು ತಿಂದು ಜೀರ್ಣಿಸಿಕೊಳ್ಳಬಲ್ಲವರೂ ಅವರು ಹೌದೆಂಬುದನ್ನು ನೀವೆಲ್ಲ ಕೇಳಿರುವುದು ಮಾತ್ರವಲ್ಲ ! ಬಲ್ಲಿರಿ ! ನಾವು ಕಣ್ಣಾರೆ ಕಂಡಿದ್ದೇವೆ. ಅವರೆದುರು ನೀವಾಗಿ ತಪ್ಪೊಪ್ಪಿಕೊಂಡರೆ ಸರಿ, ಇಲ್ಲವಾದರೆ ಮುಂದಿನ ಪರಿಣಾಮವನ್ನು ನೀವೇ ಎದುರಿಸುವಿರಿ ! ! "

ಹತ್ತು ನಿಮಿಷಕಾಲ ಯಾರೂ ಮಾತಾಡಲಿಲ್ಲ ! (ಚಾಕ್ರಾಯಣ, ಅಲ್ಲಿ ಕಾಲಕೇಯರ ಕಡೆಯವರನ್ನು ಪತ್ತೆ ಮಾಡಲು ಅಗಸ್ತ್ಯ ಸೃಷ್ಟವಾದ ಒಂದು ದಿವ್ಯಾಂಜನವನ್ನು ಕಣ್ಣಿಗೆ ಹಾಕಿಕೊಂಡು ಒಂದು ಕಡೆ ಕುಳಿ ತಿದ್ದ !) ಆಗ ನಡೆಯಿತು, ಪವಾಡ !!

ಸುಮಾರು ಹದಿನೈದು ಜನ ಕಟ್ಟುಮಸ್ತಾಗಿ ಬೆಳೆದ ಧಾಂಡಿಗರು ಮೇಲೆದ್ದು ಬಂದು ದೊರೆಗೆ ಸಾಷ್ಟಾಂಗ ಮಾಡಿ ; "ಪ್ರಭೋ ! ನಾವು ಮಾಡಬಾರದುದನ್ನು ಮಾಡಿಬಿಟ್ಟೆವು !! ದುಡ್ಡಿನಾಸೆಗೆ ಯಾರೋ ಹೇಳಿ

ಕೊಟ್ಟಂತೆ ಮಾಡಿದೆವು. ಹಿರಿಯ ಅರಸರನ್ನು ಕೊಂದ ಪಾಪಿಗಳು ನಾವೇ" ಎನ್ನುತ್ತಾ ತಲೆಬಾಗಿ ನಿಂತರು !

ದೊರೆ ಅಗಸ್ತ್ಯರ ಮುಖ ನೋಡಿದ ! ಅಗಸ್ತ್ಯರು ಚಾಕ್ರಾಯಣನತ್ತ ನೋಡಿದರು. ಚಾಕ್ರಾಯಣನ ಕಣ್ಣಿಗೆ ಇನ್ನೂ ಆರುಜನ ಅಂಥವರು, ರಾಕ್ಷಸರಂತೆ ಕಾಣುತ್ತಿದ್ದರು !! ಅವನು ಆಸನದಿಂದೆದ್ದು ಒಬ್ಬನನ್ನು ಹಿಡಿದು ಜುಟ್ಟು ಎಳೆದು ರಾಜನ ಮುಂದೆ ತಳ್ಳಿ "ಇವನೂ ಒಬ್ಬ ಇದ್ದಾನೆ !" ಎನ್ನುವುದರೊಳಗೆ ಉಳಿದ ಐವರೂ ಸಹ ಎದ್ದು ಮುಂದೆ ಬಂದು ನಮಸ್ಕರಿಸಿ "ನಾವೂ ಉಳಿದುಬಿಟ್ಟೆವು, ಮನ್ನಿಸಿ, ಪ್ರಭೋ" ಎನ್ನುತ್ತಾ ಭಯವಿಹ್ವಲರಾಗುತ್ತಾರೆ !

ಸಭೆಯೇ ಭಯದಿಂದ ಕಂಪಿಸುತ್ತದೆ ! ಅಪರಾಧಿಗಳಲ್ಲದವರ ಮನ ದಲ್ಲೂ, "ನಾವೂ ನಮಗೆ ಗೊತ್ತಿಲ್ಲದೆಯೇ ಏನಾದರೂ ಮಾಡಿದ್ದೇ ವೆಯೋ ?" ಎಂಬ ಸಂಶಯ ಮೂಡುವಂತೆ, ಎಲ್ಲರಿಗೂ ಅಗಸ್ತ್ಯರ, ಅವರ ಶಿಷ್ಯರ ಬಗೆಗೆ, ಅವರ ಅಪಾರ ದಿವ್ಯಶಕ್ತಿಯ ಬಗೆಗೆ, ಗೌರವ, ಭಯ ಮೂಡುತ್ತದೆ.

ಮುಂದಿನ ವಿಚಾರಣೆಗೆ, ಆಗಸ್ತ್ಯ ಉಪದೇಶಕ್ಕೆ ಅದು ಪೂರಕವಾದ ವಾತಾವರಣವನ್ನು ನಿರ್ಮಿಸುತ್ತದೆ. ಯಾರೂ ಬಾಯ್ತೆರೆಯದೆ ಎಲ್ಲರೂ ಆಗಸ್ತ್ಯರ ಮುಖವನ್ನೇ ನೋಡುತ್ತಾ ಕುಳ್ಳಿರುತ್ತಾರೆ.

**ಅಗಸ್ತ್ಯ** : "ದೊರೆಯೇ ! ಅರಸರ ಕೊಲೆಯ ಸಂಬಂಧದಲ್ಲಿ ಇವರಿವರ ಅಂತರಂಗ ಪಾತ್ರವನ್ನು ಕುರಿತು ಪ್ರತ್ಯೇಕ ವಿಚಾರಣೆ ನಡೆಸಿ, ಅವರನ್ನು ಯೋಗ್ಯ ಶಿಕ್ಷೆಗಳಿಗೆ, ಗುರುತರವಲ್ಲದ, ಆದರೆ ಅವರನ್ನು ದಾರಿಗೆ ತರಬಹುದಾದ ಶಿಕ್ಷೆಗೆ ಗುರಿಪಡಿಸುವುದು ಆಸ್ಥಾನದ ಹೊಣೆ ! ಈಗ ಇಲ್ಲೇ ಇದು ಬೇಡ. ಉಳಿದವರನ್ನು ಬೇರೆ ರೀತಿಯಲ್ಲಿ ವಿಚಾರಿಸ ಬೇಕಿದೆ ! "

ಭಟರು ಪ್ರಧಾನ ಅಪರಾಧಿಗಳನ್ನು ಮತ್ತೆ ಸೆರೆಮನೆಗೆ ಬಂಧಿಸಿ ಕರೆದೊಯ್ಯುತ್ತಾರೆ. ಉಳಿದವರು ತಮಗೇನು ಗತಿ ಕಾದಿದೆಯೋ ? ಎಂದು ಭಯಪಡುತ್ತಾ ನಿಂತಿರುತ್ತಾರೆ ! ಅಗಸ್ತ್ಯರು ಮತ್ತೆ ಆರಂಭಿಸಿದರು.

**ಅಗಸ್ತ್ಯ :** " ದೇವರ, ಧರ್ಮದ, ಹೆಸರಿನಲ್ಲಿ ದುರಾಚಾರ, ಜನ ಹಿಂಸೆ, ಕೊಲೆ, ಸುಲಿಗೆ ಸಲ್ಲದು ! ಯಾವ ಸುಸಂಸ್ಕೃತ ಅರಸನ ಆಡಳಿತವೂ ಅದನ್ನು ಸಹಿಸದು ! ದೇವರನ್ನು ನೀವು ಹೇಗೆ ಬೇಕಾದರೂ, ಯಾವ ರೂಪದಲ್ಲಾದರೂ ಪೂಜಿಸಿ ! ಅದು ನಿಮ್ಮ ಸ್ವಾತಂತ್ರ್ಯ ! ರಾಜ್ಯ ಅದರಲ್ಲಿ ಕೈಹಾಕುವುದಿಲ್ಲ. ಆದರೆ, ನಿಮ್ಮ ಪೂಜೆ ಸಭ್ಯರೀತಿಯದಾಗಿರಬೇಕು ! ನಾನೊಂದು ಉಪನ್ಯಾಸಮಾಡಿ ನಿಮ್ಮೆಲ್ಲರ ಮೂಢನಂಬಿಗೆಗಳನ್ನು ಒಂದೇ ಕ್ಷಣದಲ್ಲಿ ತೊಡೆದು ಹಾಕಲು ಆಗಲಾರದು ! ಅದು ಶತಮಾನಗಳಿಂದ ಬಂದ ಕೆಟ್ಟರೂಢಿಯಾಗಿದ್ದರೆ, ಅದನ್ನು ತಿದ್ದಲೂ ಶತ ಶತಮಾನಗಳೇ ಬೇಕಾಗುತ್ತದೆ ! ಆದರೆ ನೀವು ಚಿಂತಿಸುವಂತೆ ಮಾಡಬೇಕಾದುದು ನನ್ನ ಕರ್ತವ್ಯ ! ಅಷ್ಟು ಪ್ರಚೋದನೆಯನ್ನು ನಾನು ಮಾಡಬಲ್ಲೆ ! ಉದಾಹರಣೆಗೆ ನೋಡಿ ! ದೇವರನ್ನು ವೇದಶಾಸ್ತ್ರಗಳು ಸರ್ವವ್ಯಾಪಕವಾದ ಬ್ರಹ್ಮವಸ್ತುವೆಂದೂ, ಅದು ಹೆಣ್ಣೂ ಗಂಡೂ ಅಲ್ಲದ, ಲಿಂಗ, ಜಾತಿ ಮುಂತಾದ ಭೇದಗಳನ್ನು ಮೀರಿ ನಿಂತ ಅಪ್ರಾಕೃತ ದಿವ್ಯಶಕ್ತಿಯೆಂದೂ ಹೇಳುತ್ತದೆ ! ಆದರೆ ನಿಮ್ಮ ಮಾನಸಕ್ಕೆ ಇದು ಎಟುಕದಾದುದರಿಂದ ನೀವು ಗುಡಿಗಳಲ್ಲಿ ಅವನನ್ನು 'ತಾಯಿ' ಎಂದೂ 'ತಂದೆ' ಎಂದೂ ಭಕ್ತಿಯಿಂದ ಪೂಜಿಸುತ್ತೀರಿ ! ದೇವತೆಗಳೂ ಸಹ ಒಂದೊಂದು ಆಕಾರದ ವಿಶೇಷಗಳಿಂದಲೇ ನಮ್ಮೆದುರು ಪ್ರತ್ಯಕ್ಷರಾಗುತ್ತಾರೆ ! ನಮ್ಮ ಸ್ವಯಂ ಅನುಭವ ಅದು ! ಹೀಗಿರುವಾಗ ಆ ಬ್ರಹ್ಮವಸ್ತುವನ್ನು, ದೇವತೆಗಳನ್ನು, ಪ್ರೀತಿ ಗೊಳಿಸುವುದೆಂದರೆ ಏನು ಮಾಡಬೇಕು ? ನಿರಪರಾಧಿಗಳಾದ ಪಶು ಪಕ್ಷಿ ಪ್ರಾಣಿಗಳನ್ನು ಕೊಂದು ಅವುಗಳ ರಕ್ತಮಾಂಸವನ್ನು ಅರ್ಪಿಸುವುದು ಘೋರ ತಾಮಸ ಪೂಜೆ ! ದೇವೀ – ಉಪಾಸಕರೇ !

ಹೇಳಿ ! ನಿಮ್ಮ ತಾಯಿ ತನ್ನ ಮಗನನ್ನು ಸತ್ತು ತನಗೆ ಬಲಿಯಾಗ ಬೇಕೆಂದು ಕೇಳುವುದು ಶಕ್ಯವೇ ? ನೀವು ಚೆನ್ನಾಗಿ ಬಾಳಬೇಕೆಂದು ಕೇಳ ಲಾರಳಾದರೆ, ಅವಳೆಂಥ ತಾಯಿ ! ಶತ್ರು ಭಯಂಕರಳಾಗಿ, ದುಷ್ಕರ್ಮಿ ಗಳ ಶಿಕ್ಷಕಳಾಗಿ, ತಿದ್ದಲಾರದ ದುಷ್ಟರನ್ನು ಸಂಹರಿಸುವ, ಕೊಲ್ಲುವ ಶಕ್ತಿ ಅವಳು – 'ಮಾರಿ' ಎಂದರೆ ಹಾಗೆ ಕೊಲ್ಲುವವಳು – ಎಂದರೆ ಸರಿ ಯೊದೀತು ! ರಾಷ್ಟ್ರದ್ರೋಹಿಗಳಿಗೆ, ಸಮಾಜ ಶತ್ರುಗಳಿಗೆ ಹಾಗೆ ಭಯಂಕರಳಾಗಿರಬೇಕಾದವಳನ್ನು ನೀವು ನಿರಪರಾಧೀ ಪಶುಗಳನ್ನು ಕೊಂದು ' ತೃಪ್ತಿ ಪಡಿಸುತ್ತೇವೆ ' ಎಂಬುದು ನಿಮ್ಮ ಮೌಢ್ಯವಲ್ಲವೇ ? ಇಂದಿನಿಂದ ನಿಮ್ಮ ಗುಡಿಗಳಲ್ಲಿ ಪಶುವಧೆ, ನರಬಲಿ, ನಿಷೇಧಿತವಾಗಿದೆ. ಬೇಕಾದರೆ ಹೂ, ಹಣ್ಣು, ಅನ್ನ ಮೊದಲಾದವನ್ನು ನೈವೇದ್ಯ ಮಾಡಿ ಕೊಳ್ಳಿ ! ದುರಾಚಾರಿಗಳನ್ನು ಅರಸರು ಸಹಿಸಲಾರರು. " ಅಗಸ್ತ್ಯರು ದೊರೆಯ ಮುಖವನ್ನೂ ಶಿವಗುರುಗಳ ಮುಖವನ್ನೂ ನೋಡಿದರು.

ಅವರೀರ್ವರೂ ಕ್ರಮವಾಗಿ ಅಗಸ್ತ್ಯರು ಹೇಳಿದುದನ್ನೇ ಮತ್ತೆ ತಂತಮ್ಮ ಮಾತುಗಳಲ್ಲೂ ಹೇಳಿ, ಒಂದು ರೀತಿಯ ಪ್ರಭಾವವನ್ನು ಜನರ ಮೇಲೆ ಉಂಟು ಮಾಡಿದರು !

ಬಂಧಿತರನ್ನು ಮತ್ತೆ ಸೆರೆ ಮನೆಗೆ ಕೊಂಡೊಯ್ಯಲಾಯಿತು ! ಮುಂದಿನ ಹುಣ್ಣಿಮೆಯವರೆಗೆ ಅವರನ್ನು ಸೆರೆಯಲ್ಲೇ ಇಡಲಾಯಿತು !

* * *

ಅಂದು ಸಂಜೆ ಚಂದ್ರೋದಯ ಕಾಲಕ್ಕೆ ಅಗಸ್ತ್ಯರು ಮತ್ತೆ ಸಮುದ್ರ ವನ್ನು ನೀರಿನಿಂದ ತುಂಬುವರೆಂದೂ ಜನರು ಸೇರಿ, ಸಮುದ್ರ ದಂಡೆ ಯಿಂದ ಈ ಪವಾಡವನ್ನು ವೀಕ್ಷಿಸಬಹುದೆಂದೂ ರಾಜ್ಯದಾದ್ಯಂತ ಘೋಷಣೆಯನ್ನು ನಾಲ್ಕೆಂಟು ದಿನಗಳ ಮುಂಚಿನಿಂದಲೇ ಮಾಡಲಾಗಿತ್ತು!

ಪೂರ್ವ ಕರಾವಳಿಯ ಉದ್ದಕ್ಕೂ ಕೋಟಿಗಟ್ಟಳೆ ಜನ ನೇರಿ ಕಿಕ್ಕಿರಿದು ನಿಂತರು ! ರಾಜಧಾನಿಯ ಆಚಿನ ಸಮುದ್ರ ತೀರದಲ್ಲಿ ಸ್ವಯಂ ಅಗಸ್ತ್ಯ ರನ್ನೇ ವೀಕ್ಷಿಸಲೂ ಜನ ಕೋಟಿ ಸೇರಿತ್ತು!

ಕಾಲಕೇಯರನ್ನೂ, ಮಣಿಗ್ರೀವನನ್ನೂ, ಅವನ ಅನುಚರರನ್ನೂ ಕೈ ಕಾಲು ಕಟ್ಟಿ ಸಮುದ್ರಕ್ಕೆ ತರಲಾಗಿತ್ತು. ಉಪಾಸನೆಯ ಹೆಸರಲ್ಲಿ ದುರಾಚಾರ ನಡೆಸಿದ್ದ ವಂಚಕರನ್ನೂ ಸಹ !

ಅಗಸ್ತ್ಯರು ದರ್ಭಾಸನದಲ್ಲಿ ಕುಳಿತು ಧ್ಯಾನಾಸಕ್ತರಾಗಿದ್ದರು ! ತುಂಬ ಹೊತ್ತು ಧ್ಯಾನದಲ್ಲಿದ್ದು ಮಹರ್ಷಿ ಕಣ್ಣು ತೆರೆದರು. ತಾವು ಪಾನ ಮಾಡಿದ್ದ ಸಮುದ್ರತೀರ್ಥವನ್ನು ಅಭಿಧ್ಯಾನಿಸಿದರು. "ವರುಣ ದೇವ ! ನನ್ನ ತಂದೆಯೇ ! ನೀನು ನನ್ನಲ್ಲಿ ಅಡಗಿ, ನಿನ್ನ ವಿರಾಟ್ ಸ್ವರೂಪವನ್ನು ಸಂಕೋಚ ಮಾಡಿಕೊಂಡು ಸಂಕಟ ಪಡುತ್ತಿರುವೆ ! ಯೋಗಿಯಾದವನು ಯೋಗಶಕ್ತಿಯನ್ನು ಪ್ರದರ್ಶಿಸಬಾರದೆಂದು ಹಿರಿಯರ ಮತ ! ಆದರೆ ಲೋಕಹಿತಕ್ಕಾಗಿ ಅದು ಆದರೆ ತಪ್ಪಿಲ್ಲ ! ಅಸುರರನ್ನು ಪತ್ತೆ ಹಚ್ಚಲು ನೀನು ಅಂದು ಉಪಕರಿಸಿದೆ. ಲೋಕವನ್ನು ಉಳಿಸಲು ಮತ್ತೆ ಇಂದು ನೀನು ಸ್ವಸ್ಥಾನವನ್ನು ಸೇರಿಕೋ" ಎನ್ನುತ್ತಾ ಮಹರ್ಷಿ ಮತ್ತೆ ಕಣ್ಣು ಮುಚ್ಚುತ್ತಾನೆ !

ಅಗಸ್ತ್ಯರ ಎರಡೂ ಕಿವಿಗಳಿಂದ ತೀರ್ಥ ಹೊರಗೆ ನಿರಂತರವಾಗಿ ಹರಿಯಲು ಆರಂಭಿಸುತ್ತದೆ ! ಅದೇ ವೇಳೆಗೆ ದಿಢೀರನೆ ಆಕಾಶದಲ್ಲಿ ಮೋಡಗಳು ಕಾಣಿಸಿಕೊಂಡು ಚಂದ್ರ ಮರೆಯಾಗುತ್ತಾನೆ. ಮಳೆ ಧಾರಾಕಾರವಾಗಿ ಸುರಿಯಲಾರಂಭಿಸುತ್ತದೆ ! ಸಮುದ್ರ ತಳದಲ್ಲಿ ನೀರು ಉಕ್ಕಿ ಬರಲೂ ಆರಂಭವಾಗುತ್ತದೆ. ಸತತವಾಗಿ ಹತ್ತು ದಿನ ಅಭೂತ ಪೂರ್ವ ವೃಷ್ಟಿಯಾಗುತ್ತದೆ ! ಏಕಾಸನದಲ್ಲಿ ಕುಳಿತ ಮಹರ್ಷಿ ವಿಚಲಿತನಾಗದೆ, ತಾನು ಕುಡಿದ ನೀರನ್ನೆಲ್ಲ ಹಾಗೇ ಹೊರಗೆ ಚೆಲ್ಲುತ್ತಾನೆ ! ಜನರೂ ಈ

ಪವಾಡವನ್ನು ನೋಡುತ್ತಾ, ರಾತ್ರಿ-ಹಗಲುಗಳೆಂಬ ಭೇದವನ್ನೂ, ಹಸಿವು ಆಯಾಸಗಳನ್ನೂ ಮರೆಯುತ್ತಾರೆ.

ಹತ್ತು ದಿನ ಮುಗಿದು ಮಳೆ ನಿಲ್ಲುತ್ತದೆ. ಅಗಸ್ತ್ಯರ ಕಿವಿಗಳಿಂದ ನೀರು ಹೊರ ಬರುವುದೂ ಸಹ! ಸಮುದ್ರ ಎಂದಿನಂತೆ ತುಂಬಿ ಭೋರ್ಗರೆಯುತ್ತದೆ.

ಅರಸು ಭಟರು ಕಾಲಕೇಯ, ಮಣಿಗ್ರೀವ, ಅವರ ಸಹ ಚರರನ್ನೆಲ್ಲ ತಲೆ ತುಂಡರಿಸಿ ಸಮುದ್ರದಲ್ಲಿ ಒಗೆಯುತ್ತಾರೆ. ಉಳಿದವರಿಗೆ ಶಾಶ್ವತ ಸೆರೆವಾಸ ಮುಂದುವರೆಯುತ್ತದೆ.

* * *

ದ್ರವಿಡ ದೇಶ ಸುಭಿಕ್ಷವಾಯಿತು! ಇಲ್ಲಿ ನಡೆದ ಪವಾಡದ ಬಗೆಗೆ ಕೇಳಿಯೋ, ಪಾಂಡ್ಯ ದೇಶದಲ್ಲೂ ಒಂದು ಪವಾಡ ನಡೆಯುತ್ತದೆ. ಪಾಂಡ್ಯ ದೊರೆ, ಹಿಂದಿನ ಅರಸನನ್ನು, ಅದೇ ರೀತಿ ವಾಮಾಚಾರದಿಂದ ಕೊಂದವರನ್ನು ಪತ್ತೆ ಹಚ್ಚಿ ಶಿಕ್ಷಿಸಲು ಸ್ವಯಂ ಅಗಸ್ತ್ಯರೇ ಬರುತ್ತಿರುವ ರೆಂದೂ, ಬಹಿರಂಗ ವಿಚಾರಣೆಗೆ ಮುಂಚೆಯೇ ತಪ್ಪೊಪ್ಪಿಗೆ ಮಾಡಿಕೊಂಡ ವರಿಗೆ ಉದಾರವಾಗಿ ಸರ್ಕಾರವು ವರ್ತಿಸುವುದೆಂದೂ, ಘೋಷಣೆಗಳನ್ನು ಕೇಳಿಯೇ ಭಯಭೀತರಾದ ಅಪರಾಧಿಗಳು ತಾವಾಗಿಯೇ ಮುಂದೆ ಬಂದು ಹಾಜರಾಗುತ್ತಾರೆ. ಅಲ್ಲೂ ಅಗಸ್ತ್ಯರ ಹೆಸರನ್ನು ಉಚ್ಚರಿಸಿದ ಮಾತ್ರ ದಿಂದಲೇ ಎಲ್ಲೆಲ್ಲೂ ಸುಭಿಕ್ಷ ನೆಲೆ ನಿಲ್ಲುತ್ತದೆ. ಅಗಸ್ತ್ಯರು ಕೋಟಿಕೋಟಿ ದಕ್ಷಿಣದ ಜನರ ಮನಸ್ಸನ್ನು ಗೆದ್ದುದು ಹೀಗೆ!

ಒಂದು ರಾತ್ರಿ ಅಗಸ್ತ್ಯರು, ಪತ್ನಿ ಲೋಪಾಮುದ್ರೆಯೊಡನೆಯೂ, ಪುತ್ರ ಇಧ್ಮವಾಹನೊಡನೆಯೂ ಏಕಾಂತದಲ್ಲಿದ್ದಾರೆ.

**ಲೋಪಾಮುದ್ರೆ :** "ಪ್ರಭು ! ಸಮುದ್ರವನ್ನೇ ತಪಶ್ಶಕ್ತಿಯಿಂದ ಖಾಲಿ ಮಾಡಿ ತುಂಬಿದವರಿಗೆ, ಬೇರೊಂದು ಖಾಲಿಸಮುದ್ರವನ್ನು ತುಂಬುವುದಾಗದೇ ? ಅತ್ತ ಮನವಿಲ್ಲವೋ !"

ಅಗಸ್ತ್ಯರು ಚಕಿತರಾಗುತ್ತಾರೆ ! ಲೋಪಾಮುದ್ರೆಯತ್ತ ದೃಷ್ಟಿ ಹೊರಳಿಸಿ, ಬಹುಕಾಲ ಅವಳನ್ನೇ ನಿಟ್ಟಿಸಿ ನೋಡಲಾರಂಭಿಸುತ್ತಾರೆ ! ಲೋಪಾಮುದ್ರೆ ಈಗ ಯುವತಿಯಲ್ಲ ! ಮಧ್ಯ ವಯಸ್ಸು ಮುಗಿಯುತ್ತಾ ಬಂದು, ಚರ್ಮ ಸುಕ್ಕುಕಟ್ಟಲಾರಂಭಿಸಿದೆ. ಕಂಗಳ ಸೌಂದರ್ಯವೋ, ತೀಕ್ಷ್ಣತೆಯೋ, ದೃಷ್ಟಿಯೋ ಕೊಂಚವೂ ಮಂದವಾಗಿಲ್ಲ ! ತಲೆಯಲ್ಲಿ ಪುಷ್ಕಳವಾಗಿ ನರೆಗೂದಲು ಕಾಣಿಸಿಕೊಂಡಿದೆ ! ಅಗಸ್ತ್ಯರೂ ವೃದ್ಧರಾಗುತ್ತಿದ್ದಾರೆ ! ಈಗ ಲೋಪಾಮುದ್ರೆಯನ್ನು ನಿಟ್ಟಿಸಿ ನೋಡಿದ ಬಳಿಕ, ತಮ್ಮ ಶರೀರವನ್ನೂ ಹಾಗೇ ನೋಡಿಕೊಂಡು ಅಗಸ್ತ್ಯರು ಉತ್ತರಿಸಲಾರಂಭಿಸುತ್ತಾರೆ

**ಅಗಸ್ತ್ಯ :** "ದೇವಿ ! ದೇವತೆಗಳು ನನಗೆ ಹುಟ್ಟಿನಲ್ಲೇ ಒಂದು ಕಾರ್ಯವನ್ನು ತಲೆಗೆ ಕಟ್ಟಿದರು ! ಮನುಷ್ಯಮಾತ್ರನಿಗೆ ಒಂದು ಜನ್ಮದಲ್ಲಿ ಆಗ ತಕ್ಕ ಕೆಲಸ ಅದಲ್ಲವೆಂಬುದನ್ನು ಮನಗಂಡ ನಾನು ಬ್ರಹ್ಮಚರ್ಯದಲ್ಲೇ ಉಳಿಯಲು ಸಂಕಲ್ಪಿಸಿದ್ದೇ ನಿನ್ನ ಕೈ ಹಿಡಿಯಬೇಕಾಯಿತು !..."

**ಲೋಪಾಮುದ್ರೆ :** "ನಿಮ್ಮ ವ್ರತವನ್ನು, ಬ್ರಹ್ಮಚರ್ಯವನ್ನು ಕೆಡಿಸಿದ ನಾನು ಶಾಪಕ್ಕೆ ಸಿದ್ಧಳಾಗಿದ್ದೇನೆ, ಪ್ರಭು !"

**ಅಗಸ್ತ್ಯ :** "ನೀನು ವ್ರತವನ್ನು ಕೆಡಿಸಿದೆಯೆಂದು ಹೇಳಿದವರಾರು ? ನನ್ನ ಬ್ರಹ್ಮಚರ್ಯವೂ ಕೆಡಲಿಲ್ಲ ! ಆ ಇನ್ನೊಂದು ಸಮುದ್ರವನ್ನು ಕುರಿತು ನೀನು ಹೇಳಿದೆಯಲ್ಲ ! ಅದನ್ನು ತುಂಬುವುದು ಮಾತ್ರ

ನನ್ನಿಂದಾಗಲಿಲ್ಲ ! ಗೃಹಸ್ಥಾಶ್ರಮದಲ್ಲಿರುವ ಸದ್ಗೃಹಸ್ಥನು ಪತ್ನಿಯೊಡನೆ ಸುಖದಲ್ಲಿರುತ್ತಾ, ವಿಹಿತ ಭೋಗಗಳನ್ನನುಭವಿಸುತ್ತಾ, ಅವಳ ಹೃದಯ ಸಾಗರವನ್ನು ಪ್ರೇಮ ವರ್ಷದಿಂದ ತುಂಬಬೇಕಾದುದು ಪತಿಯ ಕರ್ತವ್ಯ! ಇದನ್ನು ಮಾಡಲಾಗದ ನಾನು ಈಗ ಶಾಪಕ್ಕೆ ಸಿದ್ಧನಾಗೇ ಇರಬೇಕೇ ಹೊರತು ನೀನಲ್ಲ ! ಮೇಲಾಗಿ ನನ್ನ ಪಿತೃಗಳ ಆಜ್ಞೆಯೂ ಇತ್ತು. ಸ್ವಾಭಾವಿಕವಾಗಿ ಗಾರ್ಹಪತ್ಯದಲ್ಲಿ ಒಲವಿಲ್ಲದ ನನಗೆ ಕಣ್ಣು ತೆರೆದವಳೂ ನೀನೇ ! ಲೋಕಕ್ಕೆ ಇನ್ನೊಬ್ಬ ಅಗಸ್ತ್ಯನನ್ನು ನಾವಿಬ್ಬರೂ ಇತ್ತುದಾಗಿದೆ! ಪಿತೃಗಳೂ ಸದ್ಗತಿ ಹೊಂದಿ ಆಗಿದೆ ! ಇದೋ, ಲೋಕಕ್ಕೂ ಅಷ್ಟಿಷ್ಟು ಕರ್ತವ್ಯ ಮಾಡಿ ಆಗಿದೆ ! ಇನ್ನು ಆ ಇನ್ನೊಂದು ಸಮುದ್ರವನ್ನು ತುಂಬುವಲ್ಲಿ ಈ ಅಗಸ್ತ್ಯ ತನ್ನನ್ನು ಅರ್ಪಿಸಿಕೊಳ್ಳುತ್ತಾನೆ.''

**ಲೋಪಾ :** "ಸ್ವಾಮಿ! ಸ್ವಾರ್ಥದ ಸಂಕೋಲೆಯಲ್ಲಿ ನಿಮ್ಮನ್ನು ಬಂಧಿಸುವವಳು ನಾನಲ್ಲ ! ಅರ್ಧಾಯುಷ್ಯವೇ ಮುಗಿಯುತ್ತ ಬಂದ ನನಗೆ ಇನ್ನೂ ಐಹಿಕ ಭೋಗದ ಭ್ರಾಂತಿಯೇ ! ಚಿಕ್ಕವಯಸ್ಸಿನಲ್ಲೇ ಆ ಭ್ರಾಂತಿಯಿಂದ ದೂರವಾದವಳಿಗೆ ಈಗ ಆ ಚಾಪಲ್ಯವಿಲ್ಲ ! ನಿಮ್ಮ ಸಾಂನ್ನಿಧ್ಯದಲ್ಲಿ ಹೆಚ್ಚು ಕಾಲ ಕಳೆಯುವ ನನ್ನ ಆಸೆಯನ್ನು ಸ್ವಾರ್ಥವೆಂದು ತಾವೂ ಭಾವಿಸಲಾರಿರಿ ಎಂದು ನಂಬಿದ್ದೇನೆ ! ನಿಮ್ಮ ಪುತ್ರ ನಿಮ್ಮನ್ನು ಮೀರಿಸುತ್ತಾನೆಂಬ ವಿಶ್ವಾಸವೂ ನನಗುಂಟು. ಲೋಕ ಸೇವೆಯಲ್ಲೇ ಶರೀರ ಸವೆಸಿದ ತಮಗೆ ಪತ್ನಿಯಾದ ನಾನು ಹೇಗೂ ಬಳಿಯಿದ್ದು ಸೇವೆ ಮಾಡುವ ಭಾಗ್ಯ ಇನ್ನಷ್ಟು ಬೇಕೆಂಬುದೇ ನನ್ನ ಕೋರಿಕೆ ! ತಮ್ಮ ಲೋಕ ಸೇವೆ ಸಾಕೆಂದು ಹೇಳುವವಳು ನಾನಲ್ಲ ! ಆ ಸೇವೆ ಮುಗಿಯುವುದೂ ಇಲ್ಲ ! ಕಾಲಕೇಯರು ಹತರಾದರೆ ಬೇರಾರೋ ಹುಟ್ಟಿ ಬರುತ್ತಾರೆ ! ಇಲ್ವಲ ಒಂದೆಡೆ ಸತ್ತರೆ ಇನ್ನೆಲ್ಲೋ ಹುಟ್ಟಿ ಬರುತ್ತಾನೆ ! ತಮ್ಮ ಕಾರ್ಯ ಕ್ಷೇತ್ರ ದೇಶ ಕಾಲಗಳಿಗೆ ಸೀಮಿತವಾದುದಲ್ಲ ! ಆ ಎಲ್ಲ ನಿಮ್ಮ ಕಾರ್ಯ

ದಲ್ಲೂ ನಿಮ್ಮ ಸಹಭಾಗಿಯಾಗಿರುತ್ತಲೇ ಈ ದೇಹವನ್ನು ಬಿಡಬೇಕೆಂಬಾಸೆ ನನ್ನದು !"

"ದೇಹಬಿಡುವ" ಮಾತನ್ನ ಕೇಳಿ ಅಗಸ್ತ್ಯರು ಚಕಿತರಾಗುತ್ತಾರೆ ! ಒಂದು ಕ್ಷಣ ಗಂಭೀರವಾಯಿ ಮುದ್ರೆಯನ್ನು ತಾಳಿ, ಚಿಂತಿಸುತ್ತಾರೆ ! "ದೇವತೆಗಳನ್ನು ಕೇಳಿಯೇ ಬಿಡುತ್ತೇನೆ !" ಎಂದುಕೊಳ್ಳುತ್ತಾರೆ ! ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಹರಿಯಲಾರಂಭಿಸುತ್ತದೆ ! ಅಸುರ ಭಯಂಕರನಿಗೆ, ವಿಂಧ್ಯನನ್ನು ಬಗ್ಗಿಸಿದ ಯೋಗೀಶ್ವರನಿಗೆ, ಸಮುದ್ರವನ್ನೇ ಶೋಷಿಸಿದ ಅತಿಮಾನುಷನಿಗೆ, ಅಹಂಕಾರ – ಮಮಕಾರಗಳನ್ನು ಪೂರ್ಣ ವಾಗಿ ಗೆದ್ದ ಪುರುಷೋತ್ತಮನಿಗೆ ಕಂಗಳಲ್ಲಿ ನೀರು !!

ಲೋಪಾಮುದ್ರೆಗೂ ಕಂಗಳಲ್ಲಿ ನೀರು ಉಕ್ಕುತ್ತದೆ ! ತಂದೆ ತಾಯಿಯರ ಈ ಸ್ಥಿತಿ ನೋಡಿ, ಪುತ್ರ ಇಧ್ಮವಾಹ, ಆಶ್ರಮದಿಂದ ಆಚೆಗೆ ಸರಿಯುತ್ತಾನೆ !

**ಅಗಸ್ತ್ಯ** : "ಪ್ರಿಯೇ ! ಇದೇನು ದೇಹಬಿಡುವ ಮಾತು ?"

**ಲೋಪಾ** : "ಯಾರಿಗಾದರೂ ಒಂದು ದಿನ ಆಗುವ ಮಾತು ಅಲ್ಲವೆ ?"

**ಅಗಸ್ತ್ಯ** : "ಇದು ಇಂದೇಕೆ ನಿನ್ನ ಬಾಯಲ್ಲಿ ?"

ಲೋಪಾಮುದ್ರೆ ಉತ್ತರಿಸುವುದಿಲ್ಲ ! ಅಗಸ್ತ್ಯರು ಪತ್ನಿಯನ್ನು ಆಲಿಂಗಿಸಿಕೊಂಡು, ಮಗುವಿನಂತೆ ಅಳುತ್ತಾರೆ ! ಲೋಪಾಮುದ್ರೆ ಪತಿಯ ಆ ಪ್ರೇಮಕ್ಕೆ ಸ್ಪಂದಿಸಿ ಧನ್ಯಳಾಗುತ್ತಾಳೆ.

"ಪ್ರಭು ! ನೀವೇ ಖಾಲಿ ಮಾಡಿದ್ದ ಸಮುದ್ರವನ್ನು ನೀವೇ ತುಂಬಿದ್ದು ಸರಿಯೇ! ನೀವೆಂದೂ ಖಾಲಿಮಾಡದ ಆ ಇನ್ನೊಂದು ಸಮುದ್ರ

# ೨೪ ಸಮುದ್ರಯಾನ ಮುಗಿಸಿ ಸಹ್ಯಾದ್ರಿಯ ಮಡಿಲಲ್ಲಿ !

ಅರಮನೆಯಿಂದ ಸ್ವಯಂ ದಂತಿವರ್ಮನೇ ಅಂದು ಪ್ರಾತಃಕಾಲ ಮಹರ್ಷಿಯ ದರ್ಶನಾರ್ಥಿಯಾಗಿ ಬಂದಿದ್ದ. ಪ್ರಾತರಾಹ್ನಿಕಗಳನ್ನು ಮಹರ್ಷಿ ಮುಗಿಸುವತನಕ ಅವನು ನಿರೀಕ್ಷಣಾಶಾಲೆಯಲ್ಲಿ ಕಾಯ-ಬೇಕಾಯ್ತು.

ಅಗಸ್ತ್ಯ ದಂಪತಿಗಳು ರಾಜನಿಗೆ ದರ್ಶನವಿತ್ತರು ! ದೊರೆ, ವಿದೇಶಗಳಿಂದ ರಾಜರು ಅಗಸ್ತ್ಯರನ್ನು ಆಹ್ವಾನಿಸುತ್ತಿರುವುದಾಗಿಯೂ, ಅವರ ದೇಶಗಳಲ್ಲಿ ಕಾಲಕೇಯರಿಗೂ ಮಣಿಗ್ರೀವಾದಿಗಳಿಗೂ ಆಶ್ರಯ ದೊರೆತಿದ್ದ ಬಗೆಗೆ ವಿಷಾದಿಸುತ್ತಿರುವುದಾಗಿಯೂ, ಅವರ ತಪ್ಪುಗಳನ್ನು ಮನ್ನಿಸಿ, ಮಹರ್ಷಿ ಅವರ ದೇಶಗಳಿಗೆ ಭೇಟಿಕೊಟ್ಟು ಅಲ್ಲಿ ಆರ್ಯ ಧರ್ಮ ಪ್ರಸಾರ ಮಾಡಬೇಕೆಂದೂ ಪ್ರಾರ್ಥಿಸಿ, ರಾಯಭಾರಿಗಳನ್ನು ಕಳುಹಿರುವುದಾಗಿಯೂ ವಿಜ್ಞಾಪಿಸಿದ.

ಮಹರ್ಷಿ ಯೋಚಿಸಿದ ! ಸಪ್ತರ್ಷಿಮಂಡಳದಲ್ಲಿ ಈ ವಿಷಯವನ್ನು ಚರ್ಚಿಸಿ ಉತ್ತರಿಸುವುದಾಗಿ ಹೇಳಿ, ಮೊದಲು ಆ ಆ ದೇಶಗಳಲ್ಲಿ ಇನ್ನೂ ತಲೆಮರೆಸಿ ಉಳಿದುಕೊಂಡಿರಬಹುದಾದ ಕಾಲಕೇಯ ಮಣಿಗ್ರೀವರ ಕಡೆಯವರನ್ನು ದ್ರಮಿಡ ಅರಸನಿಗೆ ಒಪ್ಪಿಸಬೇಕೆಂಬ ಶರತ್ತನ್ನೂ ಹಾಕಿದ.

* * *

ಮತ್ತೆ ನಾಲ್ಕು ತಿಂಗಳಾದವು. ಮಳೆಗಾಲಕ್ಕೆ ಮುಂಚಿತವಾಗಿ ಆ ವರ್ಷ ಸಪ್ತರ್ಷಿಮಂಡಳವು ಕುಂಭಪುರಿಯಲ್ಲಿ (ಈಗಿನ ಕುಂಭಕೋಣಂ) ನಡೆಯಿತು. ಸಹಸ್ರಾರು ಋಷಿಗಳು ಒಟ್ಟಿಗೆ ದಕ್ಷಿಣಭಾರತಕ್ಕೆ ಬಂದುದು ಅದೇ ಮೊದಲು ! ಕಾವೇರಿಯ ರಮ್ಯತೆಗೆ, ಅದರ ತೀರ್ಥಶುದ್ಧಿಗೆ, ಅದರ ಪ್ರವಾಹದ ಸೊಬಗು, ಬೆಡಗುಗಳಿಗೆ ಸ್ವಯಂ ಅಗಸ್ತ್ಯರೇ ಮನ ಸೋತರು ! ವೇದವಲ್ಲಿ ಮರುದ್ವೃಧಾ ಎಂದೂ, ಪ್ರಾಚೀನ ಸಾಹಿತ್ಯದಲ್ಲಿ ಕನಕಸರಿತ್ ಎಂದೂ ಕೊಂಡಾಡಲ್ಪಟ್ಟ ಆ ತೀರ್ಥದ ರುಚಿಗೆ, ಬಣ್ಣಕ್ಕೆ ಆರೋಗ್ಯವರ್ಧಿಸುವ ಶಕ್ತಿಗೆ, ಕಾವೇರಿಯ ಉಭಯ ಪಾರ್ಶ್ವದ ಗದ್ದೆ, ತೋಟಗಳ ರಮ್ಯತೆಗೆ ಮಹರ್ಷಿ ಮನಸೋತ ! ನದಿ ದಡದ ದೊಡ್ಡ ತೋಟಗಳ ನಡುವೆ ಋಷಿಗಳಿಗೆ ಕುಟೀರಗಳು ನಿರ್ಮಾಣವಾಗಿದ್ದವು. ಅಗಸ್ತ್ಯರಿಗೆ ಈ ಮಹಾನದಿಯ ಅನೇಕ ಅಂಶಗಳು ಪರಿಚಿತವಾಗಿದ್ದಂತೆ ಸುಪ್ತ ಮಾನಸದಲ್ಲಿ ಅನ್ನಿಸಲಾರಂಭಿಸಿದರೂ, ಎಲ್ಲಿ, ಯಾವಾಗ ಎಂಬುದು ನೆನಪಾಗಲಿಲ್ಲ ! ಅದಕ್ಕೆ ಮತ್ತೆ ಐದಾರು ವರ್ಷಗಳೇ ಬೇಕಾದವು !

ದಕ್ಷಿಣಾವರ್ತವನ್ನು ಅಸುರರ ಕಾಟದಿಂದ ಮುಕ್ತಗೊಳಿಸಿ ಸಾತ್ವಿಕ ಜನಕ್ಕೆ ವಾಸಯೋಗ್ಯವನ್ನಾಗಿ ಅದನ್ನು ಏರ್ಪಡಿಸಿದ ಅಗಸ್ತ್ಯರನ್ನು ಮಹರ್ಷಿಗಳ ಸಂಘ ಮುಕ್ತ ಕಂಠವಾಗಿ ಕೊಂಡಾಡಿತು.

ಅಗಸ್ತ್ಯರೆಂದರು ; "ಆ ಕೆಲಸ ಮುಕ್ತಾಯವಾಗಿಲ್ಲ ! ದ್ವೀಪಾಂತರ ಗಳಲ್ಲಿ ಹುದುಗಿದ್ದ ಅಸುರರು ನಿರ್ನಾಮವಾದರೂ, ಆ ರಾಕ್ಷಸ ಬೀಜ ಮತ್ತೆ ಹುಟ್ಟಿಬಾರದಂತೆ, ಅಲ್ಲಿ ಆರ್ಯ ಸಂಸ್ಕೃತಿಯನ್ನು ನೆಲೆನಾಟಿ ಬರಬೇಕಾದ ಮಹಾಕಾರ್ಯವಿದೆ ! ಸಮಯವೂ ಅದಕ್ಕೆ ಅನುಕೂಲಕರ ವಾಗಿ ಒದಗಿ ಬಂದಿದೆ. ನನ್ನನ್ನು ಸಿಂಹಪುರದ ಅರಸು ಸಿಂಹಪಾಲನು ಆಹ್ವಾನಿಸಿದ್ದಾನೆ ! ಅಲ್ಲಿ ಪ್ರಾಚೀನ ನರಸಿಂಹದೇವಾಲಯದ ಜೀರ್ಣೋ ದ್ಧಾರ ಕಾರ್ಯ ಆಗ ಬೇಕಾಗಿದೆಯಂತೆ. ( ಈಗಿನ ಸಿಂಗಾಪೂರ. )

ವೈಖಾನಸ ಆಗಮ ಅಲ್ಲೆಲ್ಲಾ ಪ್ರಚುರಗೊಂಡಂತಿದೆ. ಕಾಂಬೋಜದ (ಕ್ಯಾಂಬೋಡಿಯ) ಅರಸ ಮಹಾವಿಷ್ಣುಭಕ್ತ, ಅವನು ತ್ರಿವಿಕ್ರಮನ ದೇವಾಲಯ ಕಟ್ಟಿಸುವನಂತೆ ! ಶ್ಯಾಮ ( ಸಯಾಮ್ ), ಬ್ರಹ್ಮ (ಬರ್ಮಾ), ಚಂಪಾರಣ್ಯ (ವಿಯೆಟನಾಂ) ಗಳ ಅರಸರಿಗೂ ವೇದೋಕ್ತ ದೇವತೆಗಳಿಗೆ ಉಪಾಸನಾ ಸ್ಥಳಗಳನ್ನು ರಚಿಸಲು ಆಸಕ್ತಿ ಇದೆಯಂತೆ ! ಸಪ್ತರ್ಷಿಗಳಲ್ಲಿ ಅಲ್ಲಿ ಯಾರಾದರೂ ಹಿಂದೆ ಹೋಗಿ ಬಂದುದುಂಟೆ ?"

ಸಭೆ ಈ ಮಾಹಿತಿಯನ್ನು ಕೇಳಿ ಸ್ತಬ್ಧವಾಯಿತು ! ಮರೀಚಿ, ಅತ್ರಿ, ಭೃಗುಗಳ ಪೈಕಿ ಕೆಲವು ಮೂಲ ಪುರುಷರು ದಕ್ಷಿಣಭಾರತಕ್ಕೆ, ಅಗಸ್ತ್ಯ ಪೂರ್ವದಲ್ಲಿ, ಹೋದುದಾಗಿಯೂ, ಅಲ್ಲಿ ಅಸುರರಿಂದ ಭಕ್ಷಿತರಾದರೆಂದು ತಾವು ಕೇಳಿದ್ದಾಗಿಯೂ, ಆ ಮೇಲೆ ಅವರು ವಾಪಸ್ಸು ಬಾರದೇ. ಅದು ನಿಜವಾಗಿರಬೇಕೆಂದು ಪೂರ್ವಿಕರು ಭಾವಿಸಿದ್ದಾಗಿಯೂ, ಆ ಮಹರ್ಷಿ ಸಂತಾನಗಳವರು ಹೇಳಿದರು !

ಅಗಸ್ತ್ಯರು ಹೇಳಿದರು ; "ಪೂರ್ವಿಕರ ಇತಿಹಾಸದಲ್ಲಿ ಜಗತ್ತಿನ ಭವಿಷ್ಯವೇ ಅಡಗಿರುತ್ತದೆ ! ಅದನ್ನು ಉದಾಸೀನ ಮಾಡಬಾರದು ! ಅವರು ಹಿಂದಿರುಗದ ಮಾತ್ರದಿಂದ ಅವರು ಅಸುರರಿಂದ ಭಕ್ಷಿತರಾದ ರೆಂದು ಅರ್ಥವಾಗುವುದಿಲ್ಲ ! ಪ್ರಾಯಃ ದಕ್ಷಿಣದಲ್ಲಿ ವೇದೋಕ್ತಯಾಗ ಯಜ್ಞಗಳತ್ತ ಜನರ ಒಲವು ಸಾಲದೇ ಇದ್ದ ಪ್ರಯುಕ್ತ, ಅವರು ಆಗಮದ ಪದ್ಧತಿಯನ್ನು ಪ್ರಚಾರಕ್ಕೆ ತಂದ ಮೊದಲಿಗರಾಗಿರಬೇಕು. ವಿಂಧ್ಯನ ಅಡ್ಡಗೋಡೆಯಿಂದ ಅವರು ಇಲ್ಲೇನು ಮಾಡಿದರು, ಹೇಗೆ ಜೀವನ ನಡೆಸಿದರೆಂಬುದು ತಿಳಿಯುತ್ತಿಲ್ಲ. ಆದರೆ ಅವರು ಅಸುರಭಕ್ಷಿತ ರಾಗಿದ್ದರೆ ಸಿಂಹಪುರದಲ್ಲಿ ನರಸಿಂಹದೇವಾಲಯ ಹೇಗೆ ಬಂದಿತು ? ಕಾಂಭೋಜದ ಅರಸ ವಿಷ್ಣುಭಕ್ತನಾದುದು ಹೇಗೆ ? ಪ್ರಾಯಃ ಯಾಗ ಗಳ ಕಾಲಮುಗಿಯಿತೆಂದು ನಮ್ಮವರೇ ಇವರು ಯಾರೋ ಈ ವೈಖಾನಸ

ಮಾರ್ಗವನ್ನು ಪ್ರಚಾರಕ್ಕೆ ತರದೇ, ಇದೆಲ್ಲ ಹೇಗಾಯಿತು ? .... ಅಂದ ಹಾಗೇ ಕಾಂಚೀಪುರದ ವರದವಿಷ್ಣು ಆಲಯದ ವೈಖಾನಸದೀಕ್ಷಿತರು, ನಾವಿತ್ತ ಬರುವುದಕ್ಕೆ ಮುಂಚೆಯೇ ಯಾವಾಗ ಬಂದರು ? ಅವರೆ ಪೂರ್ವಿಕರು ? "

ಪುಣ್ಯವಶಾತ್ ಆ ಸಪ್ತರ್ಷಿ ಮಂಡಳ ಸಭೆಯಲ್ಲಿ ಏನು ನಡೆಯುತ್ತ ದೆಂಬುದನ್ನು ನೋಡಲು ಸ್ವಯಂ ದೀಕ್ಷಿತರೇ ಬಂದಿದ್ದರು ! ಅಗಸ್ತ್ಯರು ಅವರನ್ನು ವೇದಿಕೆಯ ಮೇಲೆ ಆಹ್ವಾನಿಸಿ ಈ ಗೊಂದಲಕ್ಕೆ ಪರಿಹಾರ ವಿದ್ದರೆ ತಿಳಿಸಬೇಕೆಂದು ಪ್ರಾರ್ಥಿಸಿದರು. ವಯಸ್ಸಾದ ದೀಕ್ಷಿತರು ಮೇಲೆ ನಡೆದು, ಹೇಳಿದ ವಿಷಯಗಳ ಸಾರ ಇಷ್ಟು:

ವಿಖನಸ್ ಎಂಬುದು, ಆದಿಯಲ್ಲಿ ಬ್ರಹ್ಮದೇವನ ಹೆಸರು. ಅವನು ಯಜುಶ್ಶಾಖೆಗೆ ಅನುಸಾರವಾಗಿ ಒಂದು ಸೂತ್ರಗ್ರಂಥವನ್ನು ವರ್ಣಾಶ್ರ ಮಾಚಾರವುಳ್ಳ ವೈದಿಕರಿಗಾಗಿ, ಶ್ರೌತಸ್ಮಾರ್ತ ವಿಷಯಗಳನ್ನೊಳಗೊಂಡು ದನ್ನು ಬರೆದ. ಅದೇ ವೈಖಾನಸ ಸೂತ್ರ. ಅವನಿಗೆ ಒಂಬತ್ತು ಶಿಷ್ಯರಿ ದ್ದರು : ಕಾಶ್ಯಪ, ಅತ್ರಿ, ಮರೀಚಿ, ವಸಿಷ್ಠ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ಭೃಗು – ಎಂಬುವರೇ ಅವರು. ಇವರಿಗೇ " ಚಿತ್ರ ಶಿಖಂಡಿ " ಗಳೆಂಬ ಹೆಸರೂ ಉಂಟು ! ( ಶಿಖಂಡ ಎಂದರೆ ಶಿಖೆ, ಜುಟ್ಟು. ಅವನ್ನು ಚಿತ್ರವಾದ, ಚೆಂದವಾದ, ಆಕೃತಿಗಳಲ್ಲಿ ಕಟ್ಟಿಕೊಳ್ಳುವವರಿಗೆ ಆ ಹೆಸರು ಯುಕ್ತ ! ) ಇವರೆಲ್ಲ ಮೇರುಶಿಖರದಲ್ಲಿ ಕುಳಿತು ತಪಸ್ಸು ಮಾಡಿ, ಏಕ ಬುದ್ಧಿಯಿಂದ, ಭಗವಂತನಾದ ಮಹಾವಿಷ್ಣುವನ್ನು ಆರಾಧಿಸುವ, ಸುಲಭ ವಾಗಿ ಸಾಕ್ಷಾತ್ಕರಿಸುವ, ಒಂದು ಪೂಜಾಪದ್ಧತಿಯನ್ನು ಕಂಡುಹಿಡಿದರು ! ಅದೇ, ವೈಖಾನಸಾಗಮ ಎನಿಸಿತು. ಆದಕ್ಕೆ ಅವರು ಸಾವಿರ ವರ್ಷ ತಪಸ್ಸು ಮಾಡಿದ್ದರು ! ಬ್ರಹ್ಮದೇವನ ( ವಿಖನಸನ ) ಮಾರ್ಗ, ವೇದೋಕ್ತ ಉಪಾಸನೆಗಿಂತ, ಮಾರ್ಗದಲ್ಲಿ ಭಿನ್ನವಾಗಿದ್ದರೂ, ಗುರಿಯಲ್ಲಿ,

ಪರಿಭಾಷೆಯಲ್ಲಿ ತಪಸ್ಸಿನ ಮಾರ್ಗದಲ್ಲಿ ಒಂದೇ ಜಗಿತ್ತು. ಗಣಿಯಲ್ಲಿ ಅಗೆಯುವವನು ಚಿನ್ನವನ್ನು ಹುಡುಕುವಂತೆ, ಇದೂ ದೇವರನ್ನು ಸೃಷ್ಟಿ-ಯ ಮಧ್ಯೆಯೇ ಹುಡುಕುವ, ಅರಸುವ ದಾರಿಯಾದದರಿಂದಲೇ ಬ್ರಹ್ಮನಿಗೂ 'ವಿಖನಸ' ಎಂಬ ಹೆಸರು, 'ಖನ್' ಧಾತುವಿನಿಂದಲೇ ಉಂಟಾಯಿತು.

**ಖನಿತ್ವಾ ಚಾತ್ಮನಾತ್ಮಾನಂ ಧರ್ಮಾದಿಗುಣ ಸಂಯುತಂ ।**
**ಯಾನಮಾವಿಶ್ಯ ಯೋಗೇನ ಹ್ಯಾಸೀತ್ ವಿಖನಸೋ ವಿಭುಃ ॥**

(ಇಂಥ ವಂಶದ ಪೂರ್ವರು ವೈಖಾನಸ ಮಹರ್ಷಿಗಳು ಪ್ರತ್ಯಕ್ಷ ಮಾಡಿಕೊಂಡ ಮಂತ್ರಗಳ ಪೈಕಿ, ಮುವ್ವತ್ತು ಗಂಭೀರ ಸ್ವರೂಪದ ಮಂತ್ರಗಳು ಈಗಲೂ ಋಗ್ವೇದದಲ್ಲಿವೆ. [9-66.]) ವೈಖಾನಸರು ವಿಷ್ಣು ಪೂಜಾ ನಿರತರು, ''ಮಹೇ ಶೂರಾಯ ವಿಷ್ಣವೇ ಚಾರ್ಚತ"-"ರಕ್ಷಣ ದಕ್ಷನಾದ ಶ್ರೀಮಹಾವಿಷ್ಣುವನ್ನೇ ಅರ್ಚಿಸಿರಿ." (ಋ.ಸಂ. 1-551-1) ಎಂಬುದೇ ಇವರ ಸಂದೇಶ. ಈ ವೈಖಾನಸಶಾಸ್ತ್ರವೇ ಏಕಾಯನವೆಂದೂ ಮುಂದೆ ವ್ಯವಹಾರದಲ್ಲಿ ಬಂದಿತು. ಶ್ರೀಶಾಸ್ತ್ರವೆಂದರೂ ಇದೇ ಒಬ್ಬನನ್ನೇ ನಂಬಿ ನಡೆಯುವ ದಾರಿ. ಸಕಲ ವೇದಗಳೂ ಶ್ರೀಮಹಾವಿಷ್ಣುವನ್ನೇ ಸಾರ್ವಭೌಮದೇವತೆಯೆಂದೂ, ಅಗ್ನಿಯನ್ನು ನಮ್ಮ ಅತೀ ಸಮೀಪದ ದೇವತೆಯೆಂದೂ, ಉಳಿದವರನ್ನು ನಡುವಿನ ದೇವತೆಗಳೆಂದೂ ಹೇಳುವುದನ್ನೇ ನಂಬಿ ನಡೆಯುವ ಇವರನ್ನು ಶ್ರೀವೈಷ್ಣವರೆಂದೂ ವ್ಯವಹರಿಸುವುದುಂಟು. ಅನಾದಿ ಕಾಲದಲ್ಲೇ, ದಕ್ಷಿಣವು ರಾಕ್ಷಸಾವರ್ತವೆನಿಸಿದ್ದ ಕಾಲದಲ್ಲೂ, ಈ ಮಹರ್ಷಿಗಳಲ್ಲಿ ಅತ್ರಿ, ಅಂಗಿರಸ್, ಭೃಗು ಮುಂತಾದ ಕೆಲವೇ ಕೆಲವರು. ಇತ್ತ ಬಂದು ಈ ಮತವನ್ನು ಪ್ರಚುರಿಸುತ್ತಾ, ನಾನಾ ಕಷ್ಟಗಳನ್ನೆದುರಿಸುತ್ತಾ, ಅಲ್ಲಲ್ಲಿ ವಿಷ್ಣುದೇವಾಲಯಗಳನ್ನು ನಿರ್ಮಿಸಿ ಇಂದಿಗೂ ಪೂಜೆ ನಡೆಸುತ್ತಿರುವರೆಂದೂ, ಆ ಪೈಕಿ ಹಲವರು ಅಸುರರಿಗೂ

ವಿಷ್ಣುದೀಕ್ಷೆ ಕೊಟ್ಟುದುಂಟೆಂದೂ, ಸಿಂಹಪುರ, ಕಾಂಭೋಜಾದಿ ದ್ವೀಪಾಂತರಗಳಲ್ಲೂ ದೇಶಾಂತರಗಳಲ್ಲೂ ವಿಷ್ಣು ಪೂಜಾಪದ್ಧತಿ ಹರಡಿದ್ದು ಹೀಗೆಯೇ ಎಂದೂ ದೀಕ್ಷಿತರು ವಿವರಿಸಿದರು. ಇವರ ಪೂರ್ವಿಕರು ಎಲ್ಲರೂ ವಾನಪ್ರಸ್ಥರಾಗಿಯೇ ದೀಕ್ಷೆ ಪಡೆದುದರಿಂದ ದೀಕ್ಷಿತರೆಂಬ ಹೆಸರೂ ಉಂಟಾಯಿತೆಂದೂ, ಇವರಲ್ಲಿ ಯಾರೂ ಸಂನ್ಯಾಸಿಗಳಿಲ್ಲವೆಂದೂ, ಈ ಪದ್ಧತಿಗೆ ಅನ್ಯಪ್ರವೇಶವಿಲ್ಲದಂತೆ, ವಂಶಾನುಕ್ರಮದಲ್ಲಿ ಮಾತ್ರ ಇವರ ಪ್ರಸಾರವು ವಿಶಿಷ್ಟವೆಂದೂ ಸೇರಿಸಿದರು.

ಸಪ್ತರ್ಷಿ ಮಂಡಳದ ಮುಖ್ಯರು ತಂತಮ್ಮ ಪಿತೃಗಳನ್ನು ಧ್ಯಾನಿಸಿ "ಇದು ನಿಜವೇ ?" ಎಂದು ಪ್ರಶ್ನಿಸಲು; "ಹೌದು; ಅವರು ಹೇಳಿದುದೆಲ್ಲ ಸತ್ಯ" ಎಂಬ ಏಕ ಪ್ರಕಾರದ ಉತ್ತರ ಬಂದು ಎಲ್ಲರೂ ತೃಪ್ತರಾದರು.

ವಿಖನಸರು ಏರ್ಪಡಿಸಿದ್ದ ಆ ಪದ್ಧತಿಯು ವೈದಿಕವೇ ಆಗಿದ್ದರೂ ತಾಂತ್ರಿಕ ಅಂಶಗಳೂ ಅದರಲ್ಲಿ ಅಡಗಿದ್ದು ಅದು ಔತ್ತರೇಯ ಋಷಿಗಳಿಗೆ ಆಗ ಅಷ್ಟು ಪರಿಚಿತವೂ ಆದರಣೀಯವೂ ಆಗಿರಲಿಲ್ಲವೆಂಬುದು ಅವರವರ ಪೂಜಾ ಭಿನ್ನತೆಗಳಿಂದ ಎದ್ದು ಕಾಣುತ್ತಿತ್ತು. ತಮಗೆ ಪರಿಚಯವೇ ಇಲ್ಲದೇ, ಹೀಗೆ ಈ ವರೆಗೆ ನಷ್ಟವಾಗಿದ್ದ ಒಂದು ವೇದಶಾಖೆಯ ರೀತಿ ನೀತಿಗಳು ಈಗ ಪುನರ್ದೃಷ್ಟವಾಗಿದ್ದು, ಮಹರ್ಷಿಗಳಿಗೆಲ್ಲ ಅಮಿತ ಆನಂದವನ್ನು ಉಂಟು ಮಾಡಿತ್ತು.

ಅಗಸ್ತ್ಯರು ಸಭೆಯನ್ನು ಕೇಳಿದರು : "ಈಗ ಸಮುದ್ರಯಾನ ಮಾಡಿ ಈ ವಿದೇಶೀರಾಜರ ಕೋರಿಕೆಯಂತೆ ಅಲ್ಲಿ ದೇವತಾ ಪ್ರತಿಷ್ಠೆ ಮಾಡಿ, ಆರ್ಯಧರ್ಮದ ವಿಸ್ತರಣೆಯ ಮಹಾಕಾರ್ಯಕ್ಕೆ ನಮ್ಮೊಡನೆ ಯಾರು ಯಾರು ಬರುತ್ತೀರಿ ?"

ಸಪ್ತರ್ಷಿಗಳು ತಾವು ಬರಲು ಸಿದ್ಧರಿರುವುದಾಗಿಯೂ ಆದರೆ ತಂತಮ್ಮ ಆಶ್ರಮಗಳ ರಕ್ಷಣೆಗೆ ಬೇರಾರೂ ಅಲ್ಲಿ ಇಲ್ಲದ್ದರಿಂದ ಯೋಚಿಸ ಬೇಕಾಗಿದೆಯೆಂದೂ ಹೇಳಿದರು !

ಅಗಸ್ತ್ಯರಿಗೆ " ಇದೆಂಥ ಉತ್ತರ ! " ಎನಿಸಿ, ಸೋಜಿಗವಾಯಿತು ! ಸಭೆಯಲ್ಲಿ ಉಳಿದವರ ಉತ್ತರ, ಸಪ್ತರ್ಷಿಗಳ ಉತ್ತರವನ್ನೇ ಅವಲಂಬಿ ಸಿತ್ತು ! ನಿಃಶಬ್ದ ಎಲ್ಲೆಡೆ ಆವರಿಸಿತ್ತು.

ಮೌನವನ್ನು ಭೇದಿಸಿಕೊಂಡು ದೀಕ್ಷಿತರೇ ಮೇಲೆದ್ದು ಹೇಳಿದರು :

**ದೀಕ್ಷಿತರು :** " ಅಗಸ್ತ್ಯ ! ನೀನು ಮಹಾಮಹಿಮ ! ಸಪ್ತ ರ್ಷಿಗಳ ಅಂತರ್ಭಾವವನ್ನು ನಾನು ವಿವರಿಸುವೆ. ಸಮುದ್ರವು ಈಗ ನಿನ್ನ ಶರೀರದ ಹೊರಗೆ ಬಂದ ಮೂತ್ರಸಮಾನ ! ಇದರಲ್ಲಿ ಸಪ್ತರ್ಷಿಗಳು ಯಾನ ಮಾಡುವುದು ಸರಿಯೇ ? ಎಂಬುದು ಅವರ ಆತಂಕ. ಅದಕ್ಕೆ ಉತ್ತರಿಸು. ಬರುತ್ತಾರೆ. "

ಅಗಸ್ತ್ಯರು ಹುಬ್ಬುಗಂಟಿಕ್ಕಿದರು! .... ಆ ಮೇಲೆ ಗೊಳ್ಳನೆ ನಕ್ಕರು!! ಸಭೆಗೆ ಏನೂ ತಿಳಿಯಲಿಲ್ಲ !

**ಅಗಸ್ತ್ಯ :** " ಭಗೀರಥ ಮಹಾರಾಜರು ಗಂಗೆಯನ್ನು ಭೂಮಿಗಿಳಿ ಸಿದಾಗ, ಜಹ್ನುಮಹರ್ಷಿಗಳು ಅದನ್ನು ಪಾನಮಾಡಿ, ಆಮೇಲೆ ಹೊರ ಬಿಟ್ಟರು ! ಗಂಗೆ ಜಾಹ್ನವಿ ಎನಿಸಿತು. ಆದರೆ ಅವಳ ಮೂತ್ರವಾಗ ಲಿಲ್ಲವೇ ? ಆ ಗಂಗೆಯ ದಡದಲ್ಲಿ ವಾಸಿಸುವ ನಮ್ಮ ಮಹರ್ಷಿಗಳು ಅದರಲ್ಲಿ ಸ್ನಾನ, ಪಾನ, ಅರ್ಘ್ಯದಾನ, ಮಾಡುವುದೆಲ್ಲ ತಪ್ಪೆಂದು ನೀವು ತೀರ್ಮಾನಿಸಿ ! ಈ ಸಮುದ್ರಯಾನವನ್ನು ಕೈ ಬಿಡೋಣ ! ಅದರಿಂದ ಗಂಗೆ ಅಶುದ್ಧಳಾದಳೇ ? ವಿಷ್ಣುಭಗವಂತನ ಪಾದೋದ್ಭವೆಯಾದ ಅವಳು ಸದಾ ಪವಿತ್ರಳಲ್ಲವೇ ? ಸಮುದ್ರತೀರ್ಥವೆಲ್ಲ ಆ ಗಂಗೆಯೇ

ಅಲ್ಲವೇ ? ಸಗರ ಚರಿತ್ರೆ ಮರೆತಿರಾ ? ವೈದಿಕರು ಹೀಗೆ ಅರ್ಥಶೂನ್ಯ ಪ್ರಶ್ನೆಗಳನ್ನು ಕೇಳುತ್ತಾ, ಆಚಾರದಲ್ಲಿ ಗೊಡ್ಡುರಾದರೆ, ನಿಮ್ಮಗತಿ ಹಾಗಿರಲಿ, ಜಗತ್ತಿನ ಗತಿ ಏನು ? ನೀವು ಸಪ್ತರ್ಷಿಗಳಾಗಿರುವುದು ಗಂಟಾದ ಸಮಸ್ಯೆಗಳನ್ನು ಪರಿಹರಿಸಿ, ಸಮಸ್ತ ಬ್ರಾಹ್ಮಣ್ಯಕ್ಕೂ, ಲೋಕಕ್ಕೂ, ದಾರಿತೋರಿಸಲೆಂದೇ ವಿನಾ, ಸಮಸ್ಯೆಗಳನ್ನು ಸೃಷ್ಟಿಸುವು ದಕ್ಕಲ್ಲ ! ನೀವು ನನ್ನ ಕೂಡ ಬಂದರೂ ಸರಿ, ಬಾರದಿದ್ದರೂ ಸರಿ, ಈ ಅಗಸ್ತ್ಯ ಹೊರಡುವುದು ನಿಶ್ಚಯ !" ಸಭೆ ಕರತಾಡನ ಶಬ್ದದಲ್ಲಿ ಮುಳುಗಿ ಹೋಯಿತು ! ಸಪ್ತರ್ಷಿಗಳೂ ನಿಧಾನವಾಗಿ ಅದರಲ್ಲಿ ಪಾಲು ಗೊಂಡರು ! ಅಗಸ್ತ್ಯರು ಮುದುವರೆದರು :

**ಅಗಸ್ತ್ಯ :** "ಆದರೆ, ದೀಕ್ಷಿತರೇ ! ನೀವೂ ನಮ್ಮ ಶಿಷ್ಯರೂ ನಮ್ಮೊಡನೆಯೇ ಬರಬೇಕು !"

ದೀಕ್ಷಿತರು ನಗುತ್ತ ಮೇಲೆದ್ದರು ! ಎಲ್ಲರೂ ಅವರ ಮುಖವನ್ನೇ ನೋಡುತ್ತಾ ನಿಂತರು !

**ದೀಕ್ಷಿತರು :** "ಅಗಸ್ತ್ಯ ! ನನಗೊಂದು ಪ್ರಶ್ನೆ ! ನೀನು ಮೈಗೆಲ್ಲ ಭಸ್ಮಲೇಪನ ಮಾಡಿಕೊಳ್ಳುತ್ತಿರುವೆಯಾಗಿ ಶೈವರು ನಿನ್ನನ್ನು ಶೈವನೆಂದೇ ತಿಳಿದಿದ್ದಾರೆ ! ತುಳಸೀ ಮೃತ್ತಿಕೆಯಲ್ಲಿ ನೀನು ಅದರ ಮೇಲೆ ಊರ್ಧ್ವ ಪುಂಡ್ರಗಳನ್ನೂ ಧರಿಸುವೆಯಾದ್ದರಿಂದ ಒಂದು ವಿಧದಲ್ಲಿ ನೀನು ವೈಷ್ಣವ ನೂ ಹೌದು. ಆದರೆ ಏಕಾಂತಿಯಲ್ಲ, ಏಕಾಂತಿಯಾದ ನಾನು ನಿನ್ನೊಡನೆ ಹೇಗೆ ವ್ಯವಹರಿಸುವುದು ? ಈ ಶಿವಗುರು ಇದ್ದಾರಲ್ಲ ! ಅವರಿಗೆ ಯಜ್ಞೋಪವೀತವಿಲ್ಲ ! ಯಾವ ಹೋಮ, ಯಾಗ, ಯಜ್ಞವನ್ನೂ ಅವನೂ ಅವನ ಕಡೆಯವರೂ ಆಚರಿಸುವುದಿಲ್ಲ ! ಆದರೂ ಅವರನ್ನು ನೀನು ಬ್ರಾಹ್ಮಣರೆಂದು ಒಪ್ಪಿರುವೆ ! ಅವರನ್ನೇ ನೀನು ಕರೆದೊಯ್ಯ ಬಾರದೇಕೆ ?"

ಮಾತು ಸರಳವಾಗಿದ್ದರೂ ಆದರಲ್ಲಿ ಮೊನಚು ಇದ್ದುದು ಎಲ್ಲರಿಗೂ ಅರ್ಥವಾಯಿತು ! ಸಭೆಯಲ್ಲಿ ಆಗ ಶಿವಗುರುಗಳು ಇಲ್ಲದುದರಿಂದ ಆಭಾಸ ಸಂದರ್ಭ ಏರ್ಪಡಲಿಲ್ಲ ! ಆದರೂ ಅಗಸ್ತ್ಯರ ಮುಖ ಗಂಭೀರವಾಯಿತು !

**ಅಗಸ್ತ್ಯ** : "ದೀಕ್ಷಿತರೆ ! ನನ್ನ ಮೊದಲ ಮಾತು ಕೇಳಿ ! ನೀವು ಏಕಾಂತವಾಗಿ, ಏಕಾಂತಿಗಳಾಗಿ, ಮೋಕ್ಷ ಮಾರ್ಗದಲ್ಲಿ ನಡೆಯಬೇಕಾದರೆ ನಿಮ್ಮ ದೇವಾಲಯದನ್ನು, ಜೀವನವನ್ನು, ಶರೀರವನ್ನು ರಕ್ಷಿಸುವ ಕ್ಷತ್ರಿಯಮಾರ್ಗ ಇರಬೇಕು ! ಹೌದೆ ? ಆ ಕ್ಷತ್ರಿಯರು ರಾಜಸಸ್ವಭಾವ ದವರಲ್ಲವಾದರೆ, ಯುದ್ಧವಿದ್ಯೆಗೆ ಹೇಗೆ ಅರ್ಹರಾಗುತ್ತಾರೆ ? ಯುದ್ಧಮಾಡುವವನು ತನಗೆ ಪ್ರೋತ್ಸಾಹ ಕೊಡುವ, ಅಸ್ತ್ರ ಶಸ್ತ್ರ ಕೊಡುವ, ಲಯ ದೇವತೆಯಾದ ರುದ್ರನನ್ನು ಉಪಾಸಿಸುವುದು ಅಗತ್ಯ ವಾಗುತ್ತದೆ ! ಇದು ಲೋಕಕ್ಕೇ ಈಗ ಅವಶ್ಯವಾಗಿದೆ. ದೇವರು ಒಬ್ಬನೇ ! ಅವನು ಮಹಾವಿಷ್ಣುವೆಂದೇ ವೇದ ಹೇಳುವುದನ್ನು ನಾನು ತಿಳಿಯದವನಲ್ಲ ! ನಾನೂ ವೈಷ್ಣವನೇ ! ಭಸ್ಮವನ್ನು ನಾನು ಮೈಗೆ ಬಳಿದು ಕೊಳ್ಳುವುದು ಅದು ಯಜ್ಞ ಶೇಷವಾದುದರಿಂದ; ಯಜ್ಞೇಶ್ವರ ನೆಂದರೆ ವಿಷ್ಣುವೇ ಅಲ್ಲವೇ ! ಅಗ್ನಿ ನಾರಾಯಣಪ್ರಸಾದವಾದ ಭಸ್ಮ ವನ್ನು ಶೈವರು ಬೇರೊಂದರ್ಥದಲ್ಲಿ ಉಪಯೋಗಿಸಿದರೆ ಅವರು ನಿಮ್ಮ ಕಣ್ಣಿಗೆ ವೈಷ್ಣವರೆಂದೇಕೆ ಅನಿಸುವುದಿಲ್ಲ ? ಪರಮಾತ್ಮನ ಒಂದೊಂದು ಕಾರ್ಯಕ್ಷೇತ್ರದ ಮುಖ, ಜೀವನದ ಅಂಥಂಥ ಕಾರ್ಯಕ್ಷೇತ್ರ ಮುಖಗಳ ಜನರಿಗೆ, ವೃತ್ತಿಗಳಿಗೆ, ಉಪಾಸ್ಯವೇ ಆಗುವುದು ಅನಿವಾರ್ಯ ! ಸ್ವಲ್ಪ ಲೋಕದ ಕಡೆ ಕಣ್ಣು ಬಿಟ್ಟು ನೋಡಿ !"

ದೀಕ್ಷಿತರು ನಗುತ್ತಲೇ ಇದ್ದರು ; "ರುದ್ರೋಪಾಸನೆಯನ್ನು ನಾನು ಅವೈದಿಕ ಎನ್ನಲಿಲ್ಲ ! ನೀನು ವೈಷ್ಣವನೋ, ಶೈವನೋ ? ಎಂದು ಕೇಳಿದೆ ! ಶಿವಗುರುಗಳು ಬ್ರಾಹ್ಮಣರೇ ? ಎಂದು ಕೇಳಿದೆ!"

**ಅಗಸ್ತ್ಯ :** "ನಾನು ವೈಷ್ಣವರಿಗೆ ವೈಷ್ಣವ; ಶೈವರಿಗೆ ಶೈವ; ಮೂಲದಲ್ಲಿ ನಾನು ವೇದವನ್ನು ನಂಬಿದವನು – ವೈದಿಕ ! ಶಿವಗುರು ಗಳೂ ಅವರ ಶಿಷ್ಯರೂ ಬ್ರಾಹ್ಮಣರಲ್ಲವಾದರೆ, ಅವರಿಗೆ ಸಂಸ್ಕೃತ ಹೇಳಿಕೊಟ್ಟವರಾರು ? ಅವರ ಮೂಲ ಗ್ರಂಥಗಳೂ – ಶೈವಾಗಮ ಗಳೂ – ಸಂಸ್ಕೃತದಲ್ಲೇ ಏಕೆ ಇವೆ ?"

**ದೀಕ್ಷಿತರು ;** "ನಿನ್ನ ಕೈಯ್ಯಲ್ಲಿ ಸತ್ತ ಇಲ್ವಲ ವಾತಾಪಿಗಳೂ ಸಂಸ್ಕೃತ ಬಲ್ಲವರಾಗಿದ್ದರು ! ಅದರಿಂದ ಅವರು ವೈದಿಕರಾಗಿ ಹೋದರೇ ? "

**ಅಗಸ್ತ್ಯ :** "ಅವರು ಕಪಟಿಗಳಿದ್ದರು ! ಅವರನ್ನು ದಾರಿಗೆ ತರಲು ಯತ್ನಿಸಿದೆ ! ಇವರು ಹಾಗಲ್ಲ ! ಮೌಲ್ಯಗಳಲ್ಲಿ ಒಂದೇ ಆದ ವರ ಆಚಾರಗಳೂ ರೀತಿಗಳೂ ಬೇರೆಯಾದರೂ, ಗುರಿ ಒಂದೇ ಆದುದ ರಿಂದ ಈ ಆಪತ್ಕಾಲದಲ್ಲಿ ಒಗ್ಗೂಡಬೇಕಾದ್ದು ಯುಕ್ತ ! ಶೈವರೂ ವೈಷ್ಣವರೂ ರೀತಿ ನೀತಿಗಳಲ್ಲಿ ಬೇರೆಯೋ ಆದರೂ, ಸಾಂಸ್ಕೃತಿಕ ಏಕೀಕರಣ ಆಗಬೇಕಾದಾಗ, ಈಗ, ಕೈಗೂಡಿಸಬೇಕಾದ್ದು ಅವಶ್ಯಕ"

**ದೀಕ್ಷಿತರು :** (ನಗುತ್ತಾ) "ಅಗಸ್ತ್ಯ ! ಇವರಲ್ಲಿ ನನಗೆ ಭಿನ್ನಾ ಭಿಪ್ರಾಯವಿಲ್ಲ ! ಸಾಂಸ್ಕೃತಿಕ ಏಕೀಕರಣಕ್ಕೆ ನಾನು ವಿರೋಧಿಯೂ ಅಲ್ಲ ! ನೀನು ಬಲು ಜಾಣ ! ಈ ಏಕೀಕರಣ ಯಜ್ಞಕ್ಕೆ ನೀನು ಸಮರ್ಥನಾದ ಅಧ್ವರ್ಯು. ಆದರೆ ನನ್ನ ಪ್ರಶ್ನೆಯ ಅಂತರಂಗವನ್ನು ನೀನು ಗ್ರಹಿಸಲಿಲ್ಲ ! ಈಗ ನೋಡು. ನನಗೂ ಶಿವಗುರುವಿಗೂ ಇರುವ ಸಾಮ್ಯ ನನಗೆ ತಿಳಿಯದೆನ್ನಬೇಡ ! ಔತ್ತರೇಯರಾದ ನಿಮ್ಮ ಋಷಿಗಳ ಯಜ್ಞಯಾಗಗಳಲ್ಲಿ ನಡೆಯುವ ಪಶುಹಿಂಸೆಗೆ ವೈಖಾನಸ ನಾದ ನಾನು ಹೇಗೆ ವಿರೋಧಿಯೋ ಹಾಗೆ, ಈ ಶೈವಗುರು ಅನು ಯಾಯಿಗಳೂ ವಿರೋಧಿಗಳೇ ! ಪತ್ರ, ಪುಷ್ಪ, ಫಲೋಪಹಾರಗಳಿಂದ

ದೇವರನ್ನು ತೃಪ್ತಿಪಡಿಸಿ, ಭಕ್ತಿಯಿಂದ ಆರಾಧಿಸುವುದೂ ಇಬ್ಬರಿಗೂ ಸಮಾನವೇ ! ಆದರೂ ಉಪಾಸನಾ ಮೂರ್ತಿಯಲ್ಲಿ ಭೇದವಿದೆ. ನನ್ನ ಮಟ್ಟಿಗೆ, ಶಿವಗುರುವಿನ ಮಟ್ಟಿಗೆ, ನಾವಿಬ್ಬರೂ ಈ ವಿಷಯದಲ್ಲಿ ಜಗಳ ಆಡುವುದಿಲ್ಲ, ಹೌದೆ ? ಶಿವಗುರುವಿನ ಮಠದ ಆನೆಗೆ ವಿಷ ಪ್ರಾಶನ ನಡೆದಿದ್ದಾಗ, ನಾನೂ ಉಪಚರಿಸಲು ಹೋಗಿದ್ದೆ! ಕೇಳಿ ನೋಡು ! ವರದವಿಷ್ಣುವಿನ ಆಲಯದಲ್ಲಿ ಏನಾದರೂ ಆಪತ್ತು ಬಂದರೆ ಶೈವರು ಅಲ್ಲಿ ಬಂದು ಉಪಕರಿಸುವರೇ ? ವಿಚಾರಿಸಿ ನೋಡು ! ಎರಡನೆಯ ದಾಗಿ ನೀನು ಶಿವಗುರುವಿಗೆ ಈಗ ಆಪ್ತ! ಅವರೂ ನಿನ್ನೊಡನೆ ಬರಲು ಒಪ್ಪಿದರೇ, ನಾನೂ ಬಂದರೆ, ಹೋದಲ್ಲೆಲ್ಲ ಭಿನ್ನ ರೀತಿಯ ಗುಡಿ, ಗೋಪುರ, ಆಲಯ ನಿರ್ಮಿಸುತ್ತಾ, ಪೂಜಾ ಪದ್ಧತಿಯೂ ಬೇರೆಯಾಗಿ ರುತ್ತಾ, ಅಲ್ಲಿ, ಆ ವಿದೇಶಗಳಲ್ಲಿ ಮುಂದೆ, ಅವರ ಅನುಯಾಯಿಗಳಲ್ಲಿ ಜಗಳ ಹಬ್ಬಿದರೆ, ಆಗ ಜನ, ನಿನ್ನನ್ನೂ, ನನ್ನನ್ನೂ, ಶಿವಗುರುವನ್ನೂ ಬೈಯ್ಯಲಾರರೆ ?''

ಅಗಸ್ತ್ಯರು ಚಿಂತಿಸಿದರು ! "ಹೌದೆ"ನ್ನಿಸಿತು ! ಏನು ಮಾಡು ವುದು ? ಕಾಂಚಿಯಲ್ಲಿಯೆ ಆ ಇನ್ನೊಂದು ವಿಷಯ ನಿರ್ಣಯ ಆಗಲಿ ಎಂದುಕೊಂಡರು !

ಅಂತೂ ಅಗಸ್ತ್ಯರು ವಿದೇಶ ಯಾತ್ರೆಗೆ ಹೊರಟು ನಿಂತರು ! ಅತ್ರಿ, ಭೃಗು, ಮರೀಚಿ ಅಂಗೀರಸ, ವಶಿಷ್ಠರ ಕಡೆಯ ಒಬ್ಬೊಬ್ಬ ಪ್ರತಿನಿಧಿ ಗಳೂ, ದೀಕ್ಷಿತರೂ ಶಿಷ್ಯರೂ, ಅವರನ್ನು ಅನುಸರಿಸುವುದೆಂದು ತೀರ್ಮಾನವಾಯಿತು. ಸಮುದ್ರಯಾನವೇ ನಾಲ್ಕು ತಿಂಗಳು ಕಾಲ ಹಿಡಿಯುವುದರಿಂದ ಆ ಕಾಲಕ್ಕೆ ಬೇಕಾದಷ್ಟು ಸ್ನಾನ ಪಾನ ತೀರ್ಥಗಳನ್ನು ಬೇರೊಂದು ಹಡಗಿನಲ್ಲಿ ತುಂಬಿಕೊಂಡು ಮಹರ್ಷಿ ಮೊದಲು ಸಿಂಹ ಪುರಕ್ಕೂ, ಆಮೇಲೆ ಉಳಿದ ದ್ವೀಪ, ದೇಶಗಳಿಗೂ ಪ್ರಯಾಣ ಮಾಡಿ ಬರುವುದೆಂದು ನಿಶ್ಚಯವಾಯಿತು !

ಕಾಂಚಿಯಲ್ಲಿ ಶಿವಗುರುಗಳನ್ನು ಕಲೆತು ಅಗಸ್ತ್ಯರು ಆಲೋಚಿಸಿದರು. "ಈ ಸಲಕ್ಕೆ ಆ ದೀಕ್ಷಿತರು ನಿಮ್ಮೊಡನೆ ಬರಲಿ! ಮುಂದಿನ ಸಲಕ್ಕೆ ನಾನು ಬರುತ್ತೇನೆ." ಎಂದು ಸಮಯ ಜಾಣ್ಮೆಯಿಂದ ಗುರುಗಳು ಉತ್ತರಿಸಿದರು !

ಹಡಗುಗಳು ಸಿದ್ಧವಾದವು. ಚೈತ್ರ ಮಾಸದ ದ್ವಿತೀಯೆಗೆ ಹೊರಟ ಹಡಗುಗಳು ಆಷಾಢದ ಕೊನೆಗೆ ಸಿಂಹಪುರವನ್ನು ತಲುಪಿದವು ! ಲೋಪಾ ಮುದ್ರೆಯನ್ನೂ ಪುತ್ರನನ್ನೂ ಅಗಸ್ತ್ಯರು ಜೊತೆಗೇ ಕರೆದೊಯ್ದಿದ್ದರು !!

* * *

ಜಯಪ್ರದವಾಗಿ ವಿದೇಶ ಯಾತ್ರೆಯನ್ನು ಮುಗಿಸಿಕೊಂಡು ಅಗಸ್ತ್ಯರು ಹತ್ತು ವರ್ಷಗಳ ನಂತರ ದ್ರಮಿಡಕ್ಕೆ ಮರಳಿದರು ! ಹೋದ ಲ್ಲೆಲ್ಲ ದೇವಾಲಯ ಸ್ಥಾಪನೆ, ಶಿಷ್ಟಾಚಾರ ಕಲ್ಪನೆ, ಸದ್ಬೋಧೆ, ಸದು ಪದೇಶ, ಜನ ಆಸೆಪಟ್ಟಲ್ಲಿ ಯಾಗಗಳು ಹೀಗೆ ಅಗಸ್ತ್ಯರಿಗೆ ವಿರಾಮವಿಲ್ಲದೇ ಕಾರ್ಯಕ್ರಮಗಳು ಏರ್ಪಟ್ಟಿವು. ವಯಸ್ಸಾದ ದೀಕ್ಷಿತರು ಎಳೆಯನಂತೆ ಅವರೊಡನೆ ಬೆರೆತು ಸಹಕರಿಸಿದರು. ದೀಕ್ಷಿತರ ದೈವೀ ತೇಜಸ್ಸಿಗೂ ಅಗಸ್ತ್ಯರ ಅಗ್ನಿಯಂತಹ ವ್ಯಕ್ತಿತ್ವಕ್ಕೂ ಅಲ್ಲಲ್ಲಿನ ಅರಸರೂ, ಸಾಮಾನ್ಯ ಪ್ರಜೆಗಳೂ ಮಾರುಹೋದರು. ತ್ರಿವಿಕ್ರಮನ, ವರಾಹಮೂರ್ತಿಯ, ನೃಸಿಂಹನ ದೇವಾಲಯಗಳು ಅಲ್ಲಲ್ಲಿ ನಿರ್ಮಿತವಾದವು. ಹಳೆಯವು ನವೀಕರಿಸಲ್ಪಟ್ಟವು.

ಸಮುದ್ರದಲ್ಲಿ ಈ ಕಡೆಯಿಂದ ಹೊರಡುವಾಗಲೇ ಲೋಪಾ ಮುದ್ರೆ ಬಳಲಿದ್ದಳು ! ಮೊದಲೇ ಬೇಸಿಗೆ ! ಅದರಲ್ಲಿ ದಕ್ಷಿಣದ ಕಡೆ ! ಅದರ ಮೇಲೆ ಸುತ್ತಲ ಸಮುದ್ರದ ನೀರು ಕಾಯುತ್ತ, ಅದರ

ಮಧ್ಯದಲ್ಲಿ ಹಡಗಿನಲ್ಲಿ ಸುಡುಗಾಳಿಯ ಕಾಟ ! ಎಂದೂ ಈ ಪರಿಸ್ಥಿತಿಯನ್ನನುಭವಿಸದ ವಿದರ್ಭರಾಜಕುಮಾರಿ ಬಹಳ, ಬಳಲಿ, ಬಸವಳಿದು ಬೆಂಡಾದಳು ! ಅಗಸ್ತ್ಯರು ಈ ಸಲ ಚಾಕ್ರಾಯಣಾದಿಗಳನ್ನು ಹಿಂದೆ ಬಿಟ್ಟು ಶಾಂಙ್ಗ್ರರವನನ್ನೂ, ಇನ್ನಿತರ ಯುವ ವಟುಗಳನ್ನೂ ಕರೆದೊಯ್ದಿದ್ದರು. ಸೋಮಶ್ರವ ಅವರಲ್ಲಿ ಹಲವರಿಗೆ ಆಯುರ್ವೇದವನ್ನು ಕಲಿಸಿದ್ದ. ದಂತಿವರ್ಮ, ಮಹರ್ಷಿಯ ವಿದೇಶ ಯಾನಕ್ಕೆ ಸಕಲ ಸಲಕರಣೆಗಳನ್ನೂ ಸಿದ್ಧ ಮಾಡಿಸಿ, ರಾಜಮರ್ಯಾದೆಯೊಡನೆಯೇ ಕಳುಹಿದ್ದ ! ರಾಜವೈದ್ಯನೂ. ರಾಜ ಪ್ರತಿನಿಧಿಯೂ ಅಲ್ಲಿದ್ದರು. ಆದರೂ ಪ್ರಯಾಣದ ಆಯಾಸ ಮಹರ್ಷಿಪತ್ನಿಯನ್ನು ಕಂಗೆಡಿಸಿತು !

ಆಮೇಲೆ ಹತ್ತು ವರ್ಷದ ಸತತ ಓಡಾಟ, ಅಕಾಲಭೋಜನ; ಅಪರಿಚಿತ ದೇಶದ ಹವಾ ಸೇವನೆ, ನೀರಿನ ವ್ಯತ್ಯಾಸಗಳಿಂದ ಲೋಪಾಮುದ್ರೆ ತುಂಬಾ ಆರೋಗ್ಯ ಕೆಟ್ಟಳು ! ಸ್ವಯಂ ಅಗಸ್ತ್ಯರ ಆರೋಗ್ಯವೂ ಕೆಟ್ಟಿತು. ಆದರೂ ಆಯಾಸ, ಆತಂಕ ತೋರಿಸಿಕೊಳ್ಳದೆ, ಹಿಡಿದ ಕೆಲಸ ಮುಗಿಸಿ ಮಹರ್ಷಿ ಎಲ್ಲರೊಡನೆ ದ್ರಮಿಡಕ್ಕೆ ಮರಳಿದ,

ಅದ್ದೂರಿಯಾದ ಸ್ವಾಗತ ಆಯಿತು ! ಭಾರತದೇಶದ ಸಮಸ್ತ ಮಹರ್ಷಿಪ್ರತಿನಿಧಿಗಳೂ, ಹಿರಿಯರೂ, ಆರ್ಯಾವರ್ತದ ದೊರೆಗಳೂ ಬಂದು ಮಹರ್ಷಿಯನ್ನು ಅಭಿನಂದಿಸಿದರು,

* * *

**ಲೋಪಾಮುದ್ರೆ :** "ಪ್ರಭು ! ಈ ಲೋಕವನ್ನು ಒಂದು ಸಂತೆ ಎನ್ನುತ್ತಾರೆ ! ಅದರರ್ಥ ಈಗ ನನಗೆ ಚೆನ್ನಾಗಿ ಅರಿವಾಗುತ್ತಿದೆ. ಈ ದ್ರಮಿಡರು ಎಷ್ಟು ಸರಳರು ! ಅವರ ಭಾಷೆ ಎಷ್ಟು ಸುಂದರ ! ತಾವು

ಇದನ್ನು ಎಷ್ಟು ಚೆನ್ನಾಗಿ ಆಡುತ್ತೀರಿ ? ನೀವು ಇಲ್ಲೇ ಜನಿಸಿದಿರೋ ! ಎಂಬಂತೆ ಸಲೀಸಾಗಿ ಆಡುತ್ತಾ ಜನರ ಮನವನ್ನು ಗೆದ್ದಿರಿ. ಇವರು ನಿಮ್ಮಲ್ಲಿಟ್ಟ ಪ್ರೀತಿಗೆ, ಮಾಡಿದ ಉಪಕಾರಕ್ಕೆ ಏನಾದರೂ ಪ್ರತ್ಯುಪಕಾರ ಮಾಡಬೇಡವೇ ?"

**ಅಗಸ್ತ್ಯ** : ''ಎಲ್ಲ ಕಡೆಯೂ ಮನಃಪೂರ್ವಕವಾಗಿ, ನಿಷ್ಠೆಯಿಂದ ನಡೆಯುವುದು ನನಗೆ ಗೊತ್ತು ! ಅದೇ ಉಪಕಾರವೆಂದು ನಾನು ಸದಾ ಭಾವಿಸುವವನು ! ನೀನು ಮನದಲ್ಲೇನೋ ಇಟ್ಟು ಮಾತಾಡುತ್ತಿರು ವಂತಿದೆ ! ಹೇಳು, ನಡೆಸುತ್ತೇನೆ.'

**ಲೋಪಾ** : ''ಕೋಪಿಸಬಾರದು, ಸ್ವಾಮಿ ! ಈ ಜನರಿಗೆ ತಮ್ಮ ಅಮೂಲ್ಯ ಆಯುರ್ವೇದ ಪದ್ಧತಿಯನ್ನು ಬೋಧಿಸುವ ಒಂದು ವಿದ್ಯಾಲಯ, ರೋಗಿಗಳ ಶುಶ್ರೂಷೆಗೆ ಒಂದು ರುಗ್ಣಾಲಯ, ಈ ದ್ರಮಿಡ ಭಾಷೆಗೆ ಘನತೆ, ಗೌರವ ತರುವಂತೆ ಅದಕ್ಕೊಂದು ಸುಸಂಬದ್ಧ ವ್ಯಾಕರಣ ! ಈ ಮೂರನ್ನೂ ತಾವು ತಮ್ಮ ಕೃಪೆಯಿಂದ ಏರ್ಪಡಿಸ ಬೇಕೆಂಬುದೇ ನನ್ನ ಆಸೆ !''

ಅಗಸ್ತ್ಯರು ಆನಂದ ಬಾಷ್ಪಹಾಕಿದರು ! ಮಗನನ್ನು ಕರೆದು, ಸೋಮಶ್ರವನನ್ನು ಕರೆತರುವಂತೆ ಹೇಳಿದರು. ರಾಜರೊಡನೆ ಕಲೆತು ಆರೋಗ್ಯಕೇಂದ್ರಕ್ಕೂ ಆಯುರ್ವೇದ ವಿದ್ಯಾಲಯಕ್ಕೂ ಏರ್ಪಡಿಸಿದರು. ಒಂದೆರಡು ವರ್ಷಗಳಲ್ಲಿ ಅವು ಸಂಪೂರ್ಣವಾಗಿ, ಸುವ್ಯವಸ್ಥೆಯಿಂದ ಕೆಲಸ ಮಾಡಲೂ ಆರಂಭಿಸಿ, ದೊರೆಗೂ, ಜನಕ್ಕೂ ತುಂಬಾ ಸಂತೋಷ ತಂದವು.

ಅಗಸ್ತ್ಯರು, ಲೋಪಾಮುದ್ರೆ ಹೇಳುವ ಮುನ್ನವೇ, ಬಿಡು ವಾದಾಗ ರಚಿಸಲಾರಂಭಿಸಿದ್ದ ದ್ರಮಿಡಭಾಷಾವ್ಯಾಕರಣವು ಕೆಲಕಾಲ ದಲ್ಲೇ ಸಿದ್ಧವಾಗಿ, ಅರಮನೆಯಲ್ಲಿ ದ್ರಮಿಡ ಭಾಷಾ ವಿದ್ವಾಂಸ

ರೆದುರು ಇಡಲ್ಪಟ್ಟಿತು. ಈಗಲೂ 'ಅಗತ್ತಿಯಂ' ಎಂದು ಖ್ಯಾತವಾದ ಅದನ್ನು ಅಂದು ವಿದ್ವಾಂಸರು ತಲೆಯ ಮೇಲಿಟ್ಟುಕೊಂಡಾಡಿ ಅಗಸ್ತ್ಯ ರನ್ನು ಗೌರವಿಸಿದರು.

ಲೋಪಾಮುದ್ರೆಯ ಆರೋಗ್ಯ ಕೆಡುತ್ತಾ ಬಂದಿದ್ದು ಉತ್ತಮ ವಾಗುವ ದಿಕ್ಕಿನತ್ತ ತಿರುಗಲೇ ಇಲ್ಲ. ಅಗಸ್ತ್ಯರು ಚಿಂತಾಕ್ರಾಂತರಾದರು !

ಅಗಸ್ತ್ಯ ಪುತ್ರ ಈಗ ಪ್ರೌಢನಾಗಿದ್ದಾನೆ ! ಸುಂದರ ಆಕೃತಿಯ ಆ ಚೆಲುವ, ತಾಯಿಯ ಮುಖವನ್ನೂ, ತಂದೆಯ ಮೈಕಟ್ಟನ್ನೂ ಹೊಂದಿ ತಂದೆ ತಾಯಿಗಳಿಗೆ ಮಾತ್ರವಲ್ಲದೆ ರಾಜ್ಯದ ಎಲ್ಲರಿಗೂ ಪ್ರಿಯನಾಗಿದ್ದಾನೆ. ತಾಯಿಯ ಆರೋಗ್ಯಕ್ಕೆ ಮಗನೂ ಮರುಗುತ್ತಾನೆ.

ಒಂದು ದಿನ ಅಗಸ್ತ್ಯರು ಪತ್ನಿಯೊಡನೆ ಮಾತಾಡಲಾರಂಭಿಸಿದರು.

**ಅಗಸ್ತ್ಯ** : "ಪ್ರಿಯೇ ! ನವವಿವಾಹಿತರು ವಿವಾಹವಾದ ಹೊಸ ದರಲ್ಲಿ ಏಕಾಂತ ಪ್ರವಾಸಮಾಡಿ, ಉಲ್ಲಾಸ ಪಡೆದು ಬರುವ ಪದ್ಧತಿಯ ಬಗೆಗೆ ಕೇಳಿರುವೆಯಾ ?"

ಮಲಗಿದ್ದಲ್ಲೇ ಲೋಪಾಮುದ್ರೆ ನಗಲು ಯತ್ನಿಸುತ್ತಾಳೆ ! ಕಂಗಳಲ್ಲಿ ಮಿಂಚಿನ ಕಾಂತಿ ಮಿನುಗುತ್ತದೆ ! ಕೆನ್ನೆಗಳಲ್ಲಿ ಗುಳಿಬಿದ್ದು, ಅವಳ ಹಳೆಯ ಯೌವ್ವನವನ್ನು ನೆನೆಪಿಸುತ್ತದೆ ! ಮಹರ್ಷಿ ಏಕಚಿತ್ತ ವಾಗಿ ಪ್ರಿಯೆಯ ಮುಖವನ್ನೇ ನೋಡುತ್ತಿದ್ದಾನೆ ! ಅವಳ ಮುಖದಲ್ಲಿ ನವ ಚೈತನ್ಯ ಮೂಡಿದ್ದು ಮಹರ್ಷಿಗೆ ಉತ್ಸಾಹ ತರುತ್ತದೆ.

**ಲೋಪಾ** : "ಒಡೆಯರಿಗೆ ಇಂದೇಕೆ ಈ ಏಕಾಂತ ಪ್ರವಾಸದ ಮಧುಚಂದ್ರದ ಬಯಕೆ ? ಹೊಸ ಹೆಣ್ಣನ್ನು, ಯಾವಳನ್ನಾದರೂ ನೋಡಿ ರುವಿರಾ ? ಯಾವ ಅರಸು ಮತ್ತೆ ನಿಮಗೆ ಕನ್ಯೆಕೊಡಲು ಬಂದಿದ್ದಾನೆ?"

**ಅಗಸ್ತ್ಯ :** "ಕೆಲವೊಂದು ಆಗತ್ಯಗಳನ್ನು ಆ ಆ ಕಾಲದಲ್ಲಿ ಪೂರೈಸದಿದ್ದರೆ, ಕೊರತೆ ಶಾಶ್ವತವಾಗಿ ಉಳಿದೇ ಬಿಡುತ್ತದೆ ! ನಾನು ನಿನ್ನ ಕೈ ಹಿಡಿದ ದಿನದ ನೆನಪಿದೆಯೆ ? ಬರೀ ಪ್ರಾಣಿಗ್ರಹಣ, ಸಪ್ತಪದೀ–ಎರಡೇ ನಡೆದವು...."

ಲೋಪಾಮುದ್ರೆ ಪತಿಯ ಕೈಯನ್ನು ತನ್ನ ಬಲ ಕ್ಷೀಣಕೈಯಲ್ಲಿ ಎತ್ತಿಕೊಂಡು ಕಣ್ಣಿನ ಮೇಲೆ. ಹಣೆಯ ಮೇಲೆ, ಎದೆಯ ಮೇಲಿಟ್ಟು–ಕೊಂಡು. ಆ ಅನುಭವದಲ್ಲಿ ಕಣ್ಣುಮುಚ್ಚುತ್ತಾಳೆ ! ಕಂಗಳ ಬದಿಗಳಿಂದ. ನೀರು ಹರಿಯಲಾರಂಭಿಸುತ್ತದೆ ! ಅಗಸ್ತ್ಯರಿಗೂ ಕಂಗಳು ನೀರುಗೂಡುತ್ತವೆ ! ಕೆಲಕಾಲ ಇಬ್ಬರೂ ಮೌನ !

**ಅಗಸ್ತ್ಯ :** "ಆಮೇಲೆ ನಾನು ಉತ್ತರ ದೇಶದ ಯಾತ್ರೆ ಹೊರಟೆ ! ನಿನ್ನನ್ನೂ ಕರೆದೊಯ್ಯುವಂತಿಲ್ಲ ! ಬಂದಮೇಲೆ ಬಹಿರಂಗ ವಿವಾಹ ಆದಮೇಲೂ ನನಗೆ ರಾಜಕಾರ್ಯ ಬಿಡಲಿಲ್ಲ ! ರಾಜಕುಮಾರಿಯಾದ ನೀನು ನನಗಾಗಿ, ಲೋಕಕ್ಕಾಗಿ ಏನೆಲ್ಲ ತ್ಯಾಗ ಮಾಡಿದೆ ? ಆ ನಷ್ಟವನ್ನು ಹೇಗೆ ತುಂಬಲಿ ? ಈ ಕೊರತೆ ನನ್ನನ್ನು ಈಗ ಬಾಧಿಸುತ್ತದೆ !"

**ಲೋಪಾ :** "ಅದು ತ್ಯಾಗವೋ ಅಲ್ಲವೊ ! ಆ ದೊಡ್ಡಮಾತು ಈಗ ಬೇಡ, ಸ್ವಾಮಿ ! ಬೇಕಾದಾಗ ನಿಮ್ಮೊಡನೆ ಮಾತಾಡಲು, ನಿಮ್ಮನ್ನು ನೋಡಲು ಆಗಸ್ತ್ಯಾಗ್ನಿಯನ್ನು ನನ್ನ ಬಳಿ ಇಟ್ಟುಹೋದಿರಲ್ಲ ! ಬೇರೊಬ್ಬರಿಗೆ ಅದು ಸಾಧ್ಯವಿತ್ತೋ ? " ( ಭಾವಪರವಶಳಾಗುತ್ತಾಳೆ !"

**ಅಗಸ್ತ್ಯ :** "ಈ ಕೊರತೆ ತೀರಿಸಲು ಈಗೊಂದುಪಾಯ ಹುಡುಕಿದ್ದೇನೆ !"

**ಲೋಪಾ :** "ಈಗ ಮಧುಚಂದ್ರ ಹೊರಡುವ ಮಾತಲ್ಲದಿದ್ದರೆ ಹೇಳಿ ! ಲೋಕ ನಗಬಾರದು ! ಬೇರೊಂದು ಯಾತ್ರೆ ಹತ್ತಿರವಾಗುತ್ತಾ

ನನ್ನನ್ನು ಅಪಹಾಸ್ಯ ಮಾಡಬೇಡಿ ! ಆಗಲೂ ನಾನು ಅದಾವುದಕ್ಕೂ ಆಸೆಪಟ್ಟಿಲ್ಲ !''

**ಅಗಸ್ತ್ಯ :** "ಪ್ರಿಯೆ ! ಗಂಭೀರವಾಗಿಯೇ ಯೋಚಿಸಿ ಆಡುತ್ತಿದ್ದೇನೆ. ನಿನ್ನ ಆರೋಗ್ಯವೂ ಗುಣವಾಗಲಿ ; ಆ ಹಳೆಯ ಕೊರತೆಯೂ ತೀರಲಿ. ಅದು ನಮ್ಮ ವಯೋಮಾನಕ್ಕೂ ಅನುಗುಣವಾಗಲಿ. ''

**ಲೋಪಾ :** (ಕಣ್ಣರಳಿಸಿ, ಉಕ್ಕುವ ಪ್ರೀತಿಯಿಂದ ಅಗಸ್ತ್ಯರನ್ನು ನೋಡಿ) "ಅಷ್ಟೊಂದು ತವಕ ತಮಗಿದ್ದರೆ ಹೇಳಿ, ಸನಗಾದರೆ ಆಗಲಿ ಎನ್ನುತ್ತೇನೆ."

**ಅಗಸ್ತ್ಯ :** "ನನಗೆ ಈ ಕಾವೇರೀ ನದಿಯ ದಡದಲ್ಲಿ ಸಂಚರಿಸಬೇಕೆಂಬ ಆಸೆಯಿದೆ ! ನದೀ ತೀರದ ಹವೆ ನಿನಗೂ ಆರೋಗ್ಯ ! ನನಗಂತೂ ಕಾವೇರಿ ಹುಚ್ಚು ಹಿಡಿಸಿದ್ದಾಳೆ ! ಕಾವೇರಿಯ ಸೊಬಗು, ನಿನ್ನ ಸೌಂದರ್ಯ ಎರಡೂ ಒಂದಕ್ಕೊಂದು ಸಾಟಿ ! ಕಾವೇರಿಯ ಸುಳಿ, ನಿನ್ನ ಕೆನ್ನೆಯ ಗುಳಿಗಳು ನನಗೆ ಒಂದೇ ಆಗಿ ಕಾಣುತ್ತವೆ. ಕಾವೇರಿಯ ಬಳುಕುವ ಗಮನ, ನಿನ್ನ ನಡೆಯನ್ನು ನೆನಪಿಸುತ್ತದೆ ! ಆ ಸ್ವಚ್ಛ ತೀರ್ಥ ನಿನ್ನ ತಿಳಿ ನಗೆಯಂತಿದೆ ! ಎರಡೂ ದಂಡೆಯ ವಿಶಾಲ ಸಸ್ಯವನಸ್ಪತಿಗಳು ನಿನ್ನ ಕೇಶ ರಾಶಿಯ ಹಳೆಯ ವೈಭವವನ್ನು ನೆನಪಿಸುತ್ತದೆ !! ನಿನ್ನ ಅಂಗೋಪಾಂಗಗಳ ಎಲ್ಲ ಅಂಶಗಳನ್ನೂ ಕಾವೇರಿಯಲ್ಲಿ ಕಂಡಿದ್ದೇನೆ !..."

**ಲೋಪಾ :** "ದೇವತೆಗಳ ಸಾಕ್ಷಾತ್ಕಾರ ಮಾಡಿಕೊಂಡು ತಾವು ಈ ಶೃಂಗಾರ ಕಾವ್ಯವನ್ನು ಎಂದು ರಚಿಸಿದಿರಿ ?"

**ಅಗಸ್ತ್ಯ :** "ನಿನ್ನ ಕೈಹಿಡಿದಮೇಲೆ !"

**ಲೋಪಾ :** "ಪತ್ನಿಯನ್ನು ಸರಿಯಾಗಿ ನೋಡದವರೇ ಹೀಗೆ ಕಾವ್ಯ ಹೇಳುವರಾದರೆ, ಇನ್ನೂ ಸರಿಯಾಗಿ ನೋಡಿದವರ ಕಾವ್ಯ ಹೇಗಿರುತ್ತಿತ್ತೊ ?"

**ಅಗಸ್ತ್ಯ :** "ಹಾಗಾದರೆ ಪ್ರಯತ್ನವೇ ಈಗ ಎಂದಿಟ್ಟುಕೋ ! ಅರಸು ನಮಗೆ ರಥ ಒದಗಿಸುತ್ತಾನೆ. ಮಿತ ಪರಿವಾರ ಹಿಂದೆ ಬರುತ್ತದೆ. ನಮ್ಮ ಪುತ್ರನೂ, ಕೆಲವೇ ಶಿಷ್ಯರೂ ಒಡನೆ ಬರುತ್ತಾರೆ. ಇಕೋ, ಈ ಸಮುದ್ರ ಸೇರುವ ಜಾಗದಿಂದ ಕಾವೇರಿಯನ್ನು ಹಿಂದು ಹಿಂದಾಗಿ ಅನುಸರಿಸುತ್ತಾ, ಸಹ್ಯಾದ್ರಿಯ ತಪ್ಪಲಲ್ಲಿ ವಿಹರಿಸುತ್ತಾ, ಕಾವೇರಿಯ ಜನನಸ್ಥಾನವನ್ನು ಸೇರಿ, ಅಲ್ಲಿ ಕೆಲವು ದಿನ ಇದ್ದು ಬರೋಣ ! ಬರುತ್ತಾ ನವ ಯೌವನ ದೊಡನೆ ಬರೋಣ. ಹಿಂದೆ ತೀರದ ಕೊರತೆಗಳನ್ನು ಮುಂದೆ ತೀರಿ ಸೋಣ. ಈ ವಿಹಾರ ನಮಗೆ ಉಲ್ಲಾಸಕರವೂ. ದೈವೀರೀತಿಯದೂ, ಪ್ರಕೃತಿ ರಮ್ಯತೆಯ ಸೊಬಗನ್ನು ಉಂಟುವುದೂ ಆಗಲಿ !"

ಲೋಪಾಮುದ್ರೆ ಕಣ್ಣು ಮುಚ್ಚಿದಳು ! ನೀರು ಧಾರಾಕಾರವಾಗಿ ಹರಿಯಿತು ! ಏನನ್ನೋ ನೆನೆದಳು ! ಹೇಳಲು ಬಾಯಿ ಬರಲಿಲ್ಲ ! ಅಗಸ್ತ್ಯರೂ ಧ್ಯಾನಾಸಕ್ತರಾದರು. "ನಾಟಕ ಪಾತ್ರಧಾರಿಗೆ ಆಗಾಗ ಎಷ್ಟು ಬೇಕೋ, ಅಷ್ಟಷ್ಟೆ ಮಾತುಗಳನ್ನು ಆಡಿಸುವವನು ಹೇಳಿಕೊಡುವಂತೆ. ದೇವತೆಗಳೂ ನಮಗೆಷ್ಟೆಷ್ಟು ಯುಕ್ತವೋ ಅಷ್ಟೇ ಹೇಳುತ್ತಾರೆ, ತಿಳಿಸು ತ್ತಾರೆ, ! ದೇವರಹಸ್ಯಗಳೆಲ್ಲ ಯಾರಿಗೂ ಪೂರ್ಣವಾಗಿ ತಿಳಿಯುವುದಿಲ್ಲ ! ಅನೇಕ ದೇವರಹಸ್ಯಗಳನ್ನು ಕೇಳಿ, ಕಂಡು, ನುಂಗಿದ ಅಗಸ್ತ್ಯನಿಗೂ ಈ ಪಾಡು ತಪ್ಪಿದ್ದಲ್ಲ" ಎನ್ನುತ್ತಾ ಅಗಸ್ತ್ಯರು ನಿಟ್ಟುಸಿರಿಟ್ಟರು.

ತಾನು ಹೇಳಬೇಕೆಂದಿದ್ದುದನ್ನು ಪತಿಯೇ ಹೇಳಿದುದಕ್ಕೆ ಲೋಪಾ ಮುದ್ರೆ ಚಕಿತಳಾಗಿ "ತಾವು ಸರ್ವಜ್ಞರು !" ಎಂದಳು.

* * *

ನಂದಿವರ್ಮ ದಂಪತಿಗಳು ಅಗಸ್ತ್ಯ ದಂಪತಿಗಳಿಗೆ ಸಾಷ್ಟಾಂಗಹಾಕಿ ಭಕ್ತಿಯಿಂದ ಬೀಳ್ಕೊಟ್ಟರು. ರಾಜಧಾನಿಯ ಎಲ್ಲರೂ ಅಗಸ್ತ್ಯದಂಪತಿಗಳಿಗೆ

ಶುಭಹಾರೈಸಿದರು. ರಾಜಸೈನ್ಯ ನಾಲ್ಕಾರು ಹರಿದಾರಿಯತನಕ ಮಹರ್ಷಿಯನ್ನೂ ಅವನ ಪತ್ನಿಯನ್ನೂ ಪರಿವಾರವನ್ನೂ ಹಿಂಬಾಲಿಸಿತು.

ಲೋಪಾಮುದ್ರೆಗೆ ಆರೋಗ್ಯ ಕೆಟ್ಟು ಕಾಲ್ನಡಗೆ ಅಸಾಧ್ಯವಾದ ದಿನದಿಂದ ಅಗಸ್ತ್ಯರೂ ಪಾದಯಾತ್ರೆಯನ್ನು ಕೈಬಿಟ್ಟಿದ್ದರು, "ಅವಳನ್ನು ಅರೆಗಳಿಗೆಯೂ ಅಗಲಿರಬೇಡ !" ಎಂಬ ವರುಣನ ಮಾತು ಅವರಿಗೆ ಸದಾ ಕಿವಿಯಲ್ಲಿ ಮೊಳಗುತ್ತಿತ್ತು.

ರಾಜ ಪರಿವಾರ ಹಿಂದೆ ಉಳಿದು,ರಥ ಮುಂದೆ ಮುಂದೆ ಓಡುತ್ತಾ, ಅಲ್ಲಲ್ಲಿ ನದೀತೀರದ ಊರುಗಳ ಜನರು, ವೈದಿಕರು, ಇತರರು ಮಹರ್ಷಿಯನ್ನು ಸ್ವಾಗತಿಸುತ್ತಾ, ಅವನ ಆಹ್ನೀಕಕ್ಕೆ, ವಿಶ್ರಾಂತಿಗೆ ಅಗ್ನಿಹೋತ್ರಕ್ಕೆ ಆಹಾರಕ್ಕೆ ಏರ್ಪಡಿಸುತ್ತಾ, ಈ ವಿಹಾರ ಬಹು ಉಲ್ಲಾಸಕರವಾಗಿತ್ತು. ಕಾವೇರೀತೀರದ ಅನೇಕ ಅದ್ಭುತ ಪುಣ್ಯಕ್ಷೇತ್ರಗಳನ್ನೂ ಅಗಸ್ತ್ಯರು ಸಂದರ್ಶಿಸುತ್ತಾ ದ್ರಮಿಡ ದೇಶದ ಎಲ್ಲೆ ಮುಗಿದು, ಮಹಿಷಮಂಡಳವನ್ನು ತಲುಪಿದರು. ಆಗ ಅಲ್ಲಿ ಮಯಾಸುರನ ಆಧಿಪತ್ಯ ನಡೆದಿತ್ತು ! ಅಸುರನಾದರೂ ದೈವಭಕ್ತನಾದ ಮಯ, ನೃಸಿಂಹಪುರದ ಬಳಿ (ಈಗಿನ ತಿರುಮುಕ್ಕೂಡಲು ನರಶೀಪುರ – ಟಿ. ನರಸೀಪುರ) ಮಹರ್ಷಿಯನ್ನು ಸ್ವಾಗಶಿಸಿದ ! ಮಹರ್ಷಿ, ಪ್ರಹ್ಲಾದ ಪ್ರತಿಷ್ಠಿತನಾದ ಆ ನೃಸಿಂಹನ ಸೊಬಗಿಗೆ ಮನಸೋತು ಅಲ್ಲೊಂದೆರಡು ವಾರಕಾಲ ನಿಂತ. ಅಲ್ಲಿನ ಜನರ ಒತ್ತಾಯದ ಮೇರೆಗೆ ಕಾವೇರೀ, ಕಪಿಲೆ ಕೂಡುವ ಸಂಗಮ ಕ್ಷೇತ್ರದಲ್ಲಿ ಶಿವಪ್ರತಿಷ್ಠೆ ಆಗಿ, ಜನ ಅದನ್ನು ಅಗಸ್ತ್ಯೇಶ್ವರ ಎನ್ನಲಾರಂಭಿಸಿದರು.

ಯಾತ್ರೆ ಹೀಗೆ ನಡೆಯುತ್ತಾ, ಮತ್ತೆರಡು ವರ್ಷಗಳಲ್ಲಿ ಮಹರ್ಷಿ ದಂಪತಿಗಳು ಭಾಗ್ಯಮಂಡಲವೆಂಬ ಗ್ರಾಮವನ್ನು ತಲುಪಿದರು. (ಈಗಿನ ಭಾಗಮಂಡಲ, ತಲಕಾವೇರೀ ಉಗಮಸ್ಥಾನ.) ಮಹಿಷಮಂಡಲದ

ಪಶ್ಚಿಮದ ದಾರಿ ಕಠಿಣವಾದರೂ, ಸಹ್ಯಾದ್ರಿಯ ಸೊಬಗು ಮಹರ್ಷಿ ದಂಪತಿಗಳ ಮನವನ್ನು ಸೂರೆಗೊಂಡಿತ್ತು ! ದುರ್ಗಮ ಪ್ರದೇಶಗಳಲ್ಲಿ ರಥ ಹೋಗುವುದು ಕಷ್ಟವೆನಿಸಿದಾಗ ರಾಜಭಟರು ನಿಧಾನವಾಗಿ ದಾರಿ ಬಿಡಿಸಿ ನಡಗೆಯಲ್ಲಿಯೆ ಕರೆದೊಯ್ಯುತ್ತಿದ್ದರು.

ಕೊಡಗಿನ ಅರಸ, ವೃದ್ಧನಾದ ಕೊಡವ ವೀರ ! ಪತ್ನಿಯೊಡನೆ ಮಹರ್ಷಿದಂಪತಿಗಳಿಗೆ ಸ್ವಾಗತವಿತ್ತ. ಮಕ್ಕಳಿಲ್ಲದ ಅವನಿಗೆ ಒಂದು ಬಗೆಯ ಭ್ರಮೆ ಹಿಡಿದು, " ಕಾವೇರಿ ನನ್ನ ಮಗಳು " ಎನ್ನುತ್ತಾ, ತನ್ನ " ಮಗಳ " ಜಾಡು ಹಿಡಿದು ಬಂದ ಅಗಸ್ತ್ಯರನ್ನು " ಅಳಿಯ ದೇವರೇ ! ಈಗ ಬಂದಿರಾ ? " ಎನ್ನುತ್ತಾ ಸ್ವಾಗತಿಸಿದ್ದು, ಲೋಪಾಮುದ್ರೆಗೆ ಸೋಜಿಗವಾಗಿ, ಬಾಯಿತುಂಬ ನಕ್ಕಳು ! ಹಿಂದೆಂದೂ ಕಾಣದ ಆ ನಗೆಯ ಅಲೆ, ಸುಖ, ಅಗಸ್ತ್ಯರನ್ನು ಎಲ್ಲೋ ಕೊಂಡೊಯ್ದಿತ್ತು !

—೦—

## ೨೫ ಅಗಸ್ತ್ಯರಿಗೆ ಪತ್ನೀವಿಯೋಗ !
## –ಕಾವೇರಿಯ ವಿವಾಹ !!

ಭಾಗ್ಯ ಮಂಡಲದ ಭಾಗ್ಯದೇವತೆಯಾಗಿ ಸಹ್ಯಾದ್ರಿಯ ನೆತ್ತಿಯಲ್ಲಿ ಪರ್ವತಶ್ರೇಣಿಯ ಪುತ್ರಿಯಾಗಿ ಕಾವೇರಿ ಜನಿಸಿದ ಜಾಗ ಅಗಸ್ತ್ಯ ದಂಪತಿಗಳಿಗೆ ತುಂಬಾ ಹಿಡಿಸಿತು.

ಶಿವಭಕ್ತನಾಗಿದ್ದ ಕೊಡವರ ಅರಸ ಅಗಸ್ತ್ಯರನ್ನು ಶಿವನೆಂದೇ ಕಂಡ! ತಾನು ಪರ್ವತರಾಜನಾದ ಹಿಮವಂತನೆಂದೂ ತನ್ನ ಮಗಳು ಗಂಗೆ – ದಕ್ಷಿಣದ ಗಂಗೆ – ಎಂದೂ. (ಅಥವಾ ಪಾರ್ವತೀ ಎಂದೂ) ಇವಳ ಕೈ ಹಿಡಿಯುವ ಪರಮಶಿವ ಒಂದು ದಿನ ತನ್ನ ಮನೆಗೇ ನಡೆದು ಬಂದಾನೆಂದೂ, ಸರಿಯಾಗಿಯೋ. ಬುದ್ಧಿ ಭ್ರಮಣೆಯ ಅವಸ್ಥೆಯಲ್ಲಿಯೋ, ಅವನು ಕನಸು ಕಂಡದ್ದು ಸರಿಯಾಗಿಯೇ ಫಲಿಸಿತ್ತು !

ಅಗಸ್ತ್ಯರು ಅಲ್ಲೇ ಬಹುದಿನ ಬಿಡಾರ ಹೂಡಿದರು. ಮಳೆಗಾಲ ಬಂದಿತ್ತು. ಕೊಡಗಿನ. ಆ ಸಹ್ಯಾದ್ರಿಸಂನ್ನಿವೇಶದ ಮಳೆಗಾಲದ ಸೌಂದರ್ಯವನ್ನು ಅಗಸ್ತ್ಯರು ಬೇರೆಲ್ಲೂ ನೋಡಿರಲಿಲ್ಲ ! ಲೋಪಾಮುದ್ರೆಯ ಆರೋಗ್ಯ ಆ ತಂಪಿನ ದಿನಗಳಲ್ಲಿ ಕೊಂಚ ಸುಧಾರಿಸಿತ್ತು. ಮುಖದಲ್ಲಿ ಗೆಲುವು ಕಾಣಿಸಿಕೊಂಡು, ಮಹರ್ಷಿದಂಪತಿಗಳು ಸುಖಸಂಭಾಷಣೆಯಲ್ಲಿ ಆನಂದದ ಗಳಿಗೆಗಳನ್ನು ಕಳೆದು, ಹಳೆಯ ಕೊರತೆ ಕೊಂಚ ಮರೆಯುವಷ್ಟು ಮನಸ್ಸು ಇಬ್ಬರಿಗೂ ಹಗುರವಾಯಿತು ! ಕಾಲಕಳೆಯಿತು....

ಒಂದು ದಿನ ಚಾರಾಯಣ ಬಂದ ! ಭಯಂಕರ ಸಮಾಚಾರತಂದ ! ಅಗಸ್ತ್ಯರು ಗೋದಾವರೀ ತೀರವನ್ನು ಬಿಟ್ಟು ದಕ್ಷಿಣಕ್ಕೆ ಬಂದ ಮೇಲೆ

ಅಲ್ಲ ಖರನೆಂಬುವನು - ರಾಕ್ಷಸ - ಬೀಡು ಬಿಟ್ಟಿರುವುದಾಗಿಯೂ, ಅವನ ಸೇನಾನಿಗಳಾದ ದೂಷಣ, ತ್ರಿಶಿರಸ್ಸು ಎಂಬುವರು ಮತ್ತೆ ಮಹರ್ಷಿಗಳಿಗೆ ಕಾಟಕೊಡುತ್ತಿರುವುದಾಗಿಯೂ, ಶಾಂತವಾಗಿದ್ದ ಪಂಚವಟಿಯು ಈಗ ರಾಕ್ಷಸರ ಬೀಡಾಗಿರುವುದಾಗಿಯೂ, ಒಂದು ಸಮಾಚಾರ ತಂದ !

" ಬೇರೇನು ? " ಎಂದರು ಅಗಸ್ತ್ಯರು. " ದಕ್ಷಿಣದ ಲಂಕೆಯಲ್ಲಿ ರಾವಣ - ಪುಲಸ್ತ್ಯ ಗೋತ್ರದ ವಿಶ್ರವಸ್ ಎಂಬ ಋಷಿಯ ಪುತ್ರ - ಈಗ ಪ್ರಬಲನು ದುಷ್ಟನೂ ಆಗಿದ್ದಾನೆ. ಕಿಷ್ಕಿಂಧೆಯಲ್ಲಿ ಋಕ್ಷರಜಸ್ ಈಗಿಲ್ಲ ! ಅವನ ಜ್ಯೇಷ್ಠ ಪುತ್ರ ವಾಲಿ ದುಷ್ಟ. ರಾವಣನ ಮಿತ್ರ ! ದಂಡಕಾರಣ್ಯವೆಲ್ಲ ರಾಕ್ಷಸಾಕ್ರಾಂತವಾಗಿದೆ ! ಉತ್ತರದಲ್ಲಿ ಪರಶುರಾಮರ ದಿಗ್ವಿಜಯಾನಂತರ ಕೋಸಲ ದೇಶವೊಂದು ಮತ್ತೆ ಉಚ್ಛ್ರಾಯ ಸ್ಥಿತಿಗೆ ಬಂದಿದೆ. ಅಲ್ಲೀಗ ದಶರಥ ದೊರೆ ! ಅವನ ನಾಲ್ವರು ಪುತ್ರರು ರಾಮ, ಲಕ್ಷ್ಮಣ, ಭರತ, ಶತ್ರುಘ್ನರು – ದೈವಾಂಶ ಸಂಭೂತರಂತೆ .... " ಚಾಕ್ರಾಯಣ ಹೇಳುತ್ತಾ ಹೋದ ! ಅಗಸ್ತ್ಯರು ಧ್ಯಾನಾಸಕ್ತರಾಗಿ ಅವರ ಮನಸ್ಸು ಎಲ್ಲೋ ಬೇರೊಂದು ಲೋಕದಲ್ಲಿ ತೇಲುತ್ತಿತ್ತು.

ಆ ರಾತ್ರಿ ಲೋಪಾಮುದ್ರೆಯ ಆರೋಗ್ಯ ಮತ್ತೆ ಕೆಟ್ಟಿತು. ಪತಿ ಮತ್ತೆ ಅಸುರ ಶಿಕ್ಷಣಕ್ಕಾಗಿ ಹೊರಡುತ್ತಾನೆಂಬ ನಿರೀಕ್ಷೆ, ಆತಂಕ, ತನ್ನನ್ನಗಲುತ್ತಾನೆಂಬ ಅಸಹ್ಯಯಾತನೆಯಿಂದ ಋಷಿಪತ್ನಿಯ ಮನಸ್ಸು ಕಂದಿತು. ಬೆಳಿಗ್ಗೆ ಸೂರ್ಯನ ಕಿರಣಕ್ಕೆ ಅರಳಿದ ತಾವರೆ, ಮಧ್ಯಾಹ್ನದ ಸೂರ್ಯನ ಬೇಗೆಗೆ ಬೆಂದು, ಸಂಜೆಯ ವೇಳೆಗೆ ಕಾಂತಿಹೀನವೂ, ಸತ್ತ್ವಹೀನವೂ ಆಗುವಂತೆ, ಮೌನವಾಗಿ ಕಣ್ಣು ಮುಚ್ಚಿ, ಲೋಪಾಮುದ್ರೆ ತನ್ನೊಳಗೇ ಸಂಕಟವನ್ನು ಹಿಡಿದಿಟ್ಟುಕೊಳ್ಳಲು ಬಹುವಾಗಿ ಯತ್ನಿಸುತ್ತಿದ್ದಳು !

ಮಹರ್ಷಿಗೂ ಅದು ಅರ್ಥವಾಯಿತು ! ಚಾಕ್ರಾಯಣ ತಾನು ತಂದ ಸಮಾಚಾರವನ್ನು ಆಕೆಯ ಎದುರಿಗೆ ಹೇಳಬಾರದಾಗಿತ್ತೆಂದು ಆಮೇಲೆ ತಿಳಿದ !

ಇನ್ನೆರಡು ದಿನ ಕಳೆದವು. ಲೋಪಾಮುದ್ರೆಗೆ ಕೊಡವ ಅರಸನ ವೈದ್ಯ ಏನೋನೋ ಚಿಕಿತ್ಸೆ ಮಾಡಿದ. ಆ ವೇಳೆಗೆ ಸೋಮಶ್ರಮನೂ ಅಲ್ಲಿಗೆ ಬಂದಿದ್ದ ಇನ್ನೂ ಅನೇಕ ಋಷಿಗಳೂ ಸಹ. ದ್ರವಿಡರಾಜ ದಂತಿವರ್ಮನೂ ಪ್ರಾಸಂಗಿಕವಾಗಿ ಮಹರ್ಷಿಯ ದರ್ಶನಕ್ಕೆಂದು ಬಂದಿದ್ದವನು, ಲೋಪಾಮುದ್ರೆಯ ಆರೋಗ್ಯ ವಿಷಮಿಸಿದ್ದನ್ನು ಕಂಡು ತನ್ನ ವಾಸ್ತವ್ಯವನ್ನು ಒಂದೆರಡು ದಿನ ಮುಂದುವರೆಸಿದ !

ಕೊನೆಯ ಗಳಿಗೆಗಳು ಬಂದೇ ಬಂದವು ! ಲೋಪಾಮುದ್ರೆ ಮಾತಾಡುವ ಸ್ಥಿತಿಯಲ್ಲಿದ್ದರೂ ತುಂಬಾ ಕ್ಷೀಣಿಸಿದ್ದಳು.

**ಲೋಪಾ :** "ಪ್ರಭು ! ಇತ್ತ ನೋಡಿ ! "

**ಅಗಸ್ತ್ಯರು :** (ಕಣ್ಣೀರನ್ನು ತಡೆಹಿಡಿಯಲು ಯತ್ನಿಸಿ, ವಿಫಲರಾಗಿ, ಗದ್ಗದಿಸುತ್ತಾ) "ದೇವಿ, ಇಲ್ಲೇ ಇದ್ದೇನೆ."

**ಲೋಪಾ :** "ನಿಮ್ಮ ಕೈಹಿಡಿದು ನಾನಾವ ಕೊರತೆಯನ್ನೂ ಅನುಭವಿಸಲಿಲ್ಲ ಎಂದು ತುಂಬು ಹೃದಯದಿಂದಲೇ ಹೇಳುತ್ತಿದ್ದೇನೆ. ಹಾಗೆ ಕೊರತೆ ನನಗಾಯಿತೆಂದು ತಾವು ಭಾವಿಸಬಾರದು. ಆ ಭಾವನೆ ಇಲ್ಲ ಎಂದು ನನಗೆ ಭರವಸೆ ಕೊಡಿ; ನೆಮ್ಮದಿಯಾಗಿ ಸುಮಂಗಲಿಯಾಗಿ ಹೊರಡುತ್ತೇನೆ."

**ಅಗಸ್ತ್ಯ :** "ಪ್ರಿಯೇ ! (ಬಿಕ್ಕುತ್ತಾರೆ) ಕೊರತೆ ಆಗುತ್ತಿರುವುದು ನನಗಲ್ಲವೆ ? ಋಷಿ ಜೀವನದ ಕಠಿಣತೆಯನ್ನು ಆಯ್ದುಕೊಂಡು, ರಾಜಕುಮಾರಿಯಾಗಿ ಹುಟ್ಟಿದರೂ, ನೀನು ಬ್ರಾಹ್ಮಣ ಸ್ತ್ರೀಯಳಂತೆ ನನಗೆ ಉತ್ತಮ ಸಾಹಚರ್ಯ ಮಾಡಿದೆ ! ಇನ್ನು ಈ ಒಂದೇ ಗಾಲಿಯ ಮೇಲೆ ಹೇಗೆ ಈ ರಥ ಉರುಳುವುದು ?"

(ಮಗನನ್ನು ನೋಡುತ್ತಾರೆ ! ಅತಿ ಗಂಭೀರವಾಗಿ ಆ ಪುತ್ರ ತನ್ನ ದುಃಖವನ್ನು ತಡೆಯಲು ಯತ್ನಿಸುತ್ತಿದ್ದಾನೆ.)

**ಲೋಪಾ :** "ಮಗು, ಇಲ್ಲಿ ಬಾ !"

ಬಂದ ಮಗನ ನೆತ್ತಿ ನೇವರಿಸಿ, ಪ್ರೀತಿಸಿದಳು. "ತಂದೆಗೆ ಸರಿಯಾದ ಮಗನಾಗಬೇಕು ! ನಿನ್ನ ತಂದೆಯ ಕೆಲಸವನ್ನು ಶ್ರದ್ಧೆ, ಧೈರ್ಯಗಳಿಂದ ಮುಂದುವರಿಸು. ಅಗಸ್ತ್ಯವಂಶದ ಹೆಸರು ಚಿರಸ್ಥಾಯಿ ಆಗುವುದು ಈಗ ನಿನ್ನ ಕೈಲಿದೆ." ಲೋಪಾಮುದ್ರೆ ತನ್ನ ಎಳೆತನವನ್ನು ನೆನೆಸಿದಳು. ಹಿರಿಯ ಅಗಸ್ತ್ಯರು ಕೊನೆಕಾಲದಲ್ಲಿದ್ದಾಗ, ತಾನು ತಂದೆಯೊಡನೆ ಅಗಸ್ತ್ಯಾಶ್ರಮಕ್ಕೆ ಹೋದ ದೃಶ್ಯಗಳು, ಅಲ್ಲಿ ತನ್ನ ಭಾವೀಪತಿ ಸಪ್ತರ್ಷಿಸಮ್ಮೇಳನವನ್ನು ನಡೆಸುತ್ತಿದ್ದ ರೀತಿ, ಆಗಿನ ಆವರ ರೂಪ, ಯೌವನ, ದಿಟ್ಟತನ, ಕಂಗಳಲ್ಲೇ ಲೋಕವನ್ನು ಸೃಷ್ಟಿಸುವ, ಸುಡುವ ಶಕ್ತಿಯ ಭವ್ಯತೆಗೆ ತಾನು ಮನಸೋತದ್ದು ... ವಿವಾಹ.... ಅಗಲಿಕೆ .. ಮತ್ತೆ ಸೇರಿದ್ದು ....ವಿನೋದ ಯಾತ್ರೆ... ಈ ಮಧುಚಂದ್ರ.... ಎಲ್ಲ ಪದರ ಪದರವಾಗಿ ನೆನಪಾಯಿತು! ಮೆಲ್ಲನೆ ನಗಲು ಯತ್ನಿಸಿದಳು.

**ಅಗಸ್ತ್ಯ :** "ಏನಾಯಿತು ದೇವಿ ! ಏಕೆ ನಕ್ಕೆ ?"

**ಲೋಪಾ :** "ಜೀವನವೆಲ್ಲ ಒಂದು ಹಾಡಿನಂತೆ ಎನ್ನುತ್ತಾರೆ, ಹೌದೇ ?"

**ಅಗಸ್ತ್ಯ :** "ಹಾಗಾದರೆ, ಶಬ್ದವು ಆಕಾಶದಲ್ಲಿ ಉತ್ಪತ್ತಿಯಾಗಿ ಶಬ್ದದಲ್ಲೇ ಸೇರಬೇಕಲ್ಲವೆ ?"

**ಲೋಪಾ :** "ಅದನ್ನೇ ನಾನೂ ಹೇಳುತ್ತಿರುವುದು ! ಒಂದು ಪ್ರಶ್ನೆ ಕೇಳಲೇ ?"

**ಅಗಸ್ತ್ಯ :** "ಆಯಾಸ ಮಾಡಿಕೊಳ್ಳಬೇಡ...."

**ಲೋಪಾ :** "ಈ ಪ್ರಶ್ನೆ ನಾಳೆ ಕೇಳಲಾಗುವುದಿಲ್ಲ ಪ್ರಭು !.... ತನಗೆ ಮಾತ್ರ ಅಳಿವಿಲ್ಲದ ದಿವ್ಯ ಶರೀರ ಧರಿಸಿರುವ ದೇವರು, ಮಲು

ಮನುಜರಾದ ನಮಗೆ ಮಾತ್ರ ಏಕೆ ಈ ಕಾಲಕರ್ಮವಶವಾದ ಶರೀರ ಕೊಡುತ್ತಾನೆ ? ಪತ್ನೀವಿಯೋಗರಹಿತನಾಗಿ, ನಿತ್ಯಾನಂದ ಸುಖದಲ್ಲಿ ರುವ ಶ್ರೀಕಾಂತ, ಇಲ್ಲೇಕೆ ಈ ಅಗಲಿಕೆ ತರುತ್ತಾನೆ ? **ಸಂಯೋಗಾಃ ವಿಪ್ರಯೋಗಾಂತಾಃ**– ಎಲ್ಲರೂ ಕೇಳಿದ್ದೇವೆ! ಇದು ನ್ಯಾಯವೇ ?".... ಕೆಮ್ಮುತ್ತಾಳೆ.

ಸುತ್ತಲಿನ ಎಲ್ಲರೂ ಅವಕ್ಕಾಗುತ್ತಾರೆ !

**ಅಗಸ್ತ್ಯ :** "ದೇವಿ ! ಇದಕ್ಕೆ ವೇದಾಂತ ಕೊಡುವ ಶುಷ್ಕ ಉತ್ತರ ನಿನಗೂ ತಿಳಿದದ್ದೇ–...''ಇದೆಲ್ಲ ಅವನಿಗೆ ಲೀಲೆ–" ಎಂಬುದು! ಸಂಕಟ ಅನುಭವಿಸಿವಾಗ ಅನುಭವಿಸುವವರ ಹೃದಯದೊಳಗೆ ಹೋಗ ಲಾರದ ಉತ್ತರ ಅದು ! ಕಾಲಕ್ರಮೇಣ ಈ ನೋವನ್ನು ಮರೆಸಿ, ಮತ್ತೆ ಸಂಸಾರದ ಹುಚ್ಚನ್ನು ಹಚ್ಚುವದೂ ಆ ಲೀಲೆಯೇ ! ಅವನಿಗೆ ಲೀಲೆ ! ನಮಗೆ ಮಾಯೆ ! ಅದೇ ಬಂಧನ !''

**ಲೋಪಾ ;** "ಕೊನೆಯ ಪ್ರಶ್ನೆ, ಪ್ರಭು ! ಬಂಧನದಲ್ಲಿ ಸುಖವೋ ? ಮೋಕ್ಷದಲ್ಲೋ ?''

**ಅಗಸ್ತ್ಯರು :** (ಬಿಕ್ಕಿ ಬಿಕ್ಕಿ ಅಳುತ್ತಾರೆ, ಅಗಸ್ತ್ಯ ಪುತ್ರನೂ, ಇತರರೂ ಸಹ !)

"ಬಂಧನದಲ್ಲೂ ಸುಖವುಂಟು; ಮೋಕ್ಷದಲ್ಲೂ ಸಹ; ಬಂಧನ ವಿದ್ದಾಗ ಮೋಕ್ಷ ಕೇಳುತ್ತೇವೆ ! ಮೋಕ್ಷ ಬರುವುದೆನ್ನುವಾಗ ಬಂಧನವೇ ವಾಸಿ ಎನ್ನುತ್ತೇವೆ... ಪ್ರಿಯೆ ನಿನ್ನ ಮೋಕ್ಷ ಕಾಲದಲ್ಲಿ ನನಗೆಂಥ ಬಂಧನ !!! " ಲೊಪಾಮುದ್ರೆಯ ಎದೆಯಮೇಲೆ ತಲೆಯಿಟ್ಟು ಅಗಸ್ತ್ಯರು ಅಳುತ್ತಾರೆ !

ಕೆಲಕಾಲ ಆದ ಮೇಲೆ ನೋಡುತ್ತಾರೆ, ಲೋಪಾಮುದ್ರೆ ಗಂಭೀರ ಮುಖಮುದ್ರೆಯಲ್ಲೂ ಕಿರುನಗೆಯೊಂದಿಗೆ ಸಂಸಾರಮುಕ್ತಳಾಗಿರುತ್ತಾಳೆ!!

* * *

ಅಂತ್ಯವಿಧಿಗಳೆಲ್ಲ ಶಾಸ್ತ್ರೋಕ್ತವಾಗಿ ನಡೆಯುತ್ತವೆ. ಮಹರ್ಷಿಗಳೂ ಅರಸರೂ ಒಬ್ಬೊಬ್ಬರಾಗಿ ಹೊರಟ ಎಷ್ಟೋದಿನಗಳ ಮೇಲೂ ಆಗಸ್ತ್ಯರು ದಿನಂ ಪ್ರತಿ ಕಾವೇರಿಯ ದಡದಲ್ಲೇ ವೇಳೆ ಕಳೆಯುತ್ತಾರೆ ! ಆಶ್ರಮಕ್ಕೆ, ವಿಧಿಯಿಲ್ಲದೆ, ರಾತ್ರಿ ಹೋಗುವಾಗಲೂ ಕಮಂಡಲುವಿನಲ್ಲಿ ಕಾವೇರೀ ತೀರ್ಥವನ್ನು ತುಂಬಿಟ್ಟುಕೊಂಡು, ಲೋಪಾಮುದ್ರೆಯೇ ಅದರಲ್ಲಿರುವುದಾಗಿ ಭಾವಿಸುತ್ತಾರೆ ! ಅರಿಯದವರು “ಮಹರ್ಷಿಗೆ ಹುಚ್ಚು ಹಿಡಿಯಿತು” ಎನ್ನುವಷ್ಟು ಮಟ್ಟಿಗೆ, ಅಗಸ್ತ್ಯರು ಕಾವೇರಿಯೊಡನೆ, ಲೋಪಾಮುದ್ರೆಯೊಡನೆ ಆಡುವಂತೆ, ಸಂಭಾಷಿಸುವುದು, ನಗುವುದು, ವಿನೋದ ಮಾಡುವುದು ನಡೆಯುತ್ತವೆ. ಈ ಹುಚ್ಚಿಗೂ ಒಂದು ದೈವೀ ಕೊನೆ ಹೀಗೆ, ಒಂದು ದಿನ ಬರುತ್ತದೆ.

* * *

ಅಗಸ್ತ್ಯರು ಕಾವೇರಿಯ ದಡದಲ್ಲಿ ಏಕಾಂತವಾಗಿ ಕುಳಿತಿದ್ದಾರೆ. ಪುತ್ರ, ಆಶ್ರಮದಲ್ಲಿ ಸಮಿತ್ತುಗಳನ್ನು ಒಂದೇ ಸಮನಾಗಿ ಅಳತೆಗೆ ಕತ್ತರಿಸುತ್ತಿರುತ್ತಾನೆ. ಸೂರ್ಯ ಇಳಿಯುತ್ತಾ, ಪಶ್ಚಿಮ ಆಕಾಶವೆಲ್ಲ ಬಂಗಾರದ ತಗಡಿನಿಂದ ಅಲಂಕೃತವಾದಂತೆ ಕಾಣುತ್ತಿದೆ....

....ಮೆಲ್ಲನೆ ಹಿಂದೆ ಯಾರೋ ಬಂದ ಕಾಲು ಸಪ್ಪಳವಾಗಿ, ಮಹರ್ಷಿ ಹಿಂದಿರುಗಿ ನೋಡುತ್ತಾನೆ ! ಕೊಡವ ರಾಜ, ಕವೇರ ದೊರೆ, ಮತ್ತು

ರಾಣಿ ಇಬ್ಬರೂ ಬಂದು ಕೈಮುಗಿದು ನಿಂತಿದ್ದಾರೆ! ಮಹರ್ಷಿ ಚಕಿತ ನಾಗಿ, ಅವರನ್ನು ಕೂಡುವಂತೆ ಕೈಸನ್ನೆ ಮಾಡುತ್ತಾನೆ. ಬಂದ ಕಾರಣ ವೇನೆಂಬಂತೆ ಮಹರ್ಷಿ ಕಂಗಳಲ್ಲೇ ಪ್ರಶ್ನಿಸುವ ಗಂಭೀರ ಮುಖ ಮುದ್ರೆಯ ಮೋಹಕತೆ, ಇಬ್ಬರನ್ನೂ ಪುಳಕಗೊಳ್ಳುವಂತೆ ಮಾಡು ತ್ತದೆ.

**ಕೊಡವರಸ :** "ಮಹರ್ಷೇ! ನನ್ನ ನಿವೇದನೆಯನ್ನು ಕುರಿತು ಚಿಂತಿಸಿದಿರಾ ?"

**ಅಗಸ್ತ್ಯ :** "ಏನು ಆ ನಿವೇದನೆ !"

**ರಾಜ :** (ಮತ್ತೆ ಹೇಳಲು ಹಿಂದೆ ಮುಂದೆ ನೋಡಿ, ರಾಣಿಯ ಮುಖ ನೋಡುತ್ತಾನೆ! ರಾಣಿಯೇ ಹೇಳುತ್ತಾಳೆ.)

**ರಾಣಿ ;** "ನಮ್ಮ ಒಬ್ಬಳೇ ಮಗಳನ್ನು ಪತ್ನಿಯಾಗಿ ಸ್ವೀಕರಿಸಿ, ನಮ್ಮ ಕುಲವನ್ನು ಉದ್ಧರಿಸಬೇಕು !"

ಆಗಾಗ ದೊರೆಯ ಈ ಬಗೆಯ ಮಾತನ್ನು ಪಲವಾರು ಸಲ ಕೇಳಿದ್ದ ಅಗಸ್ತ್ಯರು "ಪುತ್ರಪುತ್ರಿಹೀನನಾದ ಒಬ್ಬ ವ್ಯಾಕುಲಿತ ಹೃದಯದ ಅರಸನ ಅರೆಹುಚ್ಚು ಮಾತಿವು !!" ಎಂದು ಉದಾಸೀನರಾಗಿಯೇ ಇದ್ದವ ರಿಗೆ, ಅಂದು ಆಮಾತುಗಳಲ್ಲಿ ವಿಶೇಷವೇನೋ ಕಾಣಲು ಆರಂಭವಾಯಿತು! ಏನೂ ಉತ್ತರಿಸದೆ ರಾಜ ದಂಪತಿಗಳ ಮುಖಗಳನ್ನು ನೆಟ್ಟದೃಷ್ಟಿಯಿಂದ ಬಹುಹೊತ್ತು ನೋಡಿದರು ! ಸೂರ್ಯ ಮುಳುಗುತ್ತಿದ್ದ ! ಏನೂ ಉತ್ತರಿಸದಷ್ಟು ಭಾರವಾದ ಹೃದಯದಲ್ಲಿ ಏನೇನೋ ಹಲವು ಸಂಕೀರ್ಣ ಭಾವನೆಗಳು, ಅನುಭವಗಳು .... ಕತ್ತಲಾಗುತ್ತಾ, ದಂಪತಿಗಳು ನಿರಾಶ ರಾಗಿ ವಾಪಸ್ಸು ಹೊರಟರು .... ಅಗಸ್ತ್ಯರೂ ಸಾಯಂ ಸಂಧ್ಯೆಗೆ ಎದ್ದರು ! ...

ಇದು ಹೀಗೆಯೇ ಎಂಟು ಹತ್ತು ದಿನ ನಡೆಯಿತು ! ನಿರಾಶ ರಾಗುತ್ತಿದ್ದರೂ ರಾಜದಂಪತಿಗಳು ತಮ್ಮ ದಿನನಿತ್ಯದ ಕಾರ್ಯಕ್ರಮದಂತೆ ಅದನ್ನು ಮಾಡುತ್ತಲೇ "ಎಂದಿಗಾದರೊಮ್ಮೆ ಮಹರ್ಷಿ ಹೃದಯ ಬದ ಲಾಗುತ್ತದೆ !" ಎಂಬ ವಿಶ್ವಾಸದೊಡನೆ ಅಗಸ್ತ್ಯದರ್ಶನಕ್ಕೆ ಬರುತ್ತಲೇ ಇದ್ದರು.

ಆ ಒಂಬತ್ತನೆಯ ರಾತ್ರಿ ಅಗಸ್ತ್ಯರು ಸಾಯಂ ಆಹ್ನೀಕವನ್ನೆಲ್ಲ ಮುಗಿಸಿ ಆಶ್ರಮದ ಮುಂದಿನ ಹಾಸುಗಲ್ಲಿನ ಮೇಲೆ ಯೋಗಾಸನದಲ್ಲಿ ಆಸೀನರಾಗಿದ್ದಾರೆ. ಬೆಳದಿಂಗಳಿನಲ್ಲಿ ಕಾವೇರಿ ಮೃದು ಮಧುರ-ಮಂಜುಳ ಭಾಷಿಣಿಯಾಗಿ ಭಾವೀ ಪತಿಯೊಡನೆ ಏನನ್ನೋ ಹೇಳಲು ತವಕಿಸುತ್ತಿರು ವಂತೆ ಅಗಸ್ತ್ಯರಿಗೆ ಭಾಸವಾಯಿತು ! ನದಿಯೊಳಗಿಂದ ಯಾರೋ ಎದ್ದು ಬಂದು ದಡದ ಮೇಲೆ ನಿಂತು ದೂರದಿಂದ ತಮ್ಮನ್ನು ಕರೆಯುತ್ತಿರು ವುದಾಗಿ ಭಾಸವಾಯಿತು ! ಆಕೃತಿಯನ್ನು ಕಂಡು ಅಗಸ್ತ್ಯರೂ ಚಕಿತ ರಾದರು ! ತಮ್ಮ ಪ್ರಿಯೆ, ಲೋಪಾಮುದ್ರೆ !! ಶರೀರಬಿಟ್ಟವಳು ಇಲ್ಲಿ ಮತ್ತೆ ಹೇಗೆ ಬಂದಳು !! ಅಗಸ್ತ್ಯರು ಚಿಂತಿಸಿದರು. ಹತ್ತಿರ ಬಂದು ಲೋಪಾಮುದ್ರೆ ಕಿಲಕಿಲ ನಕ್ಕು ಪತಿಗೆ ತೀರ ಸಮೀಪದಲ್ಲಿ ನಿಲ್ಲುತ್ತಾಳೆ :

**ಲೋಪಾ :** "ಸತ್ತವಳು ಹೇಗೆ ಮತ್ತೆ ಬಂದಳೆಂಬುದನ್ನು ಚಿಂತಿಸುವ ಆರ್ಯಪುತ್ರರೇ !... ನೀವೇ ಪವಾಡಪುರುಷರು ! ಮೃತ ಸಂಜೀವನಿಯನ್ನು ನೀವೂ ಬಲ್ಲಿರಷ್ಟೆ !"

**ಅಗಸ್ತ್ಯ :** "ಪ್ರಿಯೆ ! ನೀನು ನಿಜವಾಗಿಯೇ ಬಂದಿರುವೆಯಾ?.... ಇದೆಲ್ಲ ?..."

**ಲೋಪಾ :** "ನೀವು ನನ್ನ ನೆನಪಿನಲ್ಲಿರುವುದೇ ನಿಜವಾದರೆ, ನಾನು ಬಂದಿರುವುದೂ ನಿಜವೇ ! ಶುಷ್ಕವೇದಾಂತ ಎಂದು ನೀವೇ ಒಮ್ಮೆ

ಹೇಳಿದ ಚರ್ಚೆಗಳು ಈಗ ಬೇಡ! ಕೆಲ ರಸನಿಮಿಷಗಳನ್ನು ಕಳೆದು ಹೋಗುತ್ತೇನೆ...''

ಅಗಸ್ತ್ಯರು ಅವಳನ್ನು ಹಿಡಿದು ಆಲಿಂಗಿಸಲು ಮುಂಪಡಿಯಿಡು ತ್ತಾರೆ.... ಅವಳು ಹಿಂದೆ ಹಿಂದೆ ಸರಿಯುತ್ತಾಳೆ!...

**ಲೋಪಾ :** "ಸ್ಪರ್ಶವೆಂಬುದು ಅನುಭೂತಿಯ ಕೇವಲ ಭೌತಿಕ ಪಾತಳಿಯ ಮಟ್ಟದ್ದು!.... ಪ್ರಭು! ನಮ್ಮ ನಿಮ್ಮ ಅಮರಪ್ರೇಮ ಅದನ್ನು ಮೀರಿ ನಿಂತದ್ದಾಗಿದೆ! ನನಗೆ ರಸನಿಮಿಷಗಳು ಬೇಕು! ಮಾತಾಡಿದರೆ ಸಾಕು! ನೀವು ನಗುವುದನ್ನು ನೋಡಿ ಬಹಳ ದಿನ ವಾಯ್ತು! .."

**ಅಗಸ್ತ್ಯರು :** "ಹಾಗಾದರೆ ಇಲ್ಲೇ ಸದಾ ನನ್ನ ಬಳಿ ಇದ್ದು ನಾನೇನು ಮಾಡುತ್ತಿದ್ದೇನೆಂದು ನೋಡುತ್ತಲೇ ಇರುವೆಯಾ?''

**ಲೋಪಾ :** ''ಹೌದೂ ಪ್ರಭು!''

**ಅಗಸ್ತ್ಯರು :** "ಎಲ್ಲಿ?"

**ಲೋಪಾ :** "ಇಲ್ಲೇ ಆಶ್ರಮದ ಬಳಿ (ಕಾವೇರಿಯನ್ನು ತೋರಿಸುತ್ತಾಳೆ) ನೀವು ನನ್ನ ಪ್ರಕೃತ ಶರೀರದ ಮೂಳೆಗಳನ್ನೂ, ಭಸ್ಮವನ್ನೂ ನಮ್ಮ ಪುತ್ರನ ಕೈಲಿ. ಈ ದಿವ್ಯನದಿಯಲ್ಲಿ ತಾನೇ ವಿಸರ್ಜಿಸಿದಿರಿ? ಈ ಕೊಡವರ ಮಗಳು ದಿವ್ಯಶಕ್ತಿಯುಳ್ಳವಳು. ಸತ್ತವರಿಗೆ ಪುನರ್ಜನ್ಮ ಕೊಡುತ್ತಾಳೆ. ಆ ಮೂಳೆ, ಭಸ್ಮಗಳಿಂದ ನಾನು ಈಗ ಪುನಃ ಸೃಷ್ಟಳಾಗಿ ನಿಮ್ಮೆದುರು ಬಂದಿದ್ದೇನೆ. ಇದು ಸತ್ಯ! ನೀವು ಆಶ್ರಮದೊಳಗೆ ನಡೆದಾಗ ನಾನು ನಿಮ್ಮ ಕಮಂಡಲು ತೀರ್ಥದಲ್ಲಿ ಅಡಗಿ ಕುಳಿತು ನಿಮ್ಮ ಸಾಂನಿಧ್ಯವನ್ನು ಸವಿದು ಅನುಭವಿಸುತ್ತೇನೆ. ಸಮಯ ಬಂದರೆ ಇಗೋ, ಹೀಗೆ ಮಾಡುತ್ತೇನೆ....''

**ಅಗಸ್ತ್ಯರು :** "ಸಮಯ ಎಂದರೇನು ?"

**ಲೋಪಾ ;** "ನೀವು ಮತ್ತೆ ನನ್ನ ಕೈಹಿಡಿದು ವಿವಾಹ ಆಗ ಬೇಕು ! ಆಗುತ್ತೀರಾ !!"

**ಅಗಸ್ತ್ಯರು ;** "ಏನಿದು ? ಹುಡುಗಾಟವೇ ? ನಾನು ಹಿಂದೆಯೇ ನಿನ್ನ ಕೈಹಿಡಿದಾಗಿದೆಯಲ್ಲ ? ಮತ್ತೆ ವಿವಾಹ ಎಂದರೇನು ?

**ಲೋಪಾ :** "ಪ್ರಭು ! ನನಗೆ, ನನ್ನ ತಂದೆಗೆ, ನಿಮಗೆ– ಮೂವರಿಗೇ ಮಾತ್ರ ತಿಳಿದಂತೆ ಒಂದು ರಹಸ್ಯ, ಮದುವೆ ಆದಮೇಲೂ, ಸಮಸ್ತಋಷಿಗಳ ಎದುರು ನನ್ನನ್ನೇ ನೀವು ಮತ್ತೆ ಎರಡನೇ ಸಲ ಆಗಲಿಲ್ಲವೆ ?"

**ಅಗಸ್ತ್ಯ :** "ಹೌದು ! ಅದು ಆಗ ಅಗತ್ಯವಿತ್ತು !"

**ಲೋಪಾ :** "ಈಗಲೂ ಇದು ಅಗತ್ಯ ! ನಾನು ಹೇಗೂ ಈಗ ಆ ಹಳೆಯ ಶರೀರದಲ್ಲಿಲ್ಲ ! ಪತ್ನಿಯಶರೀರವೇ ಬೇರೆಯಾದ ಮೇಲೆ ಇನ್ನೊಂದು ವಿವಾಹ ಅಗತ್ಯವಲ್ಲವೇ, ಪ್ರಭು !"

**ಅಗಸ್ತ್ಯ :** "ನೀನು ನಿನ್ನ ಹೊಸ ಶರೀರವನ್ನು ಮುಟ್ಟಲು ನನಗೆ ಬಿಡುತ್ತಲೇಯಿಲ್ಲವಲ್ಲ ! ಇದು ಬರೀಭ್ರಮೆಯೋ, ಸತ್ಯಾನುಭವವೋ ಎಂದು ನನಗೆ ತಿಳಿದ ಮೇಲಲ್ಲವೆ ಮುಂದಿನ ಮಾತು !"

**ಲೋಪಾ :** "ಒಮ್ಮೆ ಮಾತ್ರ ಹತ್ತಿರ ಬರುತ್ತೇನೆ.... ಮತ್ತೆ ಹಾಗೆ ಮುಟ್ಟಬಾರದು ! ದೈವನಿಯಮ ನಿಮಗೂ ನನಗೂ ಬಾಧಕ ವೆಂದೂ ನೀವೇ ಹೇಳುತ್ತಿದ್ದಿರಿ ! ನಾನು ನಿಮ್ಮ ಕಂಗಳಿಗೆ ಮಾತ್ರ ಈಗ ಕಾಣುತ್ತಿರುವೆ. ನಿಮ್ಮ ಸ್ಪರ್ಶಕ್ಕೆ ಮಾತ್ರ ಬರುತ್ತಿದ್ದೇನೆ.... ಇಕೋ, ಬಂದೆ." ಎನ್ನುತ್ತಾ ಎರಡೂ ತೋಳುಗಳನ್ನು, ಆಲಿಂಗಿಸುವವಳಂತೆ ನೀಡುತ್ತಾಳೆ. ಅಗಸ್ತ್ಯರು ಲೋಪಾಮುದ್ರೆಯನ್ನು ಬಾಚಿ, ತಬ್ಬಿಕೊಂಡು,

ಆನಂದ ಬಾಷ್ಪಸುರಿಸುತ್ತಾರೆ! ಆ ಸ್ಪರ್ಶ ಹಿಂದೆಂದೂ ತರದಷ್ಟು ಹಿತವನ್ನು, ಸುಖವನ್ನು ಅವರಿಗೆ ತರುತ್ತದೆ.... ಬಿಡಿಸಿಕೊಂಡು ಲೋಪಾಮುದ್ರೆ ಹಿಂದೆ ಸರಿಯುತ್ತಾಳೆ...

"ಪ್ರಭೂ! ಈ ಅನುಭವದಲ್ಲಿ ನೀವು ನಿತ್ಯನೂತನರಾಗಿ ಚಿರಾಯುಗಳಾಗಿ ಬಾಳಬೇಕು. ಸದಾ ನನ್ನ ಸಾಂನ್ನಿಧ್ಯದಲ್ಲೇ ಇರಬೇಕು."

**ಅಗಸ್ತ್ಯ :** "ನೀನು ನನ್ನನ್ನು ಬಿಟ್ಟಿರದಿದ್ದರೆ ಆಯಿತು! ನನಗೂ ಅದೇ ಬೇಕು!"

**ಲೋಪಾ :** "ನಾನಿರುವುದು ಅಲ್ಲಿ!... ಅಗೋ ಅಲ್ಲಿ!...." (ಕೈ ತೋರಿಸುತ್ತಾಳೆ.)

**ಅಗಸ್ತ್ಯ :** "ಅದು ಕಾವೇರೀ!"

**ಲೋಪಾ :** "ಈಗ ಅವಳೇ ನಾನು! ಅದೇ ನನ್ನ ಹೊಸ ಹೆಸರು! ನನ್ನ ಅಸ್ಥಿಗಳನ್ನು ಅಲ್ಲಿ ಸ್ಪರ್ಶಮಾಡಿದಾಗಿನಿಂದ ನಾನು ಆ ರೂಪವನ್ನೇ ತಳೆದಿದ್ದೇನೆ! ನಾನೀಗ ಕಾವೇರ ಪುತ್ರೀ! ಈ ಜನ್ಮದಲ್ಲಿ ಇನ್ನೂ ಅವಿವಾಹಿತೆ! ನನ್ನ ತಾಯಿತಂದೆಯರು ದಿನಾ ಬಂದು ನಿಮ್ಮನ್ನು ನನ್ನ ವಿವಾಹಕ್ಕೆ ಅಂಗಲಾಚಿ ಕೇಳಿ, ನಿರಾಶರಾಗಿ ಹೋಗುತ್ತಿದ್ದಾರೆ! ನಾನು ನಿಮಗೆ ಬೇಡವೇ ?.... ಹೋಗಲೇ ?"

**ಅಗಸ್ತ್ಯ :** "ಇದನ್ನು ನೀನು ಮೊದಲೇ ಏಕೆ ನನಗೆ ಹೇಳಲಿಲ್ಲ ?"

**ಲೋಪಾ :** "ಸರ್ವಜ್ಞರಿಗೆ ಎಲ್ಲವನ್ನೂ ಹೇಳಬೇಕೆ ? ನಾನು ಮತ್ತೆ ಮತ್ತೆ ಕಾವೇರಿಯಲ್ಲಿ ನಿಮಗೆ ಕಾಣಿಸಿಕೊಂಡೂ, ನಿವು ಸರಿಯಾಗಿ ನೋಡದಿದ್ದರೆ....!"

ಅಗಸ್ತ್ಯರ ಏಕಾಂತ ಭಂಗವಾಗುತ್ತದೆ! ಮಗ, ಇಧ್ಮವಾಹ ಆಗತಾನೇ ಬಂದು ಹಿಂದೆ ನಿಂತಿದ್ದ! ಲೋಪಾಮುದ್ರೆ ಕಾಣದಾಗು

ತ್ತಾಳೆ !.... ತಂದೆಯನ್ನು ಮಗ ಆಶ್ರಮಕ್ಕೆ ಕರೆದೊಯ್ಯುದ್ದ. ಏರ್ಪಾಂತಿಗೆ ಅಣಿಮಾಡಿ. ಹೊದ್ದಿಕೆ ಹೊದ್ದಿಸುತ್ತಾನೆ.

*          *          *

ಮರುದಿನ ಅಗಸ್ತ್ಯರು ಆಹ್ನಿಕ ಮುಗಿಸಿ, ಕವೇರ ರಾಜದಂಪತಿಗಳಿಗೆ ಹೇಳಿ ಕಳುಹುತ್ತಾರೆ, ಆ ವೃದ್ಧ ದಂಪತಿಗಳು ತವಕದಿಂದ ಆಶ್ರಮಕ್ಕೆ ಬರುತ್ತಾರೆ. ಅಗಸ್ತ್ಯರು ಅವರ ಪುತ್ರಿಯನ್ನು ವಿವಾಹವಾಗುವುದಾಗಿ ಮಾತುಕೊಡುತ್ತಾರೆ. ನಾಲ್ಕು ದಿನದಾಚೆ, ಶುಭದಿನ, ಶುಭ ಮುಹೂರ್ತದಲ್ಲಿ ಕಾವೇರಿಯ ಪಡದಲ್ಲೇ, ಕೊಡವರ ಪದ್ಧತಿಯಂತೆ ವಿವಾಹ ನಡೆಯುತ್ತದೆ. ಬಂಗಾರದ ಬಿಂದಿಗೆಯಲ್ಲಿ ತಂದ ಕಾವೇರೀ ತೀರ್ಥ ಕನ್ಯೆಯ ಸ್ನಾನದಲ್ಲಿರುತ್ತದೆ ! ಆ ಕೊಡದ ಕಂಠಕ್ಕೇ ಅಗಸ್ತ್ಯರು ಮಾಂಗಲ್ಯ ಧಾರಣೆ ಮಾಡುತ್ತಾರೆ. ಅಗಸ್ತ್ಯರು ಯುದ್ಧವೀರನ ಪೋಷಾಕು ಧರಿಸ ಬೇಕಾಗುತ್ತದೆ. ಧನುರ್ಬಾಣಗಳನ್ನೂ, ಕತ್ತಿ, ಕಠಾರಿ, ಈಟಿಗಳನ್ನೂ ಧರಿಸಿ ಅವರು ನವಯುವಕನಂತೆಯೇ ಕಾಣಲಾರಂಭಿಸುತ್ತಾರೆ ! ಅಗಸ್ತ್ಯ ಪುತ್ರನಿಗೆ ಇದರಿಂದ ಮನ ನೆಮ್ಮದಿ ಸಿಗುತ್ತದೆ. 'ತಾಯಿ' ತಂದೆಯರಿಗೆ ಭಕ್ತಿಯಿಂದ ವಂದಿಸುತ್ತಾನೆ. ಕೊಡದ ನೀರಿನಲ್ಲಿ ಲೋಪಾಮುದ್ರೆ ಮತ್ತೆ ಕಾಣಿಸಿಕೊಳ್ಳುತ್ತಾಳೆ. "ಪಾಣಿಗ್ರಹಣ, ಸಪ್ತಪದೀ ಎಲ್ಲ ಒಂದೆ ಆಗಿದೆ ! ಮತ್ತೆ ಬೇಕೆನ್ನಬೇಡಿ. ಈ ದೇಶದ ಪದ್ಧತಿಯಂತೆಯೇ ಇದು ಆಗಲಿ! "

ಮದುವೆ ವಿಜೃಂಭಣೆಯಿಂದ ನಡೆಯುತ್ತದೆ !

*          *          *

"ಅಗಸ್ತ್ಯರು ತುಂಬಾ ಇಳಿ ವಯಸ್ಸಿನಲ್ಲಿ ಯಾವಳೋ ಕೊಡಗಿನ ಬೆಡಗಿಯಾದ ಒಬ್ಬ ಹುಡುಗಿಯನ್ನು ವಿವಾಹವಾದರಂತೆ !" ಎಂಬ ವಾರ್ತೆ

ಆರ್ಯಾವರ್ತದಲ್ಲೂ, ದ್ರವಿಡ ದೇಶದಲ್ಲೂ, ಗೊಂಡಾರಣ್ಯದಲ್ಲೂ, ಭಿಲ್ಲರ ವಸತಿಗಳಲ್ಲೂ, ನಾನಾ ಋಷ್ಯಾಶ್ರಮಗಳಲ್ಲೂ ಹಬ್ಬಿ, "ಅಗಸ್ತ್ಯರಿಗೆ ಹುಚ್ಚು ಹಿಡಿದಿರಬೇಕು !" ಎಂದು ಋಷಿಗಳೂ ಸಾಮಾನ್ಯರೂ ಭಾವಿಸಿ, ಈ ತಮಾಷೆ ನೋಡಲು ಗುಂಪುಗುಂಪಾಗಿ ಬರುತ್ತಾರೆ !

"ಹೊಸ ಪತ್ನಿ"ಯನ್ನು ಕಂಡವರೆಲ್ಲ, ತಮ್ಮ ತಪ್ಪಿಗಾಗಿ ಪ್ರಾಯಶ್ಚಿತ್ತ ಪಟ್ಟು, ಅಗಸ್ತ್ಯರ ಪಾದ ಹಿಡಿದು ಕ್ಷಮೆ ಕೇಳಿ ನಿರ್ಗಮಿಸುತ್ತಾರೆ ! "ಇವರ ಚರಿತ್ರೆಯಲ್ಲಿ ಎಲ್ಲವೂ ವಿಚಿತ್ರವೇ !" ಎನ್ನುತ್ತಾ ಹೊರಡುತ್ತಾರೆ! "ಅಗಸ್ತ್ಯರಿಗೆ ಇನ್ನು ದಕ್ಷಿಣ ಭಾರತದ ವಾಸ, ಅದು ಕಾವೇರೀ ದಡದಲ್ಲಿ ನಿತ್ಯವಾಸ, ಬಿಡಲಾರದ ನಂಟಾಯಿತು." ಎಂಬುದು ಎಲ್ಲರಿಗೂ ಅರ್ಥವಾಗುತ್ತದೆ. "ಅವರು ವಾಪಸ್ಸು ಆರ್ಯಾವರ್ತಕ್ಕೆ ಹೊರಟು ನಿಂತಾಗ ವಿಂಧ್ಯ ಮತ್ತೆ ಮೇಲೆದ್ದರೆ !'' ಆದಾಗ ಬಾರದೆಂದೇ ಅಲ್ಲವೆ ಅವರು ಅವನನ್ನು ನಮಸ್ಕಾರ ಮುದ್ರೆಯಲ್ಲಿ ಮಲಗಿಸಿ ಇತ್ತ ಬಂದುದು ! ಹೀಗಾಗಿ ಆರ್ಯಾವರ್ತದ ಮಹರ್ಷಿಗಳಿಗೆ ಅಗಸ್ತ್ಯರ ಕಾವೇರೀ ವಿವಾಹದಲ್ಲೂ ಲೋಕೋಪಕಾರವೇ ಕಾಣುತ್ತದೆ...

ಕಾವೇರೀ ತೀರದ ಎಲ್ಲ ದಿವ್ಯ ಪ್ರಾಚೀನ ಪುರಾಣ ಕ್ಷೇತ್ರಗಳನ್ನೂ ಅಗಸ್ತ್ಯರು ಪುತ್ರ, ಶಿಷ್ಯರೊಡನೆ ಸಂದರ್ಶಿಸುತ್ತಾರೆ. ಸಹ್ಯಾದ್ರಿಯ ಶಿಖರಗಳ ಅನೇಕ ಪಾವನ ಕ್ಷೇತ್ರಗಳನ್ನೂ ಸಹ ! ವೇದಾದ್ರಿಯ ನರಸಿಂಹ ಗಿರಿಯ ನರಸಿಂಹ ಕ್ಷೇತ ಅಂಥದೊಂದು ! (ಈಗಿನ ಮೇಲ್ಕೋಟೆಯ ಯೋಗಾನರಸಿಂಹ, ಪ್ರಹ್ಲಾದಪ್ರತಿಷ್ಠಿತ ಪ್ರಾಚೀನ ಕ್ಷೇತ್ರ.) ಶೃಂಗ ಗಿರಿಯ ಋಷ್ಯಶೃಂಗಾಶ್ರಮ ಅಂಥ ಇನ್ನೊಂದು ! (ಈಗಿನ ಶೃಂಗೇರಿ ಇದು.) ಗೋಮಾಂತಕವಾಸೀ ಪರಶುರಾಮರ ಸಂದರ್ಶನವೂ ಆಗುತ್ತದೆ. ಅಲ್ಲಿ ಅಗಸ್ತ್ಯರು ಕೆಲ ಕಾಲ ತಂಗಿ, ಗೋಮಾಂತಕದ ಸೌಂದರ್ಯಕ್ಕೆ ಮರುಳಾಗುತ್ತಾರೆ. ಪರಶುರಾಮರೊಡನೆ ವಿಚಾರ ವಿನಿಮಯವೂ ಆಗುತ್ತದೆ.

**ಪರಶುರಾಮ :** "ಹಿರಿಯರೇ ! ಸಮಾಚಾರ ಕೇಳಿದಿರಾ ?"

**ಅಗಸ್ತ್ಯ ;** "ಉತ್ತರವನ್ನು ಬಿಟ್ಟು ಎಷ್ಟೋ ವರ್ಷ ಆಯಿತು ! ಏನು ವಿಶೇಷ ?"

**ಪರಶು :** "ಸಹಸ್ರಾರ್ಜುನನ ಗರ್ವದ ಬೊಳಕೆಯನ್ನು ನಾನೇನೋ ಕಿತ್ತು ಹಾಕಿ, ದುಷ್ಟಕ್ಷಾತ್ರದ ಹುಟ್ಟಡಗಿಸಿದೆ ! ಅದಿಂದು ಭರತ ವಂಶದ ವಿಶ್ವರಥನ ರೂಪದಲ್ಲಿ ಮತ್ತೆ ಬೊಳೆದು ವಸಿಷ್ಠರನ್ನು ಕಾಡಿ, ಕೊನೆಗೆ ಹತವಾಯಿತು ! ಈಗ ವಿಶ್ವರಥ ವಿಶ್ವಾಮಿತ್ರನಾಗಿದ್ದಾನೆ ! 'ಧಿಗ್ಬಲಂ ಕ್ಷತ್ರಿಯ ಬಲಂ, ಬ್ರಹ್ಮತೇಜೋ ಬಲಂ ಬಲಂ" ಎಂಬ ಜ್ಞಾನೋದಯ ಅವನಿಗಾಗಿದೆ ! ವಸಿಷ್ಠರು ಚೆನ್ನಾಗಿ ಪಾಠ ಕಲಿಸಿದರು ! ಅವನನ್ನು ದಾರಿಗೆ ತಂದರು ! ಆ ವಿಶ್ವಾಮಿತ್ರ ಈಗ ಬ್ರಹ್ಮರ್ಷಿಯೂ ಆಗಿ ಗಾಯತ್ರೀ ಮಂತ್ರದ ಸಾಕ್ಷಾತ್ಕಾರ ಮಾಡಿದ್ದಾನಂತೆ !... ಇನ್ನೊಂದು ವಿಷಯ...."

**ಅಗಸ್ತ್ಯ :** "ಏನು ಹೇಳಿ !"

**ಪರಶು :** "ಒಂದು ಯುಗದಲ್ಲಿ ಭಗವಂತ ನನ್ನಲ್ಲಿ ಆವೇಶಾವತಾರ ಮಾಡಿ ದುಷ್ಟನಿರ್ಮೂಲನ ಮಾಡಿಸಿದ ! ಈಗ ಅವನೇ ಸತ್ ಕ್ಷತ್ರಿಯನಾಗಿ ಅವತಾರ ಮಾಡಿದ್ದಾನೆ...."

**ಅಗಸ್ತ್ಯ :** "ಬಲ್ಲೆ ! ದಶರಥ ಪುತ್ರ ರಾಮನನ್ನು ಕುರಿತು ತಾನೇ ಹೇಳುತ್ತಿದ್ದೀರಿ ?"

**ಪರಶು :** "ಹೌದು ! ತಾಟಕೆಯನ್ನು ಅವನು ಕೊಂದಾಗಲೇ ತಿಳಿದೆ ! ಜನಕನ ಮನೆಯ ಧನುಸ್ಸನ್ನು ಅವನು ಮುರಿದಾಗಲೂ ತಿಳಿದೆ ! ನನ್ನ ವಿಷ್ಣ್ವಂಶವನ್ನು ನಾನೇ ಅವನಲ್ಲಿ ಸಮಾರೋಪ ಮಾಡಿಯೂ ಬಂದೆ..." (ಕಥೆ ಹೇಳುತ್ತಾರೆ.)

**ಅಗಸ್ತ್ಯ :** "ಈಗ ಆ ಅವತಾರದಲ್ಲಿ ನನ್ನ ಪಾತ್ರವೇನೂ ಇಲ್ಲವೆ, ಪ್ರಭು !"

**ಪರಶು :** "ನನಗೆ ತಿಳಿದಂತೆ ನಿಮ್ಮದು ಎರಡು ಪಾತ್ರಗಳು ರಾಮ ಚರಿತ್ರೆಯಲ್ಲಿ ....ಗೋದಾವರೀ ತೀರದ ಪಂಚವಟಿಯಲ್ಲಿ ನೀವು ಹೊಸ ಅವತಾರಿಗೆ, ಸಾಂಕೇತಿಕವಾಗಿ ವೈಷ್ಣವ ಧನುಸ್ಸನ್ನೂ, ಅಮೋಘ ವೈಷ್ಣವಾಸ್ತ್ರವನ್ನೂ ಸಮರ್ಪಿಸುವುದೊಂದು .. ಆದರೆ ನೀವು ಈ ನಿಮಿತ್ತ ವಿಂಧ್ಯನನ್ನು ಮತ್ತೆ ಧಾಟಬೇಕಾಗುವುದೇನೋ !"

**ಅಗಸ್ತ್ಯ :** "ಹಾಗೆ ಮಾಡುವುದಿಲ್ಲವೆಂದು ದೇವತೆಗಳಿಗೂ, ಋಷಿ ಮುನಿಗಳಿಗೂ ವರ ಕೊಟ್ಟಿದ್ದೇನೆ."

**ಪರಶು :** "ಹಾಗಾದರೆ ಈ ಸಹ್ಯಾದ್ರಿಯ ಕಡೆಯಿಂದಲೇ, ವಿಂಧ್ಯ ನನ್ನು ಧಾಟದೆಯೇ, ಆ ಗೋದಾವರಿಯ ಪಂಚವಟೀ ಆಶ್ರಮಕ್ಕೆ ದಾರಿ ಯಿದೆಯೋ ಎಂದು ಹುಡುಕಬೇಕಾಗುತ್ತದೆ ! ಬೇರೆ ವಿಧಿಯೇ ಇಲ್ಲ !! ಪಂಚವಟಿಯಿಂದ ದಕ್ಷಿಣಕ್ಕೆ ನೀವು ರಾಮಭದ್ರನಿಗೆ ಮಾರ್ಗದರ್ಶನ ಮಾಡದೆಯೇ ಹೋದರೆ, ರಾಕ್ಷಸ ಸಂಹಾರವಿಲ್ಲದೆಯೇ ರಾಮಾಯಣ ಮುಗಿದು ಹೋಗಬೇಕಾಗುತ್ತದೆ ! ನಿಮ್ಮ ಆಯುಷ್ಯ ಇನ್ನೂ ಉಳಿದಿ ರುವುದು ಇದರ ಸಲುವಾಗಿ...."

**ಅಗಸ್ತ್ಯ :** "ಆ ಇನ್ನೊಂದು ಪಾತ್ರ ಯಾವುದು ?"

**ಪರಶು ;** "ರಾವಣವಧೆಯ ಘಟ್ಟದಲ್ಲಿ ರಾಮನಿಗೆ ಆದಿತ್ಯ ಹೃದಯ ಮಂತ್ರವನ್ನುಪದೇಶಿಸಿ, ಆ ಮೂಲಕ ಲೋಕಕ್ಕೆ ಆ ದಿವ್ಯ ಮಂತ್ರವನ್ನು ಪ್ರಚುರಿಸುವುದು...."

**ಅಗಸ್ತ್ಯ :** "ಮೂರನೆಯದೂ ಒಂದು ಇದೆಯೆಂಬಂತೆ ಕಾಣು ತ್ತಿದೆಯಲ್ಲ !"

**ಪರಶು :** "ಪಟ್ಟಾಭಿಷಿಕ್ತನಾದ ರಾಮಚಂದ್ರನಿಗೆ ಕೆಲವು ಪ್ರಾಚೀನ ಚರಿತ್ರೆಗಳನ್ನು ತಿಳಿಸುವುದು, ವೈರಾಗ್ಯೋಪದೇಶ ಮಾಡುವುದು. ನೀವಲ್ಲ ದಿದ್ದರೆ ನಿಮ್ಮ ಪುತ್ರ ಅದನ್ನು ಮಾಡಿಯಾನು !"

**ಅಗಸ್ತ್ಯ :** "(ಖಿನ್ನರಾಗಿ) ಅಷ್ಟೊಂದು ಕಾಲ ನಾನು ಈ ಲೀಲಾ ವಿಭೂತಿಯೆನಿಸಿದ ಮರ್ತ್ಯಲೋಕದಲ್ಲೇ ಇರಬೇಕೇ !"

**ಪರಶು :** "ಮಹರ್ಷೆ ! ನಿಮಗೆ ಪತ್ನೀವಿರಹವಾದುದನ್ನು ಕೇಳಿ ಬಲ್ಲೆ! ಅದು ಮರ್ತ್ಯಲೋಕ ಧರ್ಮ. ಒಬ್ಬರು ಹಿಂದೆ ಒಬ್ಬರು ಮುಂದೆ, ಎಂಬುದು ! ಆದರೆ ಹೇಗೂ ಆ ಪತ್ನಿ ನಿಮ್ಮೊಡನೆ ಇನ್ನೊಂದು ರೂಪ ದಲ್ಲಿ ಇದ್ದೇ ಇರುವಳಲ್ಲವೆ ? ನಿಮ್ಮದು ವಿಲಕ್ಷಣ ಚರಿತ್ರೆ ! ಘಟದಲ್ಲೇ ಹುಟ್ಟಿ 'ಕುಂಭಸಂಭವ'ರಾದಿರಿ ! ಈಗ ತೀರ್ಥರೂಪದಲ್ಲಿ ಪತ್ನಿಯನ್ನು ಕುಂಭದಲ್ಲೇ ಹೊತ್ತು ತಿರುಗುತ್ತಿದ್ದೀರಿ ! ಘಟಾಂಬುವಾಹರಾದ ನೀವು ತುಂಬಿದ ಕೊಡದಂತೆ ಜ್ಞಾನಾಧಿಕರಾಗಿ 'ಮಾನ್ಯ'ರೂ ಆಗಿದ್ದೀರಿ ! ಹೇಗೆ ಹೇಗೆ ನೋಡಿದರೂ 'ಅಗಸ್ತ್ಯ' ಶಬ್ದಕ್ಕೆ ಅರ್ಥವನ್ನು ನವೋನವರೀತಿಯಲ್ಲಿ ತುಂಬಿದ್ದೀರಿ ! ಎತ್ತರದ ವಿಂಧ್ಯನನ್ನು ('ಅಗ'ವನ್ನು ಮಲಗಿಸಿ, ಹರವಿ (ಸ್ತೈಲ-ಸ್ತ್ಯಾಯತಿ) ಮತ್ತೆ 'ಅಗ-ಸ್ತ್ಯ'ರಾದಿರಿ !"

**ಅಗಸ್ತ್ಯ :** (ನಕ್ಕು) "ಈಗ ಈ ಸ್ತುತಿಯೆಲ್ಲ ಏಕೆ ?"

**ಪರಶು :** "ಸ್ತುತಿಗೆ, ಸ್ತುತಿಸುವುದೇ ಪರಮಪ್ರಯೋಜನ ! ಸ್ತುತ್ಯರನ್ನು ಸ್ತುತಿಸುವುದಕ್ಕೆ ಬೇರೊಂದು ಅರ್ಥ ಹಚ್ಚಬಾರದು ! ಇನ್ನು ಬರುವ ಕಾಲ ಮತ್ತೆ ಬ್ರಾಹ್ಮಣ್ಯಕ್ಕೆ ಕಂಟಕಕಾಲ ! ಆಗ ನಿಮ್ಮನ್ನೂ ನಮ್ಮನ್ನೂ ಯಾರು ಸ್ತುತಿಸುತ್ತಾರೆ ? ಯಾರು ಸ್ಮರಿಸುತ್ತಾರೆ ? ಗುಣ ವಿದ್ದಲ್ಲಿ ಪೂಜೆ, ಎಂಬ ಮಾತು ದೇವರಿಗೂ ಅನ್ವಯ, ಋಷಿಗೂ, ಸಾಮಾನ್ಯ ಮಾನವನಿಗೂ ಅನ್ವಯ. ಅದಕ್ಕೆ ವಯೋಭೇದವಿಲ್ಲ ! ಹಣ ದಿಂದ, ಅಧಿಕಾರದಿಂದ, ದರ್ಪದಿಂದ, ಬಲಾತ್ಕಾರದಿಂದ ಗೌರವ ಸಂಪಾದಿ

ಸಬಹುದೆಂಬ ಸಿದ್ಧಾಂತದ ಸಹಸ್ರಾರ್ಜುನನನ್ನು ಅಂದು ನಾನು ಕಿತ್ತೆಸೆದೆ ! ಅಂಥದೇ ಇಲ್ವಲನನ್ನು ವಾತಾಪಿಯನ್ನೂ ನೀವು ಕಿತ್ತೆಸೆದಿರಿ ! ಮತ್ತೆ ಇಕೋ ಈ ವಿಶ್ವರಥನನ್ನು ಕ್ಷತ್ರಿಯನನ್ನಾಗಿ ಮುಗಿಸಿ, ಬ್ರಾಹ್ಮಣ ವಿಶ್ವಾಮಿತ್ರನನ್ನಾಗಿ ವಸಿಷ್ಠರು ಪರಿವರ್ತಿಸಿದರು. ಅವನ ಕ್ಷಾತ್ರದ ಸೊಕ್ಕನ್ನೇ ಮುರಿದು, ಸತ್ತು ಮತ್ತೆ ಒಂದೇ ಜನ್ಮದಲ್ಲಿ ಹುಟ್ಟುವಂತೆ ಮಾಡಿದರು ! ಈ ಕಥೆ ಇಷ್ಟಕ್ಕೇ ಹೀಗೆ ಮುಗಿಯುವುದೇ ?"

**ಅಗಸ್ತ್ಯ** : "ಅವತಾರಿಗೇ ನಿರಾಶೆಯಾದನೆ, ಸಾಮಾನ್ಯ ಮರ್ತ್ಯನ ಪಾಡೇನು ?"

**ಪರಶು** : "ಸೂರ್ಯಚಂದ್ರರು ಲೋಕಕ್ಕೇ ಬೆಳಕು ನೀಡುವ ಜ್ಯೋತಿಗಳು ! ಅದಕ್ಕೆಂದೇ ವರ್ಷವರ್ಷವೂ ಅವರಿಗೆ ಗ್ರಹಣ ಬಡಿಯುತ್ತದೆ ! ಗ್ರಹಣ ಹಿಡಿಸುವ ರಾಹುಕೇತುಗಳಂತ ಕತ್ತಲೆಯ ಶಕ್ತಿಗಳಿಗೆ ಗ್ರಹಣವೆಂಬುದುಂಟೋ ?''

**ಅಗಸ್ತ್ಯ** : "ಹಾಗಾದರೆ ಚಿರಂಜೀವಿಗಳಾದ ತಾವು ಮತ್ತೆ ಗಂಡು ಗೊಡಲಿ ಹಿಡಿದು ನಡೆಯಿರಿ ! ಈ ಅಗಸ್ತ್ಯ ನಿಮ್ಮ ಹಿಂದೆ ಬರುತ್ತಾನೆ !"

**ಪರಶು** : "ಮಹರ್ಷೇ ! ಈ ಉತ್ಸಾಹ ಮೆಚ್ಚತಕ್ಕದ್ದೇನೆ ! ಆದರೆ ಒಂದೊಂದು ಕೆಲಸಕ್ಕೆ ದೇವರು ಒಬ್ಬೊಬ್ಬರನ್ನೇ ಉಪಕರಣವನ್ನಾಗಿ ಆರಿಸಿಕೊಳ್ಳುತ್ತಾನೆ ! ಸಹಸ್ರಾರ್ಜುನನಿಗೆ ನಾನೇ ಬೇಕಾಯಿತು ! ಇಲ್ವಲ ವಾತಾಪಿಗಳಿಗೆ ನೀವೇ ಬೇಕಾದಿರಿ ! ರಾವಣ, ವಾಲಿ, ಮಾರೀಚರಿಗೆ ಬೇರೆಯವನು ಹುಟ್ಟಿ ಬಂದಿದ್ದಾನೆ ! ಪಂಚವಟೀ ನಿಮಗಾಗಿ ಕಾಯುತ್ತಿದೆ, ಹೋಗಿ ! ಕರ್ತವ್ಯವನ್ನಷ್ಟೇ ಮಾಡಿ ಬನ್ನಿ !''

**ಅಗಸ್ತ್ಯರು**, ಕಾವೇರಿಯ ಕೊಡದೊಡನೆ ಪಂಚವಟಿಯತ್ತ ಪಯಣವನ್ನು ಅಂದೇ ಬೆಳೆಸಿದರು !

ಬಹಳ ವರ್ಷಗಳಾದ ಮೇಲೆ ಕುಲಪತಿ ಅತ್ತ ಬರುತ್ತಿರುವ ಸಮಾಚಾರ ಕೇಳಿ ಆಶ್ರಮದಲ್ಲಿ ಬಹಳ ವೈಭವದ ಸ್ವಾಗತ ಕಾದಿತ್ತು !

—೦—

# ೨೬ ಶ್ರೀ ರಾಮಸೇವೆಯಲ್ಲಿ ಅಗಸ್ತ್ಯರು

ಯುಗವೇ ಪರಿವರ್ತಿತವಾಗಿದೆ ಈಗ ! ಹಣ್ಣು ಮುದುಕರಾದ ಅಗಸ್ತ್ಯರು ಪಂಚವಟಿಗೆ ಸಮೀಪದ ತಮ್ಮ ಹಳೆಯ ಆಶ್ರಮದಲ್ಲಿ ಅಗ್ನಿ ಶರಣರಾಗಿ ಆಸೀನರಾಗಿದ್ದಾರೆ ! ಈಗ ಯಾರಾದರೂ ಅವರನ್ನು ನೋಡಿ ದರೆ, "ವಾತಾಪಿಯನ್ನು ಜೀರ್ಣಿಸಿಕೊಂಡವರೂ, ಸಮುದ್ರವನ್ನೂ ಆ ಪೋಶನ ತೆಗೆದುಕೊಂಡವರೂ ಇವರೇನೇ ?" ಎಂದು ಸಂದೇಹ ಬರುವಂತೆ ಕಾಲ ಪುರುಷ ಅವರ ಶರೀರವನ್ನು ಪರಿವರ್ತಿಸಿದ್ದಾನೆ !!

ಆ ಕಾಲಪುರುಷ ಪರಶುರಾಮರನ್ನೂ ಈಗ ನಿಷ್ಕ್ರಿಯರನ್ನಾಗಿಸಿ ಗೋಮಾಂತಕ ಪರ್ವತದಲ್ಲಿ ಕಟ್ಟಿ ಹಾಕಿಟ್ಟಿದ್ದಾನೆ !

ಅದೇ ಕಾಲಪುರುಷ ಶಂಬರಾಸುರನಿಗೆ ಒಂದು ಕಾಲದಲ್ಲಿ ಭಯಂಕರ ನಾಗಿದ್ದ ದಶರಥ ಚಕ್ರವರ್ತಿಯನ್ನೂ ನುಂಗಿ ಹಾಕಿದ್ದಾನೆ !

ಅದೇ ಕಾಲಪುರುಷ ಈಗ ವಿಷ್ಣುವಿನ ಅವತಾರಿಯಾದ ಶ್ರೀರಾಮ ನನ್ನೂ ಸೀತಾ ಲಕ್ಷ್ಮಣ ಸಮೇತನನ್ನಾಗಿ ಕಾಡಿಗೆ ಕಳುಹಿದ್ದಾನೆ !

ಸಹಸ್ರಾರ್ಜುನ, ಇಲ್ವಲ ವಾತಾಪಿಗಳು, ಕುಲಕೇಯರ ನಂತರ, ಅದೇ ಕಾಲ ಪುರುಷ ಈಗ ಆಸುರೀ ಶಕ್ತಿಯನ್ನು ಸಪ್ತರ್ಷಿ ಕುಲವೊಂದ ರಲ್ಲೇ ಹುಟ್ಟು ಹಾಕಿ, ರಾವಣನೆಂಬ ಬ್ರಾಹ್ಮಣನನ್ನು ಬ್ರಾಹ್ಮಣ್ಯದ, ವೈದಿಕದ, ದೇವತತ್ತ್ವದ, ಸಾತ್ವಿಕತೆಯ ಶಕ್ತಿಗಳ ವಿರುದ್ಧ ಎತ್ತಿ ಕಟ್ಟಿ ದ್ದಾನೆ !

ಮಹರ್ಷಿ ನಿತ್ಯದಂತೆ ಪ್ರಾತರಗ್ನಿಹೋತ್ರ ಮುಗಿಸಿ, ನಾನಾ ಸ್ಥಾನ ಗಳ ದೇವತೆಗಳಿಗೆ ಪುಷ್ಪ ಬಲಿ, ಧೂಪದೀಪಗಳನ್ನು ಸಮರ್ಪಿಸಿ, ಅಗ್ನಿಯ

ಮುಂದೆಯೇ ಕುಳಿತು ಲೋಕದ ಭವಿತವ್ಯವನ್ನು ಕುರಿತು ಚಿಂತಿಸು ತ್ತಿರುತ್ತಾನೆ !

ಅಗಸ್ತ್ಯರ ನೆನಪಿನ ಅಂಗಳದಲ್ಲಿ ಲೋಪಾಮುದ್ರೆ ಸುಳಿದು ಹೋಗುತ್ತಾಳೆ ! ಆ ನೆನಪು ಬಂದಾಗ ಮಾತ್ರ ಅಗಸ್ತ್ಯರ ಮೈಯ್ಯಲ್ಲಿ ನವ ತಾರುಣ್ಯದ ಮಿಂಚು ಸಂಚಾರವಾದಂತೆ ಆಗುತ್ತದೆ ! ಪಕ್ಕದಲ್ಲಿನ ಕಲಶವನ್ನು ನೋಡುತ್ತಾರೆ ! ಕಾವೇರಿ ! ಗೋದಾವರಿಯವರೆಗೆ ತನ್ನನ್ನು ಹಿಂಬಾಲಿಸಿದ ಲೋಕಪಾವನಿ ! ಕವೇರರಾಜನ ಮುಗ್ಧತೆ, ದ್ರಮಿಡ ಜನರ ಸರಳತೆ, ಶಿವಗುರುಗಳ ಸೌಹಾರ್ದ, ಮಲಯ, ಸಿಂಹಪುರದ ಅರಸುಗಳ ದೈವ ಭಕ್ತಿ !.....ಹಿರಿಯ ಅಗಸ್ತ್ಯರ ನೆನಪು ಬರುತ್ತದೆ ! ತಾವು ಗೃಹಸ್ಥರಾದ ಸಂದರ್ಭ . ಹೀಗೆ ನೆನಪಿನ ಅಲೆಗಳು ಅವರನ್ನು ಎತ್ತಲೋ ಒಯ್ದು ಪರವಶರನ್ನಾಗಿಸಿವೆ.

"ಜೀಯಾ ! ಇಕ್ಷ್ವಾಕುಲದ ರಾಜಕುಮಾರ, ಶ್ರೀರಾಮಚಂದ್ರನಂತ್ಯೆ, ಪತ್ನಿಯೊಡನೆ, ತಮ್ಮನೊಡನೆ ತಮ್ಮ ದರ್ಶನಾರ್ಥಿಗಳಾಗಿ ಬಂದಿರು ವರು" ಎಂದು ಶಾಂಚ್ರ್ವರವ ಹೇಳುತ್ತಾನೆ.

"ರಾಜೋಚಿತ ಉಪಚಾರಗಳಿಂದ ಬರ ಮಾಡು" ಎಂದು ಅಗಸ್ತ್ಯರು ಅಪ್ಪಣೆ ಮಾಡುತ್ತಾರೆ ! ಬಾಗಿಲವರೆಗೂ ತಾವೇ ಕೋಲೂರಿ ನಡೆದು ಬರುತ್ತಾರೆ. ಪ್ರಭು ರಾಮಚಂದ್ರನ ದಿವ್ಯ ದರ್ಶನದಿಂದ ಪುಲಕಿತರಾಗು ತ್ತಾರೆ ! ಆ ಸ್ವಾಗತದ ವೈಭವವನ್ನು ಏನೆಂದು ವರ್ಣಿಸೋಣ ! ಸಹಸ್ರ ಗಟ್ಟಳೆ ಬ್ರಾಹ್ಮಣರು ಸೇರಿ ಆಶೀರ್ವಾದ ಮಾಡುತ್ತಾನೆ,

**"ಇಮಮಿಂದ್ರ ವರ್ಧಯ ಕ್ಷತ್ರಿಯಾಣಾಂ । ಅಯಂ ವಿಶಾಂ ವಿಶ್ವತಿರಸ್ತುರಾಜಾ । ಅಸ್ಮಾ ಇಂದ್ರ ಮಹಿ ವರ್ಚಾಗ್‌ಂಸಿ ಧೇಹಿ । ಅವರ್ಚಸಂ ಕೃಣುಹಿ ಶತ್ರುಮಸ್ಯ ।..."**

(ಈಗಿನ ತೈತ್ತಿರೀಯ ಬ್ರಾಹ್ಮಣದಲ್ಲಿ ಇದು 2-4-7 ಆಗಿದೆ. ಇದರರ್ಥ. "ಎಲೈ ಇಂದ್ರನೇ ! ಕ್ಷತ್ರಿಯರ ನಡುವೆ, ಮುಂದೆ ನಿಂತಿರುವ ಈ ದೊರೆಯನ್ನು ಅಭಿವೃದ್ಧಿಗೊಳಿಸು ! ಈ ರಾಜನು ಪ್ರಜೆಗಳ ಮಧ್ಯೆ ವಿಶೇಷವಾಗಿ ಪ್ರಜಾರಕ್ಷಕನಾಗಲಿ. ಈ ದೊರೆಗೆ ತುಂಬಾ ತೇಜಸ್ಸನ್ನೂ ಬಲವನ್ನೂ ಕೊಡು. ಇವನ ಶತ್ರುಗಳನ್ನು ಅಂದರೆ ರಾಷ್ಟ್ರದ ಶತ್ರುಗಳನ್ನು ನಿಸ್ತೇಜರನ್ನಾಗಿ ಮಾಡು .. ")

ತುಂಬ ಉಚಿತವೂ ಮಾರ್ಮಿಕವೂ ಆದ ಈ ಆಶೀರ್ವಾದಕ್ಕೆ ಪ್ರಭು ರಾಮಚಂದ್ರ ಮಂದಹಾಸ ಸೂಸಿ ಸ್ಪಂದಿಸುತ್ತಾನೆ. ಪೂರ್ಣಕುಂಭ, ಆಶ್ರಮದ ಹಿರಿಯ ಸುಮಂಗಲಿಯರಿಂದ ಆರತಿ, ಎಲ್ಲ ನಡೆದು ಅತಿಥಿಗಳು ಆತಿಥ್ಯದ ಶಾಲೆಗೆ ನಡೆಯುತ್ತಾರೆ. ಮಧುಪರ್ಕ, ವಿಶ್ರಾಂತಿ ಆದನಂತರ ಭೋಜನ ನಡೆಯುತ್ತದೆ.

ಸಂಜೆ ಏಕಾಂತದಲ್ಲಿ ಮಹರ್ಷಿ ರಾಮಚಂದ್ರನೊಡನೆ ಸಂಭಾಷಿಸುತ್ತಾನೆ. (ಲಕ್ಷ್ಮಣ ಅಲ್ಲೇ ಸೈನಿಕ ತರಬೇತಿಯ ಬ್ರಾಹ್ಮಣರ ವಟುಗಳ ಕೈಚಳಕವನ್ನು ವೀಕ್ಷಿಸುತ್ತಿರುತ್ತಾನೆ. ಸೀತಾದೇವಿ ಆಶ್ರಮ ಸ್ತ್ರೀಯರೊಡನೆ ಅಲ್ಲಿನ ವಿವಿಧ ಫಲಪುಷ್ಪಗಳ ಬಗೆಗೆ ಕುತೂಹಲದಿಂದ ಚರ್ಚಿಸುತ್ತಿರುತ್ತಾಳೆ.)

**ಅಗಸ್ತ್ಯ** : "ವತ್ಸ! ನಿನ್ನ ವನವಾಸದ ವೃತಾಂತವೆಲ್ಲ ತಿಳಿಯಿತು! ಇನ್ನೊಂದು ವರ್ಷ ಉಳಿದಿದೆ ಅಲ್ಲವೆ ? ಅದು ನಿನ್ನ ಉದ್ದೇಶದೊಡನೆ ಸಫಲವಾಗಬೇಕಾದರೆ ನೀನು ಅವಶ್ಯವಾಗಿ, ಇಲ್ಲಿಗೆ ಒಂದೆರಡು ಹರಿದಾರಿಗಳ ದೂರದಲ್ಲಿರುವ ಸುವಿಖ್ಯಾತ ಪಂಚವಟೀ ಪ್ರದೇಶವನ್ನು ಸೇರಲೇಬೇಕು ! ಅಲ್ಲಿ ಮೃಗಗಳೂ ಮೃಗಪ್ರಾಯರೂ, ಭೂಭಾರವೆನಿಸಿದವರೂ, ನರಪಶುಗಳೂ, ನರಭಕ್ಷಕರೂ ಪದೇ ಪದೇ ಬರುತ್ತಾರೆ.... (ಕೊಂಚ ಚಿಂತಿಸಿ !) ಆದರೆ ಎಲ್ಲವೂ ಕೊನೆಗೆ ಮಂಗಳದಲ್ಲಿ ಮುಕ್ತಾಯವಾಗುತ್ತದೆ !"

**ಶ್ರೀರಾಮ :** "ಪ್ರಭು ! ನಡುವೆ ಅದೇನೋ ಚಿಂತಿಸಿದಿರಲ್ಲ !''

**ಅಗಸ್ತ್ಯ :** (ಮಾತನ್ನು ಮರೆಸಿ, ಸುಳ್ಳನ್ನೂ ಹೇಳಲು ಇಚ್ಛಿಸದೆ) "ಏನಿಲ್ಲ ! ಪತ್ನಿವಿಯೋಗವೆಂಬುದು ಬಲು ಕಠಿಣ ! ಗೃಹಸ್ಥನಿಗೆ ಇದು ಸಹಿಸಲು ಕಷ್ಟ ! ... ನನ್ನ ಪತ್ನಿಯ ನೆನಪಾಯಿತು ! ಲೋಪಾ ಮುದ್ರೆ ! ದಕ್ಷಿಣ ಯಾತ್ರೆಗೆ ಹೊರಟು, ಅವಳನ್ನು ಕಳೆದುಕೊಂಡು, ಇಗೋ. ಬರಿಗೈಯಲ್ಲಿ ಬಂದಿದ್ದೇನೆ ! ... ಅವಳೂ ಈಗ ಇಲ್ಲಿದ್ದರೆ, ಈ ನಿನ್ನ ಸ್ವಾಗತದಲ್ಲಿ ಪಾಲ್ಗೊಂಡು ಎಷ್ಟೊಂದು ಸಂತಸ ಪಡುತ್ತಿದ್ದಳೋ !.... ದಕ್ಷಿಣಕ್ಕೆ ಹೋದವರಿಗೆಲ್ಲ ಈ ಅಗಲುವಿಕೆ ಉಂಟೆಂಬುದೂ ಇಲ್ಲ. ಆದರೂ ಏನೂ ಶಾಶ್ವತವೂ ಅಲ್ಲ ! ಎಲ್ಲ ಸುಖಾಂತ್ಯವಾಗಿ ಮುಗಿಯುತ್ತದೆ . ಯೋಚಿಸಬೇಡ !"

**ಶ್ರೀರಾಮ :** "ಪ್ರಭು ! ನಿಮ್ಮ ಮಾತಿನ ಅರ್ಥವಾಯಿತು ! ಧರ್ಮವನ್ನು ಎತ್ತಿಹಿಡಿಯುವವನಿಗೆ ಜೀವನದ ದಾರಿ ಸುಗಮವಾಗಿರುವುದಿಲ್ಲ ! ನನ್ನ ಪೂರ್ವಜರೆಲ್ಲ ಅದನ್ನು ಚೆನ್ನಾಗಿ ನಿರೂಪಿಸಿ, ಧರ್ಮವನ್ನೇ ಎತ್ತಿಹಿಡಿದು, ತ್ಯಾಗಿಗಳಾಗಿ ಬಾಳಿ, ನನಗೆ ದಿಕ್ಕು ತೋರಿದ್ದಾರೆ ! .... ಈ ದಕ್ಷಿಣದ ಅಸುರರು ಯಾರು ? ರಾವಣ ಯಾರು ? ಅವನ ಬಲ ಎಂಥದು ?"

**ಅಗಸ್ತ್ಯ :** "ದಕ್ಷಿಣದ ಅಸುರರನ್ನು ನಾನೇ ನಿಗ್ರಹಿಸಿದ್ದೂ ಒಂದು ಕಾಲವಪ್ಪ, ಕುಮಾರ ! ಆಸುರೀ ಶಕ್ತಿಗಳು ಒಂದು ಕಡೆ ಸತ್ತರೆ ಮತ್ತೊಂದು ಕಡೆ ಚಿಗುರುತ್ತವೆ. ದುಷ್ಟರು ಕ್ಷತ್ರಿಯರಾಗಿ ಪರಶುರಾಮರಿಂದ ಹತರಾದರು ! ಅದೊಂದು ಕಾಲ ! ಈಗ ದೌಷ್ಟ್ಯ ಶಕ್ತಿ ಬ್ರಾಹ್ಮಣಸಂತಾನರೂಪದಲ್ಲಿ ಲೋಕದಲ್ಲಿ ತಲೆಯೆತ್ತಿದೆ ! ಅದೇ ರಾವಣ ! ದೌಷ್ಟ್ಯ ಎನ್ನುವುದು ಜಾತ್ಯತೀತ ಶಕ್ತಿ ! ಆಳುವ ಅರಸನಲ್ಲಿ ನೀತಿಸಂಹಿತೆ ನಿಯಮ ಬದ್ಧತೆ, ನ್ಯಾಯನಿಷ್ಠುರತೆ, ಪ್ರಜೆಗಳಲ್ಲಿ ವಾತ್ಸಲ್ಯ, ಸಮತೆ –

ಪರರ ಕಷ್ಟ ಅಸಹಿಷ್ಣುತೆ, ಅಪರಾಧಿಗಳನ್ನು ನಿರ್ದಾಕ್ಷಿಣ್ಯವಾಗಿ ದಂಡಿಸುವ ಸ್ಪಷ್ಟ ದಂಡ ನೀತಿ, ಇವು ಇಲ್ಲದಿದ್ದರೆ, ಅವನು ಖಂಡಿತ ಅಸುರನೇ ಆಗುತ್ತಾನೆ ! ಪುಲಸ್ತ್ಯ ಗೋತ್ರ ಹಿಂದೊಮ್ಮೆ ಹೀಗಾಗಿಯೇ, ನಮ್ಮ ಪೂರ್ವಜರು ಒಂದು ಶಾಖೆಗೆ ದತ್ತಕವಾಗಿ ಹೋದರು ! ಆ ಇನ್ನೊಂದು ಶಾಖೆ ತನ್ನನ್ನು ತಿದ್ದಿಕೊಳ್ಳಲೇ ಇಲ್ಲ ! ! ರಾಮ ! ಈಗ ನೀನು ಗೋಬ್ರಾಹ್ಮಣ ಹಿತವನ್ನು ರಕ್ಷಿಸುವ ಹೊಣೆಹೊತ್ತ ಧಾರ್ಮಿಕ ಪ್ರಭುವಾದರೂ, ದುಷ್ಟನ ಜಾತಿ ಯಾವುದೆಂಬ ಗೊಡವೆ ನಿನಗೆ ಬೇಡ ! ರಾವಣನನ್ನು ಸಂಹರಿಸುವೆ. ಇದರಿಂದ ನಿನಗೆ ಬ್ರಹ್ಮಹತ್ಯೆ ದೋಷಬಾರದು ! ಹಾಗೆ ಬೊಬ್ಬಾಟ ಮಾಡುವವರ ಬಾಯನ್ನು ಸಪ್ತರ್ಷಿಗಳು ಮುಚ್ಚಿಸುತ್ತಾರೆ ! ರಾವಣನಲ್ಲಿ ಎಲ್ಲ ನಾಟಕವೂ ಇದೆ ! ಶಿವಭಕ್ತಿಯ ಆಟ ಆಡುತ್ತಾನೆ ! ಇತ್ತ ನಂದಿಕೇಶ್ವರನ ಶಾಪವನ್ನೂ ಪಡೆಯುತ್ತಾನೆ! ಪಾರ್ವತೀದೇವಿಯನ್ನು ಕಾಮುಕ ಕಂಗಳಿಂದ ನೋಡಿ, 'ಕೊಡು' ಎಂದು ಶಿವನನ್ನೇ ಬೇಡುತ್ತಾನೆ. ದಕ್ಷಿಣದ ಶೈವರು ಈ ನಾಟಕವನ್ನು ಬಲ್ಲರು ! ರಾವಣ ಒಬ್ಬ ಭಯೋತ್ಪಾದಕ, ಪುಂಡ ! ಅವನೊಡನೆ ನಿನಗೆ ವೈರ ಬೆಳೆಯುವ ಘಟನೆ ಇಲ್ಲೇ ಪಂಚವಟಿಯಲ್ಲಿ ನಡೆದೀತು ! .... ಆದರೆ ಲೋಕಕ್ಕೆ ಅದರಿಂದ ಹಿತವುಂಟು."

**ಶ್ರೀರಾಮ :** ಗುರುವರ್ಯ ! ಎಲ್ಲ ವರ್ಣಗಳಲ್ಲೂ ಒಳ್ಳೆಯವರೂ ಕೆಟ್ಟವರೂ ಎಲ್ಲ ಕಾಲಗಳಲ್ಲೂ ಉಂಟೆಂಬುದನ್ನು ನಾನು ಬಲ್ಲೆ. "

**ಅಗಸ್ತ್ಯ :** "ಬಲ್ಲೆ ಎಂಬುದು ಮಾತ್ರವಲ್ಲ ! ಆ ಎಲ್ಲ ಒಳ್ಳೆಯವರನ್ನೂ ನೀನು ಗೌರವಿಸುವೆ, ಮನ್ನಿಸುವೆ ಎಂಬುದನ್ನೂ ತೋರಿರುವೆ, ವತ್ಸ! ಗುಹ ಯಾರು ? ನಿಷಾದ ! ಇಲ್ಲೇ ಮುಂದೆ ಮಹರ್ಷಿ ಮತಂಗನನ್ನು ಕಿಷ್ಕಿಂಧೆಯಲ್ಲಿ ನೋಡುವೆ ! ಜಾತಿಯಲ್ಲಿ ಅವನಾರು ? ನಿನಗೆ ಉಪಕರಿಸಿದವರೇ ಉತ್ತಮರು ! "

ಮಾತು ಹೀಗೆಯೇ ನಡೆದು, ಅಗಸ್ತ್ಯರು ತಮಗೆ ಇಂದ್ರದತ್ತವಾದ, ತಮ್ಮ ಆಶ್ರಮಕ್ಕೆ ಶರಭಂಗ ಸುತೀಕ್ಷ್ಣಾದಿ ಮಹರ್ಷಿಗಳ ಮೂಲಕ ಬಂದ ದಿವ್ಯ ವೈಷ್ಣವ ಧನುಸ್ಸನ್ನು ಶ್ರೀ ರಾಮನ ಹೆಗಲಿಗೇರಿಸಿ, ಅಕ್ಷಯ ತೂಣೀರವನ್ನು (ಬತ್ತಳಿಕೆಯನ್ನು) ಬೆನ್ನಿಗೆ ಕಟ್ಟಿ, ಬ್ರಹ್ಮನಿರ್ಮಿತ ಅಮೋಘ ವೈಷ್ಣವಾಸ್ತ್ರವನ್ನೂ ಈಯುತ್ತಾರೆ .... ನಾಲ್ಕಾರು ದಿನ ಅಲ್ಲಿ ವಿಶ್ರಮಿಸಿಕೊಂಡು ರಾಮಲಕ್ಷ್ಮಣ ಸೀತೆಯರು ಪಂಚವಟಿಗೆ ನಡೆಯುತ್ತಾರೆ ! ....

* * *

ಮತ್ತೆ ಹತ್ತು ತಿಂಗಳಾಗಿದೆ ! ಈಗ ರಾಮರಾವಣ ಯುದ್ಧದ ನಿರ್ಣಾಯಕ ಘಟ್ಟವನ್ನು ದೇವತೆಗಳೂ ಋಷಿಮುನಿಗಳೂ ಏಕಚಿತ್ತದಿಂದ ಗಗನದಿಂದ ವೀಕ್ಷಿಸುತ್ತಿದ್ದಾರೆ !

**ಗಗನಂ ಗಗನಾಕಾರಂ ಸಾಗರಸ್ಸಾಗರೋಪಮಃ ।**
**ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ ॥**

" ಆಕಾಶವು ಹೇಗಿದೆಯೆಂದರೆ ' ಆಕಾಶದಂತೆಯೇ ! ' ಎನ್ನಬೇಕು! ಸಮುದ್ರವು ಹೇಗಿದೆಯೆಂದರೆ ' ಸಮುದ್ರಂತೆಯೇ ! ' ಎನ್ನಬೇಕು ! ಏಕೆಂದರೆ ಅಂಥ ಇನ್ನೊಂದು ವಸ್ತುವೇ ಇಲ್ಲ. ಹಾಗೆ ' ರಾಮರಾವಣ ಯುದ್ಧವು ಹೇಗಿದೆ ? ' ಎಂದರೆ, ' ಹಾಗೆಯೇ ಇದೆ ' ಎಂದಲ್ಲದೆ ಬೇರೇನು ಹೇಳೋಣ?" – ಎಂಬ ಮುನಿವಾಕ್ಯದಂತೆ ಅದು ಅದ್ಭುತವಾಗಿ ಸಾಗಿದೆ.

ರಾಮಪ್ರಭುವಿಗೆ ರಾವಣನನ್ನು ಕೊಲ್ಲಲು ಇಷ್ಟವಿಲ್ಲ ! ಬಗ್ಗಿಸಿ, ಆವನನ್ನು ಸೇವಕನನ್ನಾಗಿಸಿ ಕೊಳ್ಳಬೇಕೆಂಬ ಉತ್ಕಟ ಆಸೆ ! ಇತ್ತ

ರಾವಣನಿಗೋ ? – ಎಂದರೆ, ರಾಮನ ಕೈಲಿ ಸತ್ತಾನೇ ವಿನಾ ತಲೆ ಬಾಗಲು, ದಾಸನಾಗಲು ಇಷ್ಟವಿಲ್ಲ ! ಕರುಣಾಕಾಕುತ್ಸ್ಥನ ಈ ಆಟದಿಂದ ಯುದ್ಧವೇ ವಿಳಂಬಿತವಾಗಿ ದೇವತೆಗಳಿಗೆ ಆತಂಕ ಹೆಚ್ಚಾಯಿತು !

ಅನೇಕ ವರ್ಷಗಳ ಆದಿತ್ಯೋಪಾಸನೆಯ ಬಲದಿಂದ ಅಗಸ್ತ್ಯರಿಗೆ ಆದಿತ್ಯ ಹೃದಯವೆಂಬ ಮಂತ್ರದಲ್ಲಿ ಸಿದ್ಧಿಯುಂಟಾಗಿತ್ತು !

ಶ್ರೀರಾಮ ಯಾರು ? ಸೂರ್ಯವಂಶದ ಪ್ರದೀಪ ! ಆ ಕುಲಕ್ಕೆ ಹೃದಯ ಪ್ರಾಯನಾದ ಭಗವಂತ ! ಇತ್ತ ಸೂರ್ಯನಾರಾಯಣನಾಗಿ ಆಕಾಶದಲ್ಲಿ ಬೆಳಗುವ ರವಿ ಮಂಡಲ ಮಧ್ಯಸ್ಥನೂ ಅವನೇ. "ಹೃ-ದ-ಯ" –ಈ ಮೂರು ಅಕ್ಷರಗಳಿಗೆ ಉಪನಿಷತ್ತು 'ಹರಣ', 'ದಾನ', 'ಯಾನ' ಎಂದು ಅರ್ಥಮಾಡಿ, "ಯಾವನು ಈ ಎಲ್ಲವನ್ನು ತನ್ನೆಡೆಗೆ ಹರಿಸುವನೋ, ಯಾವನು ಸೃಷ್ಟಿ ರೂಪದಲ್ಲಿ ಮತ್ತೆ ದಾನ ಮಾಡುವನೋ, ಯಾವನು ಇಲ್ಲಿಂದ ಅಲ್ಲಿಗೆ ಯಾನ – ಮಾರ್ಗ – ವಾಗಿಯೂ ಇರುವನೋ. ಅವನೇ ಹೃದಯ" ಎಂದು ವಿವರಣೆ ನೀಡಿತು. "ಆದತ್ತೇ ಇತ್ಯಾದಿತ್ಯಃ" ಎಂದು ವ್ಯಾಖ್ಯಾನಿಸಿತ್ತು. ಈಗ ಆ 'ಆದಿತ್ಯನೇ', ಸೂರ್ಯವಂಶಸಮುದ್ಭೂತನೇ ಪ್ರಕಟವಾಗಿ ಕತ್ತಲೆಯ ರೂಪದ ರಾವಣಾವಿದ್ಯೆಯನ್ನು ನಾಶ ಪಡಿಸಲು ಬಂದಿದ್ದಾನೆ !

"ಅವನಿಗೆ ಅವನ ಈ ಆಟ ಮಧ್ಯದಲ್ಲಿ ಅವನ ಕರ್ತವ್ಯವನ್ನು ನೆನಪಿಸಬೇಕು" ಎಂದು ಅಗಸ್ತ್ಯರು ಚಡಪಡಿಸಿದರು.

ಮಿತ್ರಾವರುಣರು ಅವರನ್ನು ದೇವಯಾನದಲ್ಲಿ ಸಮರ ಭೂಮಿಗೆ ತಂದು ಬಿಟ್ಟರು. ಅದೃಶ್ಯರಾಗಿ ಅಗಸ್ತ್ಯರು ರಾಮನನ್ನು ಸಮೀಪಿಸುತ್ತಾರೆ. ಸೋಲುಗಾಣದ ರಣಧೀರನಿಗೆ ಹೀಗೆನ್ನುತ್ತಾರೆ.

"ವತ್ಸ ! ಇದೊಂದು ಸನಾತನ ಮಂತ್ರವಿದೆ ! ಸ್ವೀಕರಿಸು ! ಇದನ್ನು ಜಪಿಸಿ, ಶತ್ರುನಿಗ್ರಹ ಮಾಡು. ಜಯಶಾಲಿಯಾಗುವೆ, ಎಲ್ಲಿ, ಆಚಮನ ಮಾಡು."

ಶ್ರೀರಾಮ ಆಚಮನ ಮಾಡಿ ಬಂದ ! ಅಗಸ್ತ್ಯರು ಉಪದೇಶಿಸಿದರು. (ಮಂತ್ರ, ರಾಮಾಯಣೋಕ್ತ : ಯುದ್ಧಕಾಂಡ -107.)

ಶ್ರೀರಾಮ ಜಪಿಸಿ ರಾವಣನನ್ನು ಸಂಹರಿಸಿದ. ಅಗಸ್ತ್ಯರು ಅದೃಶ್ಯರಾದರು

*  *  *

ಸಹ್ಯಾದ್ರಿ ಮತ್ತೆ ಅಗಸ್ತ್ಯರನ್ನು ಕೈಬೀಸಿ ಕರೆಯಿತು ! ಪುತ್ರನನ್ನು ಕರೆದು ಅಗಸ್ತ್ಯರು ಹೇಳಿದರು. "ಗೋದಾವರೀ ತೀರದ ಆಶ್ರಮಕ್ಕೆ ನೀನೇ ಇನ್ನು ಕುಲಪತಿ ! ನನ್ನ ವಿದ್ಯೆ, ಸಿದ್ಧಿಗಳೆಲ್ಲ ನಿನಗೆ ಇಗೋ-ಧಾರೆಯೆರೆದಿದ್ದೇನೆ."

ಋಷಿಸ್ತೋಮ ಅಳಲಾರಂಭಿಸಿತು ! "ನನಗೀಗ ವಿಶ್ರಾಂತಿ ಬೇಕು ! ಲೋಕಸೇವೆ ಮಾಡಲು ಶಕ್ತಿ ಇರುವ ತನಕ ಮಾಡಿದ್ದೇನೆ. ವತ್ಸರೇ ! ನೀವು ಒಬ್ಬೊಬ್ಬರೂ ಒಬ್ಬ ಅಗಸ್ತ್ಯನಾಗಬೇಕು ! ನನಗೆ ಸಾಧ್ಯವಾದದ್ದು ನಿಮಗೂ ಸಾಧ್ಯ ! ತಪಸ್ಸು, ತಪಸ್ಸು, ತಪಸ್ಸು ! — ಇದೇ ನಮ್ಮ ಪೂರ್ವಿಕರ ಸಂದೇಶ. ತ್ಯಾಗ, ತ್ಯಾಗ, ತ್ಯಾಗ – ಇದೇ ಅವರ ಇನ್ನೊಂದು ಹೆಸರು. ನನಗೆ ಕಂಡ ದೇವತೆಗಳು ನಿಮಗೂ ಕಾಣುತ್ತಾರೆ. ಯತ್ನಿಸಿ ನೋಡಿ ! ನಾನು ಯಾವ ಪವಾಡವನ್ನು ಮೆರೆಯಲಿಲ್ಲ ! ಮಂತ್ರಬಲ, ತಪೋಬಲಗಳ ಸಿದ್ಧಿಯನ್ನಷ್ಟೇ ತೋರಿಸಿದೆ, ಸಕಾಲದಲ್ಲಿ ಉಪಯೋಗಿಸಿದೆ. " ಎಂಬ ಕೊನೆಯ ಸಂದೇಶವನ್ನು ಕೊಟ್ಟು ಕೆಲವೇ ಶಿಷ್ಯರೊಡನೆ

ಸಹ್ಯಾದ್ರಿಯತ್ತ ಅಗಸ್ತ್ಯರು ನಿಧಾನವಾಗಿ ಕೋಲೂರಿಕೊಂಡು ನಡೆಯಲಾರಂಭಿಸಿದರು !

**ಅಗಸ್ತ್ಯ ಪುತ್ರ :** " ಅಪ್ಪಾ ! ಪುತ್ರನಾದ ನನಗೆ ನಿಮ್ಮೊಡನೆ ಈ ವಯಸ್ಸಿನಲ್ಲಿ ಇದ್ದು ಸೇವೆಮಾಡುವ ಭಾಗ್ಯ ಇಲ್ಲವೇ ? ಹಕ್ಕಿಲ್ಲವೇ ? "

**ಅಗಸ್ತ್ಯ :** " ಈ ಆಶ್ರಮದಲ್ಲಿ ನೀನು ಕುಲಪತಿಯಾಗಿ, ಶಾಸ್ತ್ರ, ಶಸ್ತ್ರಗಳ ಈ ದ್ವಂದ್ವಾಭ್ಯಾಸವನ್ನು ನಡೆಸಿಕೊಟ್ಟರೆ ಅದೇ ನನಗೆ ಸೇವೆ. ಈ ದೇಶಕ್ಕೆ ಹೊಸರೀತಿಯ ಬ್ರಾಹ್ಮಣರು ಬೇಕಾಗಿದ್ದಾರೆ. ನನ್ನಂತೆ ಬ್ರಾಹ್ಮಣರು ಬಿಲ್ಲುಹಿಡಿಯುವುದೂ ಕಲಿಯಬೇಕು ! ಇನ್ನು ಮುಂದಿನ ಕಾಲ ಇನ್ನೂ ಕೆಟ್ಟದ್ದಾಗಿರುತ್ತದೆ. ಲಕ್ಷ ಲಕ್ಷ ಬ್ರಾಹ್ಮಣರನ್ನು ಹೀಗೆ ತಯಾರಿಸು ! ಅದೇ ಅಗಸ್ತ್ಯರಸೇವೆ. ಅದೇ ನಿನ್ನ ಹಕ್ಕು ! "

**ಆಶ್ರಮಸ್ಥ ಋಷಿಗಳು :** " ಪ್ರಭು ! ಮತ್ತೆ ತಾವು ಇತ್ತಕಡೆ ಯಾವಾಗ ಬರುವುದು ? "

**ಅಗಸ್ತ್ಯ :** " ವಿಂಧ್ಯ ಮೇಲೇಳಬಾರದು ! ಉತ್ತರ ದಕ್ಷಿಣ ಎಂಬ ಈ ಭೇದವನ್ನು ಮೊದಲು ಅಳಿಸಿಹಾಕಿ ! ಈ ಒಡಕನಾಸ ವಿಂಧ್ಯನನ್ನು ನಾನೊಬ್ಬ ಮಲಗಿಸಿದರೆ ಸಾಲದು, ನೀವೆಲ್ಲ ಮಲಗಿಸಿ ! ಆಗ ನಿಮ್ಮ ಒಬ್ಬೊಬ್ಬರ ಹೃದಯದಿಂದಲೂ ನಾನೆದ್ದು ಬರುತ್ತೇನೆ ! ! ಅವರೆಗೆ ಸಹ್ಯಾದ್ರಿಯಲ್ಲಿ ನನ್ನ ವಿಶ್ರಾಂತಿ ! "

ಅದೇ ಅಗಸ್ತ್ಯರ ಕೊನೇ ಮಾತಾಯಿತು ! ಮಹರ್ಷಿ ಅದೃಶ್ಯನಾದ !!

* * *

# ಉಪಸಂಹಾರ !

ಸಮಗ್ರ ಭಾರತ ದೇಶದ ಅತಿ ಪ್ರಾಚೀನ ಕಲ್ಪನೆಯ ಮಾದರಿಯೊಂದು ಅಗಸ್ತ್ಯ ಚರಿತ್ರೆಯಲ್ಲಿ ಹೀಗೆ ನಮಗೆ ಕಂಡುಬರುತ್ತದೆ. ದೇಶ ಭೇದ, ಕಾಲಭೇದ, ಭಾಷಾ ಭೇದ, ಜಾತಿ ಜನಾಂಗ ಭೇದ, ಮತ ಭೇದಗಳೂ ಯಾವಾಗಲೂ ಇರುವುವೇ ! ಅದನ್ನೆಲ್ಲ ಮೆಟ್ಟಿನಿಂತು ಜನರನ್ನು ಜನರಿಗಾಗಿಯೇ. ಜನರನ್ನಾಗಿಯೇ ಪ್ರೀತಿಸಿದ ಮಹಾಚೇತನ ಅಗಸ್ತ್ಯರು ! ಇದು ಕಟ್ಟು ಕಥೆಯಲ್ಲ ! ವೇದ, ಸಂಸ್ಕೃತಬಲ್ಲವರು ವೇದಸೂಕ್ತಗಳ ಹಿನ್ನೆಲೆಯಲ್ಲಿಯೂ ಶ್ರೀ ಮಹಾಭಾರತದ ವನ ಪರ್ವದ ಅಗಸ್ತ್ಯ ಚರಿತ್ರೆಯಲ್ಲಿಯೂ ಇಂದಿಗೂ ಕಾಣಬಹುದಾದ ಅದ್ಭುತ ವ್ಯಕ್ತಿತ್ವ ಅಗಸ್ತ್ಯರದ್ದು ! ಸುಮ್ಮನೆ "ಪ್ರಾತಃಸ್ಮರಣೀಯ" ರೆಂದರೆ ಆ ಘನ ಚೈತನ್ಯದ ಸರಿಯಾದ ಪರಿಚಯ ನಮಗಾಗದು. ''ಪ್ರಾತಃಸ್ಮರಣೀಯರಾದ ವೈದಿಕ ಮಹರ್ಷಿಗಳ ಒಬ್ಬೊಬ್ಬರ ರಾಷ್ಟ್ರಸೇವೆ ಒಂದೊಂದು ಬಗೆಯದು ! ಅಗಸ್ತ್ಯರು, ಆಮೇಲೆ ಎಷ್ಟೋ ಸಹಸ್ರ ವರ್ಷಗಳುರುಳಿದ ನಂತರ ಉದಿಸಿ ಬಂದ ಆಚಾರ್ಯ ಚಾಣಕ್ಯನಂತೆ. ಬಹುಸೂಕ್ಷ್ಮಮತಿಯ, ಕ್ರಿಯಾಶೀಲರಾದ, ಕ್ರಿಯಾ ಕುಶಲರಾದ, ಬ್ರಾಹ್ಮಕ್ಷಾತ್ರಗಳನ್ನು ತಮ್ಮ ವ್ಯಕ್ತಿತ್ವದಲ್ಲಿ ಅರಗಿಸಿಕೊಂಡು, ಮೂರ್ತೀಭವಿಸುವಂತೆ, ನಾಡು, ನುಡಿ, ಜನತೆಗೆ ತಮ್ಮನ್ನೇ ಅರ್ಪಿಸಿಕೊಂಡ ಮಹಾಮಹಿಮರು. ಈ ದೇಶಕ್ಕೆ ಸ್ವಾತಂತ್ರ್ಯ ಬರುವ ಪೂರ್ವದಲ್ಲಿ, ನಾಡಿನ ಅಭ್ಯುದಯಕ್ಕೆ ಶ್ರಮಿಸಿಕೊಂಡು, ಈ ಮಣ್ಣಿನಲ್ಲೇ ಅಂತರ್ಗತರಾದ ಎಷ್ಟೊಂದು ಭವ್ಯಚರಿತರು ಆಗಿಹೋದರು ! ಪುರಾಣೇತಿಹಾಸಗಳ ಕಾಲದ ವ್ಯಕ್ತಿಗಳನ್ನು 'ಅವರು ಜೀವಂತ ಇದ್ದರೆಂ'ಬುದನ್ನೇ ನಂಬದ ಭಾರತೀಯ, ನೆನೆಯುವುದೆಂತು ? ಹಾಗೆ ನೆನೆಯದ ಕೃತಘ್ನತೆ ಈ ದೇಶದ ಕಷ್ಟಗಳಿಗೆ ಕಾರಣವೂ ಆಗಿದೆ. ಬೇರೊಂದು ದೇಶಕ್ಕೆ ಈ ಇತಿಹಾಸವಿದ್ದರೆ, ಹೇಗೆ ಅದನ್ನು ಬರೆದಿಡುತ್ತಿದ್ದರೋ, ಹೇಗೆ ಆದರಣೀಯರನ್ನು ಗೌರವಿಸುತ್ತಿದ್ದರೋ !

ಕೇರಳದಲ್ಲಿ ಇಂದಿಗೂ ಅಗಸ್ತ್ಯರ ಸಿದ್ಧೌಷಧ ಪದ್ಧತಿ ಪ್ರಸಿದ್ಧವಿದ್ದು, ವಿಶ್ವವಿಖ್ಯಾತವಾಗಿದೆ. ತಮಿಳರು ಅಗಸ್ತ್ಯರು ರಚಿಸಿದ ಪ್ರಥಮ ವ್ಯಾಕರಣ ವನ್ನು ಮರೆಯುವಂತೆಯೇ ಇಲ್ಲ ! ಕರ್ನಾಟಕದ ಕಾವೇರೀ, ಅರ್ಕಾವತೀ ಹೇಮಾವತೀ ತೀರಗಳೆಲ್ಲ ಅಗಸ್ತ್ಯರ ಕ್ಷೇತ್ರಗಳೆಂದು ಖ್ಯಾತವಾದುವನ್ನು ಜನ ಪ್ರೀತಿಯಿಂದ ಇಂದಿಗೂ ನೆನೆಯುತ್ತಾರೆ ! ಪಾಂಡಿಚೆರಿ ಎಂದು ಈಗ ಕರೆಯಲ್ಪಡುವ ಊರು ಹಿಂದೆ ವೇದಪುರೀ ಎನಿಸಿ, ಆದಿ ಅಗಸ್ತ್ಯ ಕ್ಷೇತ್ರವಾಗಿತ್ತು ಎಂದು ಅಲ್ಲಿನವರು ಹೇಳುತ್ತಾರೆ. ಇಲ್ವಲ–ವಾತಾಪಿಗಳ ಮಣಿಮತೀಪುರವೇ ಈಗಿನ ಬಾದಾಮಿ ! (ಬಿಜಾಪುರ ಜಿಲ್ಲೆ.) ಅಲ್ಲಿಯು ಅಗಸ್ತ್ಯತೀರ್ಥ, ಮಹರ್ಷಿಯ ನೆನಪಿಗೆ ಆ ಮೇಲೆ ಯಾರೋ ಕಟ್ಟಿಸಿದ ಕೆರೆ! ಚಾಲುಕ್ಯರ ವಿಜಯಪ್ರದ ಇತಿಹಾಸದಲ್ಲಿ ಅಗಸ್ತ್ಯರ ಸ್ಫೂರ್ತಿ ಎಷ್ಟಿತ್ತೋ!

ಶೈವರೂ ವೈಷ್ಣವರೂ, ಬೇರೆ ಬೇರೆ ವೃತ್ತಿಗಳ-ಮೀನುಗಾರರೂ, ಗೊಂಡರೂ, ಭಿಲ್ಲರೂ ಇಂದಿಗೂ ಪ್ರೀತಿಯಿಂದ "ನಮ್ಮವರು !" ಎಂದು ನೆನೆಯುವ ಅಗಸ್ತ್ಯರು ಇಂದು ನಮಗೆ ಎಷ್ಟೊಂದು ಪ್ರಸ್ತುತ !

ಅಗಸ್ತ್ಯರು ಎಷ್ಟು ಹಣ ಸಂಪಾದಿಸಿದರು ? ಎಷ್ಟು ಮನೆ ಕಟ್ಟಿದರು ? ತಮ್ಮನ್ನೇ ಪ್ರತಿಕ್ಷಣವೂ ರಾಷ್ಟ್ರಹಿತಕ್ಕೆ ಅರ್ಪಿಸಿಕೊಂಡು ವಿಲಕ್ಷಣತ್ಯಾಗಶೀಲರಾದ ಈ ಅಗಸ್ತ್ಯ ಲೋಪಾಮುದ್ರೆಯರು ಈ ದೇಶದ ಸಂಸ್ಕೃತಿಯ ನಿರ್ಮಾಪಕರಲ್ಲಿ ಅಗ್ರಗಣ್ಯರೆಂದರೆ ಅತಿಶಯೋಕ್ತಿಯಿಲ್ಲ !

ಕ್ಷತ್ರಿಯರೆಲ್ಲ ಮೊಗಲರೊಡನೆ, ಬ್ರಿಟಿಷರೊಡನೆ ಕಾದಿ ಮಡಿದು, ಬ್ರಾಹ್ಮಣರೆಲ್ಲ ಬ್ರಹ್ಮವರ್ಚಸ್ಸನ್ನು ಕಳೆದುಕೊಂಡು ಸತ್ತ್ವಹೀನರಾಗಿ, ಜಾತಿಯಿಂದ ಮಾತ್ರ ಉಳಿದು, ರಾಷ್ಟ್ರಕ್ಕೆ ಈ ಎರಡೂ ವರ್ಣಗಳ ಸಂಮಿಶ್ರಿತ ಧೈರ್ಯದ ಸ್ಫೂರ್ತಿ ಅತ್ಯವಶ್ಯವಾಗಿರುವ ಈ ನಮ

ಆಪತ್ಕಾಲದಲ್ಲಿ ಇಂಥದೊಂದು ಅಗಸ್ತ್ಯನೇನೆಯ ನಿಃಸ್ವಾರ್ಥಸೇವೆ ಅವಶ್ಯಕವಲ್ಲವೆ ?

ವೇದಮಂತ್ರಗಳನ್ನು ಅರ್ಥವತ್ತಾಗಿ ಓದಬಲ್ಲ ಪಂಡಿತರು ಎತ್ತ ಹೋದರು ? ಅವುಗಳ ಸ್ಫೂರ್ತಿಯುಕ್ತ ಇತಿಹಾಸವನ್ನು ನಮಗೆ ಹಿಡಿದು ಕೊಡಬಲ್ಲವರೆಲ್ಲಿ ಮಾಯವಾದರು ?

ಸಪ್ತರ್ಷಿಗಳನ್ನೂ, ಮನು-ಮನ್ವಂತರಗಳನ್ನೂ, ದೀಕ್ಷಾದಿ ಪೂಜಾ ಪತಿಗಳನ್ನು ನಾವು ಅರ್ಥಮಾಡಿಕೊಂಡೇ ಇಲ್ಲವೆನಿಸುತ್ತದೆ ! ಈ ದೇಶದಲ್ಲಿರುವ ನಾನಾ ಜಾತಿಗಳ, ಮತಗಳ, ಪ್ರದೇಶಗಳ, ಇಂದಿನ ಜನರೆಲ್ಲ ಈ ಪುರಾತನರ ಸಂತಾನವೇ !

ಅದರ ಒಂದು ಉದಾಹರಣೆ, ಸಂಕೇತವಾಗಿ, ಈ ಪುಟ್ಟ ಕಥೆಯನ್ನು ನಾಧಾರವಾಗಿ ಹೆಣೆಯಲಾಗಿದೆ ! ಅವಶ್ಯಕವೆನಿಸಿದಲ್ಲಿ ಬಿಟ್ಟು ಹೋದ ಕೊಂಡಿಗಳ ಜೋಡಣೆಗಾಗಿ ಅಷ್ಟಿಷ್ಟು ಪಾತ್ರಗಳನ್ನೂ, ಸಂನ್ನಿವೇಶ ಗಳನ್ನೂ ಸೇರಿಸಿ, ಪ್ರತೀತಿಗಳನ್ನೂ, ದಂತ ಕಥೆಗಳನ್ನೂ ಬಳಸಿಕೊಳ್ಳ ಲಾಗಿದೆ !

'ತರಂಗ'ದ ("ಸದಭಿರುಚಿಯ" ಮಾತ್ರವಲ್ಲ!) 'ದಿವ್ಯಾಭಿರುಚಿ'ಯ ಸಂಪಾದಕರು ಶ್ರೀ ಸಂತೋಷ ಕುಮಾರ ಗುಲ್ವಾಡಿಯವರ ಪ್ರೋತ್ಸಾಹ, ನೆರವು ಇಲ್ಲದಿದ್ದರೆ ಇಂಥದೊಂದು ಕಥೆ ಇಂದು ನಿಮ್ಮಂಥ ಲಕ್ಷಾಂತರ, ಕುತೂಹಲವುಳ್ಳ ವಾಚಕರ ಕೈಸೇರುತ್ತಿರಲಿಲ್ಲ ! "ಪತ್ರಿಕೆಗಳಿಗೆ ರಾಷ್ಟ್ರ ಕಟ್ಟುವ ಕೆಲಸದ ಹೊಣೆ ಬಹಳ ಇದೆ"ಯೆಂದು ಬಾಯಿ ಮಾತಿಗೆ, ವೇದಿಕೆ ಗಳಿಂದ, ಭಾಷಣ ಮಾಡುವವರ ವರ್ಗದಲ್ಲಿ ಶ್ರೀ ಗುಲ್ವಾಡಿ ಅವರು ಸೇರುವುದಿಲ್ಲ ! ಸ್ಪಷ್ಟ ಮಾತಿನ, ಬಿಚ್ಚು ಹೃದಯದ, ಸಂಸ್ಕೃತಿಯ ಬಗೆಗೆ

ನೈಜ ಕಳಕಳಿಯ, ಹೋಣೆಗಾರ ಪತ್ರಕರ್ತರಾಗಿ ಅವರಲ್ಲೂ ನಾನು 'ಅಗಸ್ತ್ಯರ' ವ್ಯಕ್ತಿತ್ವದ ಅಂಶಗಳನ್ನು ಕಂಡುಕೊಂಡೆ !

ಉಳಿದ ಪತ್ರಿಕೆಗಳೂ ಅಪಾರ ಸಂಖ್ಯೆಯ ಇಂಥ ಪ್ರಾತಃಸ್ಮರಣೀಯ ಮಹಾಮಹಾ ವ್ಯಕ್ತಿಗಳ ಬಗೆಗೆ ಇಂದಿಗೆ ಅವಶ್ಯವಾದ ಈ ಬಗೆಯ ನೆನಪನ್ನು, ಜಾಗೃತಿಯನ್ನು ಮೂಡಿಸುವಂತಾದರೆ ಎಷ್ಟು ಚೆನ್ನು ?

ಆ ಜಾಗೃತಿಯನ್ನು ಈ 'ಅಗಸ್ತ್ಯ' ಕೊಂಚ ಪ್ರಮಾಣದಲ್ಲಾದರೂ ಆಗಿಸಿದರೆ ಲೇಖಕನ ಹೃದಯಕ್ಕೆ ತಂಪಾಗುತ್ತದೆ.

ಯಾವ ಪೀಳಿಗೆಯ ಹೃದಯ ಹೃದಯಗಳಲ್ಲಿ ಅಗಸ್ತ್ಯರು ಮತ್ತೆ ಮತ್ತೆ ಉದಿಸಿ ಬರಲಿ.

"ನಮ ಋಷಿಭ್ಯಃ"

"ನಮಃ ಪರಮ ಋಷಿಭ್ಯಃ"

卐 卐 卐

# ಪ್ರೊ. ಕೆ. ಎಸ್. ನಾರಾಯಣಾಚಾರ್ಯರು



ಗಮಕಿ, ವಾಗ್ಮಿ, ಪ್ರವಚನಪಟು, ಶಾಸ್ತ್ರಜ್ಞ, ಗ್ರಂಥಕಾರ, ವಿಮರ್ಶಕ, ಲೇಖಕ, ವ್ಯಾಖ್ಯಾನಕಾರ, ಕಾದಂಬರಿಕಾರ, ಪ್ರಕಾಶಕ, ಪ್ರೊ. ಕೆ. ಎಸ್. ನಾರಾಯಣಾಚಾರ್ಯರು ಬಹುಮುಖ ವ್ಯಕ್ತಿತ್ವದ, ನಿವೃತ್ತ ಆಂಗ್ಲಭಾಷಾ ಸಾಹಿತ್ಯ ವಿದ್ವಾಂಸರು, ಪ್ರಾಧ್ಯಾಪಕರು. 'ವೇದ ಸಂಸ್ಕೃತಿ ಪರಿಚಯ' 'ಶ್ರೀರಾಮಾಯಣ ಸಾಹಸ್ರೀ', "ಗೀತಾರ್ಥರತ್ನನಿಧಿ" "ಶ್ರೀ ಕೃಷ್ಣಾವತಾರದ ಕೊನೆಯಗಳಿಗೆಗಳು," ಶ್ರೀ ರಾಮಾವತಾರದ ಕೊನೆಯ ದಿನಗಳು" "ಆ ಹದಿನೆಂಟು ದಿನಗಳು" "Sri Ramanuja on Tat Tvam Asi" "Basic concepts of Visistadvaita" "ಬೇಂದ್ರೆ ಕಾವ್ಯದಲ್ಲಿ ಆರ್ಷದೃಷ್ಟಿ ಮತ್ತು ಆಧ್ಯಾತ್ಮದನೆಲೆ" "ಆಳ್ವಾರುಗಳೂ ಹರಿದಾಸರೂ", "ಶ್ರೀ ವ್ಯಾಸಸೂಕ್ತಿ ಸುಧಾ", ಗೋಪಿಕಾ ಗೀತಂ ವ್ಯಾಖ್ಯಾಯುತ (ಆಂಗ್ಲ) "ಶ್ರೀ ರಾಮಾಯಣ ಪಾತ್ರಪ್ರಪಂಚ", "ಶ್ರೀ ಮಹಾಭಾರತ ಪಾತ್ರಪ್ರಪಂಚ". ಶ್ರೀ ಕೃಷ್ಣಾವತಾರ" (ಕಾದಂಬರಿ) "The Role of Sri Krishna in The Mahabharatha War. "ತಿರುವಾಯ್ ಮೊಳಿ - ಕನ್ನಡ, ಬಕುಳ ಪರಿಮಳಂ ವ್ಯಾಖ್ಯಾ ಸ್ತೋತ್ರರತ್ನ ವ್ಯಾಖ್ಯಾನ "ರತ್ನಪ್ರಭಾ" ಮೊದಲಾದ ಐವತ್ತಕ್ಕು ಮಿಕ್ಕಿ ಅಮೋಘ ಕೃತಿಗಳನ್ನು ರಚಿಸಿ ಕನ್ನಡ ಸಾರಸ್ವತ ಸೇವೆ ನಡೆಸಿದ್ದಾರೆ. ಪ್ರಕೃತ "ಅಗಸ್ತ್ಯ" "ಆಚಾರ್ಯರ ಉತ್ಕೃಷ್ಟ ಕಾದಂಬರಿಯಾಗಿ ಅವರ ಸೃಜನಶೀಲತೆಗೆ ಕನ್ನಡಿ ಹಿಡಿಯುತ್ತದೆ. ಸಮಗ್ರ ಮಹಾಭಾರತದ, ಸಮಗ್ರ ಶ್ರೀ ರಾಮಾಯಣ, ಸಮಗ್ರ ಶ್ರೀ ಭಾಗವತಗಳನ್ನು ಕಾದಂಬರಿಯ ಶೈಲಿಯಲ್ಲಿ ಬರೆಯುತ್ತಿರುವ ಆಚಾರ್ಯರ ಈ ಕೃತಿಗಳು ಪೂರ್ತಿಯಾದಾಗ ಹೃದಯವಂತರಾದ ಕನ್ನಡಿಗರ ಸುಹೃದಯಗಳಲ್ಲಿ ಆಚಾರ್ಯರಿಗೆ ಶಾಶ್ವತ ಸ್ಥಾನವಿರುತ್ತದೆ. ಆಚಾರ್ಯರ ಸಾಹಿತ್ಯಾಭ್ಯಾಸ, ವೇದಾಧ್ಯಯನ, ಪ್ರವಚನ ಅನುಭವ, ಶಾಸ್ತ್ರಜ್ಞತೆ, ಇತಿಹಾಸಪುರಾಣಗಳ ಆಳ ಅರ್ಥೈಕೆಯಯತ್ನ - ಈ ಎಲ್ಲವೂ ಮಧುರವಾಗಿ ಸಮ್ಮಿಳಿತರಾಗಿರುವದನ್ನು "ಅಗಸ್ತ್ಯ"ದಲ್ಲಿ ಕಾಣಬಹುದು. ಮಿಗಿಲಾಗಿ ಅವರ ಕಲಾಪ್ರತಿಭೆ, ಕಲೋಪಾಸನೆಗೆ ಇನ್ನೊಂದು ನಿಷ್ಕಳಂಕ ಕನ್ನಡಿ !

ಮುಖ ಪುಟ ಮುದ್ರಣ : ಮೆಟಲ್ - ಓ-ಪಿ.ಂಟ್. ಹುಬಳಿ.